# ಭಾರತೀಯ ಪೌರನೀತಿಯ ಕೈಪಿಡಿ

## ಭಾಗ I, II

ಕಂ. ಕೃಷ್ಣಯ್ಯಂಗಾರ್, ಬಿ.ಎ.
ಅಧ್ಯಾಪಕ, ದೇಶೀಯ ವಿದ್ಯಾಶಾಲಾ, ಬೆಂಗಳೂರು

ಸತ್ಯಶೋಧನ ಪ್ರಕಟನ ಮಂದಿರ
ಬೆಂಗಳೂರು
೧೯೩೫

## ಪೀಠಿಕೆ.

ಪೌರನೀತಿಯೆಂಬುದು ಹೊಸದಾಗಿ ತೋರಬಹುದಾದರೂ ಹೊಸದಲ್ಲ. ಸಾಮಾನ್ಯ ಮಾತಿನಲ್ಲಿ 'ಕಾಲಸ್ಥಿತಿ'ಯೆಂದು ಉದ್ದೇಶಿಸುವ ಪರಿಸ್ಥಿತಿಯ ಪ್ರಜ್ಞಾಲಾಭವೇ ಅದರ ಉದ್ದೇಶ. ಮನೆಯ, ಜಾತಿಯ, ಕೇರಿಯ, ಗ್ರಾಮದ, ದೇಶದ, ಜಗತ್ತಿನ ಅಥವಾ ರಾಷ್ಟ್ರ ಸಮಾಜಗಳ ಸ್ಥಿತಿಗತಿಗಳನ್ನೂ ವ್ಯಕ್ತಿಯ ಧರ್ಮವನ್ನೂ ತಿಳಿಸುವುದೇ ಪೌರನೀತಿ. ಐಹಿಕ ಜೀವನದಲ್ಲಿ ಪಾಪ ಪುಣ್ಯಗಳ ಪರಿಜ್ಞಾನವನ್ನುಂಟುಮಾಡಿ ಯಾವ ಉಪಕಾರವನ್ನು ಧರ್ಮಶಾಸ್ತ್ರಗಳು ಒದಗಿಸುತ್ತಿದ್ದವೋ ಅದೇ ಪ್ರಯೋಜನವನ್ನೇ ಕಾಲಕ್ಕನುಗುಣವಾಗಿ ಕಲ್ಪಿಸಿಕೊಡತಕ್ಕದ್ದು. ಪಂಚ ಯಜ್ಞಗಳೆಂದೂ, ಪಂಚ ಋಣಗಳೆಂದೂ, ದ್ವಾತ್ರಿಂಶದ್ದಾನಗಳೆಂದೂ ಎಣಿಸುತ್ತಿದ್ದವುಗಳನ್ನೇ ಆಧುನಿಕ ಕಾಲಸ್ಥಿತಿಗೆ ಹಿತವಾಗಿ ವಿವರಿಸತಕ್ಕದ್ದು. ಧರ್ಮ, ನ್ಯಾಯ, ನೀತಿಶಾಸ್ತ್ರಗಳು ಪೌರನೀತಿಗೆ ಸಹಜವಾದ ಆಧಾರಗಳು. ಅವುಗಳಲ್ಲಿಯೂ ರಾಷ್ಟ್ರ ಸಮಾಜ ಶಾಸ್ತ್ರಗಳ ಸಂಬಂಧವು ಸಮೀಪ.

ಇಂಗ್ಲಿಷ್ ಭಾಷೆಯಲ್ಲಿ ಇದಕ್ಕೆ 'ಸಿವಿಕ್ಸ್' ಎಂಬ ಶಬ್ದಪ್ರಯೋಗವು ರೂಢಿ. ಹೆಸರುವಾಸಿಯಾದ ಎಲ್ಲ ದೇಶಗಳಲ್ಲಿಯೂ ತರುಣರ ಪಾಠಕ್ರಮದಲ್ಲಿ ಈ ಪಾಠವು ಅತ್ಯವಶ್ಯವಾದುದೆಂದು ಗಣ್ಯವಾಗಿದೆ. ನಮ್ಮ ದೇಶದಲ್ಲಿಯೂ ಇದರ ಆವಶ್ಯಕತೆಯನ್ನು ಅನೇಕರು ಪ್ರಸ್ತಾಪಿಸುತ್ತಲೇ ಇರುವರು. ಆದರೆ ಕೆಲವೆಡೆಗಳಲ್ಲಿ ಸಂಕುಚಿತ ದೃಷ್ಟಿದೋಷದಿಂದ ವಿಷಯ ವ್ಯಾಪ್ತಿಯನ್ನು ಯೋಗ್ಯವಾದ ರೀತಿಯಲ್ಲಿ ಕಾಣದೆ ಇರುವುದುಂಟು. ಸರ್ಕಾರದ ಇಲಾಖೆಗಳನ್ನೂ ಕಾರ್ಯಕಲಾಪಗಳನ್ನೂ ವರ್ಣಿಸಿದಲ್ಲಿ, ಅಥವಾ ಸರ್ಕಾರದಿಂದ ಒದಗುವ ಅನುಕೂಲಗಳನ್ನು ವಿವರಿಸಿದಲ್ಲಿ ಈ ನೀತಿಭಾಗದ ಒಂದೆರಡಂಶಗಳು ಮಾತ್ರ ಮುಗಿಯುತ್ತವೆ. ಭಾರತೀಯರಾಗಿ ಹುಟ್ಟಿದವರಿಗೆ ಪೂರ್ವಾರ್ಜಿತವು, ಅಂದರೆ ಆಚಾರ ಸಂಪ್ರದಾಯಗಳು, ಘನವಾದ ರಾಶಿಯಾಗಿರುವುದರಿಂದ ಯೋಗ್ಯರಾಗಿ ಬಾಳಲು ಒಂದು ಬಗೆಯ ತ್ರಿಕಾಲಜ್ಞಾನವು ಬೇಕು; ವರ್ತಮಾನ ಭವಿಷ್ಯಗಳೆರಡನ್ನೇ ಗಮನಿಸಿದರೆ ಸಾಲದು. ಭವಿಷ್ಯವು ಸಮರ್ಪಕವಾಗಿ ಸಿದ್ಧಿಸಲು ಗತ

ಕಾಲದ ಸ್ಥಿತಿಗತಿಗಳನ್ನೂ ವರ್ತಮಾನಕಾಲದ ಪರಿಸ್ಥಿತಿಯನ್ನೂ ವಿಚಾರ ಸಹಿತವಾಗಿ ತಿಳಿಯಲೇಬೇಕು.

ಈ ನೀತಿಪಾಠವು ನಮ್ಮ ದೇಶದ ಶಾಲೆಗಳಲ್ಲಿ ಇತರ ದೇಶಗಳ ಶಾಲೆಗಳಲ್ಲಿ ತೋರಬಹುದಾದುದಕ್ಕಿಂತಲೂ ಹೆಚ್ಚು ಅವಶ್ಯ. ದೇಶವು ವಿಸ್ತಾರವೂ, ಪ್ರಾಚೀನವೂ, ವಿಶಿಷ್ಟವೂ ಆದ ಕಾರಣದಿಂದ ಭಾರತೀಯ ಪೌರನೀತಿಯೆಂಬುದೂ ವಿಸ್ತಾರ ವಿಚಾರಗಳಿಂದ ವಿಪುಲವೂ ವಿಶಿಷ್ಟವೂ ಆಗಿದೆ. ಅತ್ಯಾವಶ್ಯಕವೂ ವಿಶಿಷ್ಟವೂ ಆಗಿರುವ ಈ ಪೌರನೀತಿಯನ್ನು ಪ್ರಧಾನ ಪಾಠವಾಗಿ ನಿರೂಪಿಸುವ ಪ್ರಯತ್ನ ಮಾತ್ರ ಈ ಪುಸ್ತಕದ ರೂಪವನ್ನು ತಾಳಿದೆ.

ಈ ಪುಸ್ತಕವನ್ನು ಮೊದಲು ಬರೆದುದು ಇಂಗ್ಲಿಷಿನಲ್ಲಿಯೇ. ಮೊದಲನೆ ಭಾಗವೆಂಬುದು ಇಂಗ್ಲಿಷಿನಲ್ಲಿ 172 ಪುಟಗಳಾದುವು; ಕನ್ನಡದಲ್ಲಾದರೆ 300 ಪುಟಗಳಾದುವು! ಇದಕ್ಕೆ ಕಾರಣವು ವಿಷಯ ವಿಸ್ತಾರ ವಿನ್ಯಾಸಗಳ ಭೇದದಲ್ಲಿಲ್ಲ, ಅಚ್ಚಿನ ಭೇದವೊಂದರಲ್ಲಿಯೇ! ಕನ್ನಡದ ಅಚ್ಚಿನ ಮೊಳೆಗಳು ಹೆಚ್ಚು ಸ್ಥಳವನ್ನಾಕ್ರಮಿಸಿಕೊಳ್ಳುವುದು ಮುದ್ರಣಕಾರ್ಯದ ಅಲ್ಪಸ್ವಲ್ಪ ಪರಿಚಯವುಳ್ಳವರೆಲ್ಲರಿಗೂ ಗೊತ್ತುಂಟು. ಇಂತಹ ಅಲ್ಪ ಭೇದಗಳಿರಬಹುದಾದರೂ ಈ ಪುಸ್ತಕವು ಇಂಗ್ಲಿಷಿನಲ್ಲಿರುವುದರ ಅನುವಾದ ಮಾತ್ರವೇ. ಕೇವಲ ಪ್ರಮಾಣವನ್ನು ಕಂಡು ಕನ್ನಡದ ಪುಸ್ತಕವು ಇಂಗ್ಲಿಷು ಪುಸ್ತಕಕ್ಕಿಂತ ದೊಡ್ಡದೆಂದೋ ವಿಸ್ತಾರವೆಂದೋ ಯಾರೂ ಭ್ರಾಂತಿಗೊಳ್ಳಬಾರದು.

ಇಂತಹ ಪುಸ್ತಕವನ್ನು ಕನ್ನಡದಲ್ಲಿ ಬರೆಯುವುದು ಸ್ವಲ್ಪ ಮಾತ್ರ ಸಾಹಸವೇ. ಇಂಗ್ಲಿಷ್ ಭಾಷೆಯ ಪರಿಚಯವನ್ನೇ ಹೆಚ್ಚಾಗಿ ಪಡೆದವರೆಲ್ಲರಿಗೂ ಕನ್ನಡ ಭಾಷೆಯ ಪತ್ಯಾದಿ ಸಂಪ್ರದಾಯಗಳು ಸರಲ ರೀತಿಯಲ್ಲಿರಲಾರವು. ಶಾಸ್ತ್ರಭಾಗವಾದರಂತೂ ಪರಿಭಾಷೆಯ ತೊಡಕು ಬೇರೆ. ರೂಢಿಗೊಂಡಿರುವಾಗಲೂ ವಿಶಿಷ್ಟನಾಮವಾಚಕಗಳಾಗಿರುವಾಗಲೂ ಇಂಗ್ಲಿಷ್ ಶಬ್ದಗಳನ್ನೇ ಉಪಯೋಗಿಸಬೇಕಾಗುವುದು. ಆದರೆ ದೇಶಭಾಷೆಗಳಲ್ಲಿಯೇ ದೊರಕಬಹುದಾದ ಶಬ್ದಗಳನ್ನು ಪ್ರಯೋಗಿಸದೆ ಬಿಡತಕ್ಕುದು ನ್ಯಾಯವಲ್ಲ. ಹೀಗಿರುವುದರಿಂದ ಈ ಪುಸ್ತಕದಲ್ಲಿ ಛಂದ,

ವರಣ, ಭೋಗಪತಿ ಮುಂತಾದ ಶಬ್ದಗಳ ಪ್ರಯೋಗಕ್ಕೆ ಆಕ್ಷೇಪವಿರಲಾರ ದೆಂಬ ವಿಶ್ವಾಸವು ಗ್ರಂಥಕರ್ತನಿಗುಂಟು.

ಕನ್ನಡ ನಾಡಿನ ಯುವಕ ಯುವತಿಯರಿಗೆ ಈ ಪುಸ್ತಕವು ಪಠನೀಯ ವಾಗಲೆಂಬುದೇ ಗ್ರಂಥಕರ್ತನ ಹಾರೈಕೆ. ವಿಷಯ ವಿನ್ಯಾಸದಲ್ಲಿ ಪ್ರೋತ್ಸಾಹವನ್ನು ನೀಡಿದ ಶ್ರೀ ಸಿ. ರಾಮಲಿಂಗಾರೆಡ್ಡಿಯವರಿಗೂ ಶ್ರೀ ಸರ್ ಎಸ್. ರಾಧಾಕೃಷ್ಣನ್‌ರವರಿಗೂ ಗ್ರಂಥಕರ್ತನ ವಂದನೆಗಳು. ಆಕಸ್ಮಿಕವಾಗಿ ಕಾಲವಶರಾದ ಹಾ ಕುಸ್ಮಿಕಣ್ಣಾನ್‌ರವರಿಗೆ ಗ್ರಂಥಕರ್ತನು ವಿಶೇಷ ಕೃತಜ್ಞನಾಗಿರುತ್ತಾನೆ.

ಕೆ. ಕೃಷ್ಣಯ್ಯಂಗಾರ್.

# ಅನುಕ್ರಮಣಿಕೆ



## ಎರಡನೆಯ ಭಾಗ


ಭರತವರ್ಷ–ಪ್ರದೇಶಗಳು
ಕಾಶ್ಮೀರ
ಲಾಹೋರು
ಪಂಜಾಬು
ರಾಜಪುತ್ರಸ್ಥಾನ
ದಿಲ್ಲಿ
ಸಿಂಧು
ನೇಪಾಲ
ಭೂತಾನ್
ಅಸ್ಸಾಂ
ಬಂಗಾಲ
ಪಾಟ್ನಾ
ಲಖನೌ
ಅಲಹಾಬಾದ್
ಬಿಹಾರ್
ಕಲಕತ್ತ
ಮಧ್ಯಪ್ರಾಂತ
ನಾಗಪುರ
ಒರಿಸ್ಸ
ಬೀರಾರ್
ಹೈದರಾಬಾದ್
ಮುಂಬಯಿ
ಮೈಸೂರು
ಮದರಾಸ್
ರಂಗೂನ್

# I. ದೇಶ ಪರಿಸ್ಥಿತಿ

# 1. ನಮ್ಮ ದೇಶ

**ಮೈಸೂರು, ಕನ್ನಡ ನಾಡು, ಬ್ರಿಟಿಷ್-ದೇಶೀಯ ವಿಭಾಗ, ಒಟ್ಟು ದೇಶ, ದೇಶದ ಹೆಸರುಗಳು, ಸ್ಥಾನ, ವೈಶಾಲ್ಯ, ಬಾಹುಳ್ಯ, ವೈವಿಧ್ಯ, ಸಮೃದ್ಧಿ, ದೇಶದ ಐಕ್ಯತೆ.**

**ಮೈಸೂರು**

ಮೈಸೂರು ಸಂಸ್ಥಾನವು 29,483 ಚದರ ಮೈಲಿಗಳಷ್ಟು ವಿಸ್ತೀರ್ಣವುಳ್ಳುದು. ಆದ್ದರಿಂದ ಡೆನ್ಮಾರ್ಕ್, ಬೆಲ್ಜಿಯಂ, ಸ್ವಿಟ್ಸರ್ಲೆಂಡ್ ಎಂಬ ಐರೋಪ್ಯ ದೇಶಗಳಿಗಿಂತ ದೊಡ್ಡದು. ಮೈಸೂರು ಸಂಸ್ಥಾನವೆಂಬುದು ದಖನ್ ಪ್ರಸ್ಥಭೂಮಿಯ ದಕ್ಷಿಣ ಮೂಲೆಯೆಂದು ಸಾಮಾನ್ಯವಾಗಿ ಭಾವಿಸಬಹುದು. ಮೇರೆಗಳು ಪ್ರಾಕೃತಿಕವಾದವುಗಳಲ್ಲ, ರಾಜಕೀಯವಾದವು. ಬೊಂಬಾಯಿ ಮದರಾಸಾಧಿಪತ್ಯಗಳೂ ಕೊಡಗು ಪ್ರಾಂತವೂ ಸಂಸ್ಥಾನದ ನೆರೆಯಲ್ಲಿರುವ ಪ್ರದೇಶಗಳು.

**ಕನ್ನಡ ನಾಡು**

ಮೈಸೂರು ಸಂಸ್ಥಾನವು ಕನ್ನಡ ನಾಡಿನ ಅಥವಾ ಕರ್ಣಾಟಕ ಪ್ರಾಂತದ ತೆಂಕಣ ಭಾಗ. ಪಶ್ಚಿಮದಲ್ಲಿಯೂ ಉತ್ತರದಲ್ಲಿಯೂ ಕನ್ನಡಿಗರೇ ನೆರೆಯವರು. ಈಶಾನ್ಯ ಮತ್ತು ಪೂರ್ವ ದಿಕ್ಕುಗಳಲ್ಲಿ ಆಂಧ್ರರೂ, ಆಗ್ನೇಯ ಮತ್ತು ದಕ್ಷಿಣ ದಿಕ್ಕುಗಳಲ್ಲಿ ತಮಿಳರೂ ನೆರೆಯವರು. ಸಂಸ್ಥಾನದ ಸುತ್ತಮುತ್ತಲಿರುವ ಪ್ರದೇಶಗಳಲ್ಲಿ ದಕ್ಷಿಣ ಕನ್ನಡ, ಕೊಡಗು, ನೀಲಗಿರಿ ಜಿಲ್ಲೆಗಳು ಕನ್ನಡ ನಾಡಿನಲ್ಲಿಯೇ ಸೇರಿದವು; ಉತ್ತರ ಕನ್ನಡ, ಧಾರವಾಡ, ಬಳ್ಳಾರಿ ಜಿಲ್ಲೆಗಳೂ ಕನ್ನಡ ನಾಡಿನ ವಿಭಾಗಗಳೇ. ಕನ್ನಡಿಗರ ನಾಡೆಂಬುದು ಬೊಂಬಾಯಿ ಆಧಿಪತ್ಯ, ನೈಸಾಮ ಸಂಸ್ಥಾನ, ಮದರಾಸಾಧಿಪತ್ಯಗಳ ಭಾಗಗಳನ್ನೂ, ಕೊಡಗು ಪ್ರಾಂತವನ್ನೂ, ಮೈಸೂರು, ಕೊಲ್ಹಾಪುರ, ಅಕ್ಕಲಕೋಟೆ, ಮುದುವೊಳಲು ಮುಂತಾದ ದೇಶೀಯ ಸಂಸ್ಥಾನಗಳನ್ನೂ ಒಳಗೊಂಡಿದೆ. ದಕ್ಷಿಣ ಕನ್ನಡ, ನೀಲಗಿರಿ, ಬಳ್ಳಾರಿ ಜಿಲ್ಲೆಗಳು ಮದರಾಸಾಧಿಪತ್ಯಕ್ಕೆ ಒಳಗಾದವು; ಉತ್ತರ ಕನ್ನಡ, ಧಾರವಾಡ,

ಬೆಳಗಾಂವಿ, ಬಿಜಾಪುರ ಜಿಲ್ಲೆಗಳು ಬೊಂಬಾಯಿ ಆಧಿಪತ್ಯಕ್ಕೆ ಸೇರಿದವು; ಬೀದರ್, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳು ನೈಸಾಮರ ಸರ್ಕಾರಕ್ಕೆ ಅಧೀನವಾದವು. ಹೀಗೆ ಅನೇಕ ಆಡಳಿತಗಳಿಗೆ ಅಧೀನರಾದ ಕನ್ನಡಿಗರ ಸಂಖ್ಯೆಯು 1 ಕೋಟಿಗೆ ಸ್ವಲ್ಪ ಹೆಚ್ಚಾಗಿರುವುದು; ಅದರಲ್ಲಿ ಮೈಸೂರಿನವರು 65,57,302. ಮೈಸೂರು ಸಂಸ್ಥಾನವನ್ನೊಳಗೊಂಡ ಕನ್ನಡ ನಾಡಿನಂತೆಯೇ ತಮಿಳುನಾಡು, ಕೇರಲ, ಆಂಧ್ರ, ಮಹಾರಾಷ್ಟ್ರ, ಗುಜರಾಥ, ಉತ್ಕಲ, ಬಂಗಾಲ ಮೊದಲಾಗಿ ಅನೇಕ ನಾಡುಗಳು ಮಾತೃಭೂಮಿಯೆನಿಸಿದ ಭಾರತವರ್ಷದಲ್ಲಿ ಸೇರಿವೆ.

**ಬ್ರಿಟಿಷ್, ದೇಶೀಯ ವಿಭಾಗಗಳು**

ಭಾರತವರ್ಷದ ರಾಜಕೀಯ ನಕ್ಷೆಯಲ್ಲಿ ಕೆಲವು ಭಾಗಗಳನ್ನು ಹಳದಿ ಬಣ್ಣದಿಂದಲೂ ಕೆಲವು ಭಾಗಗಳನ್ನು ಕೆಂಬಣ್ಣದಿಂದಲೂ ಚಿತ್ರಿಸಿರುತ್ತಾರೆ. ಕೆಂಬಣ್ಣವಿರುವ ಪ್ರದೇಶಗಳೆಲ್ಲವೂ ಬ್ರಿಟಿಷರ ಸ್ವಂತ ಆಳ್ವಿಕೆಗೆ ಒಳಪಟ್ಟವು; ಹಳದಿ ಬಣ್ಣದಿಂದ ಕೂಡಿದ ಭಾಗಗಳು ಬ್ರಿಟಿಷರ ಆಶ್ರಯದಲ್ಲಿರುವ ದೇಶೀಯ ಸಂಸ್ಥಾನಗಳು. ಮೈಸೂರು ಸಂಸ್ಥಾನವು ದೇಶೀಯ ಸಂಸ್ಥಾನಗಳಲ್ಲೊಂದು; ಮೈಸೂರಿನಂತೆಯೇ ಅನೇಕ ಸಂಸ್ಥಾನಗಳಿವೆ. ನೈಸಾಮ ಸಂಸ್ಥಾನ, ಕಾಶ್ಮೀರ ಮತ್ತು ಜಮ್ಮು, ತಿರುವಾಂಕೋಡು ಮುಂತಾದ ಸಂಸ್ಥಾನಗಳು ದೊಡ್ಡವು; ಉಳಿದವು ಕಿರಿದಾದವು. ಒಟ್ಟಿನಲ್ಲಿ 600ರಷ್ಟು ಇರುವ ಈ ಸಂಸ್ಥಾನಗಳೆಲ್ಲಕ್ಕೂ ಒಟ್ಟಿಗೆ ದೇಶೀಯ ಸಂಸ್ಥಾನಗಳೆಂದು ಹೆಸರು. ಭಾರತವರ್ಷವು ಈ ರೀತಿ ಎರಡು ದೊಡ್ಡ ವಿಭಾಗಗಳಾಗಿದೆ: ಬ್ರಿಟಿಷ್ ವಿಭಾಗ ಮತ್ತು ದೇಶೀಯ ವಿಭಾಗ. ರಾಜಕೀಯ ರೀತಿಯಲ್ಲಿ ಈ ಭೇದವು ಮುಖ್ಯವಾದುದು.

ಈ ವಿಭಾಗಗಳಿಗೆ ನಕ್ಷೆಯಲ್ಲಿಯೇ ಒಂದು ವ್ಯತ್ಯಾಸವು ಕಾಣುತ್ತದೆ. ವಿಸ್ತೀರ್ಣದಲ್ಲಿ ಬ್ರಿಟಿಷ್ ವಿಭಾಗವು ಒಟ್ಟಿನಲ್ಲಿ $\frac{2}{3}$ ರಷ್ಟಿದ್ದು ದೇಶೀಯ ಸಂಸ್ಥಾನಗಳ ಎರಡರಷ್ಟಿದೆ; ಜನಸಂಖ್ಯೆಯಲ್ಲಿ $\frac{3}{4}$ ರಷ್ಟಿದ್ದು ದೇಶೀಯ ಸಂಸ್ಥಾನಗಳ ಜನಸ್ತೋಮದ ಮೂರರಷ್ಟಿದೆ. ಜನಬಾಹುಳ್ಯವು ಬ್ರಿಟಿಷ್ ವಿಭಾಗಗಳಲ್ಲಿಯೇ ಹೆಚ್ಚು. ಇದಕ್ಕೆ ಕಾರಣವೇನು? ನಕ್ಷೆಯೇ ಉತ್ತರವನ್ನು

ಸೂಚಿಸುತ್ತದೆ. ಫಲವತ್ತಾದ ಬಯಲುಗಳೆಲ್ಲವೂ ಬ್ರಿಟಿಷ್ ವಿಭಾಗದಲ್ಲಿಯೇ ಸೇರಿ ಪ್ರಸ್ಥಭೂಮಿಯ ಭಾಗಗಳೂ ಗುಡ್ಡಗಾಡು ಪ್ರದೇಶಗಳೂ ದೇಶೀಯ ವಿಭಾಗದಲ್ಲಿ ಸೇರಿವೆ. ಸಂಸ್ಥಾನಗಳಲ್ಲಿ ತಿರುವಾಂಕೋಡು, ಕೊಚ್ಚಿ, ಕಾಥೇವಾಡ ಮುಂತಾದ ಕೆಲವಕ್ಕೆ ಮಾತ್ರ ಸಮುದ್ರತೀರವುಂಟು, ಅನೇಕ ಸಂಸ್ಥಾನಗಳಿಗೆ ಸಮುದ್ರ ಸಂಪರ್ಕವೇ ಇಲ್ಲ. ನಕ್ಷೆಯಲ್ಲಿ ಇನ್ನೂ ಒಂದು ವಿಶೇಷವನ್ನು ಕಾಣಬಹುದು. ಸಾಧಾರಣವಾಗಿ ಸಂಸ್ಥಾನಗಳು ಪ್ರತ್ಯೇಕವಾಗಿಯೇ ಇವೆ. ಅವುಗಳ ನಡುನಡುವೆ ಬ್ರಿಟಿಷ್ ವಿಭಾಗವು ಚಾಚಿಕೊಂಡಿರುತ್ತದೆ. ಈ ವ್ಯತ್ಯಾಸಗಳಿಂದ ವಿಸ್ತೀರ್ಣದಲ್ಲಿಯೂ, ಜನಬಲದಲ್ಲಿಯೂ, ಸಂಪತ್ತಿನಲ್ಲಿಯೂ ಬ್ರಿಟಿಷ್ ವಿಭಾಗವೇ ಹೆಚ್ಚಿನದೆಂದು ಸ್ಪಷ್ಟವಾಗುವುದು.

**ಒಟ್ಟು ದೇಶ**

ದೇಶೀಯ ವಿಭಾಗದಲ್ಲಿ ನೂರಾರು ಸಂಸ್ಥಾನಗಳಿವೆ; ಬ್ರಿಟಿಷ್ ವಿಭಾಗದಲ್ಲಿ 15 ಮುಖ್ಯ ಭಾಗಗಳು ಅಥವಾ ಪ್ರಾಂತಗಳು ಇವೆ. ಅವುಗಳಲ್ಲಿ ದೊಡ್ಡ ಪ್ರಾಂತಗಳನ್ನು ಆಳಲು ಗವರ್ನರುಗಳೆಂಬ ಅಧಿಕಾರಿಗಳೂ, ಸಣ್ಣ ಪ್ರಾಂತಗಳನ್ನು ಆಳಲು ಲೆಫ್ಟಿನೆಂಟ್ ಗವರ್ನರುಗಳೆಂಬ ಅಧಿಕಾರಿಗಳೂ ಇರುತ್ತಾರೆ. ಇವರ ಕೈಕೆಳಗೆ ಕಾರ್ಯನಿರ್ವಾಹ ಮಾಡುವ 15 ಸರಕಾರಗಳೂ ವೈಸ್ರಾಯ್ ಎಂಬ ಶ್ರೇಷ್ಠಾಧಿಕಾರಿಗೆ ಅಧೀನವಾಗಿ ವರ್ತಿಸುತ್ತವೆ; ದಿಲ್ಲಿಯನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡಿರುವ ವೈಸ್ರಾಯಿಯ ವಶದಲ್ಲಿ ಬ್ರಿಟಿಷ್ ವಿಭಾಗದ 15 ಸರಕಾರಗಳೇ ಅಲ್ಲದೆ, 600 ದೇಶೀಯ ಸಂಸ್ಥಾನಗಳ ಸರಕಾರಗಳೂ ಇರುತ್ತವೆ. ಉಭಯ ವಿಭಾಗಗಳಿಗೂ ಅಧಿಪತಿಯಾಗಿರುವ ವೈಸ್ರಾಯ್ ಮತ್ತು ಗವರ್ನರ್–ಜನರಲ್ ಎಂಬ ಅಧಿಕಾರಿಯು ಭಾರತವರ್ಷಕ್ಕೆ ಚಕ್ರವರ್ತಿಯೂ, ಇಂಗ್ಲೆಂಡ್ ಮುಂತಾದ ದೇಶಗಳಿಗೆ ದೊರೆಯೂ ಆದ ಪ್ರಭುಗಳ ಪ್ರತಿನಿಧಿ ಸ್ವರೂಪನಾಗಿರುತ್ತಾನೆ. ನಿತ್ಯವೂ ನಾವು ಉಪಯೋಗಿಸುವ ನಾಣ್ಯಗಳೂ ಸ್ಟಾಂಪುಗಳೂ ಈ ಅಂಶವನ್ನು ಸೂಚಿಸುತ್ತವೆ. ಬ್ರಿಟಿಷ್ ಮತ್ತು ದೇಶೀಯ ವಿಭಾಗಗಳೆರಡೂ ಸೇರಿ ಭಾರತವರ್ಷ ಅಥವಾ ಭಾರತೀಯ ಸಾಮ್ರಾಜ್ಯವೆನಿಸುತ್ತದೆ. ಈ ಸಾಮ್ರಾಜ್ಯವು 'ರವಿ ಮುಳುಗದ ಸಾಮ್ರಾಜ್ಯ'ವೆಂದು ಸಾಮಾನ್ಯವಾಗಿ

ಹೆಸರುಗೊಂಡಿರುವ ಬ್ರಿಟಿಷ್ ಜನಾಂಗಗಳ ಸಮುದಾಯವೆಂಬ ದೊಡ್ಡ ಸಂಸ್ಥೆಯಲ್ಲಿ ಒಂದು ಪಾಲಾಗಿರುತ್ತದೆ.

ನಾವೆಲ್ಲರೂ ಭಾರತೀಯರಾಗಿ, ಬ್ರಿಟಿಷರ ಅಧೀನರಾಗಿ, ಕನ್ನಡಿಗರಾಗಿ, ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ಪ್ರಜೆಗಳಾಗಿದ್ದೇವೆ.

ದೇಶದ ಹೆಸರುಗಳು

ನಮ್ಮ ಮಾತೃಭೂಮಿ ಅಥವಾ ಜನ್ಮಭೂಮಿಯನ್ನು ಬ್ರಿಟಿಷರೇ ಮೊದಲಾದ ಐರೋಪ್ಯರು ಸಿಂಧು ಶಬ್ದದ ಅಪಭ್ರಂಶವಾದ ಇಂಡಿಯ ಎಂಬ ಹೆಸರಿನಿಂದ ಕರೆಯುತ್ತಾರೆ. ನಾವಾದರೋ **ಜಂಬೂದ್ವೀಪ, ಭರತವರ್ಷ, ಭರತಖಂಡ, ಆರ್ಯಭೂಮಿ, ಆರ್ಯಾವರ್ತ, ಹಿಂದೂಸ್ತಾನ್,** ಮುಂತಾದ ಹೆಸರುಗಳಿಂದ ಕರೆಯುತ್ತೇವೆ. ಇವಲ್ಲದೆ ಕೆಲವೇಳೆಗಳಲ್ಲಿ ನಾವು **ಪುಣ್ಯಭೂಮಿ, ಕರ್ಮಭೂಮಿ, ಭೋಗಭೂಮಿ** ಗಳೆಂದೂ ನಮ್ಮ ದೇಶವನ್ನು ವರ್ಣಿಸುತ್ತೇವೆ. ಇವುಗಳಲ್ಲಿ **ಪುಣ್ಯಭೂಮಿ ಕರ್ಮಭೂಮಿ**ಗಳೆಂಬವು ತುಂಬಿದ ಅರ್ಥವುಳ್ಳವು; ನಮ್ಮ ಪೂರ್ವಜರು ಉಪಯೋಗಿಸುತ್ತಲಿದ್ದ ಸೊಗಸಾದ ಹೆಸರುಗಳು. ಹಿಂದಿನ ಜನ್ಮದಲ್ಲಿ ಸುಕೃತವನ್ನಾಚರಿಸಿದವರು ಮಾತ್ರವೇ ಈ ಪವಿತ್ರ ಭೂಮಿಯಲ್ಲಿ ಜನ್ಮವನ್ನು ಪಡೆಯಬಲ್ಲವರೆಂದೂ, ಸುಕೃತವನ್ನಾಚರಿಸದಿದ್ದವರಿಗೆ ಇಲ್ಲಿ ಜನ್ಮವು ದುರ್ಲಭವೆಂದೂ ನಮ್ಮ ಹಿರಿಯರ ನಂಬಿಕೆ. ಪುಣ್ಯವಂತರಿಗೇ ಲಭ್ಯವಾದುದರಿಂದ **ಪುಣ್ಯಭೂಮಿ**ಯೆಂಬ ಹೆಸರು ಸಂದಿದೆ. **ಕರ್ಮಭೂಮಿ**ಯೆಂಬುದು ಇನ್ನೂ ವಿಶೇಷವಾದ ಅರ್ಥವನ್ನುಳ್ಳ ಹೆಸರು. ಆರ್ಯಧರ್ಮಕ್ಕನುಸಾರವಾಗಿ ಪ್ರತಿಮಾನವನೂ ತನ್ನ ಕರ್ಮಫಲದಂತೆ ಜನ್ಮಾಂತರಗಳನ್ನು ಅನುಭವಿಸಿ ಕಡೆಗೆ ಕರ್ಮದಿಂದ ಬಿಡುಗಡೆಯನ್ನು ಅಥವಾ ಮುಕ್ತಿಯನ್ನು ಪಡೆಯಬೇಕು. ಕರ್ಮಬಂಧನದಿಂದ ಮುಕ್ತರಾಗಲು ಈ ಭೂಮಿಯಲ್ಲಿ ಜನ್ಮವನ್ನು ಪಡೆಯಬೇಕು. ಮೋಕ್ಷಪ್ರಾಪ್ತಿಗಾಗಿ ನಡೆಯುವ ನಿರಂತರ ಸಾಧನೆಯಲ್ಲಿ ಜೀವಿಯು ತನ್ನ ಕಡೆಯ ಜನ್ಮವನ್ನು ಈ ದೇಶದಲ್ಲಿಯೇ ಕಳೆಯಬೇಕಾದುದರಿಂದ ಜೀವಿಗಳಿಗೆ ಮೋಕ್ಷದಾಯಕವಾದುದು ಈ ದೇಶ; ಇಲ್ಲಿ ಹುಟ್ಟಿದವನು ತನ್ನ ಪ್ರಾಪ್ತಿಯನ್ನು ಕಳೆದುಕೊಳ್ಳಬಾರದೆಂಬುದು ಹಿರಿಯರ

ಆಶಯವಾಗಿತ್ತು. ಕಾಲಜ್ಞನೆನಿಸಿದ ಭರ್ತೃಹರಿಯೂ ಈ ಅರ್ಥವನ್ನೇ ವಿವರಿಸುತ್ತ* "ಶ್ರೀಗಂಧದ ಸೌದೆಯನ್ನುರಿಸಿ ಅಮೂಲ್ಯವಾದ ರತ್ನಗಳಿಂದ ಖಚಿತವಾದ ಪಾತ್ರೆಯನ್ನು ತಂದಿಟ್ಟು, ಅದರಲ್ಲಿ ಈ ಮೂಢನು ಎಳ್ಳಿನ ಹಿಂಡಿಯನ್ನು ಬೇಯಿಸುತ್ತಲಿದ್ದಾನೆ! ಅತ್ತ ಚಿನ್ನದ ನೇಗಿಲನ್ನು ಹಿಡಿದು ಮತ್ತೊಬ್ಬನು ಎಕ್ಕೆಯ ಹತ್ತಿಗೆಂದು ಭೂಮಿಯನ್ನು ಉಳುತ್ತಲಿದ್ದಾನೆ! ಇತ್ತ ಇನ್ನೊಬ್ಬ ಹುಚ್ಚನು ಕರ್ಪೂರವನ್ನು ಸಮವಾಗಿ ತುಂಡುಗಳಂತೆ ಕತ್ತರಿಸಿ ಹಾಳು ಹಾರಕೆ ಗಿಡಗಳಿಗೆ ಪಾತಿ ಕಟ್ಟುತ್ತಲಿದ್ದಾನೆ! ಈ ಕರ್ಮಭೂಮಿಯಲ್ಲಿ ಜನ್ಮವನ್ನು ಪಡೆದೂ ಕೂಡ ತಪಸ್ಸನ್ನಾಚರಿಸದಿರುವ ಮೂಢನಿಗಿಂತ ನಿರ್ಭಾಗ್ಯರಾದವರುಂಟೇ?" ಎಂದು ನೂರಾರು ವರ್ಷಗಳ ಹಿಂದೆಯೇ ನುಡಿದನು. ಭೋಗಭೂಮಿಯೆಂಬ ಹೆಸರು ಬರಲು ಭರತಖಂಡವು ಸಂಪದ್ಯುಕ್ತವಾಗಿ ಸಮಸ್ತ ಭೋಗಗಳನ್ನು ನೀಡುವುದೇ ಕಾರಣ. ಪುಣ್ಯಭೂಮಿ, ಕರ್ಮಭೂಮಿಗಳೆಂಬುವೇ ದೇಶದ ಪವಿತ್ರತೆಯನ್ನು ಸೂಚಿಸತಕ್ಕವು.

ಇತ್ತೀಚೆಗೆ ಈ ಎರಡು ಹೆಸರುಗಳಿಗೆ ಬೇರೊಂದು ಅರ್ಥವೂ ರೂಢಿಯಾಗಿದೆ. ವಿಂಧ್ಯಪರ್ವತಕ್ಕೆ ಉತ್ತರದಲ್ಲಿರುವುದು ಪುಣ್ಯಭೂಮಿಯೆಂತಲೂ ದಕ್ಷಿಣದಲ್ಲಿರುವುದು ಕರ್ಮಭೂಮಿಯೆಂತಲೂ ಹೇಳುವುದುಂಟು. ಸಿಂಧು ಯಮುನಾ ಗಂಗಾನದಿಗಳ ತೀರಗಳಲ್ಲಿ ಮೋಕ್ಷವು ಸುಲಭವೆಂತಲೂ, ವಿಂಧ್ಯಪರ್ವತಕ್ಕೆ ತೆಂಕಲಾದರೆ ಕರ್ಮಾಚರಣೆಯಿಲ್ಲದೆ ಮೋಕ್ಷವು ದೊರಕಲಾರದೆಂದೂ ಇದರ ವಿವರ. ನಾವು ಈ ಹೆಸರುಗಳನ್ನು ಕೇಳಿಕೊಂಡು ಅವುಗಳ ಅರ್ಥವನ್ನು ತಿಳಿಯುವುದರಿಂದಲೇ ತೃಪ್ತರಾಗಬಾರದು. ನಮಗೆ ಸಾಧ್ಯವಾದಷ್ಟು ಪರಿಚಯವನ್ನೂ ಪರಿಜ್ಞಾನವನ್ನೂ ಸಂಪಾದಿಸಿಕೊಂಡು ನಮ್ಮ ಕರ್ತವ್ಯವೇನೆಂಬುದನ್ನು ನಿಶ್ಚಯಮಾಡಿಕೊಂಡು ಜೀವನಕ್ಕೆ ಸಿದ್ಧತೆಯನ್ನು ಪಡೆಯಬೇಕು.

---

* ಸ್ಥಾಲ್ಯಾಂ ವೈಡೂರ್ಯಮಯ್ಯಾಂ ಪಚತಿ ತಿಲಖಲಂ ಚಾಂದನೈರಿಂಧನೌಘೈಃ
ಸೌವರ್ಣೈರ್ಲಾಂಗಲಾಗ್ರೈರ್ವಿಲಿಖತಿ ವಸುಧಾಮರ್ಕತೂಲಸ್ಯ ಹೇತೋಃ ।
ಛಿತ್ವಾ ಕರ್ಪೂರಖಂಡಾನ್ ವೃತಿಮಿವ ಕುರುತೇ ಕೋದ್ರವಾಣಾಂ ಸಮಂತಾತ್
ಪ್ರಾಪ್ಯೇಮಾಂ ಕರ್ಮಭೂಮಿಂ ನ ಭಜತಿ ಪುರುಷೋ ಯಸ್ತಪೋ ಮಂದಭಾಗ್ಯಃ ॥

**ಸ್ಥಾನ**

ನಕ್ಷೆಯನ್ನು ನೋಡುತ್ತಿದ್ದ ಹಾಗೆಯೇ ನಮಗೆ ಭರತವರ್ಷದ ಸ್ಥಾನವು ವಿಶೇಷವಾದುದೆಂದು ಮನಸ್ಸಿಗೆ ಸ್ಫುರಿಸುವುದು. ಭರತವರ್ಷವು ಸಸ್ಯಸಮೃದ್ಧಿಗೆ ಆಕರವಾದ ಉಷ್ಣವಲಯದಲ್ಲಿಯೇ ಇರುವುದಲ್ಲದೆ ಪೃಥ್ವಿಯ ಪ್ರಾಚ್ಯಾರ್ಧದ ಕೇಂದ್ರಸ್ಥಾನದಲ್ಲಿದೆ; ಪೂರ್ವಾರ್ಧಗೋಳದ ನಡುವಣ ಆಭರಣದಂತೆ ಇರುವ ಈ ದೇಶವು ಪ್ರಾಚ್ಯ ಅಥವಾ ಪೌರಸ್ತ್ಯ ದೇಶಗಳ, ಜನಗಳ, ಸಂಸ್ಕೃತಿಗಳ ಹೃದಯದಂತೆಯೇ ಇದೆ. ಸ್ಥಾನ ಮಹಿಮೆಯನ್ನು ಪಡೆದಿರುವ ಈ ದೇಶವು ವಿಸ್ತಾರವಾದ ಕ್ಷೇತ್ರವಾಗಿಯೂ ಇದೆ. ಇತರ ದೇಶಗಳೊಡನೆ ಸ್ವಲ್ಪ ಹೋಲಿಸಿದರೆ ಆ ವಿಸ್ತೀರ್ಣದ ಮಹಿಮೆಯು ಗೋಚರವಾಗುತ್ತದೆ. 1,900 ಮೈಲಿ ಉದ್ದವೂ 1,900 ಮೈಲಿ ಅಗಲವೂ ಇದ್ದು 18,08,679 ಚದರ ಮೈಲಿಗಳಷ್ಟು ವಿಶಾಲವಾದ ಈ ದೇಶವು ಭೂಮಂಡಲದ ದೇಶ ವಿದೇಶಗಳಲ್ಲಿ ಹಿರಿಯವರ್ಗಕ್ಕೆ ಸೇರಿದುದು.

**ವೈಶಾಲ್ಯ**

ಉದ್ದ ಅಗಲಗಳಲ್ಲಿ ಭರತವರ್ಷವೆಂಬುದು ಯೂರೋಪ್ ಖಂಡಕ್ಕೇ ಸಮಾನ; ಬೋರ್ಡೋ ಎಂಬ ಪಟ್ಟಣದಿಂದ ಕಾನ್‌ಸ್ಟಾಂಟಿನೋಪಲ್ ಪಟ್ಟಣದವರೆಗೆ ಇರುವ ದೂರವೂ ಕರಾಚಿಯಿಂದ ಚಟ್ಟಗ್ರಾಮ (ಚಿತ್ತಗಾಂಗ್)ಕ್ಕಿರುವ ದೂರವೂ ಒಂದೇ! ಶ್ರೀನಗರದಿಂದ ಕನ್ಯಾಕುಮಾರಿಗೆಷ್ಟು ದೂರವಿದೆಯೋ ಅಷ್ಟೇ ದೂರವೇ ಆರ್ಕೇಂಜಲ್ಸ್ಕ ಪಟ್ಟಣದಿಂದ ನೇಪಲ್ಸ್ ಪಟ್ಟಣಕ್ಕಿರುವುದು! ವಿಸ್ತೀರ್ಣದಲ್ಲಿ ರಷ್ಯಾದೇಶವನ್ನು ಬಿಟ್ಟುಳಿದ ಯೂರೋಪ್ ಖಂಡವು ಭರತಖಂಡದಷ್ಟು ಮಾತ್ರವೇ ಇರುವುದು. ಯೂರೋಪ್ ಖಂಡವೆಂಬುದರಲ್ಲಿ ದೇಶಗಳೆನಿಸಿರತಕ್ಕ ಅನೇಕ ಕ್ಷೇತ್ರಗಳು ಭರತವರ್ಷದ ಪ್ರಾಂತಗಳಿಗಿಂತ ಚಿಕ್ಕವು; ಕೆಲವು ರಾಷ್ಟ್ರಗಳು ನಮ್ಮ ಒಂದು ಜಿಲ್ಲೆಯಷ್ಟೇ ಇವೆ. ಬಂಗಾಲ ಪ್ರಾಂತವೂ ಫ್ರಾನ್ಸ್ ದೇಶವೂ ವಿಸ್ತಾರದಲ್ಲಿ ಸರಿಸಮಾನ; ಇಂಗ್ಲಂಡ್ ಮತ್ತು ವೇಲ್ಸ್ ಸೇರಿದ ಬ್ರಿಟನ್ ಎಂಬುದು ವಿಸ್ತಾರದಲ್ಲಿ ಭರತಖಂಡದ ಹದಿನೇಳರಲ್ಲೊಂದು ಪಾಲಿನಷ್ಟು ಮಾತ್ರ. ಈ ಕಾರಣದಿಂದ ಒಂದೇ ದಿನದ ಪ್ರಯಾಣದಲ್ಲಿ ಐರೋಪ್ಯ ದೇಶಗಳೆರಡು ಮೂರನ್ನು ದಾಟಬಹುದು; ಭರತವರ್ಷದಲ್ಲಿ ಒಂದು

ಮೂಲೆಯಿಂದ ಮತ್ತೊಂದು ಮೂಲೆಗೆ ಪ್ರಯಾಣವೆಂದರೆ 5–6 ದಿನಗಳು ಬೇಕು.

ಜನಬಲವೆಷ್ಟೆಂದು ನೋಡಿದರೆ ಭರತವರ್ಷದ ಜನರು ಅಥವಾ ಭಾರತೀಯರು 35 ಕೋಟಿಗಳಾಗಿ ಒಟ್ಟು ಮಾನವ ರಾಶಿಯಲ್ಲಿ $\frac{1}{6}$ ಭಾಗವಾಗಿರುವರು. ಭಾರತೀಯ ಜನಸ್ತೋಮವು ಯೂರೋಪ್ ಖಂಡದಲ್ಲಿ ರಷ್ಯಾ ವಿನಾ ಉಳಿದ ಎಲ್ಲ ದೇಶಗಳ ಜನಸಂಖ್ಯೆಗೆ ಸರಿದೂಗುವುದು. ಪೃಥ್ವಿಯ ವಿಸ್ತೀರ್ಣದಲ್ಲಿ $\frac{1}{40}$ ಆದಾಗ್ಗ್ಯೂ ಭರತವರ್ಷವು ಮಾನವ ಸಮುದಾಯದ $\frac{1}{6}$ ಭಾಗವಾಗಿರುವುದರಿಂದ ಹೋಲಿಕೆಯು ಬೇಕಾದಾಗ ನಾವು ಭರತಖಂಡ ವನ್ನು ಯೂರೋಪ್ ಖಂಡಕ್ಕೋ, ಅಮೆರಿಕದ ಸಂಯುಕ್ತ ಸಂಸ್ಥಾನ ಗಳಿಗೋ, ಅಥವಾ ಆಸ್ಟ್ರೇಲಿಯ ಮುಂತಾದ ವಿಸ್ತಾರ ಭೂಭಾಗಗಳಿಗೋ ಹೋಲಿಸಬೇಕು. ಈ ಕ್ಷೇತ್ರಗಳೂ ಜನಸಂಖ್ಯೆಯ ಹೋಲಿಕೆಗೆ ಉಪ ಯುಕ್ತವಲ್ಲ. ಸಂಯುಕ್ತ ಸಂಸ್ಥಾನಗಳು ವಿಸ್ತೀರ್ಣದಲ್ಲಿ ಸುಮಾರು ನಮ್ಮ ದೇಶದ ಎರಡರಷ್ಟಿದ್ದರೂ ಜನಸಂಖ್ಯೆಯಲ್ಲಿ ನಮ್ಮ $\frac{1}{3}$ ಭಾಗ ಮಾತ್ರ; ವೈಶಾಲ್ಯದಲ್ಲಿ $2\frac{1}{3}$ ರಷ್ಟಾಗಿದ್ದರೂ ಆಸ್ಟ್ರೇಲಿಯಾ ಎಂಬುದು ಜನ ಬಾಹುಳ್ಯದಲ್ಲಿ $\frac{1}{60}$ ಮಾತ್ರ. ಸ್ಥಾನ, ವೈಶಾಲ್ಯ ಮತ್ತು ಜನಬಲಗಳಲ್ಲಿ ಭರತವರ್ಷವು ಒಟ್ಟು ಪೃಥ್ವಿಗೆ ಎರಡನೆಯದಾಗಿ ಅಗ್ರಗಣ್ಯವಾದುದು.

**ಜನಬಾಹುಳ್ಯ**

ಅತ್ಯುನ್ನತ ಪರ್ವತಶ್ರೇಣಿಗಳಿಂದಲೂ ವಿಶಾಲ ಸಾಗರದಿಂದಲೂ ಭರತ ವರ್ಷವು ಇತರ ಭೂಭಾಗಗಳಿಂದ ಪ್ರತ್ಯೇಕವಾಗಿ ರುವ ಅಂಶವೂ ನಮಗೆ ನಕ್ಷೆಯಿಂದಲೇ ತಿಳಿಯಬರು ತ್ತದೆ. ಇತರ ದೇಶಗಳಿಂದ ಈ ರೀತಿ ಭಿನ್ನವಾಗಿರುವ ಈ ದೇಶವು ಎಷ್ಟು ವಿವಿಧವಾಗಿರುವುದೆಂಬ ಅಂಶವನ್ನೂ ನಾವು ಗಮನಿಸ ಬೇಕು. ಎತ್ತರ, ಉಷ್ಣ, ಮಳೆ, ಭೂಗುಣ, ಸಸ್ಯಸಂಪತ್ತು ಮತ್ತು ಪ್ರಾಣಿ ರಾಶಿಗಳಲ್ಲಿ ಸಮಸ್ತ ಭೂಮಂಡಲದಲ್ಲಿ ತೋರಬಹುದಾದ ಬಗೆಗಳೆಲ್ಲವೂ ತೋರಿಬಂದು ಭೂಮಂಡಲವೇ ಭರತವರ್ಷದಲ್ಲಿ ಅಡಗಿದೆಯೆಂದು ಹೇಳ ಬಹುದಾಗಿದೆ. 0 ದಿಂದ 29,140 ಅಡಿಗಳವರೆಗೆ ಉನ್ನತಿ, 32°ಯಿಂದ 125°ವರೆಗೆ ಉಷ್ಣ, 0 ದಿಂದ 635 ಹದಗಳವರೆಗೆ ವೃಷ್ಟಿ ನಾನಾರೀತಿ

**ವೈವಿಧ್ಯ**

ಪ್ರಮಾಣಗಳನ್ನು ಪಡೆದಿರುವುದು ಈ ದೇಶದಲ್ಲಿಯೇ. ಪ್ರಾಣಿವರ್ಗದಲ್ಲಿಯೂ ಸಸ್ಯಸಮೂಹದಲ್ಲಿಯೂ ಭಾರತೀಯ ಸಂಪತ್ತು ಅಗಣ್ಯವೇ

ಸಮೃದ್ಧಿ

ಆದುದು. ಇಷ್ಟು ವೈವಿಧ್ಯ ಸಹಿತವಾಗಿ ಉಷ್ಣ ವಲಯದಲ್ಲಿಯೂ ಆ ವಲಯದ ಒತ್ತಿನಲ್ಲಿಯೂ ಇರುವ ಭಾರತಭೂಮಿಯು ಅತಿಫಲವತ್ತಾದ ಭೂಭಾಗಗಳಲ್ಲಿ ಗಣ್ಯವಾಗಿದೆ. ಪ್ರಕೃತಿದೇವಿಯು ತನ್ನ ಔದಾರ್ಯವನ್ನು ಹೊರಸೂಸಿರುವುದರಿಂದ ಈ ಕ್ಷೇತ್ರದಲ್ಲಿ ಮಾನವಜೀವನವು ಸುಲಭ; ಇತರ ದೇಶಗಳ ಸ್ಥಿತಿಗತಿಗಳೊಂದಿಗೆ ಹೋಲಿಸಿ ನೋಡಿದರೆ ಈ ದೇಶದಲ್ಲಿ ಮಾನವಜೀವನವು ನಿರಾಯಾಸವಾಗಿಯೇ ಕಳೆಯುವುದೆಂದು ಹೇಳಬಹುದು. ವಿಶಾಲವೂ ಸಮೃದ್ಧವೂ ಆದ ಈ ಭೂಕ್ಷೇತ್ರವನ್ನು ಇತರ ದೇಶಗಳಿಂದ ಬೇರ್ಪಡಿಸುವಾಗ ಪ್ರಕೃತಿದೇವಿಯು ದೇಶದ ಗೌರವಕ್ಕೆ ತಕ್ಕಂತಹ ಮೇರೆಗಳನ್ನೇ ನಿರ್ಮಿಸಿದ್ದಾಳೆ.

ಏಕತೆ

ನಮ್ಮ ದೇಶದ ಪ್ರಾಕೃತಿಕ ವಿವರವನ್ನು ಗಮನಿಸುತ್ತ ನಾವು ನದಿಗಳ ಬಯಲು, ಪ್ರಸ್ಥಭೂಮಿ ಮತ್ತು ತೀರಪ್ರದೇಶಗಳೆಂದು ಬೇರ್ಪಡಿಸಿಕೊಳ್ಳುವಾಗ ಮುಖ್ಯಾಂಶವೊಂದನ್ನು ಸರ್ವದಾ ನೆನಪಿನಲ್ಲಿಟ್ಟಿರಬೇಕು. ಯೂರೋಪ್ ಖಂಡದ ಮಧ್ಯದಲ್ಲಿ ತೋರಿಕೊಂಡು ಹುಟ್ಟಿ ಸಂಚಾರಕ್ಕೆ ಪ್ರಬಲವಾದ ಪ್ರತಿಬಂಧಕಗಳಾಗಿರುವ ಕಾರ್ಪೇಥಿಯನ್, ಪಿರನೀಸ್, ಕೈಲುನ್ ಪರ್ವತಶ್ರೇಣಿಗಳಂತಹ ಪ್ರತಿಬಂಧಕಗಳು ಭರತವರ್ಷದಲ್ಲಿಲ್ಲ. ಈ ಅಂಶದ ಪರಿಣಾಮವಾಗಿ ಯೂರೋಪ್ ಖಂಡವು ಅನೇಕ ದೇಶಗಳ ಸಮುದಾಯವಾಗಿಯೂ ಭರತಖಂಡವು ಏಕದೇಶವಾಗಿಯೂ ರೂಪಸಿದ್ಧಿಯನ್ನು ಪಡೆದಿವೆ. ಭೂಖಂಡದಷ್ಟು ವಿಶಾಲವಾಗಿದ್ದರೂ, ಭ್ರಾಂತಿಗೊಳಿಸುವ ವೈವಿಧ್ಯವನ್ನು ತೋರುತ್ತಿದ್ದರೂ, ಅಗಣ್ಯವಾದ ಸಂಪತ್ತಿನಿಂದ ಯುಕ್ತವಾಗಿದ್ದರೂ, ಬಹುಜನಭರಿತವಾಗಿದ್ದರೂ ಭರತವರ್ಷವೆಂಬುದು ಒಂದೇ ದೇಶ. ದೇಶವನ್ನು ಶ್ರೇಷ್ಠವಾದುದಾಗಿಯೂ ಅದ್ಭುತವಾದುದಾಗಿಯೂ ನೆರವೇರಿಸಿದ ಪ್ರಕೃತಿಮಾತೆಯೇ ಏಕತೆಯನ್ನು ನಿರ್ಮಿಸಿದ್ದಾಳೆ. ಅಹಂಪ್ರತಿ ಸೂರ್ಯಸಾಕ್ಷಾತ್ಕಾರವನ್ನು ಮಾಡಿಕೊಳ್ಳುವ ದೇಶಗಳಲ್ಲಿ

ಅಗ್ರಗಣ್ಯವಾಗಿ ಶ್ರೇಷ್ಠವೂ ಜ್ಯೇಷ್ಠವೂ ಎನಿಸಿದ ಭರತವರ್ಷವು ಏಕದೇಶವಾಗಿರುವುದರಿಂದಲೇ ನಾವು ಕಾರ್ಯಾರಂಭ ಸಂಕಲ್ಪದಲ್ಲಿ 'ಭರತವರ್ಷೇ, ಮೇರೋಃ ದಕ್ಷಿಣೇ ಪಾರ್ಶ್ವೇ' ಎಂದು ಹೇಳಿಕೊಳ್ಳುತ್ತೇವೆ. ನಮ್ಮ ದೇಶವು ಭರತವರ್ಷವಲ್ಲದೆ ಬೇರೆಯಲ್ಲ; ನಾವು ಭಾರತೀಯರಲ್ಲದೆ ಬೇರೆಯಲ್ಲ.

# 2. ಭಾರತೀಯ ಜನರು

ವೈವಿಧ್ಯ : ವಂಶಭೇದ, ಭಾಷಾಭೇದ, ಮತಭೇದ, ಆಚಾರಭೇದ, ಸಾಮಾನ್ಯ ಪಂಗಡಗಳು. ಹಿಂದೂಗಳು : ಐಕ್ಯತೆ, ದೇಶಭಕ್ತಿ, ಐಕ್ಯತಾ ಪ್ರಜ್ಞೆ, ಭಾರತೀಯತ್ವ. ಮುಸಲ್ಮಾನರು : ವೈವಿಧ್ಯ, ಐಕ್ಯತೆ, ದೇಶಭಕ್ತಿ, ಭಾರತೀಯತ್ವ. ಈಸಾಯಿಗಳು : ಪಂಗಡಗಳು, ಭಾರತೀಯತ್ವ. ಪಾರ್ಸೀಜನರು : ಆರ್ಯಶಾಖೆ, ಭಾರತೀಯತ್ವ. ಭಾರತೀಯ ರಾಶಿ : ಪ್ರಮಾಣ, ಗೌರವ, ಐಕ್ಯತೆ.

## ವೈವಿಧ್ಯ

ಭರತವರ್ಷದ ನಿವಾಸಿಗಳು ಮಾನವ ಸಮುದಾಯದಲ್ಲಿ ಆರನೆ ಭಾಗದಷ್ಟು ಸಂಖ್ಯಾಕರಾಗಿ ಭರತವರ್ಷವು ಪೃಥ್ವಿಯಲ್ಲಿ ಎರಡನೆಯ ದೇಶವೆನಿಸಿದೆಯಷ್ಟೆ! ಇಂತಹ ಭಾರತೀಯರಲ್ಲಿ ಮಾನವರಾಶಿಗಳ ಎಲ್ಲ ಬುಡಕಟ್ಟುಗಳೂ ಕಾಣುತ್ತವೆ. ಬಿಳಿ ಅಥವಾ ಕಕೇಷಿಯನ್, ಹಳದಿ ಅಥವಾ ಮಂಗೋಲಿಯನ್ ಮತ್ತು ಕೃಷ್ಣ ಅಥವಾ ನೀಗ್ರೋ ಎಂಬ ಮೂರು ದೊಡ್ಡ ವಿಭಾಗಗಳೂ ಈ ದೇಶದಲ್ಲಿ ಪರಸ್ಪರವಾಗಿ ಸಂಧಿಸಿವೆ; ಕೆಲವೆಡೆಗಳಲ್ಲಿ ಶುದ್ಧವಾಗಿಯೂ, ಕೆಲವೆಡೆಗಳಲ್ಲಿ ಮಿಶ್ರವಾಗಿಯೂ ಇವೆ. ಭಾರತೀಯರು ಆಡುವ ಭಾಷೆಗಳೂ ನುಡಿಗಳೂ 222 ರಷ್ಟಿವೆ. ಜಗತ್ತಿನ ಮುಖ್ಯ ಮತಗಳೆಲ್ಲವೂ ಇಲ್ಲಿ ಕೂಡಿರುವುವಲ್ಲದೆ ಇತರ ದೇಶವಿದೇಶಗಳಲ್ಲಿ ಕಾಣಲಾಗದ ಮತಗಳು ಇಲ್ಲಿ ಗೋಚರವಾಗುತ್ತವೆ. ಅಸಭ್ಯಕುಲಸ್ಥರ ಭೂತಾಚಾರಗಳಿಂದ ಮೊದಲ್ಗೊಂಡು ನಿರ್ಗುಣಬ್ರಹ್ಮವನ್ನು ಸಾಧಿಸುವ ವೇದಾಂತಿಗಳ ಪರಮೋತ್ಕೃಷ್ಟ ತತ್ವಗಳವರೆಗೆ ಎಷ್ಟು ಅಂತಸ್ತುಗಳಿರಬಹುದೋ ಅವೆಲ್ಲವನ್ನೂ ಭಾರತೀಯ ಜನಸ್ತೋಮದಲ್ಲಿ ಪ್ರತ್ಯಕ್ಷವಾಗಿ ಕಾಣಬಹುದಾಗಿದೆ. ಆಚಾರ ವ್ಯವಹಾರಗಳಲ್ಲಿಯೂ ಭಾರತೀಯರು ಒಂದು ರೀತಿಯನ್ನೇ ತೋರುವುದಿಲ್ಲ, ಅನೇಕಾನೇಕ ರೀತಿಗಳನ್ನು ತೋರುವರು. ಊಟಿಗೆ, ತೊಡಿಗೆ, ನಡೆ, ನುಡಿ, ಆಚಾರ, ಸಂಪ್ರದಾಯಗಳಲ್ಲಿ ಭಾರತೀಯರು ನಾನಾ ವಿಧವಾಗಿ ಬಾಳುವರು; ಪಾಶ್ಚಾತ್ಯ ಜನರಲ್ಲಿ ತೋರುವಂತೆ ಏಕರೀತಿಯು ತೋರುವುದೇ ಇಲ್ಲ. ಭರತವರ್ಷದಲ್ಲಿ ಅದ್ಭುತವಾದ ವೈವಿಧ್ಯವಿರುವಂತೆಯೇ

ಭಾರತೀಯರಲ್ಲಿಯೂ ಅದ್ಭುತವಾದ ವೈವಿಧ್ಯವುಂಟು. ಲಂಡನ್, ನ್ಯೂಯಾರ್ಕ್ ಮುಂತಾದ ನಗರಗಳಲ್ಲಿ ನೋಡಿದರೆ ಎಲ್ಲರೂ ಒಂದೇ ಭಾಷೆಯನ್ನಾಡುತ್ತ, ಒಂದೇ ವಿಧವಾದ ಉಡುಪನ್ನು ಧರಿಸುತ್ತ, ಒಂದೇ ರೀತಿಯಲ್ಲಿ ವರ್ತಿಸುತ್ತ ಇರುವುದನ್ನು ಕಂಡು 'ಒಬ್ಬರಂತೆಯೇ ಇನ್ನೊಬ್ಬರು' ಎಂದು ಹೇಳಿಕೊಳ್ಳಬಹುದು. ಕಲ್ಕತ್ತೆಯಲ್ಲಿಯೋ ಮುಂಬಯಿಯಲ್ಲಿಯೋ ಕಡೆಗೊಂದು ತಾಲ್ಲೂಕಿನಲ್ಲಿಯೋ ಓಡಾಡುವ ಭಾರತೀಯರನ್ನು ಕಂಡಾಗ ನಾನಾ ಬಗೆಯಾದ ನಡೆನುಡಿಗಳು ತೋರಿಬಂದು ಪ್ರಯಾಣಿಕನಿಗೆ ವಿಸ್ಮಯವನ್ನೇ ಉಂಟುಮಾಡುತ್ತವೆ.

ದೇಶದ ವೈವಿಧ್ಯವನ್ನು ಕಂಡು ಬೆರಗಾಗಿ ಆತುರದಿಂದ "ಈ ದೇಶವೊಂದು ದೇಶವಲ್ಲ. ಅನೇಕ ದೇಶಗಳು ಕೂಡಿದ ಒಂದು ಸಮೂಹ" ಎಂದರೆ ಹೇಗೆ ತಪ್ಪಾಗುವುದೋ ಹಾಗೆಯೇ ಭಾರತೀಯರ ರೀತಿನೀತಿಗಳ ನಾನಾ ಬಗೆಗಳನ್ನು ಕಂಡು ಭ್ರಾಂತರಾಗಿ "ಭಾರತೀಯರೆನಿಸಿಕೊಳ್ಳುವವರು ಒಂದು ಜನವಲ್ಲ, ಅನೇಕ ಜನಗಳ ಸಮೂಹ" ಎಂದರೆ ತಪ್ಪಾಗುವುದು. ಅದ್ಭುತವಾದ ವೈವಿಧ್ಯದಿಂದ ಯುಕ್ತವಾದ ದೇಶಕ್ಕೆ ಪ್ರಕೃತಿ ಮಾತೆಯೇ ಅದ್ಭುತವಾದ ಮೇರೆಗಳನ್ನು ನಿರ್ಮಿಸಿ ದೇಶದ ಐಕ್ಯತೆಯನ್ನು ನಿಶ್ಚಗೊಳಿಸಿರುವಂತೆಯೇ ಭಾರತೀಯರು ವಿಸ್ಮಯಕಾರಕವಾದ ವೈವಿಧ್ಯವನ್ನು ತೋರುತ್ತಿದ್ದರೂ ಅಂತರಂಗದಲ್ಲಿ ಪರಸ್ಪರ ಬಾಂಧವ್ಯವನ್ನು ಕಟ್ಟಿಕೊಂಡು ಏಕಜನವಾಗಿ ರೂಪಗೊಂಡಿರುವರು.

ವಂಶಭೇದ

**ದ್ರಾವಿಡ, ಆರ್ಯ, ಮಂಗೋಲ** ಎಂಬ ಮೂರು ರಾಶಿ (Race)ಗಳ ಲಕ್ಷಣಗಳೂ ಭಾರತೀಯರಲ್ಲಿ ಕಾಣುತ್ತವೆ. ವಿಂಧ್ಯಾದ್ರಿಗೆ ತೆಂಕಲಲ್ಲಿ ಶುದ್ಧರಾದ ದ್ರಾವಿಡರು ಹೇರಳ; ವಾಯವ್ಯ ಪ್ರದೇಶಗಳಲ್ಲಿ ಶುದ್ಧರಾದ ಆರ್ಯರು ವಿಶೇಷ; ಈಶಾನ್ಯ ಭಾಗಗಳಲ್ಲಿ ಶುದ್ಧರಾದ ಮಂಗೋಲರು ಯಥೇಷ್ಟ. ಉಳಿದ ಭಾಗಗಳಲ್ಲಿ ಈ ರಾಶಿಗಳ ಮಿಶ್ರಣಗಳು ಕಂಡುಬರುತ್ತವೆ. ದೇಹದ ಎತ್ತರ, ವರ್ಣ, ಮುಖ ಲಕ್ಷಣ ಮುಂತಾದ ಅಂಶಗಳ ಪರೀಕ್ಷೆಯಲ್ಲಿ ಇವುಗಳ ಪರಸ್ಪರ ವ್ಯತ್ಯಾಸಗಳು ಶಾಸ್ತ್ರೀಯವಾಗಿ

ವ್ಯಕ್ತವಾಗುತ್ತವೆ. ಪಂಜಾಬು ರಾಜಸ್ಥಾನಗಳ ನಿವಾಸಿಗಳಿಗೂ, ನೀಲಗಿರಿಯ ತೊದವರಿಗೂ ರೂಪಲಕ್ಷಣಗಳಲ್ಲಿ ಎಷ್ಟು ಭೇದವುಂಟು! ಅಸ್ಸಾಮಿನ ನಿವಾಸಿಗಳಿಗೂ ಕೇರಲ ಪ್ರಾಂತದವರಿಗೂ ರೂಪರೇಖೆಗಳಲ್ಲಿ ಎಷ್ಟು ವ್ಯತ್ಯಾಸವುಂಟು! ಇದು ರಾಶಿಭೇದ.

ಭಾಷಾಭೇದ

ಸಿಂಧು ನದಿಯ ಪಶ್ಚಿಮದಲ್ಲಿ ಜನರು ಪುಷ್ಟು, ಬಲೂಚಿಗಳೆಂಬ **ಇರಾನೀ**ಗುಂಪಿಗೆ ಸೇರಿದ ಭಾಷೆಗಳನ್ನಾಡುತ್ತಾರೆ. ಪಂಜಾಬು, ಸಿಂಧು, ರಾಜಸ್ಥಾನ, ಗುಜರಾಥ್, ಮಹಾರಾಷ್ಟ್ರ, ಮಧ್ಯಪ್ರಾಂತಗಳು, ಸಂಯುಕ್ತ ಪ್ರಾಂತಗಳು, ಬಿಹಾರ, ಉತ್ಕಲ, ಬಂಗಾಲ ಪ್ರಾಂತಗಳಲ್ಲಿ **ಸಂಸ್ಕೃತ ಜನ್ಯವಾದ ಭಾಷೆಗಳ**ನ್ನೇ ಜನರಾಡುತ್ತಾರೆ. ನೇಪಾಲ, ಭೂತಾನ, ಸಿಕ್ಕಿಂ, ಅಸ್ಸಾಂ, ಬರ್ಮಾ ಪ್ರಾಂತಗಳಲ್ಲಿ ಸಂಸ್ಕೃತ ಮತ್ತು ಮಂಗೋಲ ಮಿಶ್ರಿತವಾದ ಭಾಷೆಗಳನ್ನು ಆಡುತ್ತಾರೆ. ದಖ್ಖನ್ನಿನಲ್ಲಿ **ಪಂಚದ್ರಾವಿಡ** ಭಾಷೆಗಳು ಹೆಸರನ್ನು ಪಡೆದೇ ಇವೆ; ಈ ಭಾಷೆಗಳಲ್ಲದೆ ಕೊಡಗು, ಕೊಂಕಣಿ ಮುಂತಾದ ನುಡಿಗಳೂ ಉಂಟು. ಇವುಗಳಲ್ಲದೆ **ಅನ್ಯಭಾಷೆ**ಗಳೆನಿಸಿದ ಫಾರಸೀ ಮತ್ತು ಇಂಗ್ಲಿಷ್ ಭಾಷೆಗಳೂ ತಮ್ಮ ಪ್ರಭಾವವನ್ನು ಪ್ರಕಾಶಪಡಿಸುತ್ತವೆ. ಇಷ್ಟು ಒಗೆಬಗೆಯಾದ ಭಾಷೆಗಳಿದ್ದರೂ ಅವುಗಳಲ್ಲಿ ಮುಖ್ಯವಾದವೆಂದು 20 ಭಾಷೆಗಳನ್ನು ಎಂಗಡಿಸಬಹುದು. ಭಾಷಾಭೇದವನ್ನು ಅನುಸರಿಸಿ ದೇಶವನ್ನು ಪ್ರಾಂತಗಳಾಗಿ ಬೇರ್ಪಡಿಸಿದಾಗ 20 ಪ್ರಾಂತಗಳು ಸಿದ್ಧವಾಗುತ್ತವೆ. ಸಾಮಾನ್ಯ ವ್ಯವಹಾರದಲ್ಲಿ ಹಿಂದೂಸ್ತಾನೀ ಎಂಬ ಭಾಷೆಯು ಸರ್ವತ್ರ ರೂಢಿಯಾಗಿದೆ; ರಾಜಕೀಯ ಕಾರಣದಿಂದ ಇಂಗ್ಲಿಷ್ ಭಾಷೆಯು ಪ್ರಬಲವಾಗಿ ಶಿಕ್ಷಿತರೆಲ್ಲರ ಸಾಮಾನ್ಯ ಭಾಷೆಯಾಗಿದೆ.

ಮತಭೇದ

ಮತಗಳಲ್ಲಿಯೂ ಹೀಗೆಯೇ ಅನೇಕ ಭೇದಗಳುಂಟು. ಪೃಥ್ವಿಯಲ್ಲಿ ಹುಟ್ಟಿ ವೃದ್ಧಿಗೊಂಡ ಸಮಸ್ತ ಮತಾಚಾರ ವಿಚಾರಗಳೂ ಈ ದೇಶದ ಜನರ ಆಚರಣೆಯಲ್ಲಿ ತೋರುತ್ತವೆ. ಅನೇಕಾನೇಕ ಮತಭೇದಗಳನ್ನು ಬಳಸಿರುವ **ಹಿಂದೂಮತ**ವೆಂಬುದು ಜನತೆಯ ಬಹು ಭಾಗದವರ

ಮತವಾಗಿದೆ. **ಬೌದ್ಧ ಮತವು** ಇಲ್ಲಿಯೇ ರೂಪಗೊಂಡಿತು; ಈಗ
ಈಶಾನ್ಯ ಪ್ರಾಂತಗಳಲ್ಲಿ ಕೆಲವರು ಬೌದ್ಧರಾಗಿಯೇ ಇರುತ್ತಾರೆ. ಜನರಲ್ಲಿ
ಸುಮಾರು $\frac{1}{5}$ ಭಾಗದವರು **ಇಸ್ಲಾಮಿನ** ಮತಾವಲಂಬಿಗಳು. ಈ ಗುಂಪು
ಗಳಲ್ಲದೆ **ಸರದಷ್ಟ** (Zoroaster)ನ ಶಿಷ್ಯರು (ಅಗ್ನ್ಯಾರಾಧಕರಾದ ಪಾರ್ಸೀ
ಜನರು), ಈಸು (Jesus)ವಿನ ಶಿಷ್ಯರು (ಈಸಾಯಿಗಳು ಅಥವಾ ಕ್ರೈಸ್ತರು),
ಮೂಸಾ (Moses) ಎಂಬಾತನ ಅನುಯಾಯಿಗಳು (ಯೆಹುದೀ ಜನರು
Jews) ಇರುವರು. ಭಾರತೀಯರು ಒಂದೇ ಮತಧರ್ಮವನ್ನು ಅನುಸರಿಸ
ತಕ್ಕವರಲ್ಲ.

**ಆಚಾರಭೇದ** ಆಹಾರ, ಉಡಿಗೆ, ತೊಡಿಗೆ, ಆಚಾರ ವ್ಯವಹಾರಗಳಲ್ಲಿಯೂ ಭಾರತೀಯರು ಏಕರೀತಿಯಾಗಿಲ್ಲ. ಶಾಕಾಹಾರಿಗಳೊಂದು ಕಡೆ, ಮಾಂಸಾಹಾರಿಗಳಿನ್ನೊಂದು ಕಡೆ; ಕೌಪೀನಮಾತ್ರಧಾರಿಯಾದ ಸಂನ್ಯಾಸಿಯೊಂದು ಕಡೆ, ವಿಧವಿಧವಾದ ವಸ್ತ್ರಭೂಷಣಗಳನ್ನು ಉಪಯೋಗಿಸುವವರಿನ್ನೊಂದು ಕಡೆ; ತಲೆಯಲ್ಲಿ ಶಿಖೆಗಳನ್ನು ಧರಿಸುವವರೊಂದು ಕಡೆ, ಶಿಖೆಗಳನ್ನು ತೆಗೆಸಿ ಗಡ್ಡವನ್ನು ಬೆಳೆಸುವವರಿನ್ನೊಂದು ಕಡೆ; ಇದೇ ರೀತಿಯಲ್ಲಿ ಎಣಿಸುತ್ತ ಹೋದರೆ ಕೊನೆಯಿಲ್ಲ. ಭಾರತೀಯ ಜನರಲ್ಲಿ ಕಾಣದ ಆಚಾರವೇ ಆಗಲಿ ಸಂಪ್ರದಾಯವೇ ಆಗಲಿ ಇರುವುದಿಲ್ಲ.

**ಐಕ್ಯತೆಯ ಪ್ರಶ್ನೆ** ವಂಶ ಅಥವಾ ರಾಶಿ, ಭಾಷೆ, ಮತ, ಆಚಾರ ವ್ಯವಹಾರಗಳಲ್ಲಿ ಇಷ್ಟು ಭಿನ್ನ ಭಿನ್ನವಾಗಿದ್ದಾಗ್ಯೂ ಭಾರತೀಯರೆಲ್ಲರೂ ಒಂದೇ ಜನವೆನ್ನುವುದು ಹೇಗೆ? ದೇಶದಲ್ಲಿ ಸಂಚರಿಸಿದ ಪರ್ಯಟಕರು ಈ ವ್ಯತ್ಯಾಸಗಳನ್ನು ಕಂಡು ಭಾರತೀಯರೊಂದು ಜನವೇ ಅಲ್ಲವೆಂದು ಹೇಳಿರುವುದು ಒಪ್ಪೇ? ಭಾರತೀಯರೆನಿಸಿಕೊಳ್ಳಲು ಭರತವರ್ಷದಲ್ಲಿ ಹುಟ್ಟಿ ಬೆಳೆದು ವಾಸಮಾಡುವುದು ಮಾತ್ರವೇ ಕಾರಣವೇ? ಮತ್ತೇನಾದರೂ ಲಕ್ಷಣಗಳುಂಟೇ? ಭಾರತೀಯ ಜನಜೀವನದಲ್ಲಿ ಐಕ್ಯತೆಯೆಲ್ಲಿಯಾದರೂ ಕಾಣುವುದೇ? ಅವರಲ್ಲಿ ಪರಸ್ಪರ ಬಾಂಧವ್ಯವೇನಾದರೂ ಇದೆಯೇ? ಇಂತಹ ಪ್ರಶ್ನೆಗಳಿಗೆ ಸಮಾಧಾನವನ್ನು ಹೇಳುವುದು ಮೊದಲು ತೋರಬಹುದಾದಷ್ಟು ಕಷ್ಟವಲ್ಲ.

ದಿಗ್ಭ್ರಾಂತಿಯನ್ನುಂಟುಮಾಡುವಷ್ಟು ವಿಧವಿಧವಾಗಿ ಭಾರತೀಯರು ಬಹಿರಂಗದಲ್ಲಿ ಕಾಣಿಸಿಕೊಂಡರೂ ಅಂತರಂಗದಲ್ಲಿ ಅನ್ಯೋನ್ಯತೆಯನ್ನು ಬೆಳೆಸಿಕೊಂಡಿರುವ ಏಕಜನವಾಗಿಯೇ ಇದ್ದಾರೆ. ಇದನ್ನು ಮನಗಾಣಲು ಭಾರತೀಯ ಜನಸ್ತೋಮದಲ್ಲಿ ಕಾಣುವ ಸಾಮಾನ್ಯ ಪಂಗಡಗಳನ್ನೊಂದೊಂದಾಗಿ ಪರೀಕ್ಷಿಸಿ, ಕಡೆಗೆ ಎಲ್ಲವನ್ನೂ ಒಟ್ಟಾಗಿ ಪರೀಕ್ಷಿಸತಕ್ಕದ್ದು.

**ಸಾಮಾನ್ಯ ಪಂಗಡಗಳು**

ಸಾಧಾರಣವಾಗಿ ಭಾರತೀಯರಲ್ಲಿ ಹಿಂದೂ, ಮುಸಲ್ಮಾನ್, ಈಸಾಯಿ, ಪಾರ್ಸೀ, ಯೆಹುದೀ ಮುಂತಾಗಿ ಮತಾನುಸಾರವಾಗಿಯೇ ಪಂಗಡಗಳನ್ನು ವಿಂಗಡಿಸುವುದು ವಾಡಿಕೆ. ಈ ಪಂಗಡಗಳಲ್ಲಿ **ಹಿಂದೂಗಳೇ** ಬಹು ಸಂಖ್ಯಾಕರು, ದೇಶದ ಹಿರಿಯ ಮಕ್ಕಳು, ದೇಶದ ಎಲ್ಲ ಭಾಗಗಳಲ್ಲಿಯೂ ಪೂರ್ವಕಾಲದಿಂದ ನೆಲೆಸಿರತಕ್ಕವರು. ಸಂಖ್ಯಾಬಲದಲ್ಲಿ **ಮುಸಲ್ಮಾನರು** ಎರಡನೆಯವರು. **ಈಸಾಯಿ, ಪಾರ್ಸೀ** ಗುಂಪುಗಳು ಸಂಖ್ಯಾಪ್ರಬಲರಲ್ಲದಿದ್ದರೂ ಇತರ ಕಾರಣಗಳಿಂದ ಮುಖ್ಯರಾದವರು. **ಯೆಹುದೀ** ಗುಂಪಿನವರೂ **ಉಳಿದವರೂ** ಅಷ್ಟು ಪ್ರಬಲರೂ ಅಲ್ಲ, ಮುಖ್ಯರೂ ಅಲ್ಲ. ಈ ಗುಂಪುಗಳನ್ನು ಕ್ರಮವಾಗಿ ಕಾಣುವ.

## ಹಿಂದೂಗಳು

**ರಾಶಿ**

ಹಿಂದೂ ಎಂಬ ಗುಂಪಿನಲ್ಲಿ ಬ್ರಾಹ್ಮಣ ಗುರುಗಳನ್ನೂ ಪುರೋಹಿತರನ್ನೂ ಗೌರವಿಸುತ್ತ ಅವರ ಬೋಧನೆಯನ್ನೇ ಅನುಸರಿಸುತ್ತಲಿರುವ ಜನರನ್ನಲ್ಲದೆ ಜೈನರು, ಬೌದ್ಧರು, ವೀರಶೈವರು, ಸಿಕ್ಖರು, ಬ್ರಹ್ಮಸಮಾಜದವರು, ಆರ್ಯಸಮಾಜದವರು ಮುಂತಾದವರನ್ನೂ ಹಳ್ಳಿಗಾಡುಗಳಲ್ಲಿ ವಿಶೇಷ ಜ್ಞಾನವಿಲ್ಲದೆ ರಕ್ತಬಲಿ ಕೊಟ್ಟು ಕುಲದೇವತೆಗಳನ್ನೂ ಸ್ಥಳ ದೇವತೆಗಳನ್ನೂ ಪೂಜೆಮಾಡುವ ಅಜ್ಞಕುಲಗಳವರನ್ನೂ ಸೇರಿಸಬೇಕು. ಏಕೆಂದರೆ ಅವರೆಲ್ಲರೂ ಹಿಂದೂಮತದ ಆಪ್ತಸಂಬಂಧವನ್ನು ಯಾವುದಾದರೊಂದು ರೀತಿಯಲ್ಲಿ ಪಡೆದಿರತಕ್ಕವರು. ಸಿಕ್ಖ ಸಂಪ್ರದಾಯದವರನ್ನು

ಮಾತ್ರ ಕಾರಣಾಂತರದಿಂದ ಬೇರೆಯೆಂದು ಭಾವಿಸಬಹುದು. ಹಿಂದೂ ಸಂಘದಲ್ಲಿ ಈ ವಿಭೇದಗಳೇ ಅಲ್ಲ, ಬ್ರಾಹ್ಮಣ ಪ್ರಧಾನವಾದ ಸನಾತನ ಧರ್ಮಾನುಯಾಯಿಗಳಲ್ಲಿಯೇ ಸಾವಿರಾರು ವಿಭೇದಗಳುಂಟು.

ಐಕ್ಯತೆ

ಪೃಥ್ವಿಯಲ್ಲಿರುವ ಹಿಂದೂ ಜನತೆಯಲ್ಲಿ ಬಹುಭಾಗದವರು ಹಿಂದೂಸ್ಥಾನದಲ್ಲಿಯೇ ಇರುತ್ತಾರೆ. ದೇಶದ ಹೊರಗಡೆ ಮಲಯದ್ವೀಪಸ್ತೋಮ, ದಕ್ಷಿಣ ಆಫ್ರಿಕಾ, ಫೀಜೀ, ಜಮೈಕಾ, ಟ್ರಿನಿಡಾಡ್ ಮುಂತಾದ ಹಲಕೆಲವು ಕ್ಷೇತ್ರಗಳಲ್ಲಿ ನೆಲೆಯಾಗಿರುವ ಹಿಂದೂಗಳು ಸಂಖ್ಯೆಯಲ್ಲಿ ಅಲ್ಪರಾಗಿಯೇ ಇರುವರು. ಅನೇಕ ಕಾಲ ದೇಶದ ಹೊರಗೆ ಹೊರಡುವುದೇ ನಿಷಿದ್ಧವೆಂದೆಣಿಸಿದ್ದ ಹಿಂದೂಗಳು ಸ್ವದೇಶ ನಿವಾಸಿಗಳಾಗಿಯೇ ಇದ್ದಾರೆ. ದೇಶದಲ್ಲೆಲ್ಲೆಲ್ಲಿಯೂ ಹಿಂದೂಗಳು ಅತಿಪೂರ್ವ ಕಾಲದಿಂದ ನೆಲೆಸಿರತಕ್ಕವರು; ವಾಯುವ್ಯ ಪ್ರಾಂತಗಳಲ್ಲಿ ಮಾತ್ರ ಅವರ ಸಂಖ್ಯೆಯು ಈಗ ಪ್ರಬಲವಾದುದಲ್ಲ. ಹಿಂದೂ ಜನರೆಂಬ ಗುಂಪಿನವರು ಒಂದು ಜಾತಿಕಟ್ಟಿಗೆ ಸೇರಿದವರಲ್ಲ, ಒಂದೇ ಭಾಷೆಯನ್ನು ಆಡತಕ್ಕವರೂ ಅಲ್ಲ, ಒಂದೇ ಬಗೆಯ ಆಚಾರ ವ್ಯವಹಾರಗಳನ್ನು ಅವಲಂಬಿಸತಕ್ಕವರೂ ಅಲ್ಲ. ಇಷ್ಟು ಭೇದ ವಿಭೇದಗಳಿಂದ ಕೂಡಿದ ಹಿಂದೂ ಗುಂಪಿನಲ್ಲಿ ಐಕ್ಯತೆಯೆಂಬುದಿದೆಯೇ? ಹಿಂದೂ ಜನರು ಒಂದೇ ಮನಸ್ಸನ್ನು, ಒಂದೇ ಹೃದಯವನ್ನು ಉಳ್ಳವರಾಗಿ ಏಕದೇಹನ್ಯಾಯವನ್ನು ಪಾಲಿಸಬಲ್ಲರೆ? ಐಕ್ಯತೆಯಿದ್ದ ಪಕ್ಷದಲ್ಲಿ ಅದನ್ನು ಎಲ್ಲಿ ಕಾಣಬೇಕು? ಅವರಲ್ಲಿ ಅನ್ಯೋನ್ಯತೆಯನ್ನು ನೆಲೆಗೊಳಿಸುವ ಅಂಶಗಳು ಯಾವುವು? ಇವುಗಳನ್ನು ಹಿಡಿದು ಸ್ವಲ್ಪ ದೂರ ವಿಚಾರಮಾಡುವಷ್ಟರಲ್ಲಿಯೇ ಹಿಂದೂಗಳೆಲ್ಲರಿಗೂ ಸಾಮಾನ್ಯ ಲಕ್ಷಣಗಳಾದ ಈ ಅಂಶಗಳು ಎದ್ದು ತೋರಿಕೊಳ್ಳುವುವು:—

1. ಗೋಪೂಜೆ.
2. ಬ್ರಾಹ್ಮಣ್ಯದಲ್ಲಿ ವಿಶ್ವಾಸ ಗೌರವಗಳು.
3. ಸಂಸ್ಕೃತ ಭಾಷೆಯಲ್ಲಿ ಆದರ.
4. ರಾಮಾಯಣ, ಮಹಾಭಾರತ ಮತ್ತು ಪುರಾಣಗಳಲ್ಲಿ ಪ್ರೀತಿ.
5. ತ್ರಿಮೂರ್ತಿ ಪೂಜೆ.

6. ವರ್ಣಧರ್ಮ ಅಥವಾ ಜಾತಿಪದ್ಧತಿ.
7. ವೇದಗಳಲ್ಲಿ ಪೂಜ್ಯಭಾವ, ಕರ್ಮ – ಪುನರ್ಜನ್ಮ – ಮುಕ್ತಿ ಮುಂತಾದ ಪ್ರಧಾನ ತತ್ವಗಳ ಸ್ವೀಕಾರ.
8. ತೀರ್ಥಯಾತ್ರೆಗಳಲ್ಲಿ ಭಕ್ತಿ.
9. ಸಂನ್ಯಾಸ.

ಸಾಂಸ್ಕೃತಿಕ

ಇವುಗಳಲ್ಲಿ ಪ್ರತಿಯೊಂದನ್ನೂ ವಿಚಾರಕ್ಕೆ ಗುರವಮಾಡಿದಲ್ಲಿ ಅದರ ಪ್ರಭಾವವು ನಮಗೆ ಸ್ಪಷ್ಟವಾಗುವುದು. ಉದಾಹರಣೆಗೆ, ಗೋಪೂಜೆ ಹುಟ್ಟಿದುದು ಹೇಗೆ? ಅದರ ಅರ್ಥವೇನು? ಗೋಮಾಂಸ ನಿಷೇಧ ವೆಂಬುದು ಸರ್ವರಲ್ಲಿಯೂ ಹೇಗೆ ಸಾಧ್ಯವಾಯಿತು? ಗೋಮಾತೆಯನ್ನು ಪೂಜಿಸುವ ಆಚಾರದಿಂದ ಹುಟ್ಟಿ ಬೆಳೆದಿರುವ ಇತರ ಆಚಾರಗಳು ಯಾವುವು? ಎಂದು ಚರ್ಚೆಮಾಡಿ ವಿಷಯವನ್ನು ವಿಮರ್ಶೆಮಾಡಬೇಕು. ಎಲ್ಲ ಅಂಶ ಗಳನ್ನೂ ಆದ್ಯಂತವಾಗಿ ವಿಮರ್ಶೆಮಾಡುವುದು ಸುಲಭವಲ್ಲ. ಏಕೆಂದರೆ ಹಿಂದೂ ಜನರ ಇತಿಹಾಸವು ಅತಿ ದೀರ್ಘಕಾಲದ್ದು; ಆ ದೀರ್ಘಕಾಲದಲ್ಲಿ ಆಚಾರ ವಿಚಾರಗಳು ಕಾಲಾನುಗುಣವಾಗಿ ವಿಕಾಸಪಡೆದು ಕಾಲಗತಿ ಯಲ್ಲಿ ಭದ್ರವಾಗಿ ಸರ್ವತ್ರ ವ್ಯಾಪಿಸಿ ಬೇರೂರಿದವು. ಹಿಂದೂಮತ ವೆಂಬುದು ಒಂದು ಮತ ಮಾತ್ರವಲ್ಲ, ಜೀವನ ಸರ್ವಸ್ವವನ್ನೂ ಸಂಸ್ಕೃತಿ ಗೊಳಿಸುವ ಧರ್ಮ (Hinduism is not merely the name of a religion, but the name for a civilisation). ಸಾವಿರಾರು ವರ್ಷ ಕಾಲದಲ್ಲಿ ವೃದ್ಧಿ ವಿಕಾಸಗಳನ್ನು ಪಡೆದು, ಕಾಲಪರೀಕ್ಷೆಯಲ್ಲಿ ಶುದ್ಧಿಯನ್ನು ಹೊಂದಿ, ಪೂರ್ವಾರ್ಧಗೋಳಕ್ಕೇ ಭೂಷಣದಂತೆ ಇರುವ ಹಿಂದೂ ಧರ್ಮ ವನ್ನು ಅವಲಂಬಿಸುವ ಹಿಂದೂಗಳು ಪೃಥ್ವಿಗೇ ಹಿರಿಯರಾದವರು, ತಮ್ಮ ಧರ್ಮದಲ್ಲಿ ಹೆಮ್ಮೆಯನ್ನೂ ನಿಷ್ಠೆಯನ್ನೂ ಉಳ್ಳವರು. ಬಗೆ ಬಗೆಯ ಆಚಾರ ವ್ಯವಹಾರಗಳನ್ನು ಅವಲಂಬಿಸಿದ್ದರೂ ಹಿಂದೂ ಜನರು ತಮ್ಮ ವೈಶಿಷ್ಟ್ಯವನ್ನೂ ದೇಶಭಕ್ತಿಯನ್ನೂ ಐಕ್ಯತೆಯನ್ನೂ ರಕ್ಷಿಸಿಕೊಂಡಿರುವುದು ಇತಿಹಾಸದಲ್ಲಿ ಸೋಜಿಗದ ಸಂಗತಿ. ಇಂಗ್ಲಿಷ್ ಜನರನ್ನೇ, ಫರಾನ್ಸೀ (French) ಜನರನ್ನೇ ಕುರಿತು ವಿಚಾರ ಮಾಡುವಾಗ ಆ ಜನರ

ಅನ್ಯೋನ್ಯತೆಗೂ ಐಕ್ಯತೆಗೂ ಕಾರಣವಾದ ಬಾಂಧವ್ಯವನ್ನು ರಾಜಕೀಯ ವೆಂದೋ ಸಾಮಾಜಿಕವೆಂದೋ ಹೇಳಿಬಿಡಬಹುದು. ಹಿಂದೂ ಜನರ ಪರಸ್ಪರ ಬಾಂಧವ್ಯವನ್ನು ಹಾಗೆ ವಿವರಿಸಲಾಗುವುದಿಲ್ಲ. ಹಿಂದೂ ಜನರ ಬಾಂಧವ್ಯವು ಸಾಂಸ್ಕೃತಿಕವಾದುದು, ನಿತ್ಯವಾದುದು ಮತ್ತು ಆಂತರಿಕ ವಾದುದು.

ದೇಶಭಕ್ತಿ

ಪುಣ್ಯಭೂಮಿ, ಕರ್ಮಭೂಮಿಗಳೆಂಬ ಹೆಸರುಗಳಿಂದಲೇ ಹಿಂದೂಗಳ ಮನಸ್ಸಿನಲ್ಲಿ ದೇಶಭಕ್ತಿಯು ನೆಲೆಸಿರುವ ಅಂಶವು ಗೋಚರವಾಗುವುದು. ಸಾವಿರಾರು ವರ್ಷಗಳ ಹಿಂದೆಯೇ ಹಿಂದೂ ಜನರು ಆಸೇತುಹಿಮಾಚಲ ವಾಗಿರುವ ಸಮಸ್ತ ದೇಶದ ಪರಿಚಯವನ್ನು ಹೊಂದಿ ದೇಶಭಕ್ತಿಯನ್ನು ವೃದ್ಧಿಪಡಿಸಿಕೊಂಡರು. ಸಂಹಿತೆಗಳಷ್ಟು ಪುರಾತನ ಕಾಲದಲ್ಲಿಯೇ ಸಪ್ತ ಸಿಂಧುವಿನಲ್ಲಿ ನೆಲೆಸಿದ್ದ ಆರ್ಯಜ್ಯೇಷ್ಠರು ತಮ್ಮ ನಾಡು ಪವಿತ್ರ ನದಿಗಳ ಪ್ರವಾಹದಿಂದ ಪವಿತ್ರವಾದುದೆಂದು ಆನಂದಪಡುತ್ತಿದ್ದರು. ಆರ್ಯಾ ವರ್ತವು ವಿಸ್ತಾರಗೊಂಡ ಆರ್ಯರು ದೇಶದಲ್ಲಿ ವ್ಯಾಪಿಸಿದಂತೆಲ್ಲ ಈ ಪೂಜ್ಯ ಭಾವನೆಯೇ ದೃಢವಾಯಿತು. ಪ್ರಕೃತಿ ಗಾಂಭೀರ್ಯವೂ ಸೌಂದರ್ಯವೂ ತೋರಿಬಂದ ಎಡೆಗಳೆಲ್ಲವನ್ನೂ ಶೋಧಿಸಿದ್ದಲ್ಲದೆ ಅವರು ಪರ್ವತಗಳಿಗೂ ನದಿಗಳಿಗೂ ಗೌರೀಶಂಕರ, ಹರಿದ್ವಾರ, ಗೋಮುಖ, ಅಮರನಾಥ, ಜಗನ್ನಾಥ, ರಾಮೇಶ್ವರ, ಪಾಪಘ್ನ ಮುಂತಾದ ಹೆಸರುಗಳನ್ನೇ ಇಟ್ಟು ತಮ್ಮ ಭಕ್ತಿಯನ್ನು ತೋರ್ಪಡಿಸಿದರು. ಸಮಸ್ತ ಹಿಂದೂಸ್ಥಾನದಲ್ಲಿ ಯಾವ ಸ್ಥಲವಾದರೂ ಸರಿಯೆ, ಆರ್ಯದೇವತೆಗಳ ಅಥವಾ ಆರ್ಯ ವೀರ ಪುರುಷರ ಸಂಬಂಧವಿಲ್ಲದೆ ಇರುವುದಿಲ್ಲ. ಎಂತಹ ಪರ್ವತಶೃಂಗವಾಗಲಿ, ಎಂತಹ ಗಹನವಾದ ಗುಹೆಯಾಗಲಿ, ಎಂತಹ ಗುಪ್ತಗಾಮಿನಿಯಾದ ನದಿಯಾಗಲಿ ಆರ್ಯರು ಸಾಧಿಸದೆ ಬಿಡಲಿಲ್ಲ. ಗ್ರಾಮಗಳೂ ನಗರಗಳೂ ಸ್ಥಾಪಿತವಾದಾಗ ಅವುಗಳ ಹೆಸರುಗಳೂ ಹೀಗೆ ಪವಿತ್ರ ರೀತಿಯವೇ ಆದವು. ದೇಶದಿಂದ ಹೊರಗೆ ಹೊರಟು ಕ್ಷೇತ್ರಾಂತರಗಳಲ್ಲಿ ನೆಲೆ ಗೊಂಡಿದ್ದಾಗ್ಯೂ ಭಾರತೀಯರಾದ ಆರ್ಯಜರು ಈ ಭೂಮಿಯನ್ನು ಆರ್ಯಭೂಮಿಯೆಂದು ಸ್ಮರಿಸುತ್ತ ಅವಕಾಶವಾದಂತೆ ಯಾತ್ರೆಮಾಡು

ತ್ತಲಿದ್ದರು. ಇಡೀ ದೇಶದ ಗಾಂಭೀರ್ಯ ಸೌಂದರ್ಯಗಳನ್ನು ಪರಮಾನಂದ ದಿಂದ ಅನುಭವಿಸಿದ ನಮ್ಮ ಪೂರ್ವಿಕರು ದೇಶಸಂಚಾರವು ಅವಶ್ಯ ಕರ್ತವ್ಯ ವೆಂದೆಣಿಸಿ, ವಿದ್ಯಾಭ್ಯಾಸವು ಸಾಂಗವಾಗಿ ನೆರವೇರಲು ದೇಶಪರ್ಯಟನ ವನ್ನು ಒಂದು ವ್ರತದಂತೆ ನಿಯಮಿಸಿದರು. ಕಾಲಕ್ರಮದಲ್ಲಿ ಸುಂದರ ಸ್ಥಲಗಳಲ್ಲೆಲ್ಲ ದಿವ್ಯವೆನಿಸಿದ ದೇವಾಲಯಗಳು ನಿರ್ಮಿತವಾದವು. ಯಾತ್ರೆ ಮಾಡಿಯೇ ಅವುಗಳನ್ನೆಲ್ಲ ಕಾಣಬೇಕೆಂಬ ಸಂಪ್ರದಾಯವು ಜನರಲ್ಲಿ ದೃಢಮೂಲವಾಯಿತು. ತೀರ್ಥಯಾತ್ರೆಯ ಆಚರಣೆಯು ಅತಿ ಪೂರ್ವ ಕಾಲದಿಂದಲೂ ಆರ್ಯಜನರಲ್ಲಿ ನಡೆದುಬಂದಿದೆ. ಆರ್ಯ ಧರ್ಮದ ಈ ಲಕ್ಷಣವನ್ನು ಕಂಡು ಮುಗ್ಧಳಾಗಿ ಸಿಸ್ಟರ್ ನಿವೇದಿತಾ ಎಂಬ ವಿದುಷೀಮಣಿಯು 'ನಯಾಗರಾ ಜಲಪಾತವು ಪೃಥ್ವಿಯಲ್ಲೆಲ್ಲ ಅದ್ಭುತ ವಾದುದು ನಿಜ. ಅಮೆರಿಕದ ಜನರು ಆ ಸೌಂದರ್ಯವನ್ನು ಅನುಭವಿಸಲು ವಿಹಾರ ಮಂದಿರಗಳನ್ನೂ ವಿನೋದ ಭವನಗಳನ್ನೂ ಕಟ್ಟಿಕೊಂಡಿದ್ದಾರೆ. ಆ ಜಲಪಾತವೇ ಹಿಂದೂಸ್ಥಾನದಲ್ಲಿದ್ದ ಪಕ್ಷದಲ್ಲಿ ಹಿಂದೂ ಜನರು ಅಲ್ಲಿ ಅದ್ಭುತವಾದ ದೇವಾಲಯಗಳನ್ನು ಕಟ್ಟಿಸಿ ಸ್ಥಳವನ್ನು ಪಾವನವೆನಿಸಿ ನೋಟಕರ ಮನಸ್ಸಿನಲ್ಲಿ ಸೃಷ್ಟಿಕರ್ತನ ಮಹಿಮೆಯು ಮೂಡುವಂತೆ ಮಾಡುತ್ತಿದ್ದರು' ಎಂಬ ಅರ್ಥ ಕೊಡುವ ಮಾತುಗಳನ್ನು ಬರೆದಿಟ್ಟಳು.

**ದೇಶದ ಪರಿಚಯ ಸಿದ್ಧಿ**

ಹಿಂದೂ ಜನರಲ್ಲಿ ಪುಣ್ಯಸ್ಥಲಗಳ ಯಾತ್ರೆಯೆಂಬುದು ಪ್ರತಿ ಗೃಹಸ್ಥನ ಧರ್ಮವೆಂದು ಗಣಿಸಲಾಯಿತು. ಮುಖ್ಯ ಯಾತ್ರಾಸ್ಥಲಗಳು ದೇಶದ ನಾಲ್ಕು ಮೂಲೆ ಗಳಲ್ಲಿರತಕ್ಕ ಹರಿದ್ವಾರ, ರಾಮೇಶ್ವರ, ದ್ವಾರಕಾ, ಜಗನ್ನಾಥ ಕ್ಷೇತ್ರಗಳೆಂದು ನಿಶ್ಚಿತವಾಯಿತು. ಯಾತ್ರೆಗಳ ಮೂಲಕ ಜನರಿಗೆ ದೇಶದ ಸಂಪೂರ್ಣ ಪರಿಚಯವು ಲಭಿಸಬೇಕೆಂಬ ಆರ್ಯಜನರ ಉದ್ದೇಶವು ನಾಲ್ಕು ಮೂಲೆಗಳಲ್ಲಿರುವ ನಾಲ್ಕು ಕ್ಷೇತ್ರಗಳ ವರಣದಿಂದಲೇ ಸ್ಪಷ್ಟವಾಗುತ್ತದೆ. ಯಾತ್ರಿಕರು ದೇಶದ ಮತ್ತು ಜನರ ಪರಿಚಯವನ್ನು ಪಡೆದು ತಮ್ಮ ಸುತ್ತಮುತ್ತಲಿದ್ದವರಿಗೂ ಆ ಪರಿಚಯವನ್ನೆರೆಯುತ್ತಿದ್ದರು. ಸಂನ್ಯಾಸಿಗಳು ಆರ್ಯಭೂಮಿಯಲ್ಲಿ ಸಂಚಾರಮಾಡುತ್ತಲೇ ಇರುತ್ತ ದೇಶದ ಐಕ್ಯತೆಯನ್ನು ಮೌನದಿಂದಲೇ ಪ್ರಕಟಿಸುತ್ತಲಿದ್ದರು. ಹಿಂದಿನ

ಕಾಲದಲ್ಲಿ ರೈಲು ಬಂಡಿಯು ಇಲ್ಲದಿದ್ದಾಗ್ಯೂ ದೇಶ ಪ್ರದಕ್ಷಿಣೆ ಮಾಡುವುದು ಸಾಮಾನ್ಯವಾಗಿಯೇ ಇತ್ತು. ಹಿಂದೂಗಳು ಸಾಂಸ್ಕೃತಿಕವಾದ ಐಕ್ಯತೆಯನ್ನು ಕಾಳಿದಾಸನ ಕಾಲದಲ್ಲಿಯೇ ಪಡೆದು, ಅದನ್ನು ಕಾಲಾನಂತರದಲ್ಲಿ ರಕ್ಷಿಸಿಕೊಂಡು ಬಂದಿರುವುದಲ್ಲದೆ ದೇಶಭಕ್ತಿಯನ್ನು ತೋರುವ ಆಚಾರಗಳನ್ನು ಹೆಚ್ಚಿಸಿಕೊಂಡೇ ಇರುತ್ತಾರೆ.

**ಐಕ್ಯತಾ ಪ್ರಜ್ಞೆ**

ಎಲ್ಲರಿಗೂ ಯಾತ್ರೆ ಹೊರಡುವುದು ಸಾಧ್ಯವಾಗಿರಲಿಲ್ಲ. ಅಂತಹವರಿಗೆ ದೇಶದ ಪರಿಚಯವನ್ನುಂಟುಮಾಡಿಕೊಟ್ಟು ದೇಶ ಭಕ್ತಿಯನ್ನು ಪ್ರೇರಿಸಲು ಇತರ ಪದ್ಧತಿಗಳಿದ್ದುವು. ರಾಮಾಯಣಮಹಾಭಾರತ ಪುರಾಣಗಳ ಪಠನ ಕಥನಗಳು ಸರ್ವತ್ರ ನಿರಂತರವಾಗಿ ನಡೆಯುತ್ತಿದ್ದ ಹಾಗೆಯೇ ಅವುಗಳ ಮೂಲಕ ದೇಶದ ಪಾವಿತ್ರ್ಯವು ಜನರ ಮನಸ್ಸಿನಲ್ಲಿ ನಾಟಿತು. ಪುಣ್ಯಭೂಮಿಯು *ಸಪ್ತ ಕುಲಾಚಲಗಳಿಂದಲೂ, ಸಪ್ತಪುಣ್ಯನದಿಗಳಿಂದಲೂ, ಸಪ್ತನಗರಗಳಿಂದಲೂ ಶೋಭಿಸುತ್ತ ಸ್ವರ್ಗಲೋಕದ ದೇವತೆಗಳಲ್ಲಿಕೂಡ ಆಶ್ಚರ್ಯವನ್ನುಂಟುಮಾಡುವುದೆಂದು ಸಾಮಾನ್ಯವಾಗಿ ಹಿಂದೂಗಳು ನಂಬಿರುತ್ತಾರೆ. ಕಾಳಿದಾಸನ ಕಾಲದಲ್ಲಿ ತೇಜಃಪುಂಜ ಭಾರತವರ್ಷವನ್ನು ಸ್ಮರಿಸಿ ಪುರಾಣಕಾರರು "ಗಾಯನ್ತಿ ದೇವಾಃ ಕಿಲ ಗೀತಿಕಾನಿ ಧನ್ಯಾಸ್ತು ತೇ ಭಾರತಭೂಮಿಭಾಗೇ" ಎಂದು ಘೋಷಿಸಿದರು; ಅದೇ ಧ್ವನಿಯು ಹಿಂದೂಜನರ ನಿತ್ಯಕರ್ಮಗಳಲ್ಲಿ ತೋರಿಕೊಂಡಿತು. ಪ್ರತಿ ಹಿಂದೂವಿಗೂ ದೇಶಭಕ್ತಿಯೆಂಬುದು ಸಾಮಾನ್ಯವೂ ದೃಢವೂ ಆಯಿತು. ಯಾವ ಕರ್ಮವನ್ನು ಆರಂಭಿಸಬೇಕಾದರೂ ಹಿಂದೂ ಜನರು ದೇಶದ ಹೆಸರನ್ನೆತ್ತಿ ಉಚ್ಚರಿಸದೆ ಸಂಕಲ್ಪಮಾಡುವುದಿಲ್ಲ. ಸ್ನಾನ ಮಾಡುವಾಗ "ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ। ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು॥" ಎಂಬುದಾಗಿ

---

* ಮಹೇಂದ್ರೋ ಮಲಯಸ್ಸಹ್ಯಃ ಶುಕ್ತಿಮಾನ್ ಋಕ್ಷಪರ್ವತಃ।
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ॥
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು॥
ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವನ್ತಿಕಾ।
ಪುರೀ ದ್ವಾರವತೀ ಚೈವ ಸಪ್ತೈತಾ ಮೋಕ್ಷದಾಯಿಕಾಃ॥

ಹೇಳಿಕೊಳ್ಳತಕ್ಕದ್ದು ಸಂಪ್ರದಾಯ. ಇವಲ್ಲದೆ ಪುರಾಣಗಳಲ್ಲಿ ಬಣ್ಣಿಸಿರುವ ಸೂರ್ಯ ಚಂದ್ರ ವಂಶಜ ಸಾರ್ವಭೌಮರು ಆಸಮುದ್ರಕ್ಷಿತೀಶರೆನಿಸಿದ ವಿವರವು ರಾಜಕೀಯ ರೀತಿಯಲ್ಲಿಯೂ ದೇಶವು ಸಮುದ್ರಾಂತವಾದ ಏಕ ದೇಶವೆಂಬ ಅಂಶವನ್ನು ಸಾರುತ್ತದೆ. ದೇಶದ ಪಾವನತೆಯನ್ನು ಸೂಚಿಸುವ ವಾಕ್ಯಗಳು ಹಿಂದೂ ಜನರ ಗ್ರಂಥಗಳಲ್ಲಿ ಅನೇಕವಾಗಿ ಉಂಟು. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಮುಂತಾದವು ಹಿಂದೂ ಜನರ ಸ್ಮರಣೆಯಲ್ಲಿ ಸರ್ವಸಾಮಾನ್ಯವಾಗಿರುವುವು.

**ಭಾರತೀಯತ್ವ**

ಈ ಕೆಲವು ಅಂಶಗಳಿಂದಲೇ ಹಿಂದೂಜನರಲ್ಲಿ ದೇಶದ ಪರಿಚಯವೂ ದೇಶದಲ್ಲಿ ಭಕ್ತಿಯೂ ಪೂರ್ವಕಾಲದಿಂದಲೂ ನೆಲೆಸಿ, ಸಾವಿರಾರು ವರ್ಷಕಾಲ ಸುರಕ್ಷಿತವಾಗಿ ಭದ್ರಗೊಂಡ ಸಂಗತಿಯು ಸ್ಪಷ್ಟವಾಗುತ್ತದೆ. ದೇಶದ ಏಕ್ಯತೆಯ ಪ್ರಜ್ಞೆಯಾಗಲಿ, ದೇಶಭಕ್ತಿಯಾಗಲಿ, ದೇಶದ ಸಂಪೂರ್ಣ ಪರಿಚಯವಾಗಲಿ ಇತ್ತೀಚೆಗೆ ಮಾತ್ರ ಹಿಂದೂಜನರಲ್ಲಿ ಉಂಟಾಯಿತೆಂಬುದು ತಥ್ಯವೇ ಅಲ್ಲ. ಹಿಂದೂಜನರ ಆಚಾರ ವಿಚಾರಗಳು ಅಥವಾ ನಾಗರಿಕತೆ ಅಥವಾ ಸಭ್ಯತೆ ಅಥವಾ ಸಂಸ್ಕೃತಿಯೆಂಬುದು ಅತಿ ಪುರಾತನವೂ ಸರ್ವತೋಮುಖವೂ ಸರ್ವತೋಭದ್ರವೂ ಆದುದು. ಭಾರತೀಯ ನಾಗರಿಕತೆಯ ಸಂಪತ್ತೆನ್ನುವುದು ಅದೇ. ಭಾರತೀಯರಿಗೆ ಅದೇ ಅಮೂಲ್ಯವಾದ ಪಿತ್ರಾರ್ಜಿತ. ಹಿಂದಿನ ಇತಿಹಾಸವೇ ಇಲ್ಲದೆ ಹೊಸದಾಗಿ ರೂಪಗೊಂಡು ಸಮುದಾಯ ಜೀವನವನ್ನೋ ರಾಷ್ಟ್ರಜೀವನವನ್ನೋ ಆರಂಭಿಸುವ ಜನರಾದರೆ ಅವರಿಗೆ ಹಿರಿಯರು ಗಳಿಸಿದ ಇಂತಹ ಆಸ್ತಿಪಾಸ್ತಿ ಯಾವುದೂ ಇರುವುದಿಲ್ಲ. ಹಿಂದೂಜನರ ಇತಿಹಾಸವಾದರೋ ಇತರ ಎಲ್ಲ ಜನರ ಇತಿಹಾಸಗಳಿಗಿಂತ ಹಿರಿಯದಾದುದು, ಯಶಃಪೂರಿತವಾದುದು. ಆದ್ದರಿಂದ ಹಿಂದೂಜನರು ಪೃಥ್ವಿಯಲ್ಲಿ ಹೊಸದಾಗಿ ರೂಪವೆತ್ತಲು ಪ್ರಯತ್ನಿಸತಕ್ಕವರಲ್ಲ; ಸನಾತನವೆನಿಸಿದ ಧರ್ಮವೆಂಬ ಸೌಭಾಗ್ಯದಿಂದ ಕೂಡಿದವರು. ಹಿಂದೂ ಜನರೇ ಭಾರತೀಯತೆಯನ್ನು ರೂಪಗೊಳಿಸಿದವರಾದುದರಿಂದ ಸಭ್ಯತೆಯ ವಿಚಾರದಲ್ಲಿ ಹಿಂದೂ ಶಬ್ದವೂ ಭಾರತೀಯ ಶಬ್ದವೂ ಒಂದೇ ಅರ್ಥವನ್ನು ಪಡೆಯುತ್ತವೆ.

ಭಾರತೀಯರಾಗಿರುವವರೂ, ಭಾರತೀಯರಾಗಿ ಬೆಳೆಯತಕ್ಕವರೂ, ಭಾರತೀಯರಾಗಲು ಇಚ್ಛೆಯುಳ್ಳವರೂ ಈ ಪೂರ್ವಾರ್ಜಿತ ಸೌಭಾಗ್ಯ ರಾಶಿಯ ಪರಿಚಯವನ್ನು ಪಡೆದು ಅದನ್ನು ಪಾಲಿಸಬೇಕು. ಪರಿಚಯವು ಹೆಚ್ಚಿದಂತೆಲ್ಲ ಆತ್ಮಗೌರವವೂ ಹೆಚ್ಚುವುದರಿಂದ ಆ ಕರ್ತವ್ಯವು ಸುಲಭವಾಗಿಯೂ ಉತ್ಸಾಹಪ್ರದವಾಗಿಯೂ ಇರುವುದು.

## ಮುಸಲ್ಮಾನರು

ವೈವಿಧ್ಯ

ಹಿಂದೂ ಸಮಾಜದ ತರುವಾಯ ಗಣ್ಯರಾದವರು ಭಾರತೀಯ ಮುಸಲ್ಮಾನರು. ಮುಸಲ್ಮಾನರಲ್ಲಿ ಮೊದಲು ನಮ್ಮ ದೇಶದಲ್ಲಿ ನೆಲೆಸಿದವರು ಪಶ್ಚಿಮತೀರ ಪ್ರದೇಶದಲ್ಲಿಯೂ ಸಿಂಧು ದೇಶದಲ್ಲಿಯೂ ನೆಲೆಸಿದ ಅರಬ್ಬೀ ಜನರು. ಮಾಪಿಳ್ಳೆಗಳು, ಸಿಂಧಿ, ಕಚ್ಛೀ ಮುಸಲ್ಮಾನರು ಈ ರೀತಿಯಲ್ಲಿ ಮೊದಲಿಗರು. ಅವರ ಅನಂತರ ಪಠಾಣರು, ತುರುಷ್ಕರು, ಮುಘಲರು, ಫಾರ್ಸಿಗಳು ಮುಂತಾದವರು ದೇಶದಲ್ಲಿ ಪ್ರವೇಶಿಸಿದರು. ರಾಜ್ಯಗಳನ್ನು ಕಟ್ಟಿಕೊಂಡು ಅವರು ಆಳಿದ ಏಳು ಶತಮಾನಗಳ ಕಾಲದಲ್ಲಿ ದೇಶೀಯರನೇಕರು ಇಸ್ಲಾಮಿನ ಮತವನ್ನು ಸ್ವೀಕರಿಸಿದರು; ಆ ಕಾರಣದಿಂದ ಭಾರತೀಯ ಮುಸಲ್ಮಾನರಲ್ಲಿ ಹೊರಗಿನಿಂದ ಬಂದು ನೆಲೆಸಿದವರ ಸಂತತಿಯವರು ಸೇಕಡ 15ರಷ್ಟು ಮಾತ್ರವೇ ಇದ್ದಾರೆ. ಅವರೂ ಕೂಡ ಬಹು ಕಾಲ ದೇಶದಲ್ಲಿ ನೆಲೆಯಾಗಿರುವುದರಿಂದ ಭಾರತೀಯರೇ ಆಗಿರುವರು. ವಾಯುವ್ಯ ಸರಹದ್ದಿನ ಪ್ರಾಂತ, ಕಾಶ್ಮೀರ, ಬಲೂಚಿಸ್ಥಾನ, ಸಿಂಧುಪ್ರಾಂತಗಳಲ್ಲಿ ಮುಸಲ್ಮಾನರೇ ಬಹು ಸಂಖ್ಯಾಕರು; ಪಂಜಾಬು ಬಂಗಾಲಗಳಲ್ಲಿ ಸುಮಾರು ಅರ್ಧ ಭಾಗವಾಗಿದ್ದಾರೆ; ಉಳಿದ ಪ್ರಾಂತಗಳಲ್ಲಿ ಅವರ ಸಂಖ್ಯಾ ಬಲವು ಕಡಿಮೆ.

ಭಾರತೀಯ ಮುಸಲ್ಮಾನರೆಲ್ಲರೂ ಒಂದೇ ಮೂಲವುಳ್ಳವರಲ್ಲ; ಒಂದೇ ಭಾಷೆಯನ್ನಾಡುವವರೂ ಅಲ್ಲ. ಬಂಗಾಲದಲ್ಲಿ ವಂಗೀಯ ಭಾಷೆಯನ್ನೂ, ಕೇರಲದಲ್ಲಿ ಮಲಯಾಳವನ್ನೂ, ಚೋಳಮಂಡಲದಲ್ಲಿ ತಮಿಳನ್ನೂ ಅಲ್ಲಿರುವ ಮುಸಲ್ಮಾನರು ನುಡಿಯುತ್ತಾರೆ. ಆಚಾರ ವ್ಯವಹಾರಗಳಲ್ಲಿಯೂ

ಹಲಕೆಲವು ಭೇದಗಳನ್ನು ಕಾಣಬಹುದು; ಉದಾಹರಣೆಗೆ ಮಾಪಿಳ್ಳೆಯ ಉಡುಪಿಗೂ ಪಂಜಾಬಿ ಮುಸಲ್ಮಾನರ ಉಡುಪಿಗೂ ಬಹಳ ಭೇದವುಂಟು. ಮತವಿಷಯದಲ್ಲಿ ಸಾಧಾರಣವಾಗಿ ಭೇದಗಳು ಕಾಣದಿದ್ದರೂ ಸುನ್ನಿ, ಷಿಯಾ, ಸುಫೀ, ಅಹ್ಮದೀಯ, ಇಸ್ಮಾಯಿಲೀ ಮೊದಲಾದ ಕೆಲವು ಭೇದಗಳು ಅವರಲ್ಲಿ ಉಂಟು.

**ಐಕ್ಯತೆ** ಆದರೆ ಮುಸಲ್ಮಾನರಲ್ಲಿ ಪ್ರಬಲವಾದ ಐಕ್ಯತೆಯನ್ನೂ ಏಕಮತ್ಯವನ್ನೂ ಇಸ್ಲಾಮೀಯಮತ ತತ್ವಗಳೇ ಊರ್ಜಿತಗೊಳಿಸುತ್ತಿವೆಯಾದುದರಿಂದ ಅವರ ಏಕಮತ್ಯವು ಸುಲಭವಾಗಿ ಸ್ಪಷ್ಟವಾಗುವುದು. ಕೊರಾನ್ ಷರೀಫದ ಅವಲಂಬನೆ, ಅರಬ್ಬಿ ಫಾರಸಿ ಭಾಷೆಗಳಲ್ಲಿ ಗೌರವ ಪ್ರೀತಿಗಳು, ಹಾಜ್ ಎಂಬ ಯಾತ್ರೆ ಮುಂತಾದವು ಅವರ ಐಕ್ಯತೆಯನ್ನು ಭದ್ರಗೊಳಿಸುತ್ತವೆ. ಮತ ತತ್ವದಿಂದಲೇ ಒಗ್ಗಟ್ಟು ಹುಟ್ಟುವುದರಿಂದ ಅವರಲ್ಲಿ ಇತರ ರೀತಿಗಳಲ್ಲಿ ಎಷ್ಟು ವ್ಯತ್ಯಾಸಗಳು ತೋರಿಕೊಂಡಿದ್ದರೂ ಒಗ್ಗಟ್ಟಿಗೆ ವಿಪತ್ತು ಹುಟ್ಟುವುದಿಲ್ಲ.

ಮೆಕ್ಕಾ ಮದೀನಾ ಕ್ಷೇತ್ರಗಳನ್ನು ಪುಣ್ಯಭೂಮಿಯೆಂದೂ ಫಾರಸೀಸ್ಥಾನವನ್ನು ದೇಶಭಕ್ತಿ ನಾಗರಿಕತೆಗಳ ಸ್ಥಾನವೆಂದೂ ವಿಶ್ವಾಸವಿಟ್ಟಿರುವ ಮುಸಲ್ಮಾನರಲ್ಲಿ ಭಾರತೀಯತ್ವವುಂಟೇ ಎಂಬ ಸಂದೇಹವು ಕೆಲವು ಸಮಯಗಳಲ್ಲಿ ತೋರಬಹುದು. ಸ್ವಲ್ಪ ವಿಚಾರ ಮಾಡುವುದರಲ್ಲಿಯೇ ಅವರು ನಿಸ್ಸಂಶಯವಾಗಿ ಭಾರತೀಯರೇ ಎಂಬ ಅಂಶವು ದೃಢವಾಗುವುದು. ಅವರ ಪೂರ್ವಿಕರ ತೇಜಸ್ಸು ಪ್ರಕಾಶವಾದುದು ಈ ದೇಶದಲ್ಲಿಯೇ; ಅವರ ಗತವೈಭವವು ರಂಜಿಸಿದುದು ಈ ದೇಶದಲ್ಲಿಯೇ. ದಿಲ್ಲಿ, ಆಗ್ರ, ಲಖನೌ, ಅಹಮದಾಬಾದ್, ಬಿಜಾಪುರ ಮೊದಲಾದ ನಗರಗಳಲ್ಲಿಯೇ ಆ ವೈಭವದ ಸ್ಮಾರಕಗಳಿರುವುವು. ವೈಭವ ವಿಚಾರವಲ್ಲದೆ ಪುಣ್ಯಸ್ಥಲಗಳ ವಿಚಾರವನ್ನು ಮಾಡಿದಾಗ ಅಜ್ಮೀರ್, ದಿಲ್ಲಿ, ಗುಲ್ಬರ್ಗ, ನಾಗಪಟ್ಟಣ ಮುಂತಾದೆಡೆಗಳು ಸಲೀಂ ಚಿಸ್ತಿ, ನೈಜಾಮುದ್ದೀನ್ ಔಲಿಯ, ಬಂದಾನವಾಜ್ ಗೇಸೂದರಾಜ್ ಮುಂತಾದ ಮುಸಲ್ಮಾನ ಯತಿಗಳಿಂದ ಪುನೀತವಾಗಿ ಅವರಿಗೆ ಯಾತ್ರಾಸ್ಥಲಗಳಾಗಿರುವುದು ವಿದಿತವಾಗುತ್ತದೆ. ವಾಸ್ತವವಾಗಿ ಹಿಂದೂಗಳಿಗೂ

ಆವರಿಗೂ ಇರುವಷ್ಟು ಆಪ್ತತೆಯು ಇತರ ದೇಶಗಳ ಮುಸಲ್ಮಾನರಿಗೂ ಭಾರತೀಯ ಮುಸಲ್ಮಾನರಿಗೂ ಇಲ್ಲ. ಅನ್ಯದೇಶಗಳ ಮುಸಲ್ಮಾನರಿಗೂ ಭಾರತೀಯ ಮುಸಲ್ಮಾನರಿಗೂ ಮತವೊಂದೇ ಸಾಮಾನ್ಯವಾದುದು. ಭಾರತೀಯ ಮುಸಲ್ಮಾನರು ಅಭಿಮಾನದಿಂದ ಆಡುವ ಉರ್ದು ಎಂಬ ಭಾಷೆಯು ಹಿಂದೂಸ್ಥಾನದ ಭಾಷೆಯಾಗಿ ಪರಿಣಮಿಸಿ ಹಿಂದೂಸ್ಥಾನೀ ಎಂಬ ಹೆಸರನ್ನು ಪಡೆದಿದೆ; ಆ ಭಾಷೆಯು ಭರತವರ್ಷದ ಹೊರಗಡೆ ಎಲ್ಲಿಯೂ ಬಳಕೆಯಲ್ಲಿಲ್ಲ. ಉರ್ದು ಎಂಬುದು ಶಿಬಿರದ ಭಾಷೆ; ನಾಗರ ಲಿಪಿಯಲ್ಲಿ ಬರೆದಾಗ್ಗೆ ಹಿಂದೀಯೆನಿಸುವುದು, ಫಾರಸೀ ಲಿಪಿಯಲ್ಲಿ ಬರೆದಾಗ್ಗೆ ಉರ್ದು ಎನಿಸುವುದು. ಅದನ್ನು ಭಾರತೀಯ ಮುಸಲ್ಮಾನರೊಂದಿಗೆ ಬಹುಸಂಖ್ಯಾಕ ಹಿಂದೂಜನರೂ ಆಡುತ್ತಾರೆ. ಅದೇ ಅಖಿಲ ಭಾರತವರ್ಷದ ವ್ಯಾವಹಾರಿಕ ಭಾಷೆ. ನಡೆನುಡಿಗಳಲ್ಲಿಯೂ ಆಚಾರ ವ್ಯವಹಾರಗಳಲ್ಲಿಯೂ ಭಾರತೀಯ ಮುಸಲ್ಮಾನರಿಗೂ ಇತರ ದೇಶಸ್ಥ ಮುಸಲ್ಮಾನರಿಗೂ ಅನೇಕ ಭೇದಗಳುಂಟು. ದೇಶದಲ್ಲಿ ಭಾರತೀಯ ಮುಸಲ್ಮಾನರು ಗೌರವವನ್ನಿಟ್ಟಿರುವ ಅಂಶವು 13ನೇ ಶತಮಾನದಲ್ಲಿಯೇ ಹಜರತ್ ಅಮೀರ್ ಖುಸ್ರು ಎಂಬ ಅವರ ಕವಿಶ್ರೇಷ್ಠನು "ಅಗರ್ ಫಿರ್ದೌಸ್ ಬರ್ ರೂಪ್ ರೂಪ ಅಸ್ತ್ ಹಮೀ ಅಸ್ತೋ ಹಮೀ ಅಸ್ತೋ ಹಮೀ ಅಸ್ತ್!" ಎಂದು ಹೇಳಿದಂದಿನಿಂದಲೂ ಅವರಲ್ಲಿ ಸಾಮಾನ್ಯ ಲಕ್ಷಣವಾಗಿದೆ. ಪ್ರಾಜ್ಞರಾರೂ ಹಿಂದೂಸ್ಥಾನೀ ಮುಸಲ್ಮಾನರಲ್ಲಿ ದೇಶಭಕ್ತಿಯಿಲ್ಲವೆಂದು ಯೋಚಿಸುವುದಿಲ್ಲ.

**ಭಾರತೀಯತ್ವ** ಏಳುನೂರು ವರ್ಷಗಳ ಕಾಲ ನೆರೆಹೊರೆಯವರಾಗಿ ಬಾಳಿದ ಕಾರಣದಿಂದ ಹಿಂದೂ ಮುಸಲ್ಮಾನರಲ್ಲಿ ಭಾಷೆ, ಉಡುಪು, ಮರ್ಯಾದೆ, ನಡತೆ, ಹಬ್ಬ, ವಿನೋದ, ಕಲೆಗಳಲ್ಲಿ ಉಭಯತ್ರ ಏಕರೂಪವಾದ ಮತ್ತು ಸಾಮಾನ್ಯವಾದ ವೃದ್ಧಿ ವಿಕಾಸಗಳು ಭದ್ರವಾಗಿವೆ. ಈರ್ವರಿಗೂ ಸಾಮಾನ್ಯವಾದ ಯಾತ್ರೆಗಳು ನಾಗಪಟ್ಟಣ, ಬಾಬಾಬುಡನ್ ಮುಂತಾದೆಡೆಗಳಲ್ಲಿ ವಾಡಿಕೆಯಾಗಿವೆ. ಜಾತ್ರೆಗಳಲ್ಲಿಯೂ ಉರುಸುಗಳಲ್ಲಿಯೂ ಈರ್ವರೂ ಸಮಾನರಾಗಿ ತುಷ್ಟಿಪಡೆಯುತ್ತಾರೆ. ಹಿಂದೂ ಸಂನ್ಯಾಸಿಗಳೂ ಬೈರಾಗಿಗಳೂ

ಮುಸಲ್ಮಾನ ಫಕೀರರೂ ಒಂದೇ ರೀತಿಯಲ್ಲಿಯೇ ಇರುತ್ತಾರೆ. ವಿರಕ್ತಶ್ರೇಷ್ಠರನ್ನು ಕಂಡಾಗ ಇಬ್ಬರೂ ಮನಸೋತು ಪೂಜ್ಯಭಾವವನ್ನು ಪ್ರಕಟಗೊಳಿಸುತ್ತಾರೆ. ಇಸ್ಲಾಮಿ ಮತವೂ ಹಿಂದೂ ಮತವೂ ಪರಸ್ಪರ ವಿರೋಧವನ್ನು ಸಾಧಿಸಿದ ದಿನಗಳು ಅಂದೇ ಕಳೆದುಹೋದವು. ಪರಸ್ಪರ ಘರ್ಷಣೆಯ ಪರಿಣಾಮವಾಗಿ ವೇದಾಂತ ತತ್ವಗಳನ್ನೇ ಮೆಚ್ಚಿದ ಸುಫೀ ಶಾಖೆಯು ಹುಟ್ಟಿತು. ಕಬೀರದಾಸ, ನಾನಕ, ದಾದು ಮುಂತಾದ ಪರಮ ಭಕ್ತರು ಇಬ್ಬರಲ್ಲಿಯೂ ಭಕ್ತಿಮಾರ್ಗವನ್ನು ಪ್ರಚಾರಗೊಳಿಸಿ ಎರಡು ಮತಗಳಿಗೂ ಸಂಧಿಸ್ಥಾನವನ್ನು ತೋರಿಕೊಟ್ಟರು. ಶಾಂತಿ (ಸಲಾಂ), ಅತಿಥಿಸೇವೆ, ದಾನ, ಮಾತೃಭಕ್ತಿಗಳಲ್ಲಿ ಹಿಂದೂಗಳೂ ಮುಸಲ್ಮಾನರೂ ಒಂದೇ ಬಗೆಯ ಆದರ್ಶವನ್ನು ಅವಲಂಬಿಸತಕ್ಕವರು. ಮುಸಲ್ಮಾನರ ನ್ಯಾಯಶಾಸ್ತ್ರಗಳೂ ಆಚಾರಗಳೂ ಕೆಲವಂಶಗಳಲ್ಲಿ ಹಿಂದೂ ಜನರ ನ್ಯಾಯಶಾಸ್ತ್ರಗಳಿಗೂ ಆಚಾರಗಳಿಗೂ ವ್ಯತ್ಯಸ್ತವಾಗಿ ಕಂಡುಬರುವುದು ಹೆಚ್ಚಿಲ್ಲ. ಗೃಹಧರ್ಮದಲ್ಲಿಯೂ ಗುರುಹಿರಿಯರ ಸೇವಾಕಾಂಕ್ಷೆಯಲ್ಲಿಯೂ ಇಬ್ಬರಲ್ಲಿಯೂ ಒಂದೇ ಬಗೆಯಾದ ಮನಸ್ಸೂ ಹೃದಯವೂ ಇರುವುದು.

**ಸಂಸ್ಕೃತಿ**

ದೀರ್ಘಕಾಲದ ಸಹವಾಸಬಲದಿಂದ ಹಿಂದೂಜನರೂ ಮುಸಲ್ಮಾನರೂ ಪರಸ್ಪರ ಪ್ರಭಾವವನ್ನು ಬೀರಿ ಅನ್ಯೋನ್ಯವಾಗಿ ವೃದ್ಧಿ ಪಡೆದಿದ್ದಾರೆ. ಉಡುಪಿನಲ್ಲಿ, ಮುಸಲ್ಮಾನರು ಬಾದಷಾಹಿಯನ್ನು ಸಾಧಿಸಿ ಆಸ್ಥಾನದಲ್ಲಿ ಅವಲಂಬಿಸಿದ ರೀತಿಯೇ ಹಿಂದೂಸ್ಥಾನೀ ರೀತಿಯಾಗಿದೆ. ನಡತೆಯಲ್ಲಿ, ಮರ್ಯಾದೆಯಿಂದ ಮಾತುಕಥೆಗಳನ್ನಾಡುವುದರಲ್ಲಿ, ಮುಸಲ್ಮಾನರು ಭಾರತೀಯತ್ವ ಲಕ್ಷಣವನ್ನೇ ಊರ್ಜಿತಗೊಳಿಸಿದರು. ಭರತವರ್ಷದವರಾದುದಕ್ಕೆ ಎಲ್ಲಕ್ಕಿಂತಲೂ ಉತ್ತಮವಾದ ಗುರುತನ್ನು ನಾವು ಜಾತಿ ವಿಕಸನದಲ್ಲಿ ಕಾಣಬಹುದು. ಭಾರತೀಯ ಜಾತಿಗಳಲ್ಲಿ ಮುಸಲ್ಮಾನರದೂ ಒಂದು ಜಾತಿಯೆನಿಸಿದೆ; ಜಾತಿಯ ಸ್ವೀಕಾರವೇ ಭಾರತೀಯತ್ವದ ಮುದ್ರೆ. ಪೂರ್ವಕಾಲದಲ್ಲಿ ಹಿಂದೂಗಳಾಗಿದ್ದು ಕಾರಣಾಂತರದಿಂದ ಇಸ್ಲಾಮಿ ದೀಕ್ಷೆಯನ್ನು ಸ್ವೀಕರಿಸಿದವರ ಸಂತತಿಯವರೇ ಭಾರತೀಯ ಮುಸಲ್ಮಾನರಾಗಿರುವುದರಿಂದ ಹಿಂದೂ ಅಥವಾ ಭಾರತೀಯವೆನ್ನಬಹುದಾದ ಆಚಾರ-

ಸಂಪ್ರದಾಯಗಳು ಹಿಂದೂಗಳಲ್ಲಿ ವೃದ್ಧಿಗೊಂಡಂತೆಯೇ ಮುಸಲ್ಮಾನರಲ್ಲಿಯೂ ವೃದ್ಧಿಗೊಂಡಿವೆ. ವೃತ್ತಿಭೇದವು ಪರಂಪರೆಯಾಗಿ ನೆಲೆಸಿ ಜಾತಿಗಳು ಭದ್ರಗೊಳ್ಳುವ ಗತಿಯು ಭಾರತೀಯ ಮುಸಲ್ಮಾನರಲ್ಲಿ ಸ್ಫುಟವಾಗಿ ಕಾಣುತ್ತದೆ. ಭಾರತೀಯ ಮುಸಲ್ಮಾನರಲ್ಲಿ ಹಿಂದೂ ಎನ್ನಬಹುದಾದ ಆಚಾರ ಸಂಪ್ರದಾಯಗಳು ನಡೆಯುತ್ತಲಿರುವುದಲ್ಲದೆ ವೃತ್ತಿಭೇದದಿಂದ ಜನಿಸಿದ ಜಾತಿ ಪದ್ಧತಿಗಳೂ ಒಳೆದಿರುವುವು.

ಈ ರೀತಿಯಲ್ಲಿ ಹಿಂದೂ ಮುಸಲ್ಮಾನರಿಬ್ಬರಲ್ಲಿ ಪರಸ್ಪರವಾಗಿ ಬಾಂಧವ್ಯವು ದೃಢವಾಗಿ ಬೆಳೆದಿರುವುದು. ಹದಿನಾರಾಣೆಗಳಲ್ಲಿ ಹದಿನಾಲ್ಕು ಭಾಗಗಳು ಇಬ್ಬರಿಗೂ ಒಂದೇ; ಎರಡಾಣೆ ಭಾಗದಲ್ಲಿ ಮಾತ್ರ ವ್ಯತ್ಯಾಸವಿರಬಹುದು. ಅಲ್ಪಭಾಗದ ಆ ವಿರೋಧವೇ ಕೆಲಕಾಲಗಳಲ್ಲಿ ಉದ್ರೇಕವಾಗಿದ್ದರೆ ಅದಕ್ಕೆ ಕಾರಣವು ರಾಜಕೀಯವೋ ಆರ್ಥಿಕವೋ ಆಗಿರುತ್ತದೆ. ಭಾರತೀಯ ಮುಸಲ್ಮಾನರು ಭಾರತೀಯರು; ಐಕ್ಯತೆಯನ್ನೂ ಏಕಮತ್ಯವನ್ನೂ ಉಳ್ಳವರು; ವಿಶಿಷ್ಟವಾದ ಗುಣ ಸಾಮರ್ಥ್ಯಗಳನ್ನು ಪಡೆದಿರತಕ್ಕವರು, ಭಾರತದೇಶದಲ್ಲಿ ಭಕ್ತಿಯುಳ್ಳವರು. ದೇಶದ ಸಿವಾಸಿಗಳಲ್ಲಿ ಹಿಂದೂಗಳು ಹಿರಿಯರಾದರೆ ಮುಸಲ್ಮಾನರು ಕಿರಿಯರು; ಅಂತೂ ಸೋದರರು.

ಸಂಸ್ಕೃತಿಯಲ್ಲಿ ಇಬ್ಬರೂ ಒಂದೇ ಎಂಬ ಅಂಶಕ್ಕೆ ಉತ್ತಮ ದೃಷ್ಟಾಂತವನ್ನು ಸಂಗೀತವಾಗುವ ಸಮಯದಲ್ಲಿ ನೋಡಬಹುದು. ಸಂಗೀತವು ಭಾರತೀಯ ಸಂಗೀತ; ಹಿಂದೂಗಳೂ ಮುಸಲ್ಮಾನರೂ ಅದನ್ನೇ ಸಮನಾದ ಭಕ್ತಿ ಪ್ರೀತಿಗಳಿಂದ ಕೇಳುವರು, ಕಲಿಯುವರು.

## ಈಸಾಯಿಗಳು

ಭಿನ್ನತಾ

ಸಂಖ್ಯಾಬಲದ ದೃಷ್ಟಿಯಿಂದಲೇ ನೋಡುವಲ್ಲಿ ಭಾರತೀಯ ಜನಸಮುದಾಯದಲ್ಲಿ ಮೂರನೆಯ ಸ್ಥಾನವು ಈಸಾವಿನ ಮತಾವಲಂಬಿಗಳಿಗೆ ಸಲ್ಲುವುದು. ಅವರಲ್ಲಿಯೂ ವೈವಿಧ್ಯವುಂಟು. ಮೊದಲು ತೋರಿಕೊಳ್ಳುವುದು ಬಿಳಿಯರು ಮತ್ತು ದೇಶೀಯರು ಎಂಬ ವಿಭಾಗ. ತರುವಾಯ

ಬಿಳಿಯರಲ್ಲಿಯೂ ದೇಶೀಯರಲ್ಲಿಯೂ ಅನೇಕಾನೇಕ ಮತಭೇದಗಳೂ ತೋರುತ್ತವೆ.

ಪಂಗಡಗಳು

ಬಿಳಿಯರ ಸಂಖ್ಯೆ ದೇಶದಲ್ಲಿ ಅತ್ಯಲ್ಪ. ಅವರಲ್ಲಿಯೂ ಮೂರು ವಿಭಾಗಗಳು ಅಥವಾ ಜಾತಿಗಳು ಇರುತ್ತವೆ. ಮೊದಲನೆ ಗುಂಪಿನವರು ಐರೋಪ್ಯರೆನಿಸಿದ್ದಾರೆ. ಅವರಿಗೆ ಇಂಗ್ಲಂಡೇ ತವರ್ಮನೆಯಾದುದರಿಂದ ಇಲ್ಲಿಯ ಉದ್ಯೋಗ ಕಾಲವು ಮುಗಿದ ಕೂಡಲೆ ಹೊರಟುಹೋಗುತ್ತಾರೆ. ಅವರನ್ನು ಭಾರತೀಯರೆಂದೆಣಿಕೆಮಾಡುವುದಿಲ್ಲ. ಎರಡನೆ ಗುಂಪಿನವರಿಗೆ ಭಾರತೀಯ ಇಂಗ್ಲಿಷರೆಂದು (Domiciled Englishmen) ಹೆಸರು. ಇಲ್ಲಿಯೇ ಮನೆಮಾರುಗಳನ್ನು ಮಾಡಿಕೊಂಡು ಭರತವರ್ಷವೇ ತಮ್ಮ ದೇಶವೆಂದು ಈ ಗುಂಪಿನವರು ಭಾವಿಸಿದ್ದಾರೆ. ಮಿಶ್ರಜಾತಿಯವರು ಆಂಗ್ಲೊ ಇಂಡಿಯನ್ (Anglo-Indian) ಎಂಬ ಹೆಸರನ್ನಿಟ್ಟುಕೊಂಡು ಮೂರನೆಯವರಾಗಿದ್ದಾರೆ. ಇವರೆಲ್ಲರೂ ಇಲ್ಲಿಯೇ ಹುಟ್ಟಿ ಬೆಳೆದವರು ; ಬೇರೆ ಯಾವ ದೇಶಕ್ಕೂ ಸೇರಿದವರಲ್ಲ. ಬಿಳಿಯ ಗುಂಪಿಗೆ ಸೇರಿದ ಈ ವಿಭಾಗಗಳವರೆಲ್ಲರೂ ಇಂಗ್ಲಿಷ್ ಭಾಷೆಯನ್ನಾಡುತ್ತ ರೀತಿ ನೀತಿಗಳಲ್ಲಿ ಪಾಶ್ಚಾತ್ಯರನ್ನು ಅನುಕರಿಸತಕ್ಕವರು. ಆದ್ದರಿಂದ ಇವರಿಗೂ ದೇಶೀಯ ಈಸಾಯಿ (Indian Christians) ಗಳೆಂಬ ಪಂಗಡಕ್ಕೂ ಸಾಮಾನ್ಯ ವ್ಯವಹಾರದಲ್ಲಿ ಬಹಳ ಅಂತರವುಂಟು.

ದೇಶೀಯ ಈಸಾಯಿಗಳೆಂದರೆ ಪೂರ್ವದಲ್ಲಿ ಹಿಂದೂಗಳಾಗಿದ್ದು ಕಾರಣಾಂತರದಿಂದ ಈಸಾಯಿ ಮತವನ್ನು ಸ್ವೀಕರಿಸಿದವರು. ಮೊದಲು ಸಿರಿಯನ್ ಚರ್ಚೆಂಬ (Syrian Church) ಪುರಾತನ ಪಂಥದ ಶಾಖೆಯೊಂದು ಪಶ್ಚಿಮ ತೀರಪ್ರದೇಶದಲ್ಲಿ ಸ್ಥಾಪಿತವಾಗಿ ಅಲ್ಲಿಯ ಜನರಲ್ಲಿ ಕೆಲವರು ಆ ಪಂಥವನ್ನೇ ಸ್ವೀಕರಿಸಿದರು. ತರುವಾಯ ಪೋರ್ಚುಗೀಸರ ಮತ್ತು ಫರಾಸ್ಸೀ ಜನರ ಪಾದ್ರಿಗಳು ತಮ್ಮ ಮತ ಪ್ರಚಾರವಮಾಡಿ ರೋಮನ್ ಕ್ಯಾಥೊಲಿಕ್ (Roman Catholic) ಪಂಥಕ್ಕೆ ಅನೇಕರನ್ನು ಸೇರಿಸಿದರು. ಡಚ್ಚರೂ ಇಂಗ್ಲೀಷರೂ ಬಂದ ಬಳಿಕ ಪ್ರಾಟೆಸ್ಟೆಂಟ್ (Protestant)

ಶಾಖೆಯ ಪ್ರಚಾರವು ನಡೆಯಿತು. ದೇಶೀಯ ಈಸಾಯಿಗಳಲ್ಲಿ ಈ ರೀತಿಯಾಗಿ ಮೂರು ಮುಖ್ಯ ಪಂಗಡಗಳಿವೆ. ದೇಶೀಯರಾದುದರಿಂದ ಇವರು ಅನೇಕಾಂಶಗಳಲ್ಲಿ ತಮ್ಮ ಪೂರ್ವಾಚಾರಗಳನ್ನೂ ದೇಶಾಚಾರಗಳನ್ನೂ ಕಾಪಾಡಿಕೊಂಡೇ ಇದ್ದಾರೆ. ದೇಶಭಾಷೆಗಳನ್ನೇ ಆಡುತ್ತ ತಮ್ಮ ಪೂರ್ವಾಚಾರಗಳಲ್ಲಿ ವಿಶ್ವಾಸವನ್ನು ತೋರುತ್ತ ಭಾರತೀಯತ್ವದ ಲಕ್ಷಣಗಳಿಂದ ಕೂಡಿಯೇ ಇದ್ದಾರೆ.

ಭಾರತೀಯತ್ವ

ಬಿಳಿಯರೆಂಬ ವಿಭಾಗದವರಲ್ಲಿ ಐರೋಪ್ಯರೆನಿಸಿಕೊಳ್ಳುವವರು ಹೊರತು ಇತರರೂ ತಮ್ಮ ಭಾರತೀಯತ್ವವನ್ನು ತೋರಲು ಈಚೆಗೆ ಮನಸ್ಸು ಮಾಡುತ್ತಿದ್ದಾರೆ. ದೇಶೀಯ ವಿಭಾಗದಲ್ಲಿರುವ ಒಗ್ಗಟ್ಟಿಗೆ ಇವರ ವರ್ತನೆಯೇ ಒಂದು ಕಾರಣವಾಗಿ ನಡೆಯಿತು; ಭಾರತೀಯತೆಯನ್ನು ಒಪ್ಪಿದುದೇ ಈ ಈಸಾಯಿ ಗುಂಪು ಏಕತ್ವವನ್ನು ಭದ್ರಪಡಿಸಿಕೊಳ್ಳುವ ಸೂಚನೆಯೆಂದು ಭಾವಿಸಬೇಕು.

## ಪಾರ್ಸೀ ಜನರು

ಆರ್ಯ ಶಾಖೆ

ಸಂಖ್ಯೆಯಲ್ಲಿ ಸಣ್ಣವರಾದರೂ ವ್ಯಾಪಾರದಲ್ಲಿ ಪ್ರಬಲರಾಗಿ ಪ್ರಸಿದ್ಧರಾದವರು ಪಾರ್ಸೀಗಳೆಂಬ ಜನರು. ಕ್ರಿ. ಶ. 9ನೆ ಶತಮಾನದಲ್ಲಿಯೇ ಇವರ ಪೂರ್ವಿಕರು ಇರಾನ್ ಅಥವಾ ಪಾರಸೀಕಸ್ಥಾನದಿಂದ ಬಂದು ಗುಜರಾಥ ಪ್ರಾಂತದಲ್ಲಿ ನೆಲೆಸಿದರು. ಜರದುಸ್ತ (Zoroaster) ಮತವನ್ನವಲಂಬಿಸುತ್ತ ಇವರು ಮನೆಗಳಲ್ಲಿ ಅಗ್ನಿಪೂಜೆಯನ್ನು ಮಾಡುವರು; ಮೃತದೇಹಗಳನ್ನು ಆಕಾಶದಲ್ಲಿ ಪಕ್ಷಿಗಳಿಗೊಟ್ಟು ಶವಸಂಸ್ಕಾರವನ್ನು ನೆರವೇರಿಸತಕ್ಕವರು. ವಂಶದಲ್ಲಿ ಇವರು ಆರ್ಯರು; ಇವರ ಪವಿತ್ರ ಗ್ರಂಥವಾದ ಜಿಂದಬಸ್ತ (Zend Avesta)ಕ್ಕೂ ಋಕ್ಸಂಹಿತೆಗೂ ನಿಕಟವಾದ ಸಂಬಂಧವು ತೋರುವುದು. ಮುಸಲ್ಮಾನರಿಗಿಂತಲೂ ಮುಂಚೆಯೇ ಇವರು ದೇಶದಲ್ಲಿ ನೆಲೆಸಿದವರು. ಅಂದಿನಿಂದ ಇವರು ಭರತವರ್ಷವನ್ನೇ ಸ್ವದೇಶವಾಗಿ

ಎಣಿಸುತ್ತ ಜನತೆಯ ಸುಖದುಃಖಗಳಲ್ಲಿ ಭಾಗಿಗಳಾಗಿರುವರು. ಮೊದಲಿನ ನೋಟಕ್ಕೆ ಇವರು ಐರೋಪ್ಯರಂತೆ ಕಂಡರೂ ಇವರು ಐರೋಪ್ಯರಲ್ಲ. ಇವರಾಡುವ ಭಾಷೆ ಗುಜರಾಥಿ. ಇವರು ತಮ್ಮದೇ ಎನಿಸಿದ ಅನೇಕ ಆಚಾರಗಳನ್ನು ನಡೆಸತಕ್ಕವರು.

**ಭಾರತೀಯತ್ವ**

ಭಾರತೀಯ ಜನತೆಯಲ್ಲಿ ಹಿಂದೂ, ಮುಸಲ್ಮಾನ್, ಈಸಾಯಿ ಮತ್ತು ಪಾರ್ಸೀ ಎಂಬ ವಿಭಾಗಗಳೇ ಮುಖ್ಯ. **ಯೆಹುದೀ ಜನರು** ಸಂಖ್ಯೆಯಲ್ಲಿ ಅತ್ಯಲ್ಪರು. ಇಲ್ಲಿಯೇ ಸ್ಥಿರವಾಗಿ ನೆಲೆಸಿರುವವರು ಈ ದೇಶವನ್ನೇ ಸ್ವದೇಶವಾಗಿ ಸ್ವೀಕರಿಸಿರುವುದರಿಂದ ಅವರೂ ಭಾರತೀಯರೇ. ಜನಗಣತಿಯ ವರದಿಯಲ್ಲಿ ಈ ಗುಂಪುಗಳಲ್ಲದೆ ಅನಾಗರಿಕರೆಂಬುದಾಗಿ ಅನೇಕರನ್ನು ವಿಂಗಡಿಸುವರು. ಇವರು ದೇಶದಲ್ಲಿ ಕಷ್ಟಸಾಧ್ಯವಾದ ಪ್ರದೇಶಗಳಲ್ಲಿಯೇ ನೆಲೆಸಿರುವವರು; ಅವರಲ್ಲಿ ಅನೇಕರು ಅತಿ ಪೂರ್ವ ನಿವಾಸಿಗಳ ಸಂತತಿಯವರು. ಅವರ ಆಚಾರ ವ್ಯವಹಾರಗಳಲ್ಲಿ ಮೌಢ್ಯವೂ ಅಜ್ಞತೆಯೂ ವಿಶೇಷವಾಗಿ ಕಂಡುಬಂದಾಗ್ಯೂ ಅವರೂ ಹಿಂದೂ ಜನರ ಪಂಗಡದಲ್ಲಿಯೇ ಸೇರತಕ್ಕವರು.

## ಭಾರತೀಯ ರಾಶಿ

**ಪರಸ್ಪರ ಪ್ರಮಾಣ**

ಈ ವಿಭಾಗಗಳ ಸಂಖ್ಯೆಯನ್ನು ತಿಳಿದುಕೊಂಡು ನಾವು ಮುಖ್ಯವಾದ ಗುಂಪುಗಳ ಪರಸ್ಪರ ಪ್ರಮಾಣವು ಹೇಗಿದೆ ಯೆಂಬುದನ್ನು ಮನಗಾಣಬೇಕು. ಹಿಂದೂ ಜನರ ಒಟ್ಟು ಸಂಖ್ಯೆ 239,195,140; ಭಾರತೀಯ ಸಮುದಾಯದಲ್ಲಿ ಅವರದು $\frac{5}{7}$ ನೇ ಪಾಲು. ಅವರಲ್ಲಿ ಬ್ರಾಹ್ಮಣರು 15,237,452; ಸಿಕ್ಖರು 4,335,771; ಮುಸಲ್ಮಾನರು 77,677,545: ಒಟ್ಟಿನಲ್ಲಿ $\frac{2}{7}$ನೇ ಪಾಲು. ಜಗತ್ತಿನಲ್ಲಿರುವ ಒಟ್ಟು ಮುಸಲ್ಮಾನರ ಸಂಖ್ಯೆ 2,090 ಲಕ್ಷ; ಅದರಲ್ಲಿ ಭಾರತೀಯರಾದವರು ಮೂರರಲ್ಲೊಂದು ಪಾಲು. ಈಸಾಯಿಗಳ ಸಂಖ್ಯೆ 6,296,763; ಅವರಲ್ಲಿ ಬಿಳಿಯರು ಸು. $3\frac{1}{2}$ ಲಕ್ಷ, ದೇಶೀಯರು 59 ಲಕ್ಷ. ಪಾರ್ಸೀಜನರ ಸಂಖ್ಯೆ 109,752.

ಈ ಸಂಖ್ಯೆಗಳನ್ನು ಸರಿಸುಮಾರಾಗಿಯಾದರೂ ನಾವು ಜ್ಞಾಪಕದಲ್ಲಿಡುವುದು ಅವಶ್ಯಕ.

**ಗೌರವ ನಿರ್ಣಯ**

ಸಂಖ್ಯೆಯನ್ನು ನೋಡಿ ಅದರಿಂದಲೇ ಸಮಸ್ತ ಪ್ರಾಬಲ್ಯವು ಲಭಿಸಿದೆಯೆಂದಾಗಲಿ ಲಭಿಸುವುದೆಂದಾಗಲಿ ಭಾವಿಸಬಾರದು. ಸಂಖ್ಯಾ ಪ್ರಾಬಲ್ಯವು ಒಂದು ಬಗೆ ಮಾತ್ರ. ಪ್ರಾಬಲ್ಯ ಪ್ರಖ್ಯಾತಿಗಳನ್ನು ಬಹು ಸಂಖ್ಯಾಕರಾಗಿರುವ ಮಾತ್ರದಿಂದಲೇ ಸಂಪಾದಿಸಲಾಗುವುದಿಲ್ಲ. ಗೌರವ ಪ್ರಖ್ಯಾತಿಗಳು ಲಭಿಸುವುದಕ್ಕೆ ದೇಶಸೇವೆ ಅಥವಾ ಜನಸೇವೆಯೇ ಮೂಲ ಸಾಧಕ. ಎಷ್ಟು ಮಾತ್ರ ತಮ್ಮಿಂದ ದೇಶಹಿತ ಸಾಧನೆಯಾಗುವುದೋ ಅಷ್ಟುಮಾತ್ರದ ಗೌರವವೇ ಯಾವ ಗುಂಪಿಗಾದರೂ ಪ್ರಾಪ್ತಿಯಾಗ ತಕ್ಕುದು. ಯೋಗ್ಯತಾನಿರ್ಣಯವು ಸಂಖ್ಯಾಪ್ರಾಬಲ್ಯ ಮಾತ್ರದಿಂದಲೇ ನಡೆಯಲಾರದು.

**ಭಾರತೀಯ ಐಕ್ಯತೆ**

ಪ್ರತಿಯೊಂದು ಗುಂಪಿನವರಲ್ಲಿಯೂ ಐಕ್ಯತೆಯುಂಟು, ಭಾರತೀಯತ್ವವುಂಟು. ಎಲ್ಲ ಗುಂಪುಗಳವರೂ ಈ ದೇಶವು ಒದಗಿಸುವ ಆಹಾರವನ್ನೂ ನೀರನ್ನೂ ಸೇವಿಸಿ, ಒಂದೇ ವಾತಾವರಣದಲ್ಲಿ ಅಣ್ಣತಮ್ಮಂದಿರಂತೆ ಜೀವನವನ್ನು ನಡೆಸತಕ್ಕವರು. ಎಲ್ಲರೂ ಒಂದೇ ಮನಸ್ಸಿನಿಂದ ಯೋಚನೆ ಮಾಡುತ್ತ, ಸುಖದುಃಖಗಳನ್ನು ಒಂದೇ ಹೃದಯದಿಂದ ಸಾಮಾನ್ಯವಾಗಿ ಅನುಭವಿಸುತ್ತ, ಒಂದೇ ದೇವರದಿಂದ ವರ್ತಿಸುತ್ತ ತಮ್ಮೆಲ್ಲರ ಐಕ್ಯತೆಯನ್ನೂ ಐಕಮತ್ಯವನ್ನೂ ಇತ್ತೀಚಿನ ಕಾಲದಲ್ಲಿ ಬ್ರಿಟಿಷರ ಆಳ್ವಿಕೆಯಲ್ಲಿ ಹೆಚ್ಚು ಹೆಚ್ಚಾಗಿ ತೋರ್ಪಡಿಸಿರುವರು. ಎಲ್ಲ ಗುಂಪುಗಳ ಜನರೂ ಏಕೀಭವಿಸಿ ಸಭೆಗೂಡಿ ಕರ್ತವ್ಯಪರರಾಗುವುದಕ್ಕೆ ನಿದರ್ಶನಗಳು ನಮ್ಮ ಸ್ವಂತ ಅನುಭವದಲ್ಲಿಯೇ ಕಾಣುತ್ತವೆ. ಯಾವ ಗುಂಪಿಗೆ ಸೇರಿದವರಾದಾಗ್ಗೂ ಮಾತೃಭೂಮಿಯ ಸ್ತೋತ್ರವು ಉತ್ಸಾಹವನ್ನುಂಟುಮಾಡುತ್ತದೆ. ಅಂತಹ ಸ್ತೋತ್ರಗಳಲ್ಲಿ ಪ್ರಖ್ಯಾತವಾದ ಮೂರನ್ನಾದರೂ ಎಲ್ಲರೂ ಕಲಿತು ಒಟ್ಟಿಗೆ ಸೇರಿ ಹಾಡುವುದೇ ಅಲ್ಲದೆ ತಿಳಿಯಲಪೇಕ್ಷಿಸುವವರಿಗೆ ಅವುಗಳ

ಅರ್ಥವನ್ನು ತಿಳಿಸುವ ಯೋಗ್ಯತೆಯನ್ನೂ ಪಡೆದಿರಬೇಕು. ಆ ಮೂರು ಯಾವುವೆಂದರೆ: ಬಂಕಿಂಚಂದ್ರ ಚಟ್ಟೋಪಾಧ್ಯಾಯ ರಚಿತ 'ವಂದೇ ಮಾತರಂ', ರಬೀಂದ್ರನಾಥ ಠಾಕೂರಕೃತ 'ದೇವಿ ಭುವನ ಮನಮೋಹಿನಿ' ಮತ್ತು ಸರ್ ಮಹಮ್ಮದ್ ಇಕ್ಬಾಲರೆಂಬ ಕವಿವರ್ಯರ 'ಹಿಂದೂಸ್ತಾನ್ ಹಮಾರಾ.'

## 3. ಬ್ರಿಟಿಷ್ ಸಮುದಾಯಬಂಧ

_ಬ್ರಿಟಿಷ್ ಸಾಮ್ರಾಜ್ಯ: ವಿಸ್ತಾರ, ಬ್ರಿಟಿಷರು, ಭಾಗಗಳು, ಬ್ರಿಟಿಷ್ ಬಾಹುಳ್ಯ. ಸಂಯುಕ್ತ ರಾಜ್ಯ: ಪಾರ್ಲಿಮೆಂಟ್, ಮಂತ್ರಿಮಂಡಲಿ, ರಾಷ್ಟ್ರಬಂಧದ ಮೂಲತತ್ವಗಳು. ಡುಮಿನಿಯನ್ನುಗಳ ವೈಶಿಷ್ಟ್ಯ: ಸಮ್ಮೇಳನಗಳು, ಅವರ್ಣರು. ಲೀಗ್ ಆಫ್ ನೇಷನ್ಸ್. ಭಾರತೀಯ ಸ್ಥಾನ.

### ಬ್ರಿಟಿಷ್ ಸಾಮ್ರಾಜ್ಯ

ಯೂನಿಯನ್ ಜಾಕ್ (Union Jack) ಎಂಬ ಬಾವುಟವನ್ನು ಎಲ್ಲರೂ ನೋಡಿರುತ್ತೇವೆ, "ಲಾಂಗ್ ಲಿವ್ ದಿ ಕಿಂಗ್" (Long Live the King) ಎಂಬ ಹಾಡನ್ನು ಕೇಳಿರುತ್ತೇವೆ. ಅವೆರಡೂ ನಮಗೆ ನಾವು ಉಪಯೋಗಿಸುವ ಸ್ಟಾಂಪುಗಳಂತೆಯೂ ನಾಣ್ಯಗಳಂತೆಯೂ ಇಂಗ್ಲಂಡಿನ ಮತ್ತು ಬ್ರಿಟಿಷರ ಸಂಬಂಧವನ್ನು ಸೂಚಿಸುತ್ತವೆ. ನಮ್ಮ ದೇಶವಾದ ಭರತ ವರ್ಷ ಅಥವಾ ಹಿಂದೂಸ್ತಾನ್ ಎಂಬುದಕ್ಕೆ ಇಂಡಿಯ ಸಾಮ್ರಾಜ್ಯ (Indian Empire) ವೆಂದೇ ರಾಜಕೀಯ ವ್ಯವಹಾರದಲ್ಲಿ ಹೆಸರಾಗಿರಲು ಕಾರಣ ದೇಶದ ಸಮಸ್ತ ಆಡಳಿತವೂ ಇಂಗ್ಲಂಡಿನ ದೊರೆಗಳವರ ಪ್ರತಿನಿಧಿಯೆನಿಸಿದ ವೈಸ್‌ರಾಯ್ ಎಂಬಾತನಲ್ಲಿ ಅಡಕವಾಗಿರುವ ಸಂಗತಿಯೇ. ನಮ್ಮ ದೇಶವು ಇಂಗ್ಲಂಡಿಗೆ ಅಧೀನವಾದುದು; 'ರವಿ ಮುಳುಗದ ಸಾಮ್ರಾಜ್ಯ'ವೆಂದು ಹೆಸರು ಪಡೆದಿರುವ ಬ್ರಿಟಿಷ್ ಸಾಮ್ರಾಜ್ಯದಲ್ಲಿ ಭಾಗವಾದುದು. ಭೂಗೋಳದ ನಕ್ಷೆಯನ್ನು ನೋಡಿದಲ್ಲಿ ಎಲ್ಲ ಖಂಡಗಳಲ್ಲಿಯೂ ಎಲ್ಲ ವಲಯಗಳಲ್ಲಿಯೂ ಎಲ್ಲ ಸಾಗರಗಳಲ್ಲಿಯೂ ಅಲ್ಲಲ್ಲಿ ಕೆಂಬಣ್ಣದಿಂದ ಕೂಡಿದ ಭೂಭಾಗಗಳೂ ದ್ವೀಪಗಳೂ ಕಾಣುವುವು. ಈ ಕೆಂಭಾಗಗಳಿಗೆಲ್ಲಕ್ಕೂ ಒಟ್ಟಿಗೆ ರಾಜಕೀಯ ವ್ಯವಹಾರದಲ್ಲಿ ಸರಿಯಾದ ಹೆಸರು ಬ್ರಿಟಿಷ್ ಸಾಮ್ರಾಜ್ಯ ಅಥವಾ ಚಕ್ರಾಧಿಪತ್ಯವೆಂಬುದಲ್ಲ. **"ಬ್ರಿಟಿಷ್ ಜನಾಂಗಗಳ ಸಮುದಾಯ ರಾಷ್ಟ್ರಸಂಸ್ಥೆ"** (British Commonwealth of Free Nations) ಎಂಬ ಹೆಸರೇ ಈಚೆಗೆ ಬಳಕೆಯಾಗಿ ಸರಿಯಾದುದೆನಿಸಿದೆ. ಈ ಸಮುದಾಯದಲ್ಲಿ ನಮ್ಮ ಜನ್ಮಭೂಮಿಯೂ ಸೇರಿದೆ.

ವಿಸ್ತಾರ

ಪೃಥ್ವಿಯಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿರುವ ಈ ಸಮುದಾಯ ಸಾಮ್ರಾಜ್ಯವು ಬಹಳ ದೊಡ್ಡದೆನಿಸಿದೆ. ಪೃಥ್ವಿಯ ಒಟ್ಟು ವಿಸ್ತೀರ್ಣದಲ್ಲಿ ಸಾಮ್ರಾಜ್ಯದ ವಿಸ್ತೀರ್ಣವು ಸುಮಾರು $\frac{1}{4}$ ರಷ್ಟು. ಸೇರಿರುವ ಭೂಭಾಗಗಳಲ್ಲಿ ಬ್ರಿಟಿಷ್ ದ್ವೀಪ ರಾಶಿ (British Isles), ಅಂದರೆ ಇಂಗ್ಲಂಡ್ ಮತ್ತು ವೇಲ್ಸ್, ಸ್ಕಾಟ್ಲಂಡ್, ಐರ್ಲಂಡ್ ದ್ವೀಪಗಳ ಸಮುದಾಯವು ಮಾತೃಸ್ಥಾನವೆನಿಸಿ ಮೊದಲನೆಯದೆನಿಸಿದೆ. ಅವುಗಳಲ್ಲಿ ಐರ್ಲಂಡಿನ ಮುಕ್ಕಾಲು ಭಾಗವನ್ನು ಬಿಟ್ಟುಳಿದ ಕ್ಷೇತ್ರಗಳೆಲ್ಲಕ್ಕೂ ಒಟ್ಟಿಗೆ ಸಂಯುಕ್ತ ರಾಜ್ಯ (United Kingdom) ವೆಂದು ಹೆಸರುಂಟು. ಈ ಸಂಯುಕ್ತ ರಾಜ್ಯವೇ ಸಮುದಾಯ ರಾಷ್ಟ್ರ ಸಂಸ್ಥೆಯೆಲ್ಲಕ್ಕೂ ಅಗ್ರಸ್ಥಾನದಲ್ಲಿರತಕ್ಕುದು. ಪೃಥ್ವಿಯ ವಿಸ್ತೀರ್ಣದಲ್ಲಿ ಸಂಯುಕ್ತ ರಾಜ್ಯವು $\frac{1}{೬೦೦}$ ಮಾತ್ರವಾದರೂ ಜನಸಂಖ್ಯೆಯಲ್ಲಿ $\frac{1}{೪೦}$ ಆಗಿದೆ. ಸಂಯುಕ್ತರಾಜ್ಯದ ದೊರೆಯೇ ಸಮುದಾಯ ರಾಷ್ಟ್ರವೆಲ್ಲಕ್ಕೂ ಒಡೆಯನೆನಿಸಿರುವುದರಿಂದ ಇತರ ಭಾಗಗಳನ್ನು ಆತನ ಪ್ರತಿನಿಧಿಗಳಾಗಿ ವೈಸ್‌ರಾಯ್, ಗವರ್ನರ್-ಜನರಲ್ ಮತ್ತು ಗವರ್ನರ್ ಗಳೆಂಬ ಹೆಸರಿನಿಂದ ನಿಯಮಿತರಾದ ಅಧಿಕಾರಿಗಳು ಆಳುತ್ತಾರೆ. ಈ ಪ್ರಭುವಿಗೆ ಭರತವರ್ಷದಲ್ಲಿ ಮಾತ್ರ

ಬ್ರಿಟಿಷರು

ಸಂರಾಟ್ ಅಥವಾ ಚಕ್ರವರ್ತಿಯೆಂಬ ಬಿರುದು ಸಲ್ಲುತ್ತದೆ; ಉಳಿದ ಭಾಗಗಳಲ್ಲಿ ರಾಜನೆಂಬ ಬಿರುದೇ ಇರುತ್ತದೆ. ಭರತವರ್ಷವು ಸಾಮ್ರಾಜ್ಯವೆನಿಸಿರುವುದೇ ಈ ಭೇದಕ್ಕೆ ಕಾರಣ. ಇತರ ಭಾಗಗಳನ್ನು ಸಾಮ್ರಾಜ್ಯವೆಂದು ಕರೆಯುವುದಿಲ್ಲ; **ಡುಮಿನಿಯನ್** (Dominion), **ಕಾಲೊನಿ** (Colony), **ಆಶ್ರಿತರಾಷ್ಟ್ರ** ಅಥವಾ **ಪ್ರೊಟೆಕ್ಟೊರೇಟ್** (Protectorate), **ದತ್ತಭುಕ್ತಿ** ಅಥವಾ **ಅಧೀನಕ್ಷೇತ್ರ** ಅಥವಾ **ಮ್ಯಾಂಡೇಟೆಡ್ ಟೆರಿಟೊರಿ** (Mandated Territory) ಎಂಬ ಹೆಸರುಗಳಿಂದ ಕರೆಯುವರು. ಬ್ರಿಟಿಷ್ ಎಂಬ ಹೆಸರು ಬ್ರಿಟಿಷ್ ದ್ವೀಪಗಳ ನಿವಾಸಿಗಳಿಗೆ, ಅಂದರೆ ಇಂಗ್ಲಿಷರು, ವೆಲ್ಷರು, ಸ್ಕಾಚರು, ಐರಿಷರು ಎಲ್ಲರಿಗೂ ಅನ್ವಯಿಸುವುದು. ಬ್ರಿಟಿಷ್ ದ್ವೀಪಗಳೇ ಅವರಿಗೆ ತವರ್ಮನೆ; ಇತರ ಕ್ಷೇತ್ರಗಳೆಲ್ಲವುಗಳಲ್ಲಿಯೂ ಅವರು ದೇಶೀಯರೆನಿಸುವುದಿಲ್ಲ.

ದೇಶೀಯರೆನಿಸುವವರು ಆಯಾ ಕ್ಷೇತ್ರಗಳಲ್ಲಿ ಪೂರ್ವಕಾಲದಿಂದಲೂ ಪರಂಪರೆಯಾಗಿ ನಿವಾಸಿಗಳಾಗಿರತಕ್ಕವರು. ಈ ದೇಶೀಯ ಜನಸಮೂಹಗಳನ್ನು ಗೆದ್ದು ಬ್ರಿಟಿಷರು ಕೆಲವು ಕ್ಷೇತ್ರಗಳನ್ನು ನೆಲಸುಗಳಾಗಿಯೂ, ಕೆಲವು ಕ್ಷೇತ್ರಗಳನ್ನು ಅಧೀನವಾಗಿಯೂ ಸೆರವೇರಿಸಿಕೊಂಡಿದ್ದಾರೆ. ನೆಲಸುಗಳಲ್ಲಿ ಅಥವಾ ಕಾಲೊನಿಗಳಲ್ಲಿ ಮನೆಮಾರುಗಳನ್ನು ಮಾಡಿಕೊಂಡು ವಂಶಪರಂಪರೆಯಾಗಿ ವಾಸಮಾಡುತ್ತಿದ್ದಾಗ್ಯೂ ಅಲ್ಲಿಯ ಬ್ರಿಟಿಷರು ದೇಶೀಯರಲ್ಲ, ನೆಲೆಯೂದವರು ಮಾತ್ರ. ಬ್ರಿಟಿಷರು ಎಲ್ಲಿದ್ದರೂ ಬ್ರಿಟನ್ ಎಂಬ ದೇಶೀಯರಾಗಿಯೇ ಇರಲು ಉತ್ಸುಕರಾದವರು.

ಇತರ ಜನ

ಸಮುದಾಯದ ಒಟ್ಟು ವಿಸ್ತೀರ್ಣ 1,33,55,426 ಚದರ ಮೈಲಿಗಳಷ್ಟು ಇದೆ; ಒಟ್ಟು ಜನಸಂಖ್ಯೆಯು 45 ಕೋಟಿಗಳಷ್ಟು ಇದೆ. ನಲವತ್ತೈದು ಕೋಟಿಗಳಲ್ಲಿ ಆರು ಕೋಟಿ ಮಾತ್ರ ಬ್ರಿಟಿಷರು ಅಥವಾ ಬಿಳಿಯರು ಅಥವಾ ಸವರ್ಣ(White)ರು; ಅವರ್ಣರ (Coloured) ಸಂಖ್ಯೆಯು 39 ಕೋಟಿಗಳಷ್ಟಿದೆ; ಅದರಲ್ಲಿ ಭಾರತೀಯರೇ 35 ಕೋಟಿಗಳಾಗಿರುವರು. ಬ್ರಿಟಿಷ ಸಮುದಾಯದಲ್ಲಿ ಭಾರತೀಯರ ಪ್ರಮಾಣವು $\frac{7}{9}$ ಎಂದು ಸ್ಥೂಲವಾಗಿ ಭಾವಿಸಬಹುದು.

ಭಾಗಗಳು

ಬ್ರಿಟಿಷ ಸಮುದಾಯ ರಾಷ್ಟ್ರವೆಂಬುದರಲ್ಲಿ ಅನೇಕ ಕ್ಷೇತ್ರಗಳು ಕೂಡಿದ್ದು ಹಲವು ವರ್ಗಗಳಾಗಿ ವಿಂಗಡವಾಗುತ್ತವೆ. ಹೇಗೆಂದರೆ:—

1. **ಸಂಯುಕ್ತ ರಾಜ್ಯ** (The United Kingdom).
2. **ಡುಮಿನಿಯನ್ನುಗಳು**; ಇವು ಮುಖ್ಯವಾಗಿ ಆರು :
   (i) ಕೆನಡಾ ಡುಮಿನಿಯನ್ (Dominion of Canada).
   (ii) ನ್ಯೂಫೌಂಡ್ಲಂಡ್ ಡುಮಿನಿಯನ್ (Dominion of Newfoundland).

(iii) ನ್ಯೂಸೀಲಂಡ್ ಡುಮಿನಿಯನ್
(Dominion of New Zealand).

(iv) ದಕ್ಷಿಣ ಆಫ್ರಿಕದ ಯೂನಿಯನ್
(Union of South Africa)

(v) ಆಸ್ಟ್ರೇಲಿಯದ ಕಾಮನ್ವೆಲ್ತ್
(Commonwealth of Australia).

(vi) ಐರಿಷ್ ಫ್ರೀ ಸ್ಟೇಟ್ (Irish Free State).

3. **ಇಂಡಿಯ ಸಾಮ್ರಾಜ್ಯ** (The Indian Empire).

4. **ಕಾಲೊನಿಗಳು,** ಅಂದರೆ ಯಾವ ಯಾವ ಭೂಭಾಗಗಳಲ್ಲಿ ಬ್ರಿಟಿಷರು ವಲಸೆಹೋಗಿ ಮನೆಮಾರುಗಳನ್ನು ಕಟ್ಟಿಕೊಂಡು ಸ್ಥಿರವಾಗಿ ನೆಲೆಯಾಗಿರುವರೋ ಅಂತಹ ನೆಲಸುಗಳು. ಇವುಗಳನ್ನು ಕೆಲವು ವರ್ಗಗಳಾಗಿ ಬೇರ್ಪಡಿಸಬಹುದು :

(i) ಆಡಳಿತದಲ್ಲಿ ಪ್ರತಿನಿಧಿಗಳು ಸೇರಿದ ಶಾಸಕ ಸಭೆಯನ್ನು ಪಡೆದು ಸ್ವಾತಂತ್ರ್ಯವನ್ನು ತಕ್ಕಮಟ್ಟಿಗೆ ಪಡೆದಿರತಕ್ಕವು.

(ii) ಪ್ರತಿಷ್ಠಿತರಾದ ಸಭಿಕರಿಂದ ಕೂಡಿದ ಶಾಸಕ ಸಭೆಯನ್ನು ಹೊಂದಿ ಸ್ವಾತಂತ್ರ್ಯವನ್ನು ನೋಡಲು ಮಾಡಿರತಕ್ಕವು.

(iii) ಶಾಸಕ ಸಭೆಯೇ ಇಲ್ಲದೆ ಇರತಕ್ಕವು.

5. **ಆಶ್ರಿತ ರಾಷ್ಟ್ರಗಳು** (Protectorates). ಇವು ಪೂರ್ವದಲ್ಲಿ ಸ್ವತಂತ್ರಗಳಾಗಿದ್ದು ಬ್ರಿಟಿಷರ ಅಧೀನವಾಗಿ ಅವರ ಆಶ್ರಯದಲ್ಲಿಯೇ ಇದ್ದುಕೊಂಡು ಅನ್ಯರಾಷ್ಟ್ರ ಸಂಬಂಧ ಮುಂತಾದ ಮುಖ್ಯಾಂಶಗಳಲ್ಲಿ ಬ್ರಿಟಿಷರ ವಶವಾಗಿರತಕ್ಕವು. ಮಿಶ್ರದೇಶ (Egypt), ಇರಾಕ್ (Iraq) ಇವಕ್ಕೆ ಉದಾಹರಣೆಗಳು.

6. **ಸ್ವೀಕೃತ ಕ್ಷೇತ್ರ** ಅಥವಾ **ದತ್ತಭುಕ್ತಿ** (Mandated Territories) ಗಳೆಂದು ಕರೆಯುಬಹುದಾದ ಭೂಭಾಗಗಳು. 1914ರಿಂದ

1918ರ ವರೆಗೆ ನಡೆದ ಘೋರ ಯುದ್ಧದ ತರುವಾಯ ಬ್ರಿಟಿಷರ ಪಾಲಿಗೆ ದೊರಕಿದ ಕ್ಷೇತ್ರಗಳಿಗೆ ಈ ಹೆಸರಿದೆ.

ಬ್ರಿಟಿಷ್ ಬಾಹುಳ್ಯ

ಇವುಗಳೆಲ್ಲೆಲ್ಲ ಬ್ರಿಟಿಷ್ ಜನರ ಸಂಖ್ಯೆ ಹೆಚ್ಚಾಗಿರುವುದು ಸಂಯುಕ್ತ ರಾಜ್ಯ ಮತ್ತು ಡುಮಿನಿಯನ್ನುಗಳಲ್ಲಿ; ಇತರ ಭಾಗಗಳಲ್ಲಿ ಬ್ರಿಟಿಷರ ಸಂಖ್ಯೆ ಅತ್ಯಲ್ಪ. ಭರತ ವರ್ಷದಲ್ಲಿರುವ ಬ್ರಿಟಿಷರ ಸಂಖ್ಯೆ 3 ಲಕ್ಷಗಳಿಗಿಂತ ಸ್ವಲ್ಪ ಹೆಚ್ಚು. ಈ ಆರು ವರ್ಗಗಳಲ್ಲಿ ಅಗ್ರಸ್ಥಾನವು ಸಂಯುಕ್ತ ರಾಜ್ಯಕ್ಕಿದ್ದರೂ ಡುಮಿನಿಯನ್ನುಗಳ ಸ್ಥಾನ ಗೌರವಗಳು ವಿಶಿಷ್ಟವಾದವು. ಭರತವರ್ಷವು ಸಾಮ್ರಾಜ್ಯವೆಂಬ ಹೆಸರಿನಿಂದ ತಾನೇ ಒಂದು ವರ್ಗವಾಗಿರುವುದು. ಡುಮಿನಿಯನ್ನುಗಳ ಪದವಿಗೂ ಇತರ ಭಾಗಗಳ ಪದವಿಗೂ ಇರುವ ಭೇದವನ್ನು ತಿಳಿಯಬೇಕಾದರೆ ನಾವು ರಾಷ್ಟ್ರಬಂಧದ ಮತ್ತು ರಾಷ್ಟ್ರನೀತಿಯ ವಿವರವನ್ನು ತಕ್ಕಮಟ್ಟಿಗೆ ತಿಳಿಯಬೇಕು. ಸಂಯುಕ್ತ ರಾಜ್ಯದ ವಿವರವನ್ನೇ ಮೊದಲು ತಿಳಿಯಲು ಪ್ರಯತ್ನಿಸುವುದು ಉತ್ತಮ; ಏಕೆಂದರೆ, ಅಲ್ಲಿಯ ಪ್ರಭುತ್ವವೇ ಶ್ರೇಷ್ಠವೆನಿಸಿರುವುದಲ್ಲದೆ ರಚನೆಯಲ್ಲಿ ಆದರ್ಶಪ್ರಾಯವಾದುದೆಂದೂ ಹೆಸರಾಗಿದೆ. ಬ್ರಿಟಿಷ್ ಸಮುದಾಯದಲ್ಲಿ ಸೇರಿದ ರಾಷ್ಟ್ರಗಳೇ ಅಲ್ಲದೆ ಹೊರಗಿರುವ ರಾಷ್ಟ್ರಗಳೂ ಕೂಡ ತಮ್ಮ ರಾಷ್ಟ್ರಸ್ವರೂಪವನ್ನು ಆ ಆದರ್ಶವನ್ನು ಸ್ಮರಿಸಿಯೇ ತಿದ್ದಲು ಯತ್ನಶೀಲಗಳಾಗಿವೆ.

## ಸಂಯುಕ್ತ ರಾಜ್ಯ

ಸಂಯುಕ್ತ ರಾಜ್ಯದಲ್ಲಿ ಪ್ರಭು ಅಥವಾ ಸ್ವಾಮಿ (Sovereign) ಯೆನಿಸಿ ಆಳಲು ದೊರೆಯಿರುವನು. ಆತನನ್ನು ರಾಷ್ಟ್ರಮೂರ್ತಿಯೆಂದು ಗೌರವಿಸಿದಾಗ್ಯೂ ಆತನಿಗೆ ಗೌರವವುಂಟು, ಅಧಿಕಾರವು ತೀರ ಕಡಿಮೆ. ಈ ಕಾರಣದಿಂದ ಆ ರಾಜತ್ವಕ್ಕೆ ಸಾಂಕುಶ ರಾಜತ್ವ (Limited Monarchy) ವೆಂಬ ಹೆಸರು ರೂಢಿಯಲ್ಲಿದೆ. ದೊರೆಯ ಹೆಸರಿನಲ್ಲಿ ಆಳುತ್ತ ಅಧಿಕಾರದಿಂದ ಕೂಡಿರತಕ್ಕವರು ಅಲ್ಲಿಯ ಮಂತ್ರಿಗಳು; ಅವರ ಕೂಟ ಅಥವಾ ಮಂತ್ರಿಮಂಡಲಿಯೇ (Cabinet) ರಾಜ್ಯಭಾರವನ್ನು ವಾಸ್ತವವಾಗಿ ನಿರ್ವಹಿಸತಕ್ಕದ್ದು.

**ಪಾರ್ಲಿಮೆಂಟ್**

ಸಂಯುಕ್ತ ರಾಜ್ಯದ ಜನರು ಇತರ ದೇಶಗಳ ಜನರಂತೆಯೇ ನಗರಗಳಲ್ಲಿಯೂ ಗ್ರಾಮಗಳಲ್ಲಿಯೂ ವಾಸಮಾಡುತ್ತಾರೆ. ಆದರೆ ಅವರಲ್ಲಿ ನಗರಗಳೇ ಹೆಚ್ಚು, ಗ್ರಾಮಗಳೆಂಬವು ಕಡಿಮೆ; ಆದುದರಿಂದಲೇ ಅವರಲ್ಲಿ ಸಭ್ಯತೆಗೆ ನಾಗರಿಕತೆಯೆಂಬ ಶಬ್ದವು ಒಳಕೆಯಾಗಿರುವುದು. ಅವರ ಒಟ್ಟು ಸಂಖ್ಯೆ ಸುಮಾರು 4½ ಕೋಟಿಯಷ್ಟು. ಇಷ್ಟು ಜನರಲ್ಲಿಯೂ ವಯಸ್ಕರಾದ ಎರಡು ಕೋಟಿಗಳಿಗೆ ಮೇಲ್ಪಟ್ಟ ಸಂಖ್ಯೆಯುಳ್ಳವರು ತಮ್ಮ ಸಂಖ್ಯಾಬಲಕ್ಕೆ ತಕ್ಕಂತೆ ಪ್ರತಿನಿಧಿಗಳನ್ನು ಆರಿಸುವರು. ಆ ಪ್ರತಿನಿಧಿಗಳೆಲ್ಲರೂ ಲಂಡನ್ನಿನಲ್ಲಿ **ಕಾಮನ್ಸ್ ಸಭೆ** (House of Commons) ಯೆಂಬ ಸಭೆಯಲ್ಲಿ ನೆರೆಯುವರು. ಅಲ್ಲಿ ಸೇರುವ 600–700 ಸಭಿಕರು ಚರ್ಚೆಗಳನ್ನು ಕ್ರಮವಾಗಿ ನಡೆಸಿ ರಾಜ್ಯಭಾರದ ವಿಷಯಗಳಲ್ಲಿ ಬಹುಸಂಖ್ಯಾಕರ ಅಭಿಮತದಂತೆ ನಿಶ್ಚಯಮಾಡುತ್ತಾರೆ. ಅವರ ನಿಶ್ಚಯಗಳೇ ಶಾಸನದ ವಿಧಿಗಳು ಅಥವಾ ಕಾನೂನು, ನಿಬಂಧನೆಗಳಾಗಿ ಪರಿಣಮಿಸುವುವು. ಕಾಮನ್ಸ್ ಸಭೆಯಲ್ಲದೆ **ಲಾರ್ಡ್ಸ್ ಸಭೆ** (House of Lords) ಯೆಂಬ ಶ್ರೀಮಂತರ ಸಭೆಯೊಂದುಂಟು; ಅದರಲ್ಲಿಯೂ ಸುಮಾರು 700 ಸಭಿಕರಿರುತ್ತಾರೆ. ಈ ಎರಡು ಸಭೆಗಳಿಗೂ ಒಟ್ಟಿಗೆ **ಪಾರ್ಲಿಮೆಂಟ್** (Parliament) ಎಂಬ ಹೆಸರು ಸಲ್ಲುತ್ತದೆ; ಈ ಪಾರ್ಲಿಮೆಂಟೆಂಬುದೇ ರಾಷ್ಟ್ರದಲ್ಲಿ **ಶಾಸಕಾಂಗ** ಅಥವಾ ಆಡಳಿತದ ವಿಧಿಗಳನ್ನು ನಿರ್ಣಯಿಸತಕ್ಕ ಅಂಗ. ಪಾರ್ಲಿಮೆಂಟಿನಲ್ಲಿ ಕಾಮನ್ಸ್ ಸಭೆಗೇ ಹೆಚ್ಚಿನ ಅಧಿಕಾರವಿರುವುದು; ಶ್ರೀಮಂತ ಸಭೆಯವರು ವಿಷಯಗಳ ಇತ್ಯರ್ಥದಲ್ಲಿ ವಿಳಂಬವನ್ನುಂಟುಮಾಡಬಹುದು, ಹೆಚ್ಚಿನ ಅಧಿಕಾರವೇನನ್ನೂ ಪಡೆದಿಲ್ಲ.

**ಪಾರ್ಲಿಮೆಂಟಿನ ಅಧಿಕಾರ**

ಪಾರ್ಲಿಮೆಂಟು ಸಭೆಗಳು ಬೇರೆ ಬೇರೆಯಾಗಿ ನೆರೆದರೂ ಏಕಕಾಲದಲ್ಲಿಯೇ ವರ್ಷದಲ್ಲಿ ಸಾಮಾನ್ಯವಾಗಿ ಎರಡುಬಾರಿ ಲಂಡನ್ ನಗರದಲ್ಲಿ ಸೇರಿ, ಕನಿಷ್ಠಪಕ್ಷ ಆರು ತಿಂಗಳ ಕಾಲ ವಿಷಯ ವಿಮರ್ಶೆಯನ್ನೂ ನಿರ್ದೇಶನವನ್ನೂ ಮಾಡುತ್ತಲಿರುವುವು. ಕಾನೂನುಗಳು, ವಿಧಿಗಳು, ನಿಬಂಧನೆಗಳು, ಕಟ್ಟಳೆಗಳು ಎಂದು ನಾವು ಕರೆಯುವ ಶಾಸನಗಳೆಲ್ಲವೂ

ರಚನೆಯಾಗುವುದು ಅಲ್ಲಿಯೇ. ಅಲ್ಲಿ ನಿರ್ಣೀತವಾದ ಶಾಸನಗಳನ್ನು ಅಧಿಕಾರವರ್ಗದವರೂ ಪಾಲಿಸಬೇಕು, ಪ್ರಜಾಸಮೂಹದವರೂ ಪಾಲಿಸಬೇಕು. ಆಡಳಿತದಲ್ಲಿ ಏನೇನು ನಡೆಯಬೇಕು, ಹೇಗೆ ನಡೆಯಬೇಕು, ಯಾವಾಗ ನಡೆಯಬೇಕು ಎಂಬುದನ್ನು ಪಾರ್ಲಿಮೆಂಟೇ ನಿರ್ಧರಿಸಬೇಕು. ವರ್ಷೇವರ್ಷೇ ಸರಕಾರದವರು ತೆರಿಗೆ ಸುಂಕಗಳನ್ನು ಎತ್ತುವ ರೀತಿಯನ್ನೂ, ಹಾಗೆ ಬಂದ ಆದಾಯವನ್ನು ವೆಚ್ಚಗೊಳಿಸುವ ರೀತಿಯನ್ನೂ ನಿಷ್ಕರ್ಷೆಮಾಡತಕ್ಕವರು ಪಾರ್ಲಿಮೆಂಟಿನಲ್ಲಿ ನೆರೆಯುವ ಪ್ರತಿನಿಧಿಗಳೇ. ಅವರ ಅನುಮತಿಯಿಲ್ಲದೆ ಒಂದು ಕವಡೆಯನ್ನು ಕೂಡ ಸರಕಾರದ ಅಧಿಕಾರಿಗಳು ಎತ್ತಲಾರರು, ವೆಚ್ಚವನ್ನೂ ಮಾಡಲಾರರು. ಕೋಶಾಧಿಕಾರದ ಮೂಲವೇ ಪಾರ್ಲಿಮೆಂಟಿನಲ್ಲಿ ಭದ್ರಗೊಂಡಿರುವುದರಿಂದ ಪಾರ್ಲಿಮೆಂಟೆಂಬುದು ರಾಷ್ಟ್ರದಲ್ಲಿ ಪ್ರಬಲವಾದುದು.

**ಮಂತ್ರಿ ಮಂಡಲಿ**

ಇನ್ನು ನಿಜವಾಗಿ ಆಳತಕ್ಕವರಾದ ಮಂತ್ರಿಮಂಡಲಿಯವರು ಯಾರು? ಅವರಿಗೂ ಪಾರ್ಲಿಮೆಂಟಿಗೂ ಇರುವ ಸಂಬಂಧವೇನು? ಮಂತ್ರಿಗಳಾಗುವವರೆಲ್ಲರೂ ಪಾರ್ಲಿಮೆಂಟಿನ ಸಭಿಕರೇ. ಕೆಲಕಾಲ ಅಲ್ಲಿಯ ರಾಜರು ತಮ್ಮ ಇಷ್ಟದಂತೆ ಮಂತ್ರಿಗಳನ್ನು ನಿಯಮಿಸುತ್ತಿದ್ದರು; ಅವರಿಗೂ ಪಾರ್ಲಿಮೆಂಟಿಗೂ ವಿರೋಧ ತೋರಿದಾಗ ಕಾರ್ಯನಿರ್ವಾಹವೇ ನಿಂತುಹೋಗುವ ಹಾಗಾಯಿತು. ಪಾರ್ಲಿಮೆಂಟಿನಲ್ಲಿ ಮುಂದರೆಸಿ ಪ್ರತಿನಿಧಿಗಳ ವಿಶ್ವಾಸಕ್ಕೆ ಪಾತ್ರರಾಗಿದ್ದವರನ್ನೇ ಮಂತ್ರಿಗಳಾಗಿ ನಿಯಮಿಸಿಕೊಂಡಲ್ಲಿ ಅನೇಕ ತೊಂದರೆಗಳು ತಪ್ಪೀತೆಂದು ಅಲ್ಲಿಯ ರಾಜರು ಆಲೋಚಿಸಿ ಮಂತ್ರಿಪದವಿಯನ್ನು ಪ್ರತಿನಿಧಿಗಳ ನಾಯಕರಿಗೇ ಕೊಡಿಸುತ್ತ ಬಂದರು; ಅದೇ ಒಂದು ಸಂಪ್ರದಾಯವಾಗಿ ಬೆಳೆದು ದೃಢಪಟ್ಟಿತು. ಪ್ರತಿನಿಧಿಗಳ ನಾಯಕರೇ ಮಂತ್ರಿಗಳಾಗಿ ನಿಯಮಿತರಾಗುವರು.

**ಕ್ಯಾಬಿನೆಟ್**

ಇದರಿಂದ ನಡೆಯುತ್ತಿರುವ ಪರಿಣಾಮವು ಒಂದು ಬಗೆಯ ಕೌತುಕ. ಪಾರ್ಲಿಮೆಂಟಿನಲ್ಲಿ ಅಥವಾ ಶಾಸಕಾಂಗದಲ್ಲಿ ಪ್ರಮುಖರಾದವರೇ ಮಂತ್ರಿಮಂಡಲಿಯವರಾಗಿ ಆಡಳಿತದ ಶಾಖೆಗಳನ್ನು ತಮ್ಮ ಅಂಕೆಯಲ್ಲಿಟ್ಟುಕೊಂಡು ಅಲ್ಲಿಯ ಅಧಿಕಾರಿವರ್ಗದವರ ರೀತಿಯನ್ನೂ ಕರ್ತವ್ಯ

ಭಾಗವನ್ನೂ ತಾವೇ ನಿರ್ದೇಶಮಾಡಿ ರಾಜನ ಹೆಸರಿನಲ್ಲಿ ಅವರಿಗೆ ಆಜ್ಞೆ ಗಳನ್ನು ಕೊಡಿಸುವರು. ಶಾಸಕಾಂಗದ ಪ್ರಮುಖರಾದವರೇ ಕಾರ್ಯ ನಿರ್ವಾಹಕರನ್ನು ಅಥವಾ ಕಾರ್ಯಾಂಗವನ್ನು ನಡೆಸುವರು. ಇದೇ ಕ್ಯಾಬಿನೆಟ್ ಪಿಸ್ತೆಂಡು (Cabinet System) ಪ್ರಸಿದ್ಧವಾಗಿರುವುದು. ಈ ಕ್ರಮವನ್ನು ಅನುಸರಿಸುವುದರಲ್ಲಿ ಜನಸ್ತೋಮದ ಬಹು ಭಾಗದ ವರಿಗೆ ಯಾರು ಅತ್ಯಂತ ವಿಶ್ವಾಸ ಯೋಗ್ಯನೆನಿಸುವನೋ ಆ ಪ್ರತಿನಿಧಿಯೇ ಶಾಸಕಾಂಗ, ಕಾರ್ಯಾಂಗಗಳೆಂಬ ಎರಡು ರಾಷ್ಟ್ರಾಂಗಗಳಿಗೂ ನಾಯಕ ನಾಗಿ, ಜನರ ವಿಶ್ವಾಸ ಕುಗ್ಗದಂತೆ ನಡೆದಷ್ಟು ಕಾಲ ವಾಸ್ತವವಾದ ಪ್ರಭುವಾಗಿರುವನು. ಕಿರೀಟವನ್ನು ಧರಿಸಿ ಗೌರವಮೂರ್ತಿಯಾದ ರಾಜನು ಹೆಸರಿಗೆ ಪ್ರಭು; ಆಚರಣೆಯಲ್ಲಿ ಪ್ರಭುವಾದಾತನು ಮಂತ್ರಿ ಮಂಡಲಿಗೆ ಅಗ್ರೇಸರನಾದ **ಪ್ರಧಾನ** (Premier, Prime Minister).

ಬಹುಪಕ್ಷ ಪ್ರಾಬಲ್ಯ

ಪಾರ್ಲಿಮೆಂಟಿಗೆ ಶಾಸನ ನಿರ್ದೇಶದಲ್ಲಿಯೂ ಆಯವ್ಯಯಗಳ ನೀತಿ ಯಲ್ಲಿಯೂ ಪೂರ್ಣವಾದ ಅಧಿಕಾರವಿರುವುದಲ್ಲದೆ ಕಾರ್ಯಾಂಗವೆಂದೆಣಿಕೆಯಾಗತಕ್ಕ ಅಧಿಕಾರಿವರ್ಗದ ಮೇಲೆಯೂ ಪೂರ್ಣಾಧಿಕಾರವುಂಟು. ಮಂತ್ರಿ ಗಳ ಆಜ್ಞೆಯಿಲ್ಲದೆ ಅಧಿಕಾರಿಗಳು ವರ್ತಿಸಲಾರರು; ಆದ್ದರಿಂದ ಪಾರ್ಲಿ ಮೆಂಟಿನ ಬಹು ಭಾಗದವರಿಗೆ ಇಷ್ಟವಿಲ್ಲದ ಕೆಲಸಕಾರ್ಯಗಳು ನಡೆದ ಸಂದರ್ಭಗಳಲ್ಲಿ ಅಸಮಾಧಾನಪಡುವ ಸಭಿಕರು ಮಂತ್ರಿಗಳಿಗೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸುವರು. ಅಸಮಾಧಾನಕ್ಕೆಡೆಗೊಟ್ಟ ಕೂಡಲೇ ತನ್ನ ಆಧಾರಬಲವೇ ನಷ್ಟವಾದೀತೆಂದು ಪ್ರತಿ ಮಂತ್ರಿಗೂ ಗೊತ್ತು; ಆದ್ದರಿಂದ ಮಂತ್ರಿಗಳಾದವರು ಪಾರ್ಲಿಮೆಂಟಿನ ಸಭಿಕರನ್ನು ಮೆಚ್ಚಿಸಬೇಕೆಂತಲೇ ಸರ್ವದಾ ಇರುತ್ತಾರೆ. ಒಂದು ವೇಳೆ ಮಂತ್ರಿ ಗಳಾದವರು ಪಾರ್ಲಿಮೆಂಟಿನ ಇಷ್ಟಾನಿಷ್ಟಗಳನ್ನು ಲಕ್ಷ್ಯಮಾಡದೆ ಪ್ರವರ್ತಿಸಿದಲ್ಲಿ ದ್ರೋಹಿಗಳೆನಿಸಿ ಪಾರ್ಲಿಮೆಂಟಿನವರ ಆಗ್ರಹಕ್ಕೆ ಗುರಿಯಾಗು ವರು. ಅಂತಹ ಸಂದರ್ಭಗಳಲ್ಲಿ ಮಂತ್ರಿಗಳ ಮೇಲೆ ಪಾರ್ಲಿಮೆಂಟಿನವರು ಅಪರಾಧವನ್ನು ಹೊರಿಸಿ ವಿಚಾರಣೆಗೆ ಗುರಿಮಾಡಿ ಮರಣಾಂತ ಶಿಕ್ಷೆ ಯನ್ನು ಕೊಡಿಸಿದುದುಂಟು. ಆದ್ದರಿಂದ ತಾವು ಮಾಡತಕ್ಕ ಕೆಲಸಕ್ಕೆ

ಯಾವಾಗ ಪಾರ್ಲಿಮೆಂಟಿನ ಬಹುಮತದ ಬೆಂಬಲವಿರುವುದಿಲ್ಲವೋ ಆ ಕ್ಷಣವೇ ಮಂತ್ರಿಮಂಡಲಿಯವರು ತಮ್ಮ ಪದವಿಗಳಿಗೆ ರಾಜೀನಾಮೆ ಕೊಟ್ಟುಬಿಡುವರು. ಜನರ ವಿಶ್ವಾಸವಿರುವವರಿಗೆ ಮಾತ್ರ ಅವರಿಗೆ ಅಧಿಕಾರ; ವಿಶ್ವಾಸ ತಗ್ಗಿದ ಕೂಡಲೇ ಅವರು ತಾವಾಗಿಯೇ ಅಧಿಕಾರ ನಿವೃತ್ತರಾಗುವರು. ಆಗ ದೊರೆಯು ಪಾರ್ಲಿಮೆಂಟಿನಲ್ಲಿ ಬೇರೆ ಯಾರು ನಾಯಕರಾಗಿರಬಹುದೋ ಅವರನ್ನು ಕರೆಸಿ ಮಂತ್ರಿಪದವಿಯನ್ನು ಕೊಡಿಸುವನು. ಬಹುಮತದ ಬೆಂಬಲವಿದ್ದ ನಾಯಕರಾರೂ ಕಾಣದಿದ್ದರೆ ದೊರೆಯು ಪಾರ್ಲಿಮೆಂಟು ಸಭೆಯನ್ನು ರದ್ದುಪಡಿಸಿ, ಹೊಸದಾಗಿ ಎಲ್ಲೆಡೆಗಳಲ್ಲಿಯೂ ಪ್ರತಿನಿಧಿಗಳ ವರಣವಾಗತಕ್ಕದ್ದೆಂದು ರಾಜಾಜ್ಞೆಯನ್ನು ಸಾರುವನು. ಹೊಸ ವರಣಗಳಾಗಿ ಸಿದ್ಧರಾದವರಲ್ಲಿ ಬಹುಮತದ ಬೆಂಬಲವುಳ್ಳವರನ್ನು ಮಂತ್ರಿಗಳಾಗಿ ದೊರೆಯು ಸಂಪ್ರದಾಯಬದ್ಧನಾಗಿ ನಿಯೋಗಿಸುವನು. ಶಾಸಕಾಂಗಕ್ಕೆ ನಾಯಕರಾದವರು ಮಂತ್ರಿಗಳಾಗಿ ಅಧಿಕಾರಿವರ್ಗದವರಿಗೆ ಆಜ್ಞೆಗಳನ್ನು ಕೊಡಲಾರಂಭಿಸುವರು. ಈ ರೀತಿಯಲ್ಲಿ ಮಂತ್ರಿಮಂಡಲಿಗಳ ಅಧಿಕಾರ ಪ್ರವೃತ್ತಿ ನಿವೃತ್ತಿಗಳು ನೆರವೇರುತ್ತಲಿರುತ್ತವೆ.

**ಕಾರ್ಯಾಂಗ ಶಾಸಕಾಂಗಗಳು**

ಈ ವ್ಯವಸ್ಥೆಯಲ್ಲಿ ಮುಖ್ಯವಾಗಿ ನಾವು ಗಮನಿಸಬೇಕಾದ ಲಕ್ಷಣಗಳು ಇವು. ಪಾರ್ಲಿಮೆಂಟಿನಲ್ಲಿ ಪ್ರತಿನಿಧಿಸಭೆಗೇ ಪೂರ್ಣಾಧಿಕಾರವಿರುವುದು; ಆ ಸಭೆಯಲ್ಲಿ ಸಭಿಕರೆಲ್ಲರೂ ಜನವೃತರಾದವರೇ ಆಗಿರುವರು. ಆ ಸಭೆಯೇ ರಾಷ್ಟ್ರಕ್ಕೆ ಶಾಸಕಾಂಗ; ಅದಕ್ಕೇ ಶಾಸನ ನಿರ್ಣಯ, ಆಯವ್ಯಯ ನೀತಿ ಮತ್ತು ರಾಷ್ಟ್ರಮುಖ್ಯರ ಅಥವಾ ಕಾರ್ಯಾಂಗ ಪ್ರಮುಖರ ನಿಯೋಜನೆಗಳಲ್ಲಿ ಸಮಸ್ತಾಧಿಕಾರವೂ ಸೇರಿರುವುದು. ಕಾರ್ಯಾಂಗವು ಶಾಸಕಾಂಗಕ್ಕೆ ಅಧೀನ. ಜನಮುಖ್ಯರೇ ಮಂತ್ರಿಗಳಾಗಿ ಕಾರ್ಯಾಂಗವನ್ನು ನಡೆಸತಕ್ಕವರು. ಮಂತ್ರಿಮಂಡಲಿಯವರು ಏಕ ಮತವುಳ್ಳವರಾಗಿ ಒಟ್ಟಾಗಿ ಏಕಮುಖವಾಗಿ ಅಧಿಕಾರ ನಿರತರಾಗುವುದಲ್ಲದೆ ಒಟ್ಟಾಗಿಯೇ ಅಧಿಕಾರ ವಿರತರೂ ಆಗುತ್ತಾರೆ.

**ನ್ಯಾಯಾಂಗ**

ರಾಷ್ಟ್ರದಲ್ಲಿ ಶಾಸಕಾಂಗ ಕಾರ್ಯಾಂಗಗಳಲ್ಲದೆ ನ್ಯಾಯಾಂಗವೆಂದು ಕರೆಯಬಹುದಾದ ಮೂರನೆಯ ಅಂಗವೂ ಮುಖ್ಯವಾದುದು. ನ್ಯಾಯ ತೀರ್ಮಾನವನ್ನು ಮಾಡತಕ್ಕ ನ್ಯಾಯಾಧಿಕಾರಿಗಳೆಲ್ಲರೂ ಆ ಅಂಗದವರು. ಸಂಯುಕ್ತ ರಾಜ್ಯದಲ್ಲಿ ನ್ಯಾಯಮೂರ್ತಿಯೆನಿಸಿದ ದೊರೆಯೇ ನ್ಯಾಯಾಧಿಕಾರಿಗಳನ್ನು ನಿಯೋಗಿಸುವಾತನು; ಆದರೆ ನಿಯುಕ್ತರಾದವರನ್ನು ಕೆಲಸದಿಂದ ತಪ್ಪಿಸಲು ಆತನಿಗೆ ಅಧಿಕಾರವಿಲ್ಲ. ಒಂದುಸಲ ನ್ಯಾಯಾಧಿಕಾರಿಯಾದಾತನು ಜೀವಂತನಾಗಿರುವವರೆಗೂ ಆ ಅಧಿಕಾರವನ್ನು ನಿರ್ವಹಿಸುತ್ತಲಿರಬಹುದು. ನಿರ್ಭೀತರಾಗಿ ನ್ಯಾಯಸ್ಥಾಪನೆ ಮಾಡಿ ನ್ಯಾಯಸ್ಥಿತಿಯನ್ನು ಕಾಪಾಡುವ ಕಾರ್ಯದಲ್ಲಿ ನ್ಯಾಯಾಧಿಕಾರಿಗಳು ನಿರತರಾಗಿರಬೇಕೆಂಬುದೇ ಈ ಸಂಪ್ರದಾಯದ ಉದ್ದೇಶ. ಹಿಂದೆ ರಾಜನಿಗೆ ಅಧೀನರಾಗಿದ್ದ ನ್ಯಾಯಾಧಿಪತಿಗಳು ನ್ಯಾಯವನ್ನವಲಂಬಿಸದೆ ರಾಜನ ಇಷ್ಟದಂತೆ ತೀರ್ಪುಗಳನ್ನು ಕೊಟ್ಟ ಕಾರಣದಿಂದ ಈ ತತ್ತ್ವವು ರಾಷ್ಟ್ರಬಂಧದಲ್ಲಿ ಒಂದು ಪ್ರಧಾನ ತತ್ತ್ವವಾಯಿತು. ಅಸಾಧಾರಣ ಸಂದರ್ಭವೊದಗಿದಾಗ ಮಾತ್ರ— ನ್ಯಾಯಾಧಿಕಾರ ನಿಯುಕ್ತನಾದವನು ಉನ್ಮತ್ತನೋ ನೀಚನೋ ಆದಾಗ— ಪಾರ್ಲಿಮೆಂಟಿನ ಎರಡು ಸಭೆಗಳವರೂ ಸೇರಿ ಆತನನ್ನು ಕೆಲಸದಿಂದ ತೆಗೆಯಬೇಕೆಂದು ದೊರೆಗೆ ಬಿನ್ನಹ ಮಾಡಬಹುದು; ಆಗ ಮಾತ್ರ ದೊರೆಯು ಆತನನ್ನು ಅಧಿಕಾರದಿಂದ ತಪ್ಪಿಸಬಹುದು.

**ರಾಷ್ಟ್ರಬಂಧದ ಮೂಲತತ್ತ್ವಗಳು**

ಈ ರೀತಿಯಲ್ಲಿ ಸಂಯುಕ್ತ ರಾಜ್ಯದ ಜನರು ತಮ್ಮ ರಾಷ್ಟ್ರದ ಆಡಳಿತವನ್ನು ತಾವೇ ವಹಿಸಿ ನಡೆಸುತ್ತಾರೆ. ಶಾಸಕಾಂಗವು ಶಾಸನ ತತ್ತ್ವಗಳನ್ನು ನಿರ್ದೇಶಮಾಡಿ ವಿಧಿಗಳನ್ನು ಸಾರಿ ಕಾರ್ಯಾಂಗಕ್ಕೆ ಕಾರ್ಯ ನಿಷ್ಕರ್ಷೆಯನ್ನು ತೋರಿಕೊಡುತ್ತದೆ. ಕಾರ್ಯಾಂಗವು ಜನರ ಅಭಿಮತದಂತೆ ವರ್ತಿಸುತ್ತ ಶಾಸಕಾಂಗಕ್ಕೆ ಉತ್ತರವಾದಿಯಾಗಿರುತ್ತದೆ. ಕಾರ್ಯಾಂಗ ಶಾಸಕಾಂಗಗಳೆರಡೂ ಜನಮುಖ್ಯರ ನೇತೃತ್ವದಲ್ಲಿರುತ್ತವೆ; ನ್ಯಾಯಾಂಗವು ಸ್ವತಂತ್ರವಾಗಿ ನಿರ್ಭಯದಿಂದಲೂ

ನಿರ್ದಾಕ್ಷಿಣ್ಯದಿಂದಲೂ ನ್ಯಾಯವನ್ನು ಕಾಪಾಡುತ್ತದೆ. ಈ ತತ್ವಗಳೇ ಜನತೆಯ ಸ್ವಾಮ್ಯವನ್ನೂ ಪ್ರಾತಿನಿಧ್ಯವನ್ನೂ ಆಧಾರವಾಗಿ ಪಡೆದ ರಾಷ್ಟ್ರಬಂಧದ ಮೂಲತತ್ವಗಳು.

ಮುಖ್ಯ ಮಂತ್ರಿಗಳು

ಕ್ಯಾಬಿನೆಟ್ ಅಥವಾ ಮಂತ್ರಿಮಂಡಲಿಯಲ್ಲಿ ಅನೇಕ ಮಂತ್ರಿಗಳಿರುತ್ತಾರೆ. ಅವರಲ್ಲಿ ಆರು ಜನರನ್ನು ನಾವು ನೆನಪಿನಲ್ಲಿಡಬೇಕು: (1) **ಪ್ರೈಮ್ ಮಿನಿಸ್ಟರ್** ಅಥವಾ **ಪ್ರಧಾನ,** (2) **ಕೋಶಾಧ್ಯಕ್ಷ** ಅಥವಾ **ಆಯವ್ಯಯದ ಸಚಿವ** (Chancellor of the Exchequer), (3) **ಅನ್ಯರಾಷ್ಟ್ರ ಸಂಬಂಧ ಸೂತ್ರಗಳನ್ನು ನಡೆಸತಕ್ಕ ಸಂಧಿವಿಗ್ರಹಿ** ಅಥವಾ **ಮಂತ್ರಿ** (Secretary of State for Foreign Affairs), (4) **ಭರತವರ್ಷದ ಕಾರ್ಯದರ್ಶಿ** (Secretary of State for India), (5) **ಡುಮಿನಿಯನ್ನುಗಳ ಕಾರ್ಯದರ್ಶಿ** (Secretary of State for Dominions), ಮತ್ತು (6) **ಕಾಲೊನಿಗಳ ಕಾರ್ಯದರ್ಶಿ** (Secretary of State for Colonies). ಡುಮಿನಿಯನ್ನೂ ಅಲ್ಲದೆ ಕಾಲೊನಿಯೂ ಅಲ್ಲದೆ ಅಧೀನಕ್ಷೇತ್ರವೆನಿಸಿರುವ ನಮ್ಮ ದೇಶವು ಪ್ರತ್ಯೇಕವಾಗಿಯೇ ಇದ್ದು ಒಬ್ಬ ಮಂತ್ರಿಯ ಆಡಳಿತದಲ್ಲಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ಕಾಲೊನಿಗಳ ಕಾರ್ಯದರ್ಶಿಯ ಸ್ವಾಧೀನದಲ್ಲಿಯೇ 4ನೇ ವರ್ಗದಲ್ಲಿ ಸೇರಿದ ಕಾಲೊನಿಗಳ ಆಡಳಿತವೆಲ್ಲವೂ ನಡೆಯುತ್ತದೆ. ಆಡಳಿತದ ಒಂದೆರಡು ಪಾಲನ್ನು ತಮ್ಮ ಸ್ವಾಧೀನಪಡಿಸಿಕೊಂಡಿದ್ದರೂ ಕೂಡ ಕಾಲೊನಿಗಳ ನಿವಾಸಿಗಳೆಲ್ಲರೂ ಈತನಿಗೆ ಅಧೀನರಾಗಿ ಈತನಿಂದ ನಿಯಮಿತರಾದ ಅಧಿಕಾರಿಗಳಿಗೊಳಗಾಗಿ ವರ್ತಿಸಬೇಕಾಗುತ್ತದೆ. ಅಂತಹ ಅಧಿಕಾರಿಗಳಲ್ಲಿ ಗವರ್ನರ್ (ಭೋಗಪತಿ) ಎಂಬಾತನು ಶ್ರೇಷ್ಠ; ಆತನ ತರುವಾಯ ಆಯಾ ಕಾಲೊನಿಯ ಪ್ರಮಾಣಕ್ಕೆ ತಕ್ಕಂತೆ ಇತರ ಅಧಿಕಾರಿಗಳೂ ಕಾರ್ಯದರ್ಶಿಯಿಂದಲೇ ನಿಯುಕ್ತರಾಗುತ್ತಾರೆ. ಮುಖ್ಯವಾದ ಕೆಲಸವಾವುದೂ ಕಾರ್ಯದರ್ಶಿಯ ಇಷ್ಟಕ್ಕೆ ವಿರುದ್ಧವಾಗಿ ನಡೆಯುವಹಾಗಿಲ್ಲ.

## ಡುಮಿನಿಯನ್ನುಗಳು

ಡುಮಿನಿಯನ್ನುಗಳೆಂಬ 2ನೇ ವರ್ಗದ ಭಾಗಗಳು ಚೀಫೊಬ್ಬ ಕಾರ್ಯದರ್ಶಿಯ ವಿಚಾರಣೆಗೊಳಗಾಗಿದ್ದರೂ ಆತನ ಅಧಿಕಾರಕ್ಕೆ ಒಳಗಾಗದೆ ಬಹು ಪಾಲು ಸ್ವತಂತ್ರವಾಗಿಯೇ ಇರುತ್ತವೆ. ಸಮುದಾಯ ಸಂಸ್ಥೆಯಲ್ಲಿ ಸಂಯುಕ್ತ ರಾಜ್ಯಕ್ಕೆ ಸಮಾನವಾದ ಪದವಿಯನ್ನೇ ತಾವೂ ಪಡೆದಿರಬೇಕೆಂದು ಡುಮಿನಿಯನ್ ನಿವಾಸಿಗಳ ಆಶಯ. ಅವುಗಳಿಗೆ 5 ವರ್ಷಗಳಿಗೊಂದಾವರ್ತಿ ಗವರ್ನರ್-ಜನರಲ್ ಎಂಬ ಭೋಗಾಧಿಪತಿಯನ್ನು ಕಾರ್ಯದರ್ಶಿಯು ನಿಯಮಿಸುವನು. ಆ ಭೋಗಾಧಿಪತಿಯು ತನ್ನ ಡುಮಿನಿಯನ್ನಿನಲ್ಲಿ ದೊರೆಯ ಪ್ರತಿನಿಧಿ ಸ್ವರೂಪನಾಗಿ, ಸಂಯುಕ್ತ ರಾಜ್ಯದಲ್ಲಿ ದೊರೆಯು ಹೇಗೋ ಹಾಗೆಯೇ ಮಂತ್ರಿಮಂಡಲಿಯನ್ನು ಪ್ರತಿನಿಧಿ ಪ್ರಮುಖರಿಂದ ನಿಯೋಗಿಸುತ್ತ ಗೌರವದಿಂದ ವರ್ತಿಸುವನು. ಕಾಲೊನಿಗಳಲ್ಲಿ ಅಧಿಕಾರ ನಿಯುಕ್ತರಾದವರು ಸಂಯುಕ್ತ ರಾಜ್ಯದವರೇ ಆಗಿರಬಹುದು; ಡುಮಿನಿಯನ್ನುಗಳಲ್ಲಿ ಭೋಗಾಧಿಪತಿಯೊಬ್ಬನೇ ಸಂಯುಕ್ತ ರಾಜ್ಯದಿಂದ ಬರತಕ್ಕವನು. ಪ್ರತಿ ಡುಮಿನಿಯನ್ನಿನಲ್ಲಿಯೂ ಎರಡು ಸಭೆಗಳು ಕೂಡಿದ ಪಾರ್ಲಿಮೆಂಟುಂಟು; ಕ್ಯಾಬಿನೆಟ್ ಸಂಪ್ರದಾಯವುಂಟು. ಡುಮಿನಿಯನ್ನುಗಳ ಜನಮುಖ್ಯರೇ ಮಂತ್ರಿ ಮಂಡಲಿಗಳಾಗಿ ಏರ್ಪಡುವರು; ತಮ್ಮ ರಾಷ್ಟ್ರದ ಆಡಳಿತವನ್ನು ತಾವೇ ವಹಿಸುವರು. ಕಾರ್ಯಾಂಗ ಶಾಸಕಾಂಗಗಳ ರಚನೆಯೂ ಪರಸ್ಪರ ಸಂಬಂಧಗಳೂ ಸಂಯುಕ್ತ ರಾಜ್ಯದಲ್ಲಿದ್ದಂತೆಯೇ ಇರುವುವು. ನ್ಯಾಯಾಂಗವೊಂದರಲ್ಲಿ ಮಾತ್ರ ಶ್ರೇಷ್ಠತಮವಾದ ನ್ಯಾಯಸಭೆಯು ಸಂಯುಕ್ತ ರಾಜ್ಯದಲ್ಲಿಯೇ ಸ್ಥಾಪಿತವಾಗಿರುವುದು. ಡುಮಿನಿಯನ್ನುಗಳ ರಾಷ್ಟ್ರದಾಯದಿಂದ ಸಂಯುಕ್ತ ರಾಜ್ಯಕ್ಕೆ ಎಂತಹ ಪಾಲೂ ಸಲ್ಲುವುದಿಲ್ಲ; ಡುಮಿನಿಯನ್ ಕಾರ್ಯದರ್ಶಿಯ ಸಂಬಳ ಸಾರಿಗೆಯನ್ನು ಸಂಯುಕ್ತ ರಾಜ್ಯದ ಆದಾಯದಿಂದಲೇ ಹುಟ್ಟಿಸಬೇಕು.

ಡುಮಿನಿಯನ್ನುಗಳು ಅನೇಕ ವಿಚಾರಗಳಲ್ಲಿ ಸ್ವತಂತ್ರವಾಗಿಯೇ ಇರುವ ಕ್ಷೇತ್ರಗಳು. ಸಾಮ್ರಾಜ್ಯಬಂಧದಲ್ಲಿ ಸೇರಿಕೊಂಡಿರುವುದರಿಂದ ಬ್ರಿಟಿಷರಲ್ಲದ ಇತರ ರಾಷ್ಟ್ರಗಳೊಡನೆ ನಡೆಸುವ ಸಂಬಂಧ ವ್ಯವಹಾರಗಳಲ್ಲಿ ಡುಮಿನಿಯನ್ನುಗಳು ಸ್ವತಂತ್ರವಾಗಿ ವರ್ತಿಸುವುದಿಲ್ಲ; ಒಟ್ಟು

ಸಮುದಾಯಕ್ಕೇ ಒಂದು ನೀತಿಯಿದ್ದು, ಒಟ್ಟು ಸಮುದಾಯದ ಅಭಿವೃದ್ಧಿಯೂ ಕೈಗೂಡಬೇಕೆಂಬ ಉದ್ದೇಶವುಂಟು. ಬ್ರಿಟಿಷರು ಇತರರೊಡನೆ ಯುದ್ಧವನ್ನೋ ಜಗಳವನ್ನೋ ನಡೆಸುವ ಸಂದರ್ಭಗಳಲ್ಲಿ ಸಂಯುಕ್ತ ರಾಜ್ಯದ ಮಂತ್ರಿಮಂಡಲಿಯವರು ಡುಮಿನಿಯನ್ನುಗಳ ಮಂತ್ರಿಪ್ರಧಾನರ ಸಮ್ಮತಿಯನ್ನೂ ಸಹಾನುಭೂತಿಯನ್ನೂ ಪಡೆಯದೆ ಹೆಜ್ಜೆ ಇಡಲಾರರು. ಕೆಲವಂಶಗಳಲ್ಲಿ ಮಾತ್ರ ಸಂಯುಕ್ತ ರಾಜ್ಯಕ್ಕೆ ಶ್ರೇಷ್ಠತೆಯನ್ನೊಪ್ಪಿಸಿ ಉಳಿದ ಬಹು ಅಂಶಗಳಲ್ಲಿ ಸ್ವತಂತ್ರರಾಗಿಯೇ ವರ್ತಿಸುತ್ತ ಸಮಾನ ಗೌರವದಿಂದ ಸಮುದಾಯ ಕೂಡಿರಬೇಕೆಂಬ ತತ್ವವು ತೋರಿಕೊಂಡ ಕಾಲದಿಂದ ಬ್ರಿಟಿಷ್ ಚಕ್ರಾಧಿಪತ್ಯವೆಂಬ ಹೆಸರು ಡುಮಿನಿಯನ್ನುಗಳಿಗೆ ಒಪ್ಪದಾಯಿತು. ಬ್ರಿಟಿಷ್ ಸಮುದಾಯ ರಾಷ್ಟ್ರವೆಂಬ ಹೆಸರು ರೂಢಿಯಾಯಿತು.

**ಸಮ್ಮೇಳನ**

ನಾಲ್ಕು ವರ್ಷಗಳಿಗೊಮ್ಮೆ **ಇಂಪೀರಿಯಲ್ ಕಾನ್‌ಫರೆನ್ಸ್** (Imperial Conference) ಎಂಬ ಸಮುದಾಯ ಸಮ್ಮೇಳನಗಳು ನಡೆಯುತ್ತವೆ. ಆ ಸಮ್ಮೇಳನಗಳಲ್ಲಿ ಡುಮಿನಿಯನ್ನುಗಳ ಪ್ರಧಾನರೂ, ಸಂಯುಕ್ತ ರಾಜ್ಯದ ಪ್ರಧಾನಿ ಮತ್ತು ಮಂತ್ರಿಗಳೂ ಸೇರಿ ಸಮುದಾಯಕ್ಕೆ ಸೇರಿದ ವಿಷಯಗಳನ್ನು ಪ್ರಸ್ತಾಪಿಸಿ ತೀರ್ಮಾನಮಾಡುತ್ತಾರೆ. ಇಂತಹ ಸಮ್ಮೇಳನಗಳಲ್ಲಿ ಕಾಲೊನಿಗಳ ಪರವಾಗಿ ಕಾಲೊನಿ ಕಾರ್ಯದರ್ಶಿಯೇ ವ್ಯವಹರಿಸುತ್ತಾನೆ. ಭರತವರ್ಷದ ಪರವಾಗಿ ಭರತವರ್ಷದ ಕಾರ್ಯದರ್ಶಿಯೂ ಆತನಿಂದ ನಿಯಮಿತರಾದವರೂ ಸಮ್ಮೇಳನಗಳಲ್ಲಿ ಭಾಗಿಗಳಾಗುತ್ತಾರೆ. ಬ್ರಿಟಿಷ್ ಸಮುದಾಯಬಂಧವನ್ನು ಕಾಪಾಡುವುದಕ್ಕೂ ಸಮುದಾಯ ಸೌಭಾಗ್ಯವನ್ನು ಸಾಧಿಸುವುದಕ್ಕೂ ಈ ಸಮ್ಮೇಳನಗಳು ಉಪಯುಕ್ತವಾಗಿರುತ್ತವೆ.

ಡುಮಿನಿಯನ್ನುಗಳು ಈ ರೀತಿ ಸ್ವತಂತ್ರಗಳಾಗಿದ್ದಾಗ್ಯೂ ಜನಬಾಹುಳ್ಯವಿರತಕ್ಕವಲ್ಲ. ಕೆನಡ, ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ ಭಾಗಗಳು ವಿಸ್ತೀರ್ಣವುಳ್ಳವಾದರೂ ಜನಸಂಖ್ಯೆಯಲ್ಲಿ ಬಲು ಕಡಿಮೆ. ಆರು ಡುಮಿನಿಯನ್ನುಗಳಲ್ಲಿ ದಕ್ಷಿಣ ಆಫ್ರಿಕವೊಂದು ವಿನಾ ಉಳಿದ ಐದರಲ್ಲಿ ಬಿಳಿಯರೇ

ಸಂಖ್ಯಾಪ್ರಬಲರು. ಕೆನಡದಲ್ಲಿ ಫರಾನ್ಸೀ ಜನರೂ ಬ್ರಿಟಿಷರೂ, ದಕ್ಷಿಣ ಆಫ್ರಿಕದಲ್ಲಿ ಡಚ್ಚರ ವಂಶೀಯರಾದ ಬೋಯರರೂ ಬ್ರಿಟಿಷರೂ ಇದ್ದಾರೆ. ಉಳಿದೆಡೆಗಳಲ್ಲಿ ಬಿಳಿಯರೆಲ್ಲರೂ ಬ್ರಿಟಿಷರೇ. ಡುಮಿನಿಯನ್ ರೂಪವೆತ್ತಿದುದು ಕಳೆದ ಶತಮಾನದಲ್ಲಿಯೇ. ಆಶ್ರಿತ ರಾಷ್ಟ್ರಗಳೂ ದತ್ತಭುಕ್ತಿಗಳೂ ಸಂಧಿವಿಗ್ರಹಿಯಾದ ಕ್ಯಾಬಿನೆಟ್ ಮಂತ್ರಿಯ ವಶದಲ್ಲಿರುತ್ತವೆ; ಅವುಗಳ ಜನಸ್ತೋಮಗಳಲ್ಲಿ ಬ್ರಿಟಿಷರ ಭಾಗವು ಸ್ವಲ್ಪವಾಗಿಯೇ ಇರುವುದು.

ಅವರ್ಣರು

ಸಮುದಾಯದ ಒಟ್ಟು ಜನಬಲದಲ್ಲಿ ಅವರ್ಣರ ಸಂಖ್ಯೆಯೇ ಪ್ರಬಲವಾಗಿರುವುದನ್ನು ಆಗಲೇ ಕಂಡೆವು. ಎಲ್ಲೆಲ್ಲಿ ಅವರ್ಣರು ಸಂಖ್ಯಾಪ್ರಬಲರೋ ಅಲ್ಲೆಲ್ಲ ವರ್ಣಭೇದದಿಂದ ಅನೇಕ ಸಮಸ್ಯೆಗಳು ತೋರುತ್ತಲಿರುತ್ತವೆ. ದಕ್ಷಿಣ ಆಫ್ರಿಕವೆಂಬ ಒಂದು ಡುಮಿನಿಯನ್ನಿನಲ್ಲಿ ಮಾತ್ರ ವರ್ಣಸಮಸ್ಯೆಯು ಕಷ್ಟಸಾಧ್ಯವಾಗಿದೆ; ಉಳಿದ ಡುಮಿನಿಯನ್ನುಗಳಲ್ಲಿ ಆ ಸಮಸ್ಯೆಯಿಲ್ಲ. ಈ ಸಮಸ್ಯೆಯು ಈ ಕಾಲದಲ್ಲಿ ಸರ್ವವ್ಯಾಪಿಯಾಗಿಯೇ ಇದೆ.

## ಲೀಗ್ ಆಫ್ ನೇಷನ್ಸ್

ಬ್ರಿಟಿಷ್ ಸಮುದಾಯವು ಪೃಥ್ವಿಯ ಕಾಲುಭಾಗ; ಅದರಲ್ಲಿ ನಮ್ಮ ದೇಶ ಒಂದು ಭಾಗ. ಆದಾಗ್ಯೂ ಸಮುದಾಯದ ಹೊರಗಡೆ ಇರುವ ಭೂಭಾಗಗಳನ್ನೂ ರಾಷ್ಟ್ರಗಳ ಸ್ಥಿತಿಗಳನ್ನೂ ತಿಳಿಯತಕ್ಕದ್ದು ಅವಶ್ಯಕ. ಏಕೆಂದರೆ, ಈ ಕಾಲದಲ್ಲಿ ಜಗತ್ತೇ ಒಂದಾಗಿ ವ್ಯವಹರಿಸುತ್ತದೆ; ಎಲ್ಲಿಯೋ ಒಂದು ಮೂಲೆಯಲ್ಲಿ ಅನಾಹುತವು ಸಂಭವಿಸಿದರೆ ಅದರ ಮಹಿಮೆಯು ಸರ್ವತ್ರ ತೋರಿಕೊಳ್ಳುತ್ತದೆ. ಮತ್ತು ಮಾನವವರ್ಗವೇ ಒಟ್ಟಾಗಿ ಸಾಧನೆಯಲ್ಲಿ ತೊಡಗಿದ ಪಕ್ಷದಲ್ಲಿ ಪರಸ್ಪರ ಪ್ರಯೋಜನಗಳು ಹೆಚ್ಚಿ ಎಲ್ಲರ ಅಭಿವೃದ್ಧಿಯೂ ಸುಲಭವಾಗುವುದು. ಅನ್ಯೋನ್ಯವಾಗಿರುವುದನ್ನು ಬಿಟ್ಟು ಮಾನವರಾಶಿಗಳು ಪರಸ್ಪರವಾಗಿ ಜಗಳವಾಡಿ ಯತ್ನಗಳನ್ನು ನಡೆಸುವ ಯುದ್ಧ ಪದ್ಧತಿಯು ಬದಲಾಗಿ ಅನ್ಯಾಯವೇ ವ್ಯವಹಾರದಲ್ಲಿ

ಇಲ್ಲದಂತಾಗಬಹುದು. ಈ ಘನೋದ್ದೇಶಗಳಿಂದ ಕೆಲವರು ಉದ್ದೀಪ್ತರಾಗಿ ಯುರೋಪ್ ಖಂಡದಲ್ಲಿ ಅಂತರರಾಷ್ಟ್ರೀಯ ಸಂಸ್ಥೆಗಳನ್ನು ಸ್ಥಾಪಿಸುವ ಪ್ರಯತ್ನ ಮಾಡಿದರು. ಘೋರ ಯುದ್ಧ ಕಳೆದಮೇಲೆ ಪ್ರಮುಖ ರಾಷ್ಟ್ರಗಳವರು ಅಂತರ ರಾಷ್ಟ್ರೀಯ ಸಂಸ್ಥೆಗೊಂದು ರೂಪವನ್ನು ಕೊಟ್ಟರು. ಅದೇ "ಲೀಗ್ ಆಫ್ ನೇಷನ್ಸ್" ಅಥವಾ ರಾಷ್ಟ್ರಗಳ ವ್ಯೂಹಬಂಧವೆಂಬುದು.

**ಜಿನೀವಾ** ಪಟ್ಟಣದಲ್ಲಿ ಈ ರಾಷ್ಟ್ರಮಂಡಲಿಯು ಸೇರುವುದು; ಅದರಲ್ಲಿ 50 ರಾಷ್ಟ್ರಗಳಿಗಿಂತಲೂ ಹೆಚ್ಚಾಗಿ ರಾಷ್ಟ್ರಗಳು ಸೇರಿವೆ. ಅವುಗಳಲ್ಲಿ 27 ರಾಷ್ಟ್ರಗಳು ಐರೋಪ್ಯ; 18 ಅಮೆರಿಕಾ ಖಂಡಗಳಲ್ಲಿರತಕ್ಕವು. ಸಂಯುಕ್ತರಾಜ್ಯ, ಕೆನಡ, ಆಸ್ಟ್ರೇಲಿಯ, ನ್ಯೂಸೀಲಂಡ್, ದಕ್ಷಿಣ ಆಫ್ರಿಕಾ, ಐರ್ಲಂಡ್ ಮತ್ತು ಬ್ರಿಟಿಷ್ ಇಂಡಿಯ ರಾಷ್ಟ್ರಗಳು ಬ್ರಿಟಿಷ ಸಮುದಾಯದ ಪರವಾಗಿ ಸೇರಿರತಕ್ಕವು; ಏಷ್ಯಾ ಖಂಡದ ರಾಷ್ಟ್ರಗಳಲ್ಲಿ ಚೀನಾ, ಪಾರಸೀಕಸ್ಥಾನ, ಸಯಾಂ ಸೇರಿವೆ; ಅಫ್ಘಾನಿಸ್ಥಾನ, ನೇಪಾಲ, ಜಪಾನುಗಳು ಸೇರಿಲ್ಲ. ಲೀಗಿಗೆ ಸೇರಿದ್ದು ಬಿಟ್ಟುಬಿಟ್ಟ ರಾಷ್ಟ್ರಗಳಲ್ಲಿ ಬ್ರೆಜಿಲ್ ಮತ್ತು ಜಪಾನುಗಳು ಮುಖ್ಯ; ಅವೂ ಸಂಯುಕ್ತ ಸಂಸ್ಥಾನಗಳೆಂಬ ಪ್ರಬಲ ರಾಷ್ಟ್ರವೂ, ರಷ್ಯಾ ಎಂಬ ವಿಸ್ತಾರ ರಾಷ್ಟ್ರವೂ ಹೊರಗಾಗಿಯೇ ಇರುವುವು. ಐರೋಪ್ಯ ರಾಷ್ಟ್ರಗಳೇ ಲೀಗಿನಲ್ಲಿ ಹೆಚ್ಚಾಗಿ ಸೇರಿಕೊಂಡಿರುವುವು. ಸೇರಿರುವ ರಾಷ್ಟ್ರಗಳ ಪ್ರತಿನಿಧಿಗಳು ಜಿನೀವಾ ಪಟ್ಟಣದಲ್ಲಿ ಸ್ಥಾಪಿತವಾಗಿರುವ ಕಾರ್ಯಾಲಯಗಳಲ್ಲಿ ಕೂಡಿ ಎಲ್ಲರಿಗೂ ಅನ್ವಯಿಸುವ ವಿಷಯಗಳನ್ನು ಸಮಾಲೋಚನೆ ಮಾಡುತ್ತಾರೆ. ಲೀಗಿನ ಶಾಖೆಗಳಾಗಿ **ಇಂಟರ್‌ನ್ಯಾಷನಲ್ ಕೋರ್ಟ್** (International Court) ಎಂಬ ಅಂತರ ರಾಷ್ಟ್ರ ನ್ಯಾಯಸ್ಥಾನವು **ದಿ ಹೇಗ್** ಎಂಬ ಪಟ್ಟಣದಲ್ಲಿಯೂ, **ಇಂಟರ್‌ನ್ಯಾಷನಲ್ ಲೇಬರ್ ಆರ್ಗನಿಸೇಷನ್** (International Labour Organisation) ಎಂಬ ಕಾರ್ಯಕರ್ತವರ್ಗದವರ ಅಭಿವೃದ್ಧಿಯನ್ನು ಸಮಾಲೋಚಿಸುವ ಸಂಸ್ಥೆಯು ಜಿನೀವ ಪಟ್ಟಣದಲ್ಲಿಯೂ ಸ್ಥಾಪಿತವಾಗಿವೆ. ಗುಲಾಮಿ ವ್ಯಾಪಾರ, ಅಫೀಂ ವ್ಯಾಪಾರ ಮುಂತಾದ ವಿಚಾರಗಳಲ್ಲಿ ಲೀಗಿನಿಂದ ಉಪಯೋಗವು ನಡೆದಿದೆ; ರಾಷ್ಟ್ರಗಳ ಜಗಳಗಳನ್ನು

ತೀರ್ಮಾನಪಡಿಸುವ ಅಥವಾ ಯುದ್ಧಗಳನ್ನು ನಿಲ್ಲಿಸುವ ಕಾರ್ಯಭಾಗಗಳಲ್ಲಿ ಲೀಗಿಗೆ ಅಧಿಕಾರವಿಲ್ಲ. ಮಹಾಪ್ರಬಲಗಳಾದ ಸಂಯುಕ್ತ ಸಂಸ್ಥಾನಗಳ ರಾಷ್ಟ್ರವೂ, ರಷ್ಯಾ ರಾಷ್ಟ್ರವೂ, ಜಪಾನೂ ಹೊರಗೆಯೇ ಇರುವುದು ಲೀಗಿನ ಆದರ್ಶ ಸಾಧನೆಗೆ ಅಡ್ಡಿಯಾಗಿಯೇ ಇದೆ. ಲೀಗಿನ ವ್ಯವಹಾರದಲ್ಲಿ ಬ್ರಿಟಿಷರು, ಫರಾನ್ಸೀ ಜನರು, ಇಟಲಿಯವರು ಪ್ರಬಲರಾಗಿದ್ದಾರೆ. ಈ ರಾಷ್ಟ್ರಗಳ ಕೂಟದಲ್ಲಿ ನಮ್ಮ ದೇಶವು ಸೇರಿದೆಯಾದರೂ ಬ್ರಿಟಿಷ್ ಕಾರ್ಯದರ್ಶಿಯ ನೇತೃತ್ವದಲ್ಲಿಯೇ ವ್ಯವಹರಿಸಬೇಕಾಗಿದೆ; ಬ್ರಿಟಿಷರ ಅಧೀನದಲ್ಲಿರುವ ರಾಷ್ಟ್ರವೆಂಬಷ್ಟು ಗೌರವವನ್ನೇ ಪಡೆದಿರುತ್ತದೆ.

## ಭಾರತೀಯ ಸ್ಥಾನ

ಬ್ರಿಟಿಷ್ ಸಮುದಾಯದಲ್ಲಿ ತಾನೇ ಒಂದು ವರ್ಗವಾಗಿ ಮುಕ್ಕಾಲು ಪಾಲು ಜನತೆಯಿಂದೊಡಗೂಡಿ ಮಾನವರಾಶಿಯಲ್ಲಿ ಆರನೆ ಭಾಗವನ್ನೇ ಒಳಗೊಂಡ ಭರತವರ್ಷವು ಜನಬಾಹುಳ್ಯದ ದೃಷ್ಟಿಯಲ್ಲಿ ಪೃಥ್ವಿಗೇ ಎರಡನೆಯದು. ರಷ್ಯಾ ಬಿಟ್ಟು ಉಳಿದ ಯುರೋಪ್ಯ ರಾಷ್ಟ್ರಗಳ ಒಟ್ಟು ಜನಸಂಖ್ಯೆಯು 34 ಕೋಟಿಯಷ್ಟಾದರೆ ಭಾರತೀಯರ ಸಂಖ್ಯೆಯು 35 ಕೋಟಿಗಳೇ ಆಗಿರುವುದು. ಬ್ರಿಟಿಷ್ ಸಮುದಾಯದ 45 ಕೋಟಿ ಜನರಲ್ಲಿ ಭಾರತೀಯ ಸಂಖ್ಯೆಯೇ 35 ಕೋಟಿ ಸಂಖ್ಯೆಯಾಗಿರುವುದು. ಸಂಖ್ಯಾಪ್ರಮಾಣ ಮಾತ್ರದಿಂದಲೇ ಭಾರತೀಯರು ಪ್ರಬಲರಲ್ಲ; ಇತರ ಮಾರ್ಗಗಳಲ್ಲಿಯೂ ವಿಶಿಷ್ಟ ಸ್ಥಾನವನ್ನುಳ್ಳವರು. ಆರ್ಯರೆಂಬ ಹೆಸರಿಗೆ ಗುರಿಯಾದವರಾದರೂ ಭಾರತೀಯರು ಇತರ ಆರ್ಯರಂತೆ ಸಂಸ್ಕೃತಿಹೀನರಾದವರಲ್ಲ. ಇತರ ಕ್ಷೇತ್ರಗಳಲ್ಲಿ ದೇಶೀಯರಾದವರನ್ನು ಅಧೀನವಾಗಿಟ್ಟುಕೊಂಡಿರುವುದಕ್ಕೂ, ಭಾರತೀಯರನ್ನು ಅಧೀನರನ್ನಾಗಿಟ್ಟುಕೊಂಡಿರುವುದಕ್ಕೂ ಬಹಳ ಭೇದವಿದೆ. ಭರತವರ್ಷದಂತಹ ವಿಸ್ತಾರ ದೇಶವನ್ನೂ ಭಾರತೀಯರೆನಿಸಿದ 35 ಕೋಟಿ ಜನಸಂಖ್ಯೆಯ ಜನರನ್ನೂ 6,000 ಮೈಲಿಗಳ ದೂರದಿಂದ $4\frac{1}{2}$ ಕೋಟಿ ಸಂಖ್ಯೆಯುಳ್ಳ ದೇಶದವರು ಆಳುತ್ತಲಿರುವುದೇ ಒಂದು ಕೌತುಕವಾದುದು. ಪಾಶ್ಚಾತ್ಯ ಸಂಸ್ಕೃತಿಯುಳ್ಳ ಬ್ರಿಟಿಷರಿಗೂ ಪೌರಸ್ತ್ಯ ಸಂಸ್ಕೃತಿಯುಳ್ಳ ಭಾರತೀಯರಿಗೂ ಬಹಳವಾದ

ಅಂತರವುಂಟು. ಸಂಸ್ಕೃತಿಯ ದೃಷ್ಟಿಯಿಂದ ಕಂಡಾಗ ಭಾರತೀಯರಿಗೆ ಬ್ರಿಟಿಷ್ ಸಮುದಾಯದಲ್ಲಿ ಮಾತ್ರವೇ ಅಲ್ಲದೆ ಇಡೀ ಜಗತ್ತಿನಲ್ಲಿಯೇ ವಿಶಿಷ್ಟ ಸ್ಥಾನವುಂಟು. ವಿಶಿಷ್ಟತೆಯೆಂತಹುದೆಂಬುದನ್ನು ತಿಳಿಯಲು ಭಾರತೀಯ ಸಂಸ್ಕೃತಿ ಸಂಪತ್ತನ್ನು ನಾವು ಸಂಕ್ಷೇಪವಾಗಿಯಾದರೂ ತಿಳಿಯಬೇಕು. ಅದನ್ನು ತಿಳಿಯಲು ಬ್ರಿಟಿಷರೂ ಕಾತರರಾಗಿಯೇ ಇದ್ದಾರೆ; ನಾವೂ ಕಾತರರಾಗಿರಬೇಕು.

# 4. ಭಾರತೀಯರ ಸಂಸ್ಕೃತಿ ಸಂಪತ್ತು

ಧರ್ಮತತ್ತ್ವಸಿದ್ಧಿ, ಶಾಸ್ತ್ರಸಾಧನೆ, ವ್ಯಾಪಾರೋದ್ಯೋಗಗಳು, ಭೋಗವೈಭವಗಳು, ಕಲಾಪರಿಣತಿ, ಸೌಶೀಲ್ಯದ ವಿಶಿಷ್ಟತೆ, ಅತಿಸೋಜಿಗ. ಸಮಾಜ ಸಂಸ್ಥೆಗಳು : ರಾಷ್ಟ್ರಪದ್ಧತಿ, ಕಾಲವಿಪರ್ಯಾಸ.

ಬಹುಮುಖ ಸಂಸ್ಕೃತಿ

ಪೃಥ್ವಿಯ ಪೂರ್ವಾರ್ಧದ ಮಧ್ಯಸ್ಥಾನದಲ್ಲಿರುವ ಭರತವರ್ಷವು ಸಭ್ಯತೆಗೂ ಸಂಸ್ಕೃತಿಗೂ ಮಾತೃಸ್ಥಾನವಾಗಿದ್ದು **ಪೌರಸ್ತ್ಯಹೃದಯ**ವೆಂಬ ಹೆಸರನ್ನು ಪಡೆದಿದೆ. ಭಾರತೀಯ ಸಂಸ್ಕೃತಿಯು ಅತಿಪುರಾತನವೂ ಆದುದು, ಸಚೇತನವೂ ಆದುದು. ದೇಶ ವಿದೇಶಗಳ ಇತಿಹಾಸಗಳಲ್ಲಿ ಭಾರತೀಯ ಇತಿಹಾಸವು ಅತಿದೀರ್ಘಕಾಲವ್ಯಾಪಿಯಾಗಿರುವುದಲ್ಲದೆ, ಭಾರತೀಯ ಸಭ್ಯತೆಯೆಂಬುದು ಪ್ರಾಚೀನ ಪ್ರಸಿದ್ಧಿಯನ್ನು ಪಡೆದ ಇತರ ಸಭ್ಯತೆಗಳಂತೆ ಹಿಂದಾಗಿ ಭೂಗತವಾಗಿ ಉಳಿಯದೆ ಇಂದಿಗೂ 35 ಕೋಟಿ ಸಂಖ್ಯೆಯ ಜನತೆಯಲ್ಲಿ ಸಜೀವವಾಗಿ ಬೆಳಗುತ್ತಿರುವುದು. ಸರ್ವಸಮೃದ್ಧಿಯಿಂದ ತುಂಬಿದ ಕ್ಷೇತ್ರದಲ್ಲಿ ಸಾವಿರಾರು ವರ್ಷಕಾಲ ಸಮುದಾಯ ಜೀವನವನ್ನು ನಡೆಸುವಲ್ಲಿ ಭಾರತೀಯರು ತಮ್ಮ ಪರಿಸ್ಥಿತಿಗೆ ಅನುಗುಣವಾಗಿ ಜ್ಞಾನ ವಿಜ್ಞಾನ ಕ್ಷೇತ್ರಗಳಲ್ಲಿಯೂ, ಶಾಸ್ತ್ರಾದಿ ಉದ್ಯೋಗ ವ್ಯಾಪಾರಗಳಲ್ಲಿಯೂ, ಭೋಗ ವೈಭವಗಳಲ್ಲಿಯೂ, ವಿವಿಧ ಕಲಾರಂಗಗಳಲ್ಲಿಯೂ ಸಾಧನೆಗಳನ್ನು ನಡೆಸಿ ಜಗತ್ತನ್ನೇ ಬೆರಗುಗೊಳಿಸಿ 18ನೇ ಶತಮಾನದವರೆಗೆ ಅಗ್ರಗಣ್ಯರಾಗಿದ್ದರು. ಭಾರತೀಯರಾಗಿ ಹುಟ್ಟಿದ ನಮಗೆ ದೊರೆತ ಪೂರ್ವಾರ್ಜಿತ ಸಂಸ್ಕಾರವು ಈ ಕಾರಣದಿಂದ ಮಾತ್ರವಾಗಿಯೂ ಇರುವುದಿಲ್ಲ. ಭಾರತೀಯರು ಆ ಸಂಸ್ಕಾರದ ವೈಶಿಷ್ಟ್ಯವನ್ನು ಅರಿತುಕೊಳ್ಳದೆ ಆ ವೈಶಿಷ್ಟ್ಯಕ್ಕೆ ಪ್ರೇರಕವೂ ಬಲಪ್ರದವೂ ಆದ ವ್ಯವಸ್ಥಾಲಕ್ಷಣಗಳನ್ನು ತಿಳಿಯದಿದ್ದರೆ ಭಾರತೀಯರಾಗಿ ಬಾಳುವುದೇ ಅಸಾಧ್ಯ.

## ಧರ್ಮ ತತ್ವಸಿದ್ಧಿ

ಪ್ರಧಾನ ಲಕ್ಷ್ಯ

ಆರ್ಯಜ್ಯೇಷ್ಠರೆಂದು ಪ್ರಸಿದ್ಧರಾದ ಮೊಟ್ಟಮೊದಲಿನ ಭಾರತೀಯರು ಸಪ್ತಸಿಂಧು ಪ್ರದೇಶದಲ್ಲಿ ನೆಲೆಸಿ ವೇದಮಂತ್ರಗಳನ್ನು ಸಾಧಿಸುತ್ತಿದ್ದ ಕಾಲದಲ್ಲಿಯೇ ಬಹುಮುಖವಾಗಿ ಬೆಳೆಯತಕ್ಕ ಸಭ್ಯತೆಯ ಅಸ್ತಿಭಾರವೂ ಮೂಲತತ್ವಗಳೂ ಸಿದ್ಧವಾದವು. ಮಹಾಕಾವ್ಯಗಳ ಕಾಲದಲ್ಲಿ ವಿಕಾಸ ಪಡೆದ ಆ ಸಂಸ್ಕೃತಿಯ ಪ್ರಧಾನಾಂಶಗಳನ್ನು ಬೌದ್ಧ ಧರ್ಮವೆಂಬುದು ತರುವಾಯ ನಡೆದ ಕಾಲದಲ್ಲಿ ಎಲ್ಲೆಲ್ಲಿಯೂ ಪ್ರಸಾರಪಡಿಸಿತು. ಋಷ್ಯಾಶ್ರಮಗಳನ್ನೂ ತಪೋವನಗಳನ್ನೂ ಪಡೆದು ಪವಿತ್ರ ಭೂಮಿಯೆನಿಸಿದ್ದ ಬ್ರಹ್ಮಾವರ್ತ ಕ್ಷೇತ್ರದಲ್ಲಿ ತಪೋನಿರತರಾಗಿ ತತ್ವಸಾಧನೆಗೈದ ಮಹರ್ಷಿ ಬ್ರಹ್ಮರ್ಷಿ ರಾಜರ್ಷಿಗಳು ಶಾಂತಿಯೇ ಪರಮಲಕ್ಷ್ಯವೆಂಬ ಅಮೋಘ ತತ್ವವನ್ನು ನೆಲೆಗೊಳಿಸಿ ಸಮಸ್ತ ಮಾನವಕೋಟಿಗೇ ಹಿರಿಯರಾದರು. ಭಾರತೀಯರಿಗೆ ಮಾತ್ರವಲ್ಲದೆ, ಮಾನವರಾಶಿಗೆ ಮಾತ್ರವಲ್ಲದೆ, ಸಕಲ ಪ್ರಾಣಿ ಸಮೂಹಕ್ಕೂ **ಶಾಂತಿಯೇ** ಗುರಿಯಾದುದೆಂದು ಸಿದ್ಧವಾದ ತರುವಾಯ ಪರಸ್ಪರ ಭೇದಗಳನ್ನು ಸಹಿಸುವ ಗುಣವು ಅಥವಾ **ಸಹಿಷ್ಣುತೆಯು** (Tolerance) ಸಹಜವಾಗಿ ಪರಿಣಮಿಸಿತು. ಮತತತ್ವಗಳ ಸಾಧನೆಯಲ್ಲಿ ಯಾವುದೋ ಒಂದು ಗುಂಪನ್ನು ಉದ್ಧಾರಮಾಡತಕ್ಕ ಮತವು ಸಿದ್ಧವಾಗಲಿಲ್ಲ, ಸಮಸ್ತ ಮಾನವರಾಶಿಗೇ ಅನ್ವಯಿಸತಕ್ಕ, ಎಲ್ಲ ಕಾಲಗಳಲ್ಲಿಯೂ ಎಲ್ಲ ದೇಶಗಳಲ್ಲಿಯೂ ನಿತ್ಯವೆನಿಸತಕ್ಕ ಮೂಲತತ್ವಗಳೇ ರೂಪಗೊಂಡವು. ಜೀವಾತ್ಮ ಪರಮಾತ್ಮ, ಕರ್ಮಬಂಧನ, ಪುನರ್ಜನ್ಮ, ಮುಕ್ತಿ ಮುಂತಾದ ತತ್ವಗಳನ್ನು ಸಾಧಿಸಿ ಜೀವನ ಪ್ರಪಂಚದಲ್ಲಿ ಅದೃಷ್ಟವಾದ ರಹಸ್ಯಗಳನ್ನು ಭೇದಿಸಿ ಸರಪಡಿಸಿಕೊಂಡ ಬ್ರಹ್ಮರ್ಷಿಗಳ ದೃಷ್ಟಿ ವೈಶಾಲ್ಯವಾಗಲಿ ಮನೋಬಲವಾಗಲಿ ಸಾಧಾರಣವಾಗಿ ಗ್ರಹಿಸುವುದಕ್ಕೆ ಅಸಾಧ್ಯವಾದುದು. ಉಪನಿಷತ್ತುಗಳೆಂಬ ಶ್ರುತಿಭಾಗದಲ್ಲಿ ಗೋಚರವಾಗುವ ಜ್ಞಾನರಾಶಿಯ ಸಾಧನೆಯು ಸಮಸ್ತ ಮಾನವರಾಶಿಗೇ ಪರಮ ಸಾಹಸವೆಂದೆನಿಸಿದೆ; ಆ ಜ್ಞಾನರಾಶಿಯೇ ಹಿಂದೂಮತವೆಂಬ ಧರ್ಮದ ಆಧಾರ. ಇತರ ಮತಗಳಿಗೆ ಒಬ್ಬ ಮಹಾಪುರುಷನೂ ಒಂದು ಪವಿತ್ರ

ಗ್ರಂಥವೂ ಇರುವಲ್ಲಿ ಹಿಂದೂಮತವೆಂಬುದಕ್ಕೆ ಮಹಾಪುರುಷರೂ ಪವಿತ್ರ ಗ್ರಂಥಗಳೂ ಅನೇಕ. ಹಿಂದೂ ಮತಕ್ಕೆ ಸ್ಥಾಪಕನೆಂಬಾತನು ಇಲ್ಲ; ಋಷಿಗಳನ್ನು ಸ್ಥಾಪಕರೆಂದು ಬೇಕಾದರೆ ಕರೆಯಬಹುದು.

**ಭಾರತೀಯ ತತ್ವರಾಶಿ** ಕಾಲ ದೇಶ ವರ್ತಮಾನಗಳಿಗೆ ಮೀರಿದುದಾದ ತತ್ವರಾಶಿಯು ಹಿಂದೂಮತಕ್ಕೆ ಆಧಾರಭೂತವಾದುದು. ಇತರ ಮತಗಳಲ್ಲಿ ಮಾನವನು ಬ್ರಹ್ಮಸಾಧನೆಯನ್ನು ಮಾಡುವ ಜ್ಞಾನಸಿದ್ಧಿಯಾಗಲಿ ಶಾಸ್ತ್ರವಾಗಲಿ ಇಲ್ಲ; ಹಿಂದೂಮತದಲ್ಲಿ ಮಾನವನು ದೇವರನ್ನು ಕಾಣುವುದು ಮಾತ್ರವೇ ಅಲ್ಲದೆ ದೇವರೇ ಆಗುವ ಸಿದ್ಧಿಯುಂಟು. ಇಂತಹ ಸಿದ್ಧಿಯನ್ನು ಪಡೆದ ಸಿದ್ಧಪುರುಷರ ಜನ್ಮಧಾರಣೆಯು ಭಾರತಭೂಮಿಯಲ್ಲಿ ದಿವ್ಯದೃಷ್ಟಿಯುಳ್ಳವರಾಗಿ ತ್ರಿಕಾಲಜ್ಞಾನವನ್ನು ಪಡೆದಿದ್ದ ಮಹರ್ಷಿಗಳ ಕಾಲದಿಂದ ಅವಿರತವಾಗಿಯೇ ನಡೆಯುತ್ತಲಿದೆ. ಹಿಂದೂ ಧರ್ಮ ಅಥವಾ ಭಾರತೀಯ ಸಂಸ್ಕೃತಿಗೆ ಕಾರಣಕರ್ತರಾದವರು ವಾತಾಂಬುಪರ್ಣಾಶನರೂ ಜಟಾವಲ್ಕಲಧಾರಿಗಳೂ ಆಗಿ ದಂಡ ಕಮಂಡಲುಗಳನ್ನು ಹಿಡಿದವರೆಂದೆನಿಸಿ ತಪೋವನ ನಿವಾಸಿಗಳಾಗಿದ್ದ ಋಷಿಜನರೇ ಆದುದರಿಂದ ಇಂದಿಗೂ ಭಾರತೀಯರಲ್ಲಿ ಎಲ್ಲರೂ ಋಷಿಗೋತ್ರಜರೆಂದೇ ಹೆಮ್ಮೆ ಪಡುವರು. ಭಾರತ

**ತಪಸ್ವಿಗಳು** ಭೂಮಿಯಲ್ಲಿ ಕಿರೀಟವನ್ನು ಧರಿಸಿದಾತನು ಕೂಡ ಸಾಧು ಸಂನ್ಯಾಸಿಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡುವುದು ಈ ಸಂಗತಿಯ ಪ್ರಭಾವದಿಂದಲೇ. ಭರತವರ್ಷದಲ್ಲಿ ಅಗ್ರ ಮರ್ಯಾದೆಯು ಸಲ್ಲುವುದು ಅಟ್ಟಹಾಸದಿಂದ ರಂಜಿಸುವ ರಾಜಪುರುಷನಿಗಲ್ಲ, ಅನಾಗರಿಕನಾಗಿ ತೋರಿಕೊಳ್ಳುವ ಮತ್ತು ಅರಣ್ಯವಾಸಿಯಾದ ಯತಿಗೆ.

ಭಾರತೀಯ ಧರ್ಮದ ಶಾಖೆಯಾದ ಬೌದ್ಧಮತವನ್ನೇ ಚೀನಾ, ಜಪಾನಾ ಮತ್ತು ಇತರ ಪಶ್ಚಿಮ ಕ್ಷೇತ್ರಗಳಲ್ಲಿರುವ

**ವ್ಯಾಪ್ತಿ** ಅನೇಕ ಕೋಟಿ ಜನರು ಸಂಪೂ ಆಚರಿಸುವರು. ಭಾರತೀಯ ಧರ್ಮವೇ ಏಷ್ಯಾಖಂಡವೆಲ್ಲಕ್ಕೂ 8ನೆ ಶತಮಾನದವರೆಗೆ ಜ್ಞಾನದಾಯಕವಾಗಿತ್ತು. ಇಸ್ಲಾಮಾ ಧರ್ಮವು

ಭಾರತೀಯ ಧರ್ಮದೊಡನೆ ಮೊದಲು ಘರ್ಷಿಸಿದರೂ ಕಾಲಾನಂತರದಲ್ಲಿ ಭಾರತೀಯ ಸಂಪರ್ಕದಿಂದ ಪುಷ್ಟಿಪಡೆಯಿತು; ಪ್ರಚಂಡವೇಗದಿಂದ ವ್ಯಾಪ್ತಿ ಪಡೆದ ಇಸ್ಲಾಮಿಾ ಧರ್ಮವು 5–6 ಶತಮಾನಗಳ ಕಾಲ ಸ್ಪರ್ಧಿಸಬೇಕಾಗಿ ಬಂದುದು ಭಾರತಭೂಮಿಯಲ್ಲಿ ಮಾತ್ರವೇ. 18ನೆ ಶತಮಾನ ಕಾಲದಿಂದ ಐರೋಪ್ಯರು ಸಂಸ್ಕೃತ ಭಾಷೆಯ ವ್ಯಾಸಂಗವನ್ನು ಮಾಡುತ್ತ ಸಂಸ್ಕೃತ ಗ್ರಂಥಗಳಲ್ಲಿ ಪವಿತವಾಗಿರುವ ತತ್ತ್ವರಾಶಿಯನ್ನು ಕಂಡು ಆಶ್ಚರ್ಯಚಕಿತರಾಗಿ ಆ ಮೂಲತತ್ತ್ವಗಳನ್ನು ತಿಳಿಯಲು ಉತ್ಸುಕರಾದರು. ಜರ್ಮನಿ, ಇಂಗ್ಲೆಂಡ್, ಫ್ರಾನ್ಸ್, ಸಂಯುಕ್ತ ಸಂಸ್ಥಾನಗಳಲ್ಲಿ 19ನೆ ಶತಮಾನದಲ್ಲಿ ಬುದ್ಧಿಯ ತೇಜಸ್ಸನ್ನು ಪಡೆದಿದ್ದವರು ಭಾರತೀಯ ಋಷಿಗಳು ಸ್ಥಾಪಿಸಿದ ಅಮೋಘ ತತ್ತ್ವಗಳನ್ನು ಕಂಡು ಮುಗ್ಧರಾದರು; ಐರೋಪ್ಯರಲ್ಲಿ ಹಲ ಕೆಲವರು ಇಡೀ ಮಾನವರಾಶಿಗೆ ಮಾರ್ಗದಾಯಕವಾದ ಮತವು ಭಾರತೀಯವಾದ ಹಿಂದೂ ಮತವೆಂಬುದೇ ಎಂದು ಅಭಿಪ್ರಾಯವುಳ್ಳವರು; ಸಾರ್ವಲೌಕಿಕವಾಗಿ ಅಥವಾ **ಸರ್ವಯೋಗ್ಯವಾಗಿರತಕ್ಕದ್ದು, ಶಾಂತಿಪ್ರಧಾನವಾದದ್ದು, ಸಹನಶೀಲವಾದದ್ದು** ಭಾರತೀಯ ಮತವೆಂಬುದು ಸರ್ವರಿಂದ ಅಂಗೀಕೃತವಾಗಿದೆ. ಭಾವಿಕಾಲದಲ್ಲಿ ಹಿಂದೂ ಮತ ತತ್ತ್ವಗಳೇ ಜಗತ್ತಿನಲ್ಲಿ ಸಾರ್ವತ್ರಿಕವಾಗಿ ವ್ಯಾಪ್ತಿ ಪಡೆಯುವ ಯೋಗ್ಯತೆಯನ್ನೂ ಚೈತನ್ಯವನ್ನೂ ಪಡೆದಿರತಕ್ಕುವೆಂದು ಅನೇಕರು ಅಭಿಪ್ರಾಯಪಟ್ಟಿದ್ದಾರೆ. ಭವಿಷ್ಯದ್ವೃತ್ತಾಂತವು ಹೇಗಿದ್ದರೂ ಗತವಾಗಿರುವ ಕಾಲದಲ್ಲಿ ಹಿಂದೂ ಮತವೇ ಸಹನಶೀಲವಾದುದೆಂದು ಪದೇಪದೇ ವ್ಯಕ್ತವಾಗಿದೆ. ಈಸಾಯಿ ಮತಸ್ಥರು, ಪಾರ್ಸೀಜನರು ತಮ್ಮ ದೇಶಗಳಲ್ಲಿ ಉಂಟಾದ ಹಿಂಸೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿಯೇ ಭಾರತವರ್ಷಕ್ಕೆ ಬಂದು ನೆಲೆಸಿದರು. ಮತಪಿಚಾರದಲ್ಲಿ ಬಾಧೆಗೆ ಸಿಲ್ಕಿ ಶಾಂತಿಯನ್ನಪೇಕ್ಷಿಸಿ ಬಂದ ಜನರ ತಂಡಗಳನ್ನು ಭರತವರ್ಷವು ಸರ್ವಕಾಲಗಳಲ್ಲಿಯೂ ಆದರಿಸಿದೆ. ಆದ್ದರಿಂದ ಭರತವರ್ಷವನ್ನು ಶಾಂತಿ ಸಹಿಷ್ಣುತೆಗಳ ತವರ್ಮನೆಯೆಂದು ಕರೆಯಬಹುದು.

**ಶಾಂತಿಯ ತವರ್ಮನೆ**

ಮತಭೇದಗಳು ಇತರ ದೇಶಗಳಲ್ಲಿ ರೇಗಿದಾಗ ಮಾನವರು ಮೃಗಪ್ರಾಯರಾಗಿ ವರ್ತಿಸಿ ರಕ್ತದ ಕಾಲುವೆಗಳನ್ನೇ ಹರಿಸಿದರು; ಭರತವರ್ಷದಲ್ಲಿ ಮತ

ಭೇದಗಳಿದ್ದರೂ ಭೇದಗಳ ದೆಸೆಯಿಂದ ವಿಸಯ ಗೌರವಾದ ಗುಣಗಳು ಪುಷ್ಟಿಪಡೆದು ದೃಷ್ಟಿವೈಶಾಲ್ಯವೊದಗುವಂತಾಯಿತೇ ವಿನಾ ಅಸಹನೆಯೇ ಲಕ್ಷಣವಾಗಿ ಹತ್ಯಗಳು ನಡೆಯಲಿಲ್ಲ.

ಜ್ಞಾನಾಧಾರ

ಹಿಂದೂಮತವನ್ನು ಮೂಢಾಚಾರಗಳ ಕೋಲಾಹಲವೆಂದು ಮೊದ ಮೊದಲು ಕೆಲವರು ವರ್ಣಿಸಿದರು. ಸಾವಿರಾರು ಶಾಖೆಗಳನ್ನೊಳಗೊಂಡ ಹಿಂದೂಮತದಲ್ಲಿ ಐಕ್ಯತೆಯನ್ನು ಸಿದ್ಧಪಡಿಸುವ ಪ್ರಧಾನ ತತ್ವಗಳನ್ನು ಕಾಣದವರು ಆ ರೀತಿಯಲ್ಲಿ ಹೇಳಿದರು. ಹಿಂದೂಮತಸ್ಥರಿಗೆ ಒಬ್ಬ ಗುರುವಲ್ಲ, ಸಾವಿರಾರು; ಒಂದು ಪವಿತ್ರ ಗ್ರಂಥವಲ್ಲ, ನೂರಾರು. ಇವುಗಳಲ್ಲಿ ಯಾರಾದರೊಬ್ಬ ಗುರುವನ್ನು ಮರೆತರೆ ಅಥವಾ ಒಂದು ಗ್ರಂಥವು ನಷ್ಟವಾದರೆ ಹಿಂದೂಗಳಿಗೆ ಕೊರತೆಯೇ ಇಲ್ಲ. ವೇದಗಳು ಅನಂತವೆಂದು ನಂಬಿರುವ ಹಿಂದೂಗಳಿಗೆ ಪ್ರಮಾಣತಮವಾದವುಗಳೂ ವೇದಗಳೇ; ವೇದವೆಂದರೆ ಜ್ಞಾನರಾಶಿಯಾದುದರಿಂದ ಜ್ಞಾನರಾಶಿಯೇ ಹಿಂದೂಮತದ ತಳಹದಿ. ವಿಗ್ರಹಾರಾಧನೆಯನ್ನು ಕೈಕೊಂಡು ಮೂವತ್ತುಮೂರು ಕೋಟಿ ದೇವತೆಗಳನ್ನು ಪೂಜಿಸುವ ಹಿಂದೂಗಳೇ ವಿಗ್ರಹಾರಾಧನೆಯೊಂದು ಶಿಕ್ಷೆ ಅಥವಾ ಸಿಸುತ್ತ್ವಮಾತ್ರವೆಂದು ಹೇಳುವರು. ಅನೇಕಾನೇಕ ದೇವತೆಗಳನ್ನು ಪೂಜೆ ಮಾಡತಕ್ಕವರೇ "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬ ಗಂಭೀರ ತತ್ವವನ್ನು ನಂಬಿರುವರು. ಸರ್ವಾಂಗ ಯುಕ್ತವಾದ ಆನೆಯನ್ನು ಕಾಣಲಾರದೆ ಅಂಗಗಳನ್ನು ಬೇರೆಬೇರೆ ಸವರಿನೋಡಿ ವರ್ಣಿಸಿಕೊಂಡ ಆರು ಮಂದಿ ಜಾತ್ಯಂಧರಂತೆ ಹಿಂದೂಮತಗಳ ಶಾಖೆಗಳನ್ನು ಮಾತ್ರ ಪರೀಕ್ಷಿಸಿ ಒಟ್ಟುರೂಪವನ್ನು ಮರೆಯಬಾರದು. ಒಟ್ಟು ರೂಪವನ್ನು ಕಂಡು ಇತರ ಮತಗಳೊಂದಿಗೆ ಹೋಲಿಸಿ ಕಂಡಲ್ಲಿ ಹಿಂದೂಧರ್ಮವೆಂಬುದಕ್ಕೆ ಜ್ಞಾನರಾಶಿಯೇ ಆಧಾರವೆಂಬುದು ಭಾಸವಾಗುವುದು. ಜ್ಞಾನ ಶಬ್ದವೇ ಇಂಗ್ಲಿಷ್ ಭಾಷೆಯಲ್ಲಿ Knowledge ಎಂದಾಗಿರುವುದು. Know ಎಂಬಲ್ಲಿ K ಎಂಬ ಅಕ್ಷರವು ಸೇರಿಕೊಂಡಿರಲು ಇಂಗ್ಲಿಷ್ ಮುಂತಾದ ಭಾಷೆಗಳು ಆರ್ಯ ಜ್ಯೇಷ್ಠರ ಭಾಷೆಯಾದ ಸಂಸ್ಕೃತದ ಪ್ರಭಾವಕ್ಕೊಳಗಾದುದೇ ಕಾರಣ. ಈ ಜ್ಞಾನರಾಶಿಯನ್ನು ಹಿಂದೂಜನರ ಪಂಡಿತರು ತತ್+ತ್ವ=

ತತ್ತ್ವವೆಂದು ಕರೆಯುವರು. ಮತಪ್ರಚಾರಗಳಲ್ಲಿ ವಾದ ವಿವಾದಗಳಾಗುವ ಸಂದರ್ಭದಲ್ಲಿ ಪಂಡಿತರೆನಿಸಿದವರು ಪ್ರಮಾಣಗಳೆಂದು ಸ್ವೀಕಾರಮಾಡುವುದು ಬ್ರಹ್ಮಸೂತ್ರಗಳು, ಉಪನಿಷತ್ತುಗಳು ಮತ್ತು ಭಗವದ್ಗೀತಾ ಎಂಬ ಪ್ರಸ್ಥಾನತ್ರಯಗಳನ್ನು ಮಾತ್ರ. ತತ್ತ್ವರಾಶಿಗೇ ಭಾರತೀಯರು ಜ್ಞಾನವೆಂಬ ಶಬ್ದವನ್ನು ಉಪಯೋಗಿಸುವರು. ಇಂಗ್ಲಿಷಿನ Knowledge ಎಂಬ ಶಬ್ದವಾದರೆ ಎಲ್ಲ ಬಗೆಯ ತಿಳುವಳಿಕೆಗೂ ಅನ್ವಯಿಸುವುದು. ಐಹಿಕ ಜೀವನದಲ್ಲಿ ಸಮೃದ್ಧಿಯನ್ನು ಸುಲಭವಾಗಿ ಪಡೆದ ಭಾರತೀಯರಿಗೆ ಐಹಿಕವಾದ ತಿಳುವಳಿಕೆಗಿಂತಲೂ ಪಾರಲೌಕಿಕವಾದ ಅರಿವೇ ಮೇಲೆನಿಸಿತು. ಅಂತಹ ತಿಳುವಳಿಕೆಯೇ ಅವರಲ್ಲಿ ದಿವ್ಯ ಜ್ಞಾನವೆನಿಸಿತು.

ಸರ್ವವ್ಯಾಪ್ತಿ

ಯೂರೋಪಿನಲ್ಲಿ ಮೊಟ್ಟಮೊದಲು ಸಭ್ಯತೆಯನ್ನು ಪಡೆದ ಗ್ರೀಕ ಜನರೂ ರೋಮಕರೂ ಆರ್ಯ ಜ್ಯೇಷ್ಠರ ಶಾಖೆಗಳಾಗಿಯೇ ಇದ್ದರು. ಗ್ರೀಕ್, ಲ್ಯಾಟಿನ್ ಭಾಷೆಗಳು ಸಂಸ್ಕೃತಕ್ಕೆ ಸಮೀಪ ಸಂಬಂಧವುಳ್ಳವು. ಇರಾನಿನ ಆರ್ಯ ಶಾಖೆಯವರೂ ಗ್ರೀಕ ರೋಮಕರೂ ಆರ್ಯ ಜ್ಯೇಷ್ಠರಿಂದ ದತ್ತವಾದ ಭಾಷೆಯನ್ನೇ ಅಲ್ಲದೆ ಆಚಾರಗಳನ್ನೂ ಸಂಪ್ರದಾಯಗಳನ್ನೂ ಪಡೆದವರಾಗಿದ್ದರು. ಸಪ್ತಸಿಂಧುವಿನಲ್ಲಿ ದ್ಯೌಃ ಪಿತೃ (ಅಥವಾ ದ್ಯಾವಾ ಪೃಥಿವೀ) ವೆಂಬುದು ಪಶ್ಚಿಮಕ್ಕೆ ಹೋಗುತ್ತ ಹೋಗುತ್ತ ದ್ಯೌಷ್ಪಿಥರ್, ಜ್ಯೂಸ್ ಪಿತರ್, ಜೂಪಿಟರ್ (Jupiter) ಎಂಬಾದ ಒಂದು ಉದಾಹರಣೆಯಿಂದಲೇ ನಡೆದುದನ್ನು ಭಾವಿಸಬಹುದು. ಭಾರತೀಯರ ನೇತೃತ್ವವನ್ನೇ ಪಾಶ್ಚಾತ್ಯ ಆರ್ಯ ಶಾಖೆಗಳವರು ಒಪ್ಪಿಕೊಂಡು ಬಹುಕಾಲವಿದ್ದರು; ಧರ್ಮಾಶೋಕ ಚಕ್ರವರ್ತಿಯು ಬೌದ್ಧ ಪ್ರಚಾರಕರನ್ನು ಭೂಮಧ್ಯಸಾಗರದ ಮೂಡಲ ಪ್ರದೇಶಗಳಿಗೆ ಕೊಟ್ಟು ಕಳುಹಿಸಿದುದೂ ಗ್ರೀಕ ತತ್ತ್ವಜ್ಞರು ತತ್ತ್ವಾರ್ಥಿಗಳಾಗಿ ಪೂರ್ವ ದಿಕ್ಕಿನ ರಾಷ್ಟ್ರಗಳಲ್ಲಿ ಸಂಚಾರಮಾಡಿದುದೂ ಆ ಕಾಲದ ಭಾರತೀಯ ಶ್ರೇಷ್ಠತೆಯನ್ನು ಸೂಚಿಸುವ ಸಂಗತಿಗಳು. ರೋಮಕ ಸಾಮ್ರಾಜ್ಯವೆಂಬುದು ಧ್ವಂಸವಾಗಿ ಯೂರೋಪಿನಲ್ಲಿ ಅಂಧಕಾರ ಯುಗ (Dark Ages) ವೆಂಬುದು ಪ್ರಾರಂಭವಾದ ಮೇಲೆ ಭಾರತೀಯ ಸಂಬಂಧವು ಐರೋಪ್ಯರಿಗೆ ತಪ್ಪಿ ಹೋಗಿ ಕೆಲಕಾಲದಲ್ಲಿ ಕನಸಿನಂತೆಯೇ ಆಯಿತು.

ತುರುಷ್ಕ ಕುಲಗಳ ಆಕ್ರಮಣದಿಂದ ಉದ್ರೇಪ್ತರಾಗಿ ಐರೋಪ್ಯರು ಅವರೊಡನೆ ಜಗಳಕ್ಕೆ ತೊಡಗಿ ಅವರಿಂದ ವ್ಯಾಪಾರೋದ್ಯೋಗಗಳ ಪರಿಶ್ರಮ ವನ್ನು ಪಡೆದರು. ರಿನೇಸಾನ್ಸ್ (Renaissance) ಎಂಬ ಜ್ಞಾನೋದಯವು ನಡೆದ ತರುವಾಯವೇ ಯೂರೋಪಿನ ಜನರು ಶಾಸ್ತ್ರಸಾಧನೆಯನ್ನು ಮೊದ ಲಿಟ್ಟರು. ಶಾಸ್ತ್ರಸಾಧನೆಯಲ್ಲಿ ಭಾರತೀಯರು ಪ್ರಯತ್ನಶೂನ್ಯರೆಂದೂ ಆ ಸಾಧನೆಯ ಸಾಹಸ ಚಾತುರ್ಯಗಳು ಐರೋಪ್ಯರಲ್ಲಿ ಮಾತ್ರವೇ ನೆಲೆಸಿರುವುವೆಂದೂ ಸಾಮಾನ್ಯವಾಗಿ ಭಾವಿಸುವುದುಂಟು. ವಾಸ್ತವವಾಗಿ ಶಾಸ್ತ್ರಗಳು ಮೊದಲು ತೋರಿ ಪುಷ್ಟಿಪಡೆದುದು ಯೂರೋಪಿನಲ್ಲಲ್ಲ; ಭಾರತವರ್ಷದಲ್ಲಿ.

## ಶಾಸ್ತ್ರ ಸಾಧನೆ

ವೈದಿಕ ಕಾಲ

ಜ್ಯೋತಿಷ, ಆಯುರ್ವೇದ ಮತ್ತು ಜ್ಯಾಮಿತಿ (Geometry) ಗಳು ವೇದಗಳ ಕಾಲದಲ್ಲಿಯೇ ಮೊದಲಾಗಿ ತರುವಾಯ ವಿಸ್ತಾರವಾದ ವೃದ್ಧಿಯನ್ನು ಪಡೆದವು. ಸೂರ್ಯ ಚಂದ್ರ ಗ್ರಹ ನಕ್ಷತ್ರಗಳ ಗತಿಗಳನ್ನು ಗುರುತಿಸಿ ಋತು, ಪಕ್ಷ, ಮಾಸ, ವಾರಗಳನ್ನು ನಿಷ್ಕರ್ಷೆ ಮಾಡುವುದರಲ್ಲಿ ಆರ್ಯ ಜ್ಯೋತಿಷ್ಕರ ಮಾರ್ಗವೇ ಇಂದಿಗೂ ಅನುಸರಣೀಯವಾಗಿದೆ. ಯುದ್ಧದಲ್ಲಿ ಗಾಯಪಟ್ಟವರನ್ನು ಉಪಚರಿಸುವುದರಲ್ಲಿ ಮೊದಲಾದ ವೈದ್ಯವಿದ್ಯೆಯು **ಅಗ್ನಿವೇಶ** ಮೊದಲಾದ ಋಷಿಗಳ ಸಾಧನೆಯಿಂದ ಪುಷ್ಟಿಪಡೆದು ಆಯುರ್ವೇದನೆಂಬ ಹೆಸರನ್ನು ತಾಳಿ ವಿಸ್ತಾರವಾಗಿ, **ಧನ್ವಂತರಿ**ಯೆಂಬ ರಾಜಕುಮಾರನಿಂದ ಎಂಟು ಅಂಗಗಳಾಗಿ ವಿಭಾಗವಾಯಿತು. ಯಜ್ಞ ವೇದಿಕೆಗಳ ನಿರ್ಮಾಣದಲ್ಲಿ ವೃತ್ತ ತ್ರಿಭುಜ ಚತುರ್ಭುಜಗಳ ಪರಸ್ಪರ ಲಕ್ಷಣ ಗಳನ್ನು ತಿಳಿದುದೇ ಜ್ಯಾಮಿತಿಗೆ ಮೊದಲಾಯಿತು. ತಪೋವನಗಳಲ್ಲಿ ಜ್ಞಾನಸಾಧನೆಗಾಗಿ ತಪಿಸುತ್ತಿದ್ದ ಋಷಿಜನರು ಜ್ಯೋತಿಷದೊಂದಿಗೆ ಗಣಿತ ಶಾಸ್ತ್ರವನ್ನೂ, ಆಯುರ್ವೇದದೊಂದಿಗೆ ಶಸ್ತ್ರಚಿಕಿತ್ಸಾ, ರಸ ತಂತ್ರ, ವನಸ್ಪತಿ ಪರೀಕ್ಷೆಗಳನ್ನೂ ತೊಡಗಿದರು. ಬ್ರಹ್ಮಾವರ್ತದ ಆಶ್ರಮಗಳೇ ಶಾಸ್ತ್ರವಿಸ್ತಾರದ ಕ್ಷೇತ್ರಗಳಾಗಿದ್ದವು. ಋಷಿಗಳು ಹೆಚ್ಚಾಗಿ

ಸಾಧಿಸಿದ ಜ್ಞಾನರಾಶಿಯು ಈ ಶಾಸ್ತ್ರಗಳಿಗೆ ವಿರುದ್ಧವಾದುದಾಗಲಿ ಅಸಂಬದ್ಧವಾದುದಾಗಲಿ ಅಲ್ಲ. ಶಾಸ್ತ್ರವೆನ್ನುವುದು ಜ್ಞಾನ ಭಾಗವೇ; ಪಾಶ್ಚಾತ್ಯರೂ ಶಾಸ್ತ್ರವೆಂಬುದಕ್ಕೆ ತತ್ವಜ್ಞಾನವು ಅಸ್ತಿಭಾರವೂ ಶಿಖರವೂ ಆದುದೆಂದೇ ಒತ್ತಿಒತ್ತಿ ಹೇಳುತ್ತಾರೆ (Philosophy is the foundation and crown of science). ಸಾಂಖ್ಯ, ವೈಶೇಷಿಕ, ನ್ಯಾಯ, ಯೋಗ ಮುಂತಾದ ದರ್ಶನಗಳೆಂಬುವು ಶಾಸ್ತ್ರದ ಆಧಾರಗಳನ್ನೇ ಶೋಧಿಸಿದ ಶಾಸ್ತ್ರಗಳು. ದರ್ಶನಗಳ ಸಾಧನೆಯನ್ನು ಶಾಸ್ತ್ರ ಸಾಧನೆಯೆಂದೇ ತಿಳಿಯಬೇಕು. ಅವುಗಳು ಪುರಾತನ ಕಾಲದಲ್ಲಿಯೇ ಎಷ್ಟು ಮಾತ್ರ ಅಭಿವೃದ್ಧವಾಗಿದ್ದವೆಂಬುದಕ್ಕೆ ಕೆಲವು ನಿದರ್ಶನಗಳನ್ನು ಕಾಣಬಹುದು. **ಕಪಿಲ ಕಣಾದರೆಂಬ** ಋಷಿಗಳು ಪರಮಾಣುವಾದವೆಂಬುದನ್ನು ತಿಳಿದಿದ್ದರು. ಅಗ್ನಿವೇಶನೆಂಬ ಋಷಿಗೆ ತಿಳಿದಿದ್ದ ವನಸ್ಪತಿ ಲಕ್ಷಣಗಳು ಆಯುರ್ವೇದದ ಪರಿಚಯವಾಗುವವರೆಗೂ ಪಾಶ್ಚಾತ್ಯರಿಗೆ ತಿಳಿಯಲಿಲ್ಲ. ಪೃಥ್ವಿಯು ಗೋಳಾಕಾರವನ್ನು 15ನೆ ಶತಮಾನದಲ್ಲಿ ಕೋಪರ್ನಿಕಸ್ ಎಂಬಾತನು ಸಮರ್ಥಿಸಿದನು; ಆತನ ಕಾಲಕ್ಕೆ ಸಾವಿರಾರು ವರ್ಷಗಳಿಗೆ ಹಿಂದೆಯೇ ಭಾರತೀಯ ತತ್ವಜ್ಞರು ಅದನ್ನು ತಿಳಿದಿದ್ದರು. ಪ್ರಾಚೀನ ಕಾಲದ ಭರತವರ್ಷದಲ್ಲಿ ಸಾಧಿತವಾದ ಜ್ಞಾನರಾಶಿಯಾಗಲಿ ಶಾಸ್ತ್ರರಾಶಿಯಾಗಲಿ ಬೇರೆ ಯಾವ ದೇಶದವರಿಗೂ ಲಬ್ಧವಾಗಿರಲಿಲ್ಲ.

ವೃದ್ಧಿ

ಷಡ್ದರ್ಶನಗಳಂತೆಯೇ ಉಪವೇದಗಳೂ ಷಡಂಗಗಳೂ ಶಾಸ್ತ್ರ ಭಾಗಕ್ಕೆ ಸೇರತಕ್ಕವೇ. ದರ್ಶನಗಳಿಗಿಂತಲೂ ಅವು ಪ್ರಾಚೀನವಾದವುಗಳು. ವ್ಯಾಕರಣ, ನಿರುಕ್ತ, ಛಂದಸ್, ಶಿಕ್ಷಾ ಎಂಬವು ಭಾಷಾ ಸಂಬಂಧವಾದ ಶಾಸ್ತ್ರಗಳು. ಆರ್ಯ ಭಾಷೆಯು ಇವುಗಳಿಂದಲೇ ಸಂಸ್ಕೃತ—ಸಮ್ಯಕ್ ಕೃತ, ಸುಧಾರಿಸಿದ—ಭಾಷೆಯಾಗಿ ಪರಿಣಮಿಸಿ ಜಗತ್ತಿನ ಭಾಷೆಗಳಲ್ಲೆಲ್ಲ ಒಂಧದ ಪ್ರೌಢಿಮೆಯಲ್ಲಿ ಅದ್ವಿತೀಯವೆನಿಸಿತು. ಜ್ಯೋತಿಷ, ಕಲ್ಪ, ಧನುರ್ವೇದ, ಗಾಂಧರ್ವವೇದ, ಆಯುರ್ವೇದ, ಅಥರ್ವವೇದಗಳೆಂಬವೂ ಶಾಸ್ತ್ರ ಭಾಗಗಳನ್ನೊಳಗೊಂಡ ವಿಭಾಗಗಳೇ. ಬ್ರಹ್ಮರ್ಷಿಸಾರ್ವಭೌಮರ ಕಾಲದಲ್ಲಿ ಈ ಶಾಸ್ತ್ರರಾಶಿಗಳು ಬೆಳೆದು ವಿಸ್ತಾರವಾದುವು. ಬೌದ್ಧಧರ್ಮವು

ವ್ಯಾಪ್ತಿಗೊಂಡ ತರುವಾಯ ಶಾಸ್ತ್ರಶೋಧನೆಯ ಕರ್ತವ್ಯವನ್ನು ವಿಹಾರಗಳಲ್ಲಿ ಬೌದ್ಧ ಭಿಕ್ಷುಗಳು ಕೈಕೊಂಡು ಸಾಧನೆಯನ್ನು ನಡೆಸಿದರು. ಸಿಕಂದರನ ಜತೆಯಲ್ಲಿ ಬಂದಿದ್ದ ಗ್ರೀಕ ತತ್ವಜ್ಞರು ಭಾರತೀಯ ತತ್ವಜ್ಞರನ್ನು ಕಂಡು ಪರಮಾಶ್ಚರ್ಯಪಟ್ಟರು. ವಿಧ್ಯಕಗುಪ್ತಕಾಲವೆಂಬ ಕಾಲದಲ್ಲಿ ಆರ್ಯಭಟ, ಬ್ರಹ್ಮಗುಪ್ತ, ವರಾಹ ಮಿಹಿರಾಚಾರ್ಯರುಗಳು ಜ್ಯಾಮಿತಿ, ತ್ರಿಕೋಣಮಿತಿ (Trigonometry), ಕುಟ್ಟಕ (Algebra), ಗಣಿತ, ಸಿದ್ಧಾಂತ (Astronomy)ಗಳನ್ನು ವಿಸ್ತಾರಗೊಳಿಸಿದರು. ಚಿಕಿತ್ಸಾ, ವೈದ್ಯ, ರಸಾಯನ, ವನಸ್ಪತಿ ಶಾಸ್ತ್ರಗಳಲ್ಲಿ ಆ ಕಾಲದ ಶಾಸ್ತ್ರಜ್ಞರ ಪರಿಶ್ರಮವು ಅದ್ಭುತವಾಗಿಯೇ ಇತ್ತು. ಐರೋಪ್ಯ ದೇಶಗಳು ಅದೇ ಕಾಲದಲ್ಲಿ ಅಂಧಕಾರ ಯುಗದಲ್ಲಿ ಸಿಲ್ಕದೆ ಇದ್ದಿದ್ದರೆ ಐರೋಪ್ಯರಿಗೆ ಶಾಸ್ತ್ರಪರಿಚಯ ಲಾಭವು ಕ್ರಿ. ಶ. 5–6ನೆ ಶತಮಾನಗಳಲ್ಲಿಯೇ ಉಂಟಾಗಬಹುದಾಗಿತ್ತು.

ಅರಬ್ಬಿಸ್ತಾನದಲ್ಲಿ 7ನೆ ಶತಮಾನದಲ್ಲಿ ಇಸ್ಲಾಮಿ ಮತಸ್ಥಾಪನೆ
ಯಾದ ಬಳಿಕ ಮುಸಲ್ಮಾನರು 9–10ನೆ ಶತ
ಅರಬ್ಬೀ ಮಧ್ಯಸ್ಥ ಮಾನಗಳಲ್ಲಿ ಬಗದಾದ ನಗರದಲ್ಲಿ ಅಬ್ಬಾಸೀ
ಖಲೀಫರ ಆಶ್ರಿತರಾಗಿ ಐರೋಪ್ಯರಿಗೂ
ಭಾರತೀಯರಿಗೂ ಮಧ್ಯಸ್ಥರಾದರು. ಅಬ್ಬಾಸೀ ಖಲೀಫರ ಕಾಲದಲ್ಲಿ ಜ್ಞಾನ ವಿಜ್ಞಾನರಾಶಿಗಳ ಸಾಧನೆಗೆ ಭರತವರ್ಷವೇ ಆಕರವಾಗಿತ್ತು. ಅದನ್ನು ತಿಳಿದೇ ಪ್ರಸಿದ್ಧ ಖಲೀಫ ಹಾರೂನ್ ಅಲ್‌ರಷೀದ್ ಎಂಬ ಬಗದಾದಿನ ಪ್ರಭುವು ಭಾರತವರ್ಷದಿಂದ ಪಂಡಿತರನ್ನು ತನ್ನ ಆಸ್ಥಾನಕ್ಕೆ ಕರೆಸಿಕೊಂಡು ಗೌರವಿಸಿ ಅವರ ಸಹಾಯದಿಂದ ಸಂಸ್ಕೃತ ಭಾಷೆಯಲ್ಲಿದ್ದ ಶಾಸ್ತ್ರ ಗ್ರಂಥಗಳನ್ನು ಅರಬ್ಬಿ ಭಾಷೆಗೆ ಭಾಷಾಂತರಮಾಡಿಸಿದನು. ಈ ಸಂಗತಿಯ ವಿವರವು ಅಲ್ಪಸ್ವಲ್ಪವಾಗಿ ಮಾತ್ರ ತಿಳಿಯುವುದು. ಅಲ್ಲಿಗೆ ಹೊರಟಿದ ಭಾರತೀಯ ಪಂಡಿತರಲ್ಲಿ ಮಾಂಕ (Monkah), ಸಾಲೀ (Salih) ಎಂಬ ಹೆಸರುಗಳು ಮಾತ್ರ ಉಳಿದಿವೆ. ಆ ಇಬ್ಬರಲ್ಲಿ ಒಬ್ಬನು ವೈದ್ಯಭಾಗವಾದ ಪಾಷಾಣ ಪ್ರಯೋಗ ಸಂಬಂಧವಾದ ಗ್ರಂಥವೊಂದನ್ನು ಅರಬ್ಬಿ ಭಾಷೆಗೆ ಭಾಷಾಂತರ ಮಾಡಲು ನಿಯುಕ್ತನಾದನಂತೆ. ಅರಬ್ಬೀಜನರು ಶಾಸ್ತ್ರಪುಷ್ಟಿಯನ್ನು ಭಾರತೀಯರಿಂದ ಪಡೆದು ಶಿಲುಬೆಯ ಯುದ್ಧಗಳು

(Crusades) ನಡೆದ ತರುವಾಯ ಐರೋಪ್ಯರಿಗೆ ಶಾಸ್ತ್ರಗಳ ಪರಿಚಯವನ್ನುಂಟುಮಾಡಿಸಿದರು. 'ಅರಬ್ಬೀ' ಅಂಕಿಗಳು, ಶೂನ್ಯ, ದಶಮಾಂಶ, ತ್ರಿಭುಜ ಲಕ್ಷಣಗಳು, ರಸಸಿದ್ಧಿ, ಪಾಷಾಣಪ್ರಯೋಗ ಮುಂತಾದ ಶಾಸ್ತ್ರಾಂಶಗಳು ಐರೋಪ್ಯರಿಗೆ ಈ ರೀತಿಯಲ್ಲಿ ಭರತವರ್ಷದಿಂದ ಹೊರಟು ತಲುಪಿದ ಸರಕೇ ಆಗಿತ್ತು.

ಶಿಥಿಲಸ್ಥಿತಿ

ಸರ್ವ ವಿಧಗಳಲ್ಲಿಯೂ ತೇಜಃಪುಂಜವಾಗಿ ಪೃಥ್ವಿಗೇ ಅಗ್ರಗಾಮಿಯಾಗಿ ಭರತವರ್ಷವು ರಂಜಿಸಿದಂತಹ ವಿಂಧ್ಯಕಗುಪ್ತ ಕಾಲವೆಂಬುದು ಕಳೆದ ತರುವಾಯ ಕಾರಣಾಂತರಗಳಿಂದ ಶಾಸ್ತ್ರವೃದ್ಧಿಯು ಹಿಂದಿನಂತೆ ನಡೆಯದೆ ಸ್ತಬ್ಧವಾಯಿತು. ಆದರೂ ಯೋಗಿಗಳೂ ಸಂನ್ಯಾಸಿಗಳೂ ತತ್ವವನ್ನು ಹುಡುಕುತ್ತ ಅಭ್ಯುದಯವನ್ನುಂಟುಮಾಡುವ ಸಾಧನೆಗಳನ್ನು ನಡೆಸುತ್ತಲೇ ಇದ್ದರು. ಅನ್ಯರ ರಾಜ್ಯಭಾರದಲ್ಲಿ ಶಾಸ್ತ್ರವಿಸ್ತಾರ ಕಾರ್ಯಕ್ಕೆ ಪ್ರೋತ್ಸಾಹವಾಗಲಿ ಅನುಕೂಲವಾಗಲಿ ಇಲ್ಲದೆಹೋಯಿತು. ಸ್ತಬ್ಧವಾದ ಅವಸ್ಥೆಯಲ್ಲಿದ್ದಾಗ್ಯೂ ಭಾರತೀಯರ ಪೂರ್ವಾರ್ಜಿತ ಶಾಸ್ತ್ರಭಾಗಗಳು ಇನ್ನೂ ಅಲ್ಲಲ್ಲಿ ತೋರುತ್ತವೆ. ಜ್ಯೋತಿಷದಲ್ಲಿ ಹಿಂದೂಜನರೇ ಇಂದಿಗೂ ಮುಂದಾಳುಗಳು; ಫಲಾಫಲ ಹೇಳುವುದರಲ್ಲಿ ಅಥವಾ ಭವಿಷ್ಯತ್ ಸೂಚನೆಯಲ್ಲಿ ಎಲ್ಲರೂ ಭಾರತೀಯರನ್ನೇ ಆಶ್ರಯಿಸುವರು. ಹಳ್ಳಿಗಾಡುಗಳಲ್ಲಿ ಅಡಗಿರುವ ಸಿದ್ಧಾಂತಿಯು ತನ್ನ ಹಳೆಯ ಕಾಗದಗಳನ್ನು ತಿರುವಿಹಾಕಿ ಗುಣಿಸಿ ಗ್ರಹಗತಿಗಳನ್ನೂ ಗ್ರಹಣ ನಿಷ್ಕರ್ಷೆಯನ್ನೂ ಕಾಣುತನ್ನದಂತೆ ಗೊತ್ತುಮಾಡಿ ಪಂಚಾಂಗವನ್ನು ಸಿದ್ಧಪಡಿಸುತ್ತಾನೆ. ಔಷಧವೇ ಇಲ್ಲವೆಂದು ತೀರ್ಮಾನವಾದ ರೋಗವನ್ನು ಆಯುರ್ವೇದ ಪಂಡಿತರು ಕೆಲವರು ವಾಸಿಮಾಡುತ್ತಾರೆ. ವೈದ್ಯಭಾಗವನ್ನು ಹಾಗೂ ಹೀಗೂ ರಕ್ಷಿಸಿಕೊಂಡು ಬಂದವರು ಶಸ್ತ್ರಚಿಕಿತ್ಸಾಭಾಗವನ್ನು ಹೇಗೋ ನೀಗಿದರು. ಪ್ರಾಚೀನಕಾಲದ ಭಾರತೀಯರು ಶಸ್ತ್ರಚಿಕಿತ್ಸೆಯಲ್ಲಿಯೂ ಪ್ರವೀಣರಾಗಿ ಮೂಗನ್ನು ಶಸ್ತ್ರಪ್ರಯೋಗದಿಂದ (Rhinoplasty) ಗುಣಪಡಿಸುವುದೇ ಮುಂತಾದ ಅನೇಕ ಕ್ರಿಯೆಗಳನ್ನು ನಡೆಸುತ್ತಿದ್ದ ಸಂಗತಿಯು ಸ್ಮರಣೆಯಲ್ಲಿ ಮಾತ್ರ ಇದೆ.

ಶಾಸ್ತ್ರರಾಶಿಯ ವಿಷಯಕ್ಕೆ ಸೇರಬಹುದಾದ ಇನ್ನೊಂದು ವಿಭಾಗ ವುಂಟು. ಅದನ್ನು ಭೂತವಿದ್ಯೆಯೆಂದು ಸಾಮಾನ್ಯವಾಗಿ ಕರೆಯಬಹುದು. ಪಾಶ್ಚಾತ್ಯರಲ್ಲಿ ಇತ್ತೀಚಿಗೆ ಕೆಲವರು ಆ ರಹಸ್ಯವಿದ್ಯೆಗಳಲ್ಲಿ ಆಸಕ್ತರಾಗಿ ಅದನ್ನು ಅಜ್ಞಾತ ಶಾಸ್ತ್ರಭಾಗವೆಂದು ಭಾವಿಸಿ ಅವುಗಳನ್ನು ಅಭ್ಯಾಸ ಮಾಡಲು ಪ್ರಾರಂಭಿಸಿದ್ದಾರೆ. ಭಾರತೀಯ ಯೋಗಿಗಳು, ಯೋಗಭ್ರಷ್ಟರು, ಮಾಂತ್ರಿಕರು, ಐಂದ್ರಜಾಲಿಕರು ಮುಂತಾದವರು ಸಾಧಿಸುವ ಶಾಸ್ತ್ರಗಳು ಪಾಶ್ಚಾತ್ಯರಿಂದ ಸಾಧಿತವಾಗಿಯೇ ಇಲ್ಲ. ಆ ಶಾಸ್ತ್ರಗಳ ವೃತ್ತಾಂತವನ್ನು ಮಾತ್ರ ಈಗಿಂದಾಗ್ಗೆ ಕೇಳುತ್ತಿರುತ್ತೇವೆ.

**ದುಷ್ಟ ಆಕ್ಷೇಪಗಳು**

ಭಾರತೀಯರಲ್ಲಿ ಶಾಸ್ತ್ರಸಾಧನೆಯು ಹೆಚ್ಚಾಗಿ ನಡೆದಿದ್ದಿತೆಂದು ತಿಳಿದೊಡನೆಯೇ ಎರಡು ಬಗೆಯ ದುಷ್ಟ ಸಲ್ಲಾಪಗಳು ಸಾಧಾರಣವಾಗಿ ಮೂಡುತ್ತವೆ. ಒಂದು ಕಡೆ "ನಮ್ಮ ಹಿರಿಯರಿಗೆ ಎಲ್ಲವೂ ತಿಳಿದಿತ್ತು. ಈ ರೈಲುಗಳು, ವಿಮಾನಗಳು ಮುಂತಾದವು ಎಲ್ಲವೂ ನಮ್ಮ ಶಾಸ್ತ್ರಗಳಲ್ಲಿರತಕ್ಕವೇ" ಎಂದು ವಿಚಾರಶೂನ್ಯವಾಗಿ ನಿಶ್ಚಯಮಾಡಿಕೊಂಡು ಮೂರ್ಖತೆಸಿಸುವುದು; ಮತ್ತೊಂದು ಕಡೆ "ಶಾಸ್ತ್ರವೃದ್ಧಿಯನ್ನು ಭಾರತೀಯರು ನಡೆಸಿದುದು ನಿಜವೇ ಆದರೆ ರೈಲುಗಳನ್ನು ಏಕೆ ಕಂಡುಹಿಡಿಯಲಿಲ್ಲ? ತಂತೀ ವರ್ತಮಾನ ಕೊಡುವುದನ್ನು ಕಲಿತಿದ್ದರೇ ಅವರು?" ಎಂದು ಆಕ್ಷೇಪಿಸುವುದು. ಮೊದಲನೆಯ ಅಪತ್ತನ್ನು ಕುರಿತು ಹೆಚ್ಚಾಗಿ ಹೇಳಬೇಕಾದುದಿಲ್ಲ. ಎರಡನೆಯದು ಆಕ್ಷೇಪರೂಪವಾಗಿ ಸಾಮಾನ್ಯವಾಗಿ ತೋರಬಹುದಾದುದರಿಂದ ಅದಕ್ಕೆ ಮಾತ್ರ ಸಮಾಧಾನವೇನೆಂಬುದನ್ನು ಕಾಣಬಹುದು.

ಸಮೃದ್ಧಿಯುಳ್ಳ ದೇಶದಲ್ಲಿ ಜೀವನವನ್ನು ಹೂತ್ತಿದ್ದ ಭಾರತೀಯರಿಗೆ ಶಾಸ್ತ್ರ ಶೋಧನೆಯು ಅವರ ಜೀವನದಲ್ಲಿ ಎಷ್ಟು ಅವಶ್ಯಕವಾಗಿದ್ದಿತೋ ಅಷ್ಟುಮಾತ್ರದ ಉಪಯುಕ್ತತೆಯನ್ನು ಪಡೆದಿದ್ದಿತು. ಪಾಶ್ಚಾತ್ಯರಲ್ಲಿಯೂ ಔದ್ಯೋಗಿಕ ಕ್ರಾಂತಿಯೆಂಬುದು ಮೂಡಿದ ತರುವಾಯವೇ ರೈಲು, ತಂತಿ, ವಿಮಾನ ಮುಂತಾದವು ಸಾಧಿತವಾದವು. ಯಂತ್ರನಿರ್ಮಾಣವು ಹೆಚ್ಚುತ್ತ ಯಂತ್ರಯೋಜನೆಯ ಚಾತುರ್ಯ ಕೌಶಲಗಳೂ ಹೆಚ್ಚಿದುವು; ದೇಶಭಕ್ತಿಯು ರಾಷ್ಟ್ರಭಕ್ತಿಯ ನಿಷ್ಠೆಯನ್ನು

ಉಜ್ವಲರೂಪದಲ್ಲಿ ತಾಳಿ ರಾಷ್ಟ್ರಗಳು ಪರಸ್ಪರವಾಗಿ ಸ್ಪರ್ಧಿಸಿ ಯುದ್ಧಕ್ಕೆ ತೊಡಗಿದಾಗ ಶಾಸ್ತ್ರ ಸಾಧನೆಯು ಯುದ್ಧವಿದ್ಯೆಗೆ ಪ್ರಧಾನವಾದುದೂ ಆದರಂತೆಯೇ. ಜೀವನದಲ್ಲಿ ಅವಶ್ಯ ತೋರಿದಂತೆ ಶಾಸ್ತ್ರ ಭಾಗವು ಪ್ರಸ್ತಾರಗೊಳ್ಳುವುದು. ಯುದ್ಧದ ಆವಶ್ಯಕತೆಯೂ ರೀತಿಯೂ ಪಾಶ್ಚಾತ್ಯ ರಾಷ್ಟ್ರಗಳಲ್ಲಿರುವ ಬಗೆಯಲ್ಲಿಯೇ ಭಾರತವರ್ಷದಲ್ಲಿ ತೋರಿಕೊಂಡಿದ್ದ ಪಕ್ಷದಲ್ಲಿ ವಿಷವಾಯುಗಳ, ಅಗ್ನಿದ್ರಾವಕಗಳ ಪ್ರಯೋಗ ಸ್ವಪ್ರಜ್ಞೆಯೇ ಭಾರತೀಯರಲ್ಲಿ ಹೆಚ್ಚುತ್ತಿತ್ತು. ಭರತವರ್ಷದ ಪರಿಸ್ಥಿತಿಯನ್ನನುಸರಿಸಿಕೊಂಡು ಬೆಳೆದ ಭಾರತೀಯ ಸಂಸ್ಕೃತಿಯಲ್ಲಿ ಶಾಂತಿಸಾಧನೆಯು ಪರಮ ಲಕ್ಷ್ಯವಾದ ತರುವಾಯ ಶಾಸ್ತ್ರ ಭಾಗಗಳು ಆ ಲಕ್ಷ್ಯಕ್ಕೂ ಕಾಲಸ್ಥಿತಿಗತಿಗಳಿಗೂ ಅನುಗುಣವಾಗಿ ವಿಪುಲವಾದವು. ಕೈಗಾರಿಕಗಳಲ್ಲಿಯೂ ಕುಶಲ ಕಲೆ (Industrial Arts) ಗಳಲ್ಲಿಯೂ ಅಗ್ರಸ್ಥಾನವನ್ನು ಪಡೆದಿದ್ದ ಭರತವರ್ಷದಲ್ಲಿ ಲೋಹ ಪರೀಕ್ಷೆಯಲ್ಲಿಯೂ ಕಬ್ಬಿಣ, ಚಿನ್ನ, ಬೆಳ್ಳಿ ಕೆಲಸಗಳಲ್ಲಿಯೂ ನೀಲಿಗಿಡದಿಂದ ಬಣ್ಣಗಳನ್ನು ಸಿದ್ಧಗೊಳಿಸುವುದರಲ್ಲಿಯೂ ಶಾಸ್ತ್ರಜ್ಞಾನವು ಆಚರಣೆಯಲ್ಲಿ ತೋರಿಕೊಳ್ಳದೆ ಇರಲಿಲ್ಲ.

## ವ್ಯಾಪಾರೋದ್ಯೋಗಗಳು

**ವ್ಯಾಪಾರ ವ್ಯಾಪ್ತಿ**

ಸರ್ವಲೋಕಗ್ರಾಹ್ಯವಾದ ಮಂತ ತತ್ತ್ವಗಳ ಪ್ರಕಾಶಕ್ಕೆ ಅನುಕೂಲವಾದ ಪರಿಸ್ಥಿತಿಯಲ್ಲಿ ಶಾಸ್ತ್ರಜ್ಞಾನವು ತತ್ತ್ವಸಾಧನೆಗೂ ಜೀವನ ಸಂಕಟಗಳ ನಿವಾರಣೆಗೂ ಸಾಧಕವಾಗಿ ಪರಿಣಮಿಸಿತು. ವ್ಯಾಪಾರೋದ್ಯೋಗಗಳು ಭಾರತೀಯ ಬಾಳುವೆಯ ಉಸಿರಾಗಿರಲಿಲ್ಲ; ಆದ್ದರಿಂದ ಶಾಸ್ತ್ರಜ್ಞಾನದ ಉಪಯುಕ್ತತೆಯು ಆಯುರ್ವೇದವಿದ್ಯೆಗಳಲ್ಲಿ ತತ್ತ್ವಸಾಧನೆಯವುಗಳಲ್ಲಿ ತೋರಿದಷ್ಟು, ಕೈಗಾರಿಕೆಗಳಲ್ಲಾಗಲಿ ವಾಹಕ (Means of Transport) ವಿಜೃಂಭಣೆಯಲ್ಲಾಗಲಿ ತೋರಿಕೊಳ್ಳಲಿಲ್ಲ. ಪೂರ್ವ ಪಶ್ಚಿಮ ದಿಕ್ಕುಗಳೆರಡರಲ್ಲಿಯೂ ವಿಸ್ತಾರವಾದ ವ್ಯಾಪಾರವನ್ನು ನಡೆಸಿದಾಗ್ಯೂ ಭಾರತೀಯರು ಸಹಜಪೂರ್ಣವಾದ (Naturally self-sufficient) ದೇಶವನ್ನು ಪಡೆದವರಾದುದರಿಂದ ವ್ಯಾಪಾರವನ್ನೇ ಜೀವನುಸಿರೆಂದು ಭಾವಿಸುವ ಆವಶ್ಯಕತೆಯಿರಲಿಲ್ಲ. ಭೂಮಧ್ಯಸಮುದ್ರದ ದೇಶಗಳಿಂದ

ಮೊದಲ್ಗೊಂಡು ಜಪಾನ್ ದೇಶದವರೆಗೂ ಭಾರತೀಯ ವ್ಯಾಪಾರವು ವಿಸ್ತಾರಗೊಂಡಿತ್ತು. ಏಷ್ಯಾ, ಯೂರೋಪ್, ಆಫ್ರಿಕಾ ಖಂಡಗಳಲ್ಲಿ ಯಾವ ಯಾವ ರಾಜ್ಯಗಳೂ ಸಾಮ್ರಾಜ್ಯಗಳೂ ತೋರಿಕೊಂಡವೋ ಅವುಗಳೆಲ್ಲವೂ ಭಾರತೀಯರೊಡನೆ ವ್ಯಾಪಾರವನ್ನು ನಡೆಸಿಯೇ ಜೀವನ ಸಮೃದ್ಧಿಯನ್ನೂ ನಾಗರಿಕತೆಯನ್ನೂ ಪಡೆದುವು. ಭಾರತೀಯ ವಸ್ತ್ರಭೂಷಣಗಳಿಲ್ಲದವರು ಆ ದೇಶಗಳಲ್ಲಿ ಶ್ರೇಷ್ಠತೆಯನ್ನು ಪಡೆಯುತ್ತಿರಲಿಲ್ಲ. ವಾಸನಾದ್ರವ್ಯಗಳು, ಹತ್ತಿಯ ಬಟ್ಟೆಗಳು, ಆಭರಣಗಳು ಮುಂತಾದ ಅಲಂಕಾರ ವಸ್ತುಗಳು ಭಾರತಭೂಮಿಯಲ್ಲಿ ಉತ್ಪತ್ತಿಯಾದಂತೆ ಮತ್ತಾವ ಕ್ಷೇತ್ರದಲ್ಲಿಯೂ ಸಿದ್ಧವಾಗಲಾರದಿದ್ದುದೇ ಆ ವ್ಯಾಪಾರ ವಿಸ್ತಾರಕ್ಕೆ ಕಾರಣವಾಗಿತ್ತು.

**ಭಾರತ ವಿಸ್ತರಣ**

ಪಶ್ಚಿಮದಲ್ಲಿ ಮಿಸ್ರದೇಶ, ಬಾಬಿಲೋನಿಯ, ಸಿರಿಯ, ಇರಾನ್, ಗ್ರೀಸ್ ಮತ್ತು ರೋಮಕ ಸಾಮ್ರಾಜ್ಯಗಳೊಂದಿಗೂ ಪೂರ್ವದಿಕ್ಕಿನಲ್ಲಿ ಮಲಯ, ಶ್ಯಾಮ, ಕಾಂಬುಜ, ಚಂಪಾ, ಚೀನಾ, ಜಪಾನುಗಳೊಂದಿಗೂ ಇತಿಹಾಸ ಪ್ರಾರಂಭದಿಂದಲೇ ಭಾರತೀಯ ವ್ಯಾಪಾರವು ಮೊದಲಾಯಿತು. ರೋಮಕ ಸಾಮ್ರಾಜ್ಯದ ಪಶ್ಚಿಮಾರ್ಧವು ಧ್ವಂಸವಾದ ತರುವಾಯ ಆ ಸಾಮ್ರಾಜ್ಯದ ಪೂರ್ವಾರ್ಧ, ಫಾರಸೀಸ್ತಾನ್, ತುರ್ಕಿ, ಇಟಲಿಯ ನಗರಗಳೊಂದಿಗೆ ವ್ಯಾಪಾರವು ಏಕಪ್ರಕಾರವಾಗಿಯೇ ನಡೆಯುತ್ತಿತ್ತು. ಈ ವ್ಯಾಪಾರದಲ್ಲಿ ಭಾರತೀಯರು ಮಾರುತ್ತಿದ್ದರೇ ವಿನಾ ಕೊಳ್ಳುತ್ತಿರಲಿಲ್ಲ; ಏಕೆಂದರೆ ಅನ್ಯದೇಶಗಳಲ್ಲಿ ದೊರಕಬಹುದಾಗಿಯೂ ಸ್ವದೇಶದಲ್ಲಿ ಅಲಭ್ಯವಾಗಿಯೂ ಅವಶ್ಯವಾಗಿಯೂ ಇದ್ದ ಸರಕೇ ಭಾರತೀಯರಿಗೆ ಇರಲಿಲ್ಲ. ಇದರ ಪರಿಣಾಮವಾಗಿ ಇತರ ದೇಶಗಳ ಚಿನ್ನಬೆಳ್ಳಿಗಳು ಭಾರತವರ್ಷಕ್ಕೆ ಬಂದು ರಾಶಿ ರಾಶಿಯಾಗುತ್ತಿದ್ದುವು. ಪೂರ್ವದಿಕ್ಕಿನಲ್ಲಿ ನಡೆದ ವ್ಯಾಪಾರ ಪ್ರಭಾವದಿಂದ ಜಾವ, ಸುಮಾತ್ರ, ಶ್ಯಾಮ, ಕಾಂಬುಜ, ಚಂಪಾಕ್ಷೇತ್ರಗಳು ಉಪಭಾರತವರ್ಷ*ಗಳಾಗಿ ಪರಿಣಮಿಸಿದುವು; ಇಂದಿಗೂ ಆ ವಿಭಾಗಗಳು

---

* ಉಪಭಾರತವರ್ಷಗಳ ಪ್ರಜ್ಞೆಯು ಪೂರ್ವದಲ್ಲಿ ದೃಢವಾಗಿತ್ತೆಂಬುದು 'ಭಾರತಸ್ಯಾಸ್ಯ ವರ್ಷಸ್ಯ ನವ ಭೇದಾನ್ನಿಬೋಧತ' ಮೊದಲಾಗಿ ಮತ್ಸ್ಯಪುರಾಣ ಮುಂತಾದವುಗಳ ವಿವರದಿಂದ ತಿಳಿಯುತ್ತದೆ.

ಫರ್ದರ್ ಇಂಡಿಯ ಅಥವಾ ಭಾರತೀಯ ವಿಸ್ತರಣ ಅಥವಾ ಬೃಹತ್ತರ ಭಾರತವೆಂದೇ ಹೆಸರಾಗಿವೆ. ಪಾಶ್ಚಾತ್ಯ ಕ್ಷೇತ್ರಗಳಲ್ಲಿ ಭಾರತೀಯ ವ್ಯಾಪಾರದ ಮಹಿಮೆಯಿಂದ ಚೋದ್ಯವೆನಿಸುವ ಹಲಕೆಲವು ಚಿತ್ರಕಥೆಗಳು ಹುಟ್ಟಿಕೊಂಡವು; ಭಾರತೀಯ ವಸ್ತುಗಳಲ್ಲಿ ಮೆಚ್ಚುಗೆಯು ಹುಚ್ಚು ಹುಚ್ಚಾಗಿ ರೇಗಿತು. ಗ್ರೀಕ ಜನರು ಭರತವರ್ಷದಲ್ಲಿ ಉಣ್ಣೆದರುವ ವೃಕ್ಷಗಳು (Wool-bearing trees) ಬೆಳೆಯುತ್ತವೆಯೆಂದೂ ಭಾರತೀಯ ರಾಜರಲ್ಲಿ ಬಂಗಾರವನ್ನು ಭೂಮಿಯೊಳಗಿಂದ ಅಗೆದು ತಂದೊಪ್ಪಿಸುತ್ತಿದ್ದ ಪಿಪೀಲಿಕಾ ಸೈನ್ಯ (Gold digging ants) ಗಳುಂಟೆಂದೂ ನಂಬಿದ್ದರು.

ವ್ಯಾಪಾರ ಮೋಹ

ರೋಮಕ ಸಾಮ್ರಾಜ್ಯವು ಭವ್ಯವಾಗಿ ರೋಮಕರಲ್ಲಿ ವೈಭವವು ತೋರಿಕೊಂಡ ಕಾಲದಲ್ಲಿ ಭರತವರ್ಷದ ಶ್ರೇಷ್ಠವಸ್ತುಗಳಿಗಾಗಿಯೂ ಸಂಬಾರದ ಪದಾರ್ಥಗಳಿಗಾಗಿಯೂ ರೋಮಕರು ಪಟ್ಟ ಆಸೆಯು ವರ್ಣನೆಗೂ ಮೀರಿ ಮಿತಿಮೀರಿತು. ರೋಮಕರಲ್ಲಿ ಪ್ರಾಜ್ಞರಾದವರು ಈ ಹುಚ್ಚನ್ನು ಕಂಡು ಖೇದಗೊಂಡು ರೋಮಕರ ಐಶ್ವರ್ಯ ನಷ್ಟವಾಗುವುದು ಮಾತ್ರವೇ ಅಲ್ಲದೆ ನೀತಿಯೂ ನಷ್ಟವಾಗುವದೆಂದು ಮೊರೆಯಿಟ್ಟರು. ಭರತವರ್ಷದ ಶ್ರೇಷ್ಠವಸ್ತುಗಳನ್ನು ಧರಿಸುವರು ಶಿಕ್ಷೆಗೆ ಗುರಿಯಾದಾರೆಂದು ರೋಮಕ ಸಮ್ರಾಟನೊಬ್ಬಾತನು ಪ್ರಕಟಿಸಬೇಕಾಯಿತು. ರೋಮಕ ಪಟ್ಟಣವು ವಿಧ್ವಂಸವಾದಮೇಲೆ ಯೂರೋಪಿನಲ್ಲಿ ನಡೆದ ಅಂಧಕಾರ ಯುಗದಲ್ಲಿಯೂ ಮಧ್ಯಯುಗದಲ್ಲಿಯೂ ಭಾರತೀಯ ಅಥವಾ ಪ್ರಾಚ್ಯಕ್ಷೇತ್ರಗಳ ಐಶ್ವರ್ಯ ವೈಭವಗಳನ್ನು ಕುರಿತು ನಾನಾಬಗೆಯಾದ ವೃತ್ತಾಂತಗಳು ಬಳಕೆಯಲ್ಲಿದ್ದವು. ಭರತವರ್ಷಕ್ಕೆ ದಾರಿಯನ್ನು ಹುಡುಕುವ ಕೋಲಾಹಲದಲ್ಲಿಯೇ ಐರೋಪ್ಯರು ಮಧ್ಯಕಾಲವನ್ನು ದಾಟಿ ಆಧುನಿಕ ಕಾಲದಲ್ಲಿ ಹೆಜ್ಜೆಯಿಡುವವರಾದರು.

ಕೈಗಾರಿಕೆ

ವಜ್ರವೈಢೂರ್ಯಗಳು, ಮುತ್ತು, ಕೆಂಪು, ಹವಳಗಳು ಮುಂತಾದ ರತ್ನಗಳಲ್ಲದೆ ಸಾಂಬಾರದ್ರವ್ಯಗಳೆಂಬವು ಭರತವರ್ಷದಲ್ಲಿಯೇ ತವರ್ಮನೆ ಮಾಡಿಕೊಂಡಿದ್ದಂತಿತ್ತು. ಅವುಗಳನ್ನಲ್ಲದೆ ಭಾರತೀಯರು ತಮ್ಮ ಕೈಗಾರಿಕೆಯ ವಸ್ತುಗಳನ್ನೂ ತೆಗೆದುಕೊಂಡು ಅನ್ಯದೇಶಸ್ಥರಿಗೆ ಮಾರುತ್ತಿದ್ದರು.

ದೇಶದಲ್ಲಿ ವ್ಯವಸಾಯವೇ ಪ್ರಧಾನವಾಗಿದ್ದಾಗ್ಯೂ ವ್ಯವಸಾಯದ ಜತೆಗೆ ಅನೇಕಾನೇಕ ಉದ್ಯೋಗಗಳೂ ಕೈಗಾರಿಕೆಗಳೂ ಉತ್ಕೃಷ್ಟವಾಗಿ ರಂಜಿಸುತ್ತಿದ್ದವು. ನೆಯ್ಗೆಯ ಮತ್ತು ಬಣ್ಣದ ವೃತ್ತಿಗಳಲ್ಲಿಯೂ ಲೋಹ, ಮರ, ಚರ್ಮಗಳ ನಿರ್ಮಾಣದಲ್ಲಿಯೂ ಭಾರತೀಯರಷ್ಟು ಕುಶಲಿಗಳು ಮತ್ತಾರೂ ಇರಲಿಲ್ಲ. ಹೀಬ್ರೂ ಭಾಷೆಯ ಕೋಫ್, ತುಕೀಂ ಶಬ್ದಗಳೂ ಗ್ರೀಕ್ ಭಾಷೆಯ ಸಿಂದನ್, ಒರೂಸಾ ಶಬ್ದಗಳೂ ಇಂಗ್ಲಿಷಿನಲ್ಲಿ ಬಳಕೆಯಲ್ಲಿರುವ ಜಿಂಜರ್ (Ginger), ಕ್ಯಾಲಿಕೊ (Calico), ಮಸ್ಲಿನ್ (Muslin), ಬ್ರೂಚ್ (Brooch), ಮುಂತಾದ ಶಬ್ದಗಳೂ ವ್ಯುತ್ಪತ್ತಿಯಲ್ಲಿಯೇ ಆ ಕೌಶಲವನ್ನು ಸೂಚಿಸುತ್ತವೆ. ರತ್ನಗಳು ಮತ್ತು ಚಿನ್ನ, ತಾಮ್ರ, ಕಬ್ಬಿಣ, ಉಪ್ಪು, ಅಭ್ರಕ ಮುಂತಾದ ಲೋಹಗಳ ಖನಿಗಳ ಕೆಲಸಗಳಲ್ಲಿ ಭಾರತೀಯರು ಪ್ರವೀಣರಾಗಿದ್ದರು; ಬಣ್ಣವಿಡುವುದರಲ್ಲಿ, ಖಚನಕಾರ್ಯದಲ್ಲಿ, ಕೆತ್ತನೆಯಲ್ಲಿ, ನಕ್ಷಿಕೆಲಸದಲ್ಲಿ ಅಥವಾ ಆಲಂಕಾರಿಕ ಚಾತುರ್ಯದಲ್ಲಿ ಅಸಮಾನರೆನಿಸಿದ್ದರು. ಇಷ್ಟು ಕುಶಲತೆಯುಳ್ಳವರು ಸಮುದ್ರಯಾನದಲ್ಲಿಯೂ ನೌಕಾನಿರ್ಮಾಣದಲ್ಲಿಯೂ ಸಮರ್ಥರಾಗಿಯೇ ಇದ್ದರು; 17ನೆ ಶತಮಾನದಲ್ಲಿ ಭಾರತೀಯರು ಕಟ್ಟಿದ ಹಡಗುಗಳೇ ತಮ್ಮ ಹಡಗುಗಳಿಗಿಂತ ದೃಢವಾಗಿದ್ದುವೆಂದು ಈಸ್ಟಿಂಡಿಯ ಕಂಪೆನಿಯವರೇ ತಮ್ಮ ಪತ್ರಗಳಲ್ಲಿ ಬರೆದುಕೊಂಡರು. ಸರ್ವಕಾಲಗಳಲ್ಲಿಯೂ ಕುಶಲ

**ಅಲಂಕಾರ ಚಾತುರ್ಯ** ಕಲೆಗಳಲ್ಲಿ (Industrial Arts) ಭಾರತೀಯರು ಅದ್ವಿತೀಯರೆನಿಸಿಯೇ ಇದ್ದಾರೆ. ನೀರೋ ಎಂಬ ರೋಮಕ ಚಕ್ರವರ್ತಿಯು ರತ್ನಖಚಿತವಾದ ಒಂದು ಪಾನಪಾತ್ರೆಯನ್ನು £55,125ರಷ್ಟು ಹಣ ಸುರಿದು ಭಾರತೀಯ ವರ್ತಕರಿಂದ ಕೊಂಡುಕೊಂಡನು; ಅಂದಿನಿಂದ ಐರೋಪ್ಯ ರಾಜಪುರುಷರೂ ಶ್ರೀಮಂತರೂ ತಮಗೆ ಬೇಕಾದ ಭೋಗ್ಯವಸ್ತುಗಳನ್ನೂ ಆಲಂಕಾರಿಕ ಪದಾರ್ಥಗಳನ್ನೂ ಭರತವರ್ಷದಿಂದಲೇ ತರಿಸಿಕೊಳ್ಳುತ್ತಿದ್ದರು. ಮಧ್ಯಕಾಲದ ಐರೋಪ್ಯರು ದಮಾಸ್ಕಸ್ ನಿರ್ಮಿತವೆಂದು ಭ್ರಮಿಸಿದ್ದ ಉಕ್ಕಿನ ಆಯುಧಗಳೂ ವಸ್ತ್ರಪಟಗಳೂ ಭಾರತೀಯವೇ ಆಗಿದ್ದವು. ಒಳ್ಳೆ ಹದ ಹಿಡಿದ ಉಕ್ಕನ್ನು ಸಿದ್ಧಗೊಳಿಸುವ ಜಾಣ್ಮೆಯು ಭಾರತೀಯರದೇ ಆಗಿತ್ತು; ಕಾಶ್ಮೀರದ

ಶಾಲುಗಳ ಅಲಂಕಾರದ ಸೊಬಗನ್ನೂ ಢಾಕಾ ಪಟ್ಟಣದ ಅಬ್ರುವಾನ್, ಮಲ್ಮಲ್ ಖಾಸ್ ಮುಂತಾದ ನೆಯ್ದ ಗಾಳಿಯ ಪರೆಯ ಭೇದ ವಿಭೇದ ಗಳನ್ನೂ ನಾವು ಕೇಳಿಯೇ ಇದ್ದೇವೆ. ಭರತವರ್ಷವೇ ಉತ್ತಮ ಕೈಗಾರಿಕೆಗಳ ಬಿಡಾರವೆಂದು ಮುಘಲ ಬಾದಷಾಹಿಯ ಕಾಲದಲ್ಲಿ ಪಿಶ್ರುತ ವಾಗಿತ್ತು. ಅಟ್ಲಾಂಟಿಕ್ ಸಾಗರದ ತೀರದಿಂದ ಪೆಸಿಫಿಕ್ ಸಾಗರ ತೀರದವರೆಗೆ ಸಮಸ್ತ ದೇಶಗಳ ನಿವಾಸಿಗಳೂ ಭಾರತೀಯ ರಚಿತ ವಸ್ತ್ರ ಗಳನ್ನೇ ಧರಿಸುತ್ತಿದ್ದರೆಂದು ಮುಘಲ ಚರಿತ್ರಕಾರನೊಬ್ಬಾತನು (Moreland) ಮುಕ್ತಕಂಠವಾಗಿ ಹೇಳಿಬಿಡಬೇಕಾಯಿತು. ಜಗತ್ತಿನಲ್ಲಿ ಪ್ರಸಿದ್ಧಿಪಡೆದ ಅಲಂಕಾರಿಕ ವಸ್ತುಗಳ ಅಥವಾ ರತ್ನಾಭರಣಗಳ ಮೂಲವನ್ನು ಹುಡುಕುತ್ತ ಹೋದಲ್ಲಿ ಬಹುತರವಾಗಿ ಮುಘಲ ಬಾದ ಷಾಹಿಯನ್ನೇ ಕಾಣಬೇಕಾಗುವುದು.

## ಭೋಗ ವೈಭವಗಳು

ಐಶ್ವರ್ಯ ರಾಶಿ

ಮುಘಲ ಬಾದಷಾಹಿಯ ಕಾಲದಲ್ಲಿ ಇಡೀ ಪೃಥ್ವಿಯಲ್ಲಿ ಭರತ ಖಂಡವೇ ರತ್ನಭಂಡಾರವಾಗಿದ್ದ ಅಂಶವು ಎಲ್ಲರಿಗೂ ತಿಳಿಯಿತು. ವೈಭವ ಪ್ರೀತಿಯುಳ್ಳ ಷಾಜಹಾನ್ ಬಾದಷಹನು 5 ಕೋಟಿ ಬಾಳತಕ್ಕ ರತ್ನಾಭರಣ ಗಳನ್ನು ತೊಟ್ಟುಕೊಂಡು 70-80 ಕೋಟಿ ಬಾಳುವ ಮಯೂರಾಸನ ವನ್ನು ಏರಿದಾಗ ಲೋಕವೇ ಬೆರಗಾಯಿತು. ಮುಘಲರ ವೈಭವವು ಪ್ರಕಾಶವಾಗುವ ಮೊದಲು ಭಾರತೀಯ ಐಶ್ವರ್ಯ ರಾಶಿಯನ್ನು ಮನಗಾಣಬೇಕಾದರೆ ಪ್ರಯಾಣಿಕರ ವೃತ್ತಾಂತಗಳನ್ನೇ ಅರಸಬೇಕು. ಮೌರ್ಯ ಚಂದ್ರಗುಪ್ತನ ಆಸ್ಥಾನದಲ್ಲಿ ಮೆಗಾಸ್ಥನೀಸನು ಕಂಡ ಆರಡಿ ಯಗಲವಿದ್ದ ಸುವರ್ಣ ಪಾತ್ರಗಳು, ಚಿನ್ನ ಬೆಳ್ಳಿಗಳ ಲತೆಗಳಿಂದಲೂ ಮೃಗ ಪಕ್ಷಿಗಳಿಂದಲೂ ಅಲಂಕೃತವಾದ ಸ್ತಂಭಗಳು ಮೊದಲಾಗಿ ಮಹಮೂದ ಘಸನಿ, ಅಲ್ಲಾವುದ್ದೀನ್ ಖಿಲ್ಜಿ, ತೈಮೂರಲಂಗ ಮುಂತಾದವರು ಸಂಪಾದಿಸಿದ ಕೊಳ್ಳೆಯ ವಸ್ತುರಾಶಿಯ ವಿವರಗಳನ್ನು ಸ್ಥೂಲವಾಗಿ ಮನಗಂಡರೂ ಸಾಕು. ಮೊದಲೇ ಸೌಭಾಗ್ಯದಿಂದೊಡಗೂಡಿದ್ದ ಭರತ

ವರ್ಷವು ವ್ಯಾಪಾರದ ದೆಸೆಯಿಂದ ಇತರ ದೇಶಗಳ ಸಂಪತ್ತನ್ನು ಸೆಳೆಯುತ್ತಿದ್ದು ಬೆಟ್ಟದಷ್ಟು ಐಶ್ವರ್ಯದಿಂದ ಶೋಭಿಸುತ್ತಿದ್ದುದು ಸಹಜ ಗತಿಯೇ ಆಗಿತ್ತು.

ಸತ್ಪರಿಣಾಮ

ಐಶ್ವರ್ಯ ವೃದ್ಧಿಯಿಂದ ಸಾಧಾರಣವಾಗಿ ನೀತಿಕ್ಷಯವು ಮೂಡುವುದು ಎಲ್ಲೆಲ್ಲಿಯೂ ಅನುಭವಸಿದ್ಧ. ರೋಮಕ ಸಾಮ್ರಾಜ್ಯವೇ ಅದಕ್ಕೆ ನಿದರ್ಶನ. ಸಾಮ್ರಾಜ್ಯ ರೂಪವನ್ನು ತಾಳಿದಮೇಲೆ ರೋಮಕರಲ್ಲಿ ಬಲವೂ ಐಶ್ವರ್ಯವೂ ಎರಡೂ ಭದ್ರಗೊಂಡವು; ತರುವಾಯ ಭೋಗಲೋಲುಪ್ತಿಯು ಹೆಚ್ಚಿತು. ಭೋಗಾಭಿಲಾಷೆಯು ವಿಪರೀತವಾಗಿ ಪರಿಣಮಿಸಿ ರೋಮಕರು ಮೃಗಪ್ರಾಯರಾದರು. 'ತಿನ್ನುವುದು ವಮನಮಾಡುವುದಕ್ಕೆ, ವಮನ ಮಾಡುವುದು ತಿನ್ನುವುದಕ್ಕೆ' ಎಂಬತಕ್ಕ ಸ್ಥಿತಿಯು ಅವರ ಜಿಹ್ವಾ ಚಾಪಲ್ಯವೊಂದನ್ನು ಮಾತ್ರ ಸೂಚಿಸುವುದು; ಇತರ ರೀತಿಗಳಲ್ಲಿ ತೋರಿಕೊಂಡ ನೀತಿಭ್ರಷ್ಟತೆಯು ವರ್ಣನಾತೀತವಾಗಿದ್ದಿತು. ಈ ನೀತಿನಾಶವೇ ರೋಮಕರ ಸರ್ವನಾಶಕ್ಕೆ ಮೂಲವಾಯಿತು. ಭಾರತೀಯರಲ್ಲಿ ಶೇಖರವಾದ ಐಶ್ವರ್ಯರಾಶಿಯು ರೋಮಕರಲ್ಲಿ ಸೇರಿದ ರಾಶಿಗಿಂತ ವಿಪುಲವಾಗಿದ್ದಿತಲ್ಲವೆ? ಅಷ್ಟು ವಿಭವದಿಂದ ಕೂಡಿದ ಭಾರತೀಯರಲ್ಲಿ ಭೋಗ ವೈಪರೀತ್ಯಗಳು ತೋರಿಕೊಳ್ಳದೆ ಹೋದುವೇ? ಎಂಬ ಪ್ರಶ್ನೆಗೆ ಉತ್ತರವಾಗಿ ಇಷ್ಟು ಮಾತ್ರ ಹೇಳಬಹುದು. ಭೋಗಲೋಲುಪ್ತಿಯು ಪರಮಾವಧಿಯನ್ನು ಮುಘಲರ ಕಾಲದಲ್ಲಿಯೇ ಕಾಣಬಹುದು. ಸುಗಂಧ ವಸ್ತುಗಳ ವೈಖರಿಯ ಪರೀಕ್ಷೆಯೊಂದರಿಂದಲೇ ಆ ಕಾಲದ ಭೋಗದ ಪರಿಮಿತಿಯೆಲ್ಲಿದ್ದಿತೆಂದು ಸೂಚಿತವಾಗುವುದು. ಆದರೆ ಒಟ್ಟಿನಲ್ಲಿ ಐಶ್ವರ್ಯ ವೃದ್ಧಿಯು ಭರತಖಂಡದಲ್ಲಿ ನೀತಿವಿನಾಶಕ್ಕೆ ಕಾರಣವಾಗಿ ಪರಿಣಮಿಸಲಿಲ್ಲವೆಂಬುದು ನಿಜ. ಭಾರತೀಯರೆಲ್ಲರೂ ಯಾವ ಕಾಲದಲ್ಲಿಯೂ ವಿರಕ್ತರಾಗಿದ್ದುದಿಲ್ಲ; ತಿಂಡಿಪೋತರ, ಪಾನಮತ್ತರ, ಪರಮಲೋಭಿಗಳ, ಭೋಗಾಸಕ್ತರ ವೃತ್ತಾಂತಗಳು ಭಾರತೀಯರಲ್ಲಿಯೂ ಯಥೇಚ್ಛವಾಗಿ ಉಂಟು. ಆದರೂ ದೇಶದಲ್ಲಿ ಸೇರಿದ ಐಶ್ವರ್ಯ ರಾಶಿಯಲ್ಲಿ ಒಂದು ಪಾಲು ಮಾತ್ರ ಭೋಗದಲ್ಲಿ ವಿನಿಯೋಗವಾಯಿತು; ವಿಶೇಷವೆನಿಸಿದ ಭಾಗವು ಲಲಿತಕಲೆಗಳ

ಪ್ರೋತ್ಸಾಹದಲ್ಲಿಯೂ ಪುಣ್ಯಕಾರ್ಯಗಳೆಂಬವುಗಳಲ್ಲಿಯೂ ವಿನಿಯೋಗವಾಯಿತು. ಭಾರತೀಯ ಧರ್ಮದಲ್ಲಿ ಅಥವಾ ಭಾರತೀಯ ಸಂಸ್ಕೃತಿಯಲ್ಲಿ ಧನಿಕನೂ ಶ್ರೀಮಂತನೂ ಆದಾತನು ತನ್ನಲ್ಲಿ ಸೇರಿದ ಐಶ್ವರ್ಯವನ್ನು ಪರಾರ್ಥಕ್ಕಾಗಿ ವಿನಿಯೋಗಿಸಬೇಕೆಂಬುದು ವಿಶಿಷ್ಟವಾದ ಒಂದು ಲಕ್ಷಣ.* ಪರಾರ್ಥದಲ್ಲಿ ದೃಷ್ಟಿಯು ಹೆಚ್ಚಾಗಿ ನಟ್ಟ ಕಾರಣದಿಂದ ನೀತಿಗೆ ಐಶ್ವರ್ಯ ವೃದ್ಧಿಯು ಹಾನಿಯನ್ನೊಡ್ಡದಾಯಿತು.

### ಕಲಾ ಪರಿಣತಿ

ಲಲಿತಕಲೆಗಳನ್ನು ಕುಶಲ ಕಲೆಗಳೆಂಬ ರಾಶಿಯಿಂದ ನಾವು ಮೊದಲು ಬೇರ್ಪಡಿಸಿಕೊಳ್ಳಬೇಕು. ಕುಶಲ ಕಲೆಗಳೆಂಬ ರಾಶಿಯಲ್ಲಿ ವಸ್ತುವು ಕಲಾವಿಶೇಷವಲ್ಲ; ಅದರ ಶೃಂಗಾರ ಅಥವಾ ಅಲಂಕಾರವು ಕಲೆಯಿಂದ ಕೂಡಿದ್ದು. ಲಲಿತಕಲೆ (Fine Arts)ಯೆಂಬ ರಾಶಿಯಲ್ಲಿ ಆದ್ಯಂತವಾಗಿ ಕಲಾ ಪ್ರಪಂಚವೇ. ಕಲೆ (Art)ಯೆಂಬುದಕ್ಕೂ, ಶಾಸ್ತ್ರ (Science) ವೆಂಬುದಕ್ಕೂ ಪಾಶ್ಚಾತ್ಯರಲ್ಲಿ ಒಂದು ಬಗೆಯ ಪ್ರಭೇದವುಂಟು; ಜೀವನದಲ್ಲಿ ಪ್ರಯೋಜನಕಾರಿಯಾದುದು ಶಾಸ್ತ್ರ, ಅಲಂಕಾರಿಕವಾದುದು ಕಲೆಯೆಂದು ಅವರಲ್ಲಿ ಕೆಲಕಾಲ ವಾದ ವಿವಾದಗಳು ನಡೆದವು. ಭಾರತೀಯರಲ್ಲಿ ಶಾಸ್ತ್ರವೆಂಬುದಕ್ಕೂ ಕಲೆಯೆಂಬುದಕ್ಕೂ ಅಂತಹ ವಿರೋಧವು ತೋರಿಕೊಳ್ಳಲಿಲ್ಲ; ಅದಕ್ಕೆ ದೂರವಾಗಿದ್ದಂತೆ ಕಂಡರೂ ಆರ್ಥಿಕ ಸ್ಥಿತಿಗತಿಗಳೇ ಮೂಲವಾದ ಕಾರಣ. ಶಾಸ್ತ್ರ ಮತ್ತು ಕಲಾ ಶಬ್ದಗಳನ್ನು ಬೇರೆಬೇರೆ ರಾಶಿಗಳಿಗೆ ಪ್ರಯೋಗಿಸಿದಾಗ್ಯೂ ಅನೇಕವೇಳೆ ಕಲೆಯನ್ನೇ ಶಾಸ್ತ್ರವೆಂದು ಸಹಜವಾಗಿ ಕರೆಯುತ್ತೇವೆ. ಸಂಗೀತವು ಕಲೆಯೂ ಹೌದು, ಶಾಸ್ತ್ರವೂ ಹೌದು.

* ಅಬೆ ಡ್ಯೂಬ್ವಾ (Abbe Dubois) ಎಂಬ ಫ್ರಾನ್ಸೀ ಪ್ರವಾಸಿಕನು ಈ ವಿಚಾರವಾಗಿ ಬರೆದುದನ್ನು ಗಮನಿಸಬಹುದು:—"ಯೂರೋಪ್ಯನು ಸಂಪಾದಿಸಿದುದನ್ನು ತಾನೇ ಅನುಭವಿಸುತ್ತಾನೆ. ಹಿಂದೂ ಆದವನು ತಾನು ಸಂಪಾದಿಸಿದುದರಲ್ಲಿ ಏನೂ ಇಲ್ಲದ ಇತರರಿಗೆ ಹಂಚಿ ಕೊಡುತ್ತಾನೆ. ಹಿಂದೂಗಳಲ್ಲಿ ಧನಿಕನಾದವನು ತನ್ನ ಆಸ್ತಿಗೆ ತಾನೇ ಸ್ವಾಮಿಯೆಂದು ಬಗೆಯದೆ ಇತರರ ಉಪಯೋಗಕ್ಕೆ ಉದ್ದಿಷ್ಟವಾಗಿ ತನ್ನ ವಶಕ್ಕೆ ಮಾತ್ರ ಬಂದ ಭಾಗವೆಂದು ತಿಳಿದಿರುವುದು ವಾಸ್ತವ. ದಾನ ಧರ್ಮವೆಂಬುದು ಅವರಲ್ಲಿ ಅಷ್ಟು ಸಹಜವಾಗಿದೆ."

(ಈ ವಾಕ್ಯಗಳಲ್ಲಿಯೂ ಮುಂದೆ ಬರುವ ಉದ್ಧೃತ ಪ್ರಸ್ತಾಪಗಳಲ್ಲಿಯೂ ತಾತ್ಪರ್ಯವನ್ನು ಮಾತ್ರ ಕನ್ನಡ ಮಾತಿನಲ್ಲಿ ಕೊಟ್ಟಿದೆ; ಪ್ರತಿ ವಾಕ್ಯವನ್ನು ಭಾಷಾಂತರಮಾಡಿಲ್ಲ.)

ಮುಖ್ಯ ಕಲೆಗಳು

ಶಾಸ್ತ್ರವಿಲ್ಲದೆ ಕಲಾ ಭಾಗವು ಅಭ್ಯಾಸವೇ ಆಗುವುದಿಲ್ಲ. ಭಾರತೀಯರಲ್ಲಿ ಕಲೆಗಳು ಒಟ್ಟು ಚತುಷ್ಷಷ್ಟಿ ಅಥವಾ 64 ಆಗಿದ್ದು, ಪ್ರತಿಯೊಂದಕ್ಕೂ ಶಾಸ್ತ್ರವಿದ್ದಿತು. ಸ್ಥೂಲವಾಗಿ ವಿಚಾರಮಾಡುವಾಗ ಮುಖ್ಯವೆನಿಸಿದ ಕಲೆಗಳನ್ನು ಮಾತ್ರ ನಾವು ಪ್ರಸ್ತಾಪಿಸಬೇಕು. ಮುಖ್ಯವಾದ ಕಲೆಗಳು ಯಾವುವೆಂದರೆ ಸಂಗೀತ, ಸಾಹಿತ್ಯ, ವಾಸ್ತು, ಶಿಲ್ಪ, ಚಿತ್ರ, ನೃತ್ಯ, ಅಭಿನಯಗಳು. ಈ ಏಳು ರಂಗಗಳಲ್ಲಿ ಭಾರತೀಯ ಸಾಧನೆಯೆಷ್ಟು ಮಾತ್ರ ನಡೆದಿದ್ದಿತೆಂಬುದನ್ನು ಅತಿಸಂಕ್ಷೇಪವಾಗಿ ಕಾಣಬಹುದು.

## ಗಾನಕಲೆ

ಭಾರತೀಯ ಸಂಗೀತದ ಅನುಭವವನ್ನು ಪಡೆದ ಐರೋಪ್ಯರು ಕೆಲವರು ಅದನ್ನು ಪ್ರಾಚೀನ ಗ್ರೀಕರ ಸಂಗೀತಕ್ಕೆ ಹೋಲಿಸಿ, ಗ್ರೀಕರ ಅಭ್ಯುದಯಕ್ಕೆ ಅಡ್ಡಿಗಳೊದಗದಿದ್ದ ಪಕ್ಷದಲ್ಲಿ ಗ್ರೀಕರ ಸಂಗೀತವೂ ಭಾರತೀಯರ ಸಂಗೀತದಂತೆಯೇ ವಿಕಾಸಪಡೆಯುತ್ತಿದ್ದಿತೆಂದು ಅಭಿಪ್ರಾಯಪಟ್ಟಿದ್ದಾರೆ. ಐರೋಪ್ಯರ ಸಂಗೀತಕ್ಕೂ ಭಾರತೀಯರ ಸಂಗೀತಕ್ಕೂ ಅಜಗಜಾಂತರವಿದೆ. ಭಾರತೀಯ ವಿಧಾನದಲ್ಲಿ **ಮಾಧುರ್ಯ ಪೋಷಣೆಯು** ಪ್ರಧಾನವಾದುದು; ಪಾಶ್ಚಾತ್ಯ ವಿಧಾನದಲ್ಲಿ ಸಂಕುಲ ಸಂಯೋಗವು ಪ್ರಧಾನವಾದುದು. ಭಾರತೀಯರ ಸಂಗೀತ ಶಾಸ್ತ್ರ ಪದ್ಧತಿಗಳು ಎಷ್ಟು ಪುರಾತನವೋ ಅಷ್ಟು ಗಂಭೀರವಾಗಿರುವುವು. ಸಾಮಾನ್ಯವಾಗಿ ಹಿಂದೂಸ್ತಾನಿ ಮತ್ತು ಕರ್ಣಾಟಕಗಳೆಂಬ ಭೇದವು ಮೊದಲಿನಲ್ಲಿ ತೋರುವುದು; ಅನುಭವವಾಗುತ್ತ ಆ ಭೇದವು ಅದೃಶ್ಯವಾಗುತ್ತದೆ. ಉತ್ತರ ದಕ್ಷಿಣಗಳೆರಡರಲ್ಲಿಯೂ ಸಂಗೀತವೆಂಬ ಕಲೆಯು ಭಾರತೀಯವೇ. ಇತರ ಕಲೆಗಳು ಕ್ಷೀಣತೆಯನ್ನು ಪಡೆದುವೆಂದು ಹೇಳಬಹುದು; ಸಂಗೀತ ಕಲೆಯು ಮಾತ್ರ ವಿಶೇಷವಾದ ಪ್ರೋತ್ಸಾಹವಿಲ್ಲದ ಕಾಲದಲ್ಲಿಯೂ ಕೂಡ ಸಚೇತನವಾಗಿರುವುದು.

ವೃದ್ಧಿ

ಭಾರತೀಯ ಸಂಗೀತ ಅಥವಾ ಗಾನ ಕಲೆಯು ಸಂಹಿತೆಗಳ ಕಾಲದಲ್ಲಿಯೇ ಪ್ರಾರಂಭವಾಯಿತು. ಸಾಮವೇದವು ಗಾಯನಕ್ಕೇ ಉದ್ದಿಷ್ಟವಾದುದು. ವಾದ್ಯಗಳೂ ಆ ಕಾಲದಲ್ಲಿಯೇ ಮೊದಲಾಗಿ ಗಾನವಿದ್ಯೆಯು ಗಾಂಧರ್ವ ವೇದವೆಂಬ ಒಂದು ಉಪವೇದವಾಗಿಯೇ ರೂಪಗೊಂಡಿತು.

ಭರತವರ್ಷದ ಪರಿಸ್ಥಿತಿಯಲ್ಲಿ ಗಾನವಿದ್ಯೆಯು ದೇವ ದೇವತೆಗಳ ಸ್ತೋತ್ರದಲ್ಲಿಯೇ ಹೆಚ್ಚಾಗಿ ಶೋಭಿಸಿತು. ವೈದಿಕ ಕಾಲದ ತರುವಾಯ ಸಂಗೀತ ವಿದ್ಯೆಯು ಅಭಿವೃದ್ಧಿಯನ್ನು ಪಡೆಯಿತು; ಹಿಂದೂಗಳ ಕಾಲವೆಂಬ ವಿಸ್ತಾರವಾದ ಅವಧಿಯಲ್ಲಿ ಅನೇಕಾನೇಕವಾದ ವಾದ್ಯಗಳಲ್ಲದೆ ಸಂಗೀತ ಶಾಸ್ತ್ರದಲ್ಲಿ ಗಹನವಾದ ಅಂಶಗಳು ಶೋಧಿತವಾದವು. ಮುಸಲ್ಮಾನರ ಆಳ್ವಿಕೆಯು ಮೊದಲಾದಮೇಲೆ ಮುಸಲ್ಮಾನ ಪ್ರಭುಗಳಲ್ಲಿ ಅನೇಕರು ಭಾರತೀಯ ಗಾನವನ್ನು ಪ್ರೋತ್ಸಾಹಿಸಿದರು. ಅಲ್ಲಾವುದ್ದೀನ್ ಕಾಲದ ಗೋಪಾಲನಾಯಕ, ಅಕ್ಬರ್ ಕಾಲದ ತಾನಸೇನರು ಪ್ರಸಿದ್ಧರು. ಮುಘಲ ಬಾದಷಾಹಿಯು ಖಿಲವಾಗಿ ದೇಶದಲ್ಲಿ ಅನಾಯಕತೆಯು ತುಂಬಿದ್ದ ಕಾಲದಲ್ಲಿಯೂ ಸಂಗೀತವು ಅಭಿವೃದ್ಧಿಯನ್ನೇ ಪಡೆಯಿತು. ಪೂರ್ವಾರ್ಜಿತದ ಭಾಗವು ನಷ್ಟವಾಗಿದ್ದರೂ ಕೂಡ ಭಾರತೀಯ ಗಾಯಕರು ತಮ್ಮ ಕಲೆಯನ್ನು ಮತ್ತಷ್ಟು ಅಭಿವೃದ್ಧಿಪಡಿಸಿಕೊಂಡರು. ಪಾಶ್ಚಾತ್ಯರ ಸಂಪರ್ಕವಾದ ತರುವಾಯ ದೇಶದಲ್ಲಿ ತೋರಿಕೊಂಡ ಇಟಲಿ ದೇಶದ ಫಿಡ್ಲ್ (Fiddle) ಎಂಬುದನ್ನು ಪಿಟೀಲೆಂದು ತಮ್ಮ ಸ್ವಂತವನ್ನಾಗಿ ರಚಿಸಿಕೊಂಡಿರುವುದೇ ಈ ಕಲಾನಿಪುಣರ ಚೈತನ್ಯವನ್ನು ಸೂಚಿಸುತ್ತದೆ.

**ವೈಶಿಷ್ಟ್ಯ**

ಅನುಭವವಿಲ್ಲದೆ ಸಂಗೀತ ಕಲೆಯ ವಿಚಾರದಲ್ಲಿ ಯಾವ ಅಂಶವನ್ನೂ ತಿಳಿಯಲಾಗುವುದಿಲ್ಲ. ಸ್ಥಾಯಿಗಳಲ್ಲಿ, ಶ್ರುತಿಗಳಲ್ಲಿ, ರಾಗಗಳಲ್ಲಿ, ತಾಳಗಳಲ್ಲಿ ಭಾರತೀಯ ಸಂಗೀತವು ಮಹಾರಣ್ಯದಂತೆಯೇ ಬೆಳೆದಿರುವುದು. ಆಸಕ್ತಿ ಪರಿಚಯಗಳಿಲ್ಲದವರಿಗೆ ದಿಗ್ಭ್ರಮೆಯೇ ತೋರುವುದು. ವಾದ್ಯಗಳ ರಚನೆಯಲ್ಲಿ ಭಾರತೀಯ ವಾದ್ಯಗಳಷ್ಟು ಕೋಮಲವೂ ಮಧುರವೂ ಆದವು ಬೇರೆ ಯಾವುವೂ ಇಲ್ಲ; ವೀಣೆಯೆಂಬ ವಾದ್ಯವು ಅತಿಪುರಾತನವಾದುದಾದರೂ ಅತಿಪೂರ್ಣವಾದುದೆಂದು ನಾದ ಶಾಸ್ತ್ರಜ್ಞರು ಮೆಚ್ಚಿ ಮುಗ್ಧರಾಗಿರುತ್ತಾರೆ. ಶ್ರುತಿಗಳ ಸೂಕ್ಷ್ಮ ಭೇದಗಳನ್ನು ಗ್ರಹಿಸುವುದರಲ್ಲಿ ಭಾರತೀಯನ ಶಕ್ತಿಯು ಇತರರಿಗೆ ಆಶ್ಚರ್ಯವನ್ನೇ ಉಂಟು ಮಾಡುತ್ತದೆ.

## ಸಾಹಿತ್ಯ ಕಲೆ

ಅಪಾರ ರಾಶಿ

ಸಂಗೀತಕ್ಕೂ ಸಾಹಿತ್ಯಕ್ಕೂ ಆಪ್ತ ಬಾಂಧವ್ಯವನ್ನು ಪೂರ್ವಜರು ಕಂಡರು. ಸಂಗೀತವೂ ಸಾಹಿತ್ಯವೂ ಬೇರೆಬೇರೆಯಾದಾಗ್ಯೂ ಒಂದರ ಸಹಾಯದಿಂದ ಒಂದು ಶೋಭಿಸುವುದು. ಭಾರತೀಯ ಸಾಹಿತ್ಯವೂ ಕೂಡ ಭರತವರ್ಷದ ಪರಿಸ್ಥಿತಿಗನುಗುಣವಾಗಿ ವೃದ್ಧಿ ಹೊಂದಿದುದೇ. ಸಾಹಿತ್ಯವೆನ್ನುವುದು ರಸಾತ್ಮಕವಾದ ಗ್ರಂಥಗಳಿಗೆ ಮಾತ್ರ ಅನ್ವಯಿಸುವುದು. ಅಂತಹ ಕಾವ್ಯಸಂಪತ್ತು ಭಾರತೀಯರದೆಷ್ಟು ಮಾತ್ರವಿದೆಯೆಂದು ಅಳೆಯುವುದಕ್ಕೆ ಸಾಧ್ಯವಿಲ್ಲ. ವೇದಗಳ ಕಾಲದಿಂದ ಇಂದಿನ ಕಾಲದವರೆಗೂ ಭಾರತೀಯ ಕವಿಗಳು ಬದುಕಿ ಕಾವ್ಯಗಳನ್ನು ರಚಿಸಿದ್ದಾರೆ. ಪರಿಮಾಣದಲ್ಲಿಯೂ ಗುಣದಲ್ಲಿಯೂ ಭಾರತೀಯ ಸಾಹಿತ್ಯವೆನ್ನುವುದು ಅಮೋಘವಾದುದು, ಭಾರತೀಯವೆಂಬ ವಿಶಿಷ್ಟ ಗುಣದಿಂದ ಕೂಡಿದುದು. ಅನೇಕಾನೇಕ ಭಾಷೆಗಳಿದ್ದರೂ ಭಾರತೀಯವೆಂಬ ಹೆಸರನ್ನು ಸಂಪೂರ್ಣವಾಗಿ ಪಡೆಯುತಕ್ಕುದು ಸಂಸ್ಕೃತ ಭಾಷೆಯ ಸಾಹಿತ್ಯ ರಾಶಿ. ಕವಿಗಳನ್ನೆಣಿಸಲಾಗುವುದಿಲ್ಲ; ಏಕೆಂದರೆ ಅವರು ಅಸಂಖ್ಯಾಕರು.

ವಿಶಿಷ್ಟ ಗುಣ

ಸಾಹಿತ್ಯ ಸಾಧನೆಯಲ್ಲಿ ಕಡೆಯ ಮೆಟ್ಟಿಲಾವುದು ನಾಟಕವೆಂಬುದು; ಆದರಿಂದಲೇ ನಾಟಕಾಂತ ಸಾಹಿತ್ಯವೆಂದು ರೂಢಿಯಾಗಿರುವುದು. ಸಂಸ್ಕೃತ ಭಾಷೆಯ ನಾಟಕಗಳು ಮೊದಲಾದುದು ಯಾವಾಗ ಎಂಬ ಪ್ರಶ್ನೆಗೆ ಸಮಾಧಾನವಾದ ಉತ್ತರವೇ ಇಲ್ಲ. ಲೋಕದಲ್ಲಿ ನಾಟಕವೆಂಬುದರ ಪೂರ್ಣರೂಪವು ಮೊದಲು ತೋರಿದುದು ಭಾರತೀಯರಲ್ಲಿಯೇ. ಪುರಾತನ ಮಾತ್ರವಲ್ಲದೆ ಪ್ರೌಢವಾದುದೂ ಆಗಿದ್ದಿತು. ಭಾರತೀಯ ಸಾಹಿತ್ಯವೆನ್ನುವುದಕ್ಕೆ ಕಾಳಿದಾಸನ ಶಾಕುಂತಲದ ಭಾಷಾಂತರದ ವೃತ್ತಾಂತವೊಂದೇ ಸಾಕು. ನವರಸಗಳ, ಅರ್ಥಾಲಂಕಾರ ಶಬ್ದಾಲಂಕಾರಗಳ, ನಾನಾ ರೂಪಕಗಳ ವಿವರವನ್ನೂ ಭಾರತೀಯ ಸಾಹಿತ್ಯದ ವಿಶಿಷ್ಟಗುಣಗಳನ್ನೂ ತಿಳಿಯಲು ಸಾಹಿತ್ಯದ ಪರಿಚಯವು ಬೇಕು. ಸಂಗೀತದಲ್ಲಿ ಮಾಧುರ್ಯ

ಇದ್ದಂತೆ ಸಾಹಿತ್ಯದಲ್ಲಿಯೂ ಮಾಧುರ್ಯವುಂಟು. ಮತ್ತು ಸಾಹಿತ್ಯದಲ್ಲಿ ತಪೋವನಗಳ ಪ್ರಭಾವವು ಎಲ್ಲೆಲ್ಲಿಯೂ ಉಂಟು. ನಾಟಕವೆಂಬುದು ಅಭಿವೃದ್ಧಿಗೊಂಡಿದ್ದಾಗ್ಯೂ ಭಾರತೀಯ ಕವಿಗಳು ದುರಂತನಾಟಕ ವೆಂಬುದನ್ನು ಪ್ರಯತ್ನಿಸದಿದ್ದ ಅಂಶವನ್ನು ನೆನಪಿನಲ್ಲಿಟ್ಟು ವಿಚಾರ ಮಾಡಿದಲ್ಲಿ ಭಾರತೀಯ ಸಾಹಿತ್ಯದ ವಿಶಿಷ್ಟಗುಣವು ಮನಸ್ಸಿಗೆ ತೋರ ಬಹುದು. ಮೃದುತನ ಅಥವಾ ಕೋಮಲತೆಯೇ ಹೆಚ್ಚು; ಅದಕ್ಕೆ ಜನತೆಯ ಶಾಂತಿಲಕ್ಷ್ಯವೇ ಮೂಲಕಾರಣ.

ಸಾಹಿತ್ಯರಾಶಿಯಲ್ಲಿ ಉತ್ಕೃಷ್ಟವಾದವುಗಳನ್ನು ಎಣಿಸುವುದು ಕೂಡ ಸಾಧ್ಯವಲ್ಲ. ಶಾಕುಂತಲ ನಾಟಕದಂತಹ ಬೇರೊಂದು ನಾಟಕವು ಲೋಕದಲ್ಲಿಲ್ಲ; ಅದರಂತೆಯೇ ರಾಮಾಯಣ ಮಹಾಭಾರತಗಳಂತಹ ಮಹಾಕಾವ್ಯಗಳು ಮತ್ತೆಲ್ಲಿಯೂ ದೊರಕುವುದಿಲ್ಲ. ವಾಲ್ಮೀಕಿ ವ್ಯಾಸ ಕವಿಗಳು ಹೋಮರ್ (Homer), ವರ್ಜಿಲ್ (Virgil), ಕಮೊಯೆನ್ (Camoens) ಮುಂತಾದವರನ್ನು ಎಷ್ಟೋ ಬಗೆಯಲ್ಲಿ ಮೀರಿಸಿದವರು; ಭಾಸ, ಕಾಲಿದಾಸ, ಭವಭೂತಿ, ಶ್ರೀಹರ್ಷ ಮುಂತಾದ ಕವಿಗಳು ಮಾನವರಾಶಿಗೇ ಗೌರವಾರ್ಹರಾದವರು. ಅನ್ಯಭಾಷೆಗಳಲ್ಲಿ ಕಾವ್ಯ ರಚನೆಯನ್ನು ಮಾಡಿದ ಕವಿಗಳಲ್ಲಿಯೂ ಲೋಕೋತ್ತರರೆನಿಸಿದವರು ಎಷ್ಟೋ ಮಂದಿ.

## ವಾಸ್ತುಕಲೆ

ನಾಟಕದಲ್ಲಿ ಸಾಹಿತ್ಯ, ಸಂಗೀತ, ವಾಸ್ತು, ಶಿಲ್ಪ, ಚಿತ್ರ, ನೃತ್ಯ, ಅಭಿನಯಗಳೆಲ್ಲವೂ ಸೇರುತ್ತವೆಯಾದುದರಿಂದ ನಾಟಕವೇ ಹೆಚ್ಚಿನದು. ವಾಸ್ತುವೆಂಬುದೂ ಶಿಲ್ಪ ಮತ್ತು ಚಿತ್ರಗಳನ್ನೊಳಗೊಂಡುದು. ವಾಸ್ತು ವಿದ್ಯೆಯು ಭಾರತೀಯರಲ್ಲಿ ಎಂದು ಪ್ರಾರಂಭವಾಯಿತೋ ಹೇಳಲಾಗು ವುದಿಲ್ಲ. ಮೊನ್ನೆ ಭೂಶೋಧನೆಯಿಂದ ಪ್ರಕಾಶಕ್ಕೆ ಬಂದ ಸಿಂಧುನದೀ ತಟದ ಪುರಾತನ ನಗರಗಳ ಜೀರ್ಣಾವಸ್ಥೆಯಲ್ಲಿ ಕಂಡುಬಂದ ಕಟ್ಟಡಗಳ ಚಾತುರ್ಯವು ಆಶ್ಚರ್ಯಕರವಾಗಿ ತೋರಿತು. ಅತಿಪೂರ್ವಕಾಲದಲ್ಲಿದ್ದ

ಪ್ರಾಚೀನತಾ

ದುರ್ಗ, ಪ್ರಾಸಾದ, ಸಭಾಗೃಹ ಮುಂತಾದವು ಹೇಗಿದ್ದವೋ ಗ್ರಂಥಗಳಿಂದ ಮಾತ್ರವೇ ತಿಳಿಯತಕ್ಕದ್ದಾಗಿದೆ. ಕಾಲಗತಿಯಲ್ಲಿ ನಾಶವನ್ನು ಹೊಂದದೆ ಉಳಿದುಕೊಂಡಿರುವ ಕಟ್ಟಡಗಳಲ್ಲಿ ಪುರಾತನವಾದವು ಗುಹಾ ನಿರ್ಮಾಣ ಗಳು ಮಾತ್ರ.

**ಗುಹಾ ನಿರ್ಮಾಣ**

ಗುಹಾ ನಿರ್ಮಾಣಗಳಲ್ಲಿ ಲೋಕಪ್ರಸಿದ್ಧವಾದ ಅಜಂತಾ ಎಂಬಲ್ಲಿರುವ 26 ಗುಹೆಗಳು ಅಷ್ಟು ಪುರಾತನವಾದುವಲ್ಲ. ಆ ಇಪ್ಪತ್ತಾರು ಗುಹೆಗಳ ಪರೀಕ್ಷೆಯಲ್ಲಿ ನಮಗೆ ಸುಮಾರು ಒಂದು ಸಾವಿರ ವರ್ಷದ ಸ್ಥಿತಿಯು ಗೋಚರವಾಗುವುದು. ಕಾರ್ಲೆ, ಘಾರಾಪುರಿ (Elephanta), ಬಾಘ, ಉದಯಗಿರಿ ಮುಂತಾದೆಡೆಗಳಲ್ಲಿಯೂ ಲೋಕೋತ್ಕೃಷ್ಟವಾದ ವಾಸ್ತು ನಿರ್ಮಾಣಗಳುಂಟು. ದೊಡ್ಡ ಬಂಡೆಯನ್ನು ಕೊರೆದು ಕಟ್ಟಡವನ್ನು ರೂಪಗೊಳಿಸುವುದರಲ್ಲಿ ಅದ್ವಿತೀಯವೆನಿಸಿರುವುದು ವಲ್ಲೂರಕ ಅಥವಾ ಎಲ್ಲೋರದಲ್ಲಿರುವ ಕೈಲಾಸದೇವಾಲಯವೆಂಬುದು. ಪ್ರಾಕಾರ, ಮಂಟಪ, ಕಂಭ, ಗೋಪುರ ಮೊದಲಾದ ಸರ್ವಾಂಗಗಳಿಂದ ಕೂಡಿದ ಒಂದು ದೇವಾಲಯವನ್ನೇ ಅಲ್ಲಿಯ ಬಂಡೆಯಲ್ಲಿ ಕೊರೆದಿದೆ. ಗುಹಾ ನಿರ್ಮಾಣ ಗಳಲ್ಲಿ ಇದು ಅತ್ಯದ್ಭುತವೆನಿಸಿದೆ.

**ದೇವಾಲಯ**

ಬೌದ್ಧಕಾಲದಲ್ಲಿ ವಾಸ್ತುವಿದ್ಯೆಯು ವಿಹಾರ ಚೈತ್ಯ ಸ್ತೂಪಗಳ ನಿರ್ಮಾಣದಲ್ಲಿ ಶೋಭಿಸುತ್ತಿದ್ದು ಭಾರತೀಯರಿಗೆ ಆದರ್ಶ ಯುಗವೆಂಬ ವಂಧ್ಯಕಗುಪ್ತ ಕಾಲವು ಮೊದಲಾದ ತರುವಾಯ ದೇವಾಲಯಗಳ ನಿರ್ಮಾಣದಲ್ಲಿ ಅತಿಶಯವೆನಿಸಿತು. ರೂಪಗೊಂಡ ದೇವಾಲಯಗಳಲ್ಲಿ ಉತ್ತರ ಭಾಗದವು ಸ್ಥಿರವಾಗಿ ಉಳಿಯಲಿಲ್ಲವಾದರೂ ಬಾಜುರಾಹೋ ಎಂಬೆಡೆಯ ದೇವಾಲಯವು ವಾಸ್ತುಕಲೆಯ ಉದಾತ್ತ ಆಶಯಗಳನ್ನು ಸೂಚಿಸುತ್ತದೆ. ದಕ್ಷಿಣದಲ್ಲಿ ದೇವಾಲಯಗಳು ಪಲ್ಲವರ, ಚಾಲುಕ್ಯರ, ಚೋಳರ, ಹೊಯಿಸಳರ ಪ್ರೋತ್ಸಾಹದಿಂದ ಅನೇಕಾನೇಕವಾಗಿ ರೂಪ ಗೊಂಡವು. ನಾಗರವಿಧಾನ, ಪೇಟಿಕಾವಿಧಾನಗಳೆಂಬೆರಡು ಭೇದಗಳು ಅವುಗಳಲ್ಲಿಯೇ ತೋರಿವೆ. ಕಾಂಚೀ, ಶ್ರೀರಂಗ, ಮಧುರೆ, ತಂಜಾವೂರು

ಗಳಲ್ಲಿ ನಾಗರ ರೀತಿಯನ್ನೂ, ಬೇಲೂರು ಹಳೇಬೀಡುಗಳ ಲೋಕಪ್ರಸಿದ್ಧ ದೇವಾಲಯಗಳಲ್ಲಿ ವೇಟಿಕಾ ರೀತಿಯನ್ನೂ ನೋಡಬಹುದು. ಒಂದು ಸ್ಥೂಲ, ಇನ್ನೊಂದು ಸೂಕ್ಷ್ಮ: ಎರಡೂ ಅದ್ಭುತ. ದ್ವಾರ, ಪ್ರಾಕಾರ, ಮುಖಮಂಟಪ, ನವರಂಗ, ಗರ್ಭಗುಡಿ, ಗೋಪುರ, ವಿಮಾನ, ಶಿಖರ ಮುಂತಾದ ಭಾಗಗಳಲ್ಲಿ ಅಲಂಕಾರವಿಲ್ಲದ ನಿರ್ಮಾಣವನ್ನು ಮೊದಲು ಮನಸ್ಸಿನಲ್ಲಿ ಭಾವಿಸಿಕೊಂಡು ತರುವಾಯ ಅಲಂಕಾರದ ಅಂಶಗಳನ್ನು ಕಾಣಬೇಕು. ಹಾಗೆ ನೋಡಿದಲ್ಲಿ ವಾಸ್ತುಕಲೆಯ ಅನುಭವ ಪ್ರಾರಂಭ ವಾಗುವುದು. ವಾಸ್ತುಶಾಸ್ತ್ರಭಾಗವನ್ನು ಕಾಣುವುದಾದರೆ ಅಸ್ತಿಭಾರ, ಚಾವಣಿ, ಆಕಾರ ಮುಂತಾದವುಗಳನ್ನು ಪರೀಕ್ಷೆಮಾಡಬೇಕು. ದೇವಾಲಯ ನಿರ್ಮಾಣ ಚಾತುರ್ಯವನ್ನು ನೋಡುವುದರಲ್ಲಿಯೇ ವಾಸ್ತುಕಲೆಯಲ್ಲಿ ಲಕ್ಷಣ ಪ್ರಧಾನಗಳೆನಿಸಿದ ಸ್ತಂಭ, ಕವಾಟ, ಗವಾಕ್ಷ, ತೋರಣ ಮುಂತಾದ ಎಲ್ಲ ಭಾಗಗಳೂ ತಿಳಿಯುವುವು.

**ಮಸೀದಿ**

ವಾಸ್ತುವಿದ್ಯೆಯು ಮುಸಲ್ಮಾನರ ಕಾಲದಲ್ಲಿ ಬೇರೊಂದು ಬಗೆಯಿಂದ ವಿರಾಜಿಸಿತು. ಸುಲ್ತಾನೀ ಕಾಲದಲ್ಲಿ ಉತ್ಕೃಷ್ಟತೆಯು ಕಾಣದಿರಬಹುದಾದರೂ ಬಾದಶಾಹೀ ಕಾಲದಲ್ಲಿ ಬೆರಗುಗೊಳಿಸುವಂತೆ ಶೋಭಿಸಿತು. ಮಸೀದಿಗಳ, ಗೋರಿಗಳ, ಅರಮನೆಗಳ ನಿರ್ಮಾಣದಲ್ಲಿ ಆ ಕಾಲದ ಸೊಗಸನ್ನು ಕಾಣಬಹುದು. ದಿಲ್ಲಿ, ಆಗ್ರಾ, ಜಾನ್ಪುರ, ಅಹಮದಾಬಾದ್, ಬಿಜಾಪುರ ಮುಂತಾದ ಸ್ಥಳಗಳ, ಮತ್ತು ಮೋತಿ ಮಸೀದಿ, ತಾಜ್ ಮಹಲ್, ಗೋಲ್‌ಗುಂಬಸ್ ಮುಂತಾದ ಸುಂದರ ನಿರ್ಮಾಣಗಳ ಹೆಸರುಗಳನ್ನು ಎಲ್ಲರೂ ಕೇಳಿರುತ್ತೇವೆ. ಇವುಗಳ ವಿಚಾರದಲ್ಲಿ ಒಂದೆರಡು ಸಂಗತಿಗಳನ್ನು ಮರೆಯದೆ ಇರಬೇಕು. ನಿರ್ಮಾಣ ವಿಧಾನವು ಭಾರತೀಯ ರೀತಿಯಲ್ಲವೆಂದು ನಮಗೆ ಮೊದಲು ತೋರಬಹುದಾದರೂ, ನಿರ್ಮಾಣಗೊಳಿಸಿದವರು ಭಾರತೀಯರೆಂಬ ಅಂಶವನ್ನು ಮರೆಯದಿರಬೇಕು. ಮಹಮ್ಮದಾ ಘಸನಿ ಮತ್ತು ತೈಮೂರ್‌ಲಂಗನಂತಹವರು ಈ ದೇಶದಿಂದ ಹೊರಟುಹೋಗುತ್ತ ಇಲ್ಲಿಯ ವಾಸ್ತು ಕಲಾನಿಪುಣರನ್ನು ತಮ್ಮ ಸ್ವದೇಶಗಳಿಗೆ ಒಯ್ದು ಅವರಿಂದ ಅಲ್ಲಿ ಕೆಲಸಮಾಡಿಸಿದರೆಂಬ ಅಂಶವು

ಜ್ಞಾಪಕದಲ್ಲಿರಬೇಕು. ಮತ್ತು ಮುಘಲ ಕಾಲದ ವಾಸ್ತು ನಿರ್ಮಾಣಗಳ ಸೌಂದರ್ಯವನ್ನು ಕಾಣಬೇಕಾದರೆ ಪ್ರತಿಯೊಂದು ಕಟ್ಟಡದ ಮುಂದೆಯೂ ಇರುವ ಉಪವನದೊಂದಿಗೇ ಕಾಣಬೇಕು. ಉಪವನದ ನಡುವೆ ಆಭರಣ ವಿಟ್ಟಂತೆಯೇ ಆ ಕಟ್ಟಡಗಳು ಇರುತ್ತವೆ. ಮುಘಲ ಬಾದಷಹರಿಗೆ ಉದ್ಯಾನವನಗಳಲ್ಲಿ ಅಭಿರುಚಿ ಹೆಚ್ಚಾಗಿತ್ತು; ಕಾಶ್ಮೀರದಲ್ಲಿ ಷಲಿಮಾರ್ ಬಾಗ್ ಎಂದು ಲೋಕಪ್ರಸಿದ್ಧವಾದ ಉದ್ಯಾನವು ಜಹಾಂಗೀರ್ ಬಾದಷಹನ ಆಜ್ಞೆಯಿಂದ ನಿರ್ಮಿತವಾಯಿತು.

ನಿರ್ಮಾಣದ ಉದ್ದೇಶ

ವಾಸ್ತು ನಿರ್ಮಾಣದ ಸಂಪತ್ತು ಭಾರತೀಯರಿಗೆ ಅಪಾರವಾಗಿಯೇ ಇದೆ. ಈಜಿಪ್ಟ್‌ದೇಶದ ಸಮಾಧಿಗಳನ್ನು (Pyramids) ಬಿಟ್ಟರೆ ಭಾರತೀಯ ರಾಶಿಗೆ ಸರಿದೂಗುವುದು ಲೋಕದಲ್ಲಿಯೇ ಇರುವುದಿಲ್ಲ. ವಾಸ್ತುವಿದ್ಯೆಯು ಭಾರತದೇಶದಲ್ಲಿ ಸಂಪೂರ್ಣವಾದ ಕಳೆಯನ್ನು ತೋರಿದುದು ದೇವಮಂದಿರಗಳಲ್ಲಿಯೇ. ದೇವಾಲಯಗಳು ದೇವತಾರ್ಚನೆಗೆ ಮಾತ್ರ ಉಪಯುಕ್ತವಾಗದೆ, ದೀನಾನಾಥರ ಆಶ್ರಯಕ್ಕೆ, ಸಭಾಸ್ಥಾನಕ್ಕೆ, ಉತ್ಸವಗಳಿಗೆ, ವಿದ್ಯಾಭ್ಯಾಸಕ್ಕೆ, ಕಲಾಪ್ರದರ್ಶನಕ್ಕೆ ಕೇಂದ್ರ ಸ್ಥಾನಗಳಾಗಿದ್ದುವು. ಅವುಗಳ ಭಾಗವಿಭಾಗಗಳನ್ನೂ ಬೇರೆಬೇರೆ ಉಪಯೋಗಗಳನ್ನೂ ಸಾಧ್ಯವಾದಮಟ್ಟಿಗೂ ಭಾರತೀಯನು ತಿಳಿಯಬೇಕು. ಗರ್ಭಗುಡಿಯನ್ನು ಕತ್ತಲ ಗವಿಯಂತೇಕೆ ಮಾಡಿದರು ಎಂಬಂತಹ ಸಾಮಾನ್ಯ ಪ್ರಶ್ನೆಗಳಿಗೆ ಸಮಾಧಾನವನ್ನು ಹೇಳಬಲ್ಲವನಾಗಿರಬೇಕು. ಬೆಳಕನ್ನು ಬಿಡುವುದು ಬಾರದೆ ಭಾರತೀಯರು ಹಾಗೆ ಮಾಡಿಲ್ಲ; ಅಂಧಕಾರದ ಪ್ರಭಾವದಿಂದ ಮನಸ್ಸು ದೇವರ ಸಮ್ಮುಖದಲ್ಲಿ ಉಚಿತವಾದ ಅವಸ್ಥೆಯನ್ನು ತಾಳಬೇಕೆಂಬುದು ಅವರ ಆಶಯ. ಮುಖಮಂಟಪದ ಗವಾಕ್ಷದಿಂದ ಸೂರ್ಯ ಕಿರಣಗಳು ಗರ್ಭಗುಡಿಯೊಳಗೆ ಪ್ರವೇಶಮಾಡುವಂತೆ ನೆರವೇರಿಸುವ ನೈಪುಣ್ಯವು ಸಾಧಾರಣವಾದುದು. ವಿಚಿತ್ರ ಚಾತುರ್ಯಕ್ಕೆ ಅನೇಕ ನಿದರ್ಶನಗಳುಂಟು. ಸೂಜಿಗಲ್ಲನ್ನು ತಳದಲ್ಲಿಯೂ ವಿಮಾನ ಭಾಗದಲ್ಲಿಯೂ ಹಾಸಿ ಆಕಾಶ ಲಿಂಗವೆಂಬುದನ್ನು ಪ್ರತಿಷ್ಠೆಮಾಡುತ್ತಿದ್ದರೆಂಬ ಒಂದು ನಿದರ್ಶನ ಸಾಕು.

## ಶಿಲ್ಪ ಕಲೆ

ವಿಶಿಷ್ಟತೆ

ವಾಸ್ತುಕಲೆಯಲ್ಲಿ ಅದ್ಭುತವಾದ ಚಾತುರ್ಯವೆಲ್ಲವೂ ಪವಿತ್ರ ಮಂದಿರಗಳ ನಿರ್ಮಾಣದಲ್ಲಿ ತೋರಿದಂತೆಯೆ ಶಿಲ್ಪಕಲೆಯಲ್ಲಿಯೂ ಕೂಡ ದೇವದೇವತೆಗಳ ವಿಗ್ರಹಗಳ ನಿರ್ಮಾಣದಲ್ಲಿಯೇ ಶಿಲ್ಪಿಗಳು ತಮ್ಮ ನೈಪುಣ್ಯವೆಲ್ಲವನ್ನೂ ವೆಚ್ಚಗೊಳಿಸಿದರು. ಭಾರತೀಯ ಶಿಲ್ಪಕಲೆಯೆಂಬುದು ಸುಲಭಗ್ರಾಹ್ಯವಾದುದಲ್ಲ. ವಿಸ್ತಾರ ಮಾತ್ರದಿಂದಲೇ ಅಲ್ಲದೆ ಇತರ ಕಾರಣಗಳಿಂದಲೂ ಗಂಭೀರವಾದುದು. ದೇವದೇವತೆಗಳ ಪ್ರತಿಮೆಗಳನ್ನೇ ಮುಖ್ಯವಾಗಿ ಸಾಧಿಸಿದುದರಲ್ಲಿ ಸಂಕೇತಗಳು ಅನಿವಾರ್ಯವಾಗಿ ಶಿಲ್ಪಶಾಸ್ತ್ರದಲ್ಲಿ ಬೆಳೆದವು. ಯುರೋಪ್ಯರ ಶಿಲ್ಪದಲ್ಲಿ ದೇವದೇವತೆಗಳಿಗೆ ವಿಗ್ರಹಗಳನ್ನು ರಚಿಸುವ ವಿದ್ಯೆಯು ಕಡಿಮೆ; ಗ್ರೀಕರೂ ರೋಮಕರೂ ಅಂತಹ ವಿಗ್ರಹಗಳನ್ನು ಕಡೆದಾಗ ಶಕ್ತಿಯನ್ನೂ ಅಂಗಾಂಗ ಸೌಂದರ್ಯವನ್ನೂ ಮುಖ್ಯವೆಂದು ಭಾವಿಸಿ ಮನುಷ್ಯನ ಆಕೃತಿಯನ್ನೇ ಉಂಟುಮಾಡಿದರು. ಭಾರತೀಯರು ದೇವತೆಗಳನ್ನು ವಿಗ್ರಹರೂಪದಲ್ಲಿ ತೋರಿದಾಗ ದೈವತ್ವವನ್ನು ತೋರಲು ಅನೇಕ ಸಂಕೇತಗಳನ್ನು ರಚಿಸಿಕೊಂಡರು. ಅನೇಕ ತಲೆಗಳೂ ಕೈಗಳೂ ಇರುವುದು ಮಾತ್ರವೇ ಅಲ್ಲ; ಒಂದೊಂದು ಲಕ್ಷಣಕ್ಕೂ ಒಂದೊಂದು ಸಂಕೇತವುಂಟಾಗಿ, ಸಂಕೇತಗಳನ್ನು ತಿಳಿಯದೆ ಶಿಲ್ಪಿಯ ಉದ್ದೇಶವನ್ನು ತಿಳಿಯಲಾರದಷ್ಟು ಈ ವಿಧಾನವು ಬೆಳೆಯಿತು. ಚಿತ್ರಕಲೆಯಲ್ಲಿಯೂ ಹೀಗೆಯೇ ನಡೆಯಿತು.

ಪ್ರಸಿದ್ಧ ನಿದರ್ಶನಗಳು

ಭಾರತೀಯ ಶಿಲ್ಪದಲ್ಲಿ ಸುಪ್ರಸಿದ್ಧವಾದ ಕೆಲವನ್ನು ಮಾತ್ರ ಸ್ಮರಿಸಬಹುದು. ಉದಯಗಿರಿ ಗುಹೆಯ ವರಾಹಮೂರ್ತಿ, ಘಾರಾಪುರಿಯ ತ್ರಿಮೂರ್ತಿಗಳಿಗಿಂತ ಪುರಾತನವೆನಿಸಿದ ಬುದ್ಧಪ್ರತಿಮೆಗಳುಂಟು. ಮಾಮಲ್ಲಪುರದಲ್ಲಿ ಭಗೀರಥನ ತಪಸ್ಸೆಂಬುದೂ ಶ್ರವಣಬೆಳುಗೊಳದ ಗೋಮಟೇಶ್ವರ ವಿಗ್ರಹವೂ ಪ್ರಮಾಣದಲ್ಲಿ ದೊಡ್ಡವು; ಪ್ರಮಾಣದಲ್ಲಿ ಚಿಕ್ಕವಾಗಿ ಅತಿ ಸುಂದರವೆನಿಸಿದ ಮದನಕೈ ವಿಗ್ರಹಗಳೆಂಬವು ಹೊಯಿಸಳರ ಕಾಲದಲ್ಲಿ

ನಿರ್ಮಿತವಾಗಿ ಕರ್ನಾಟಕ ಪ್ರಾಂತದಲ್ಲಿಯೇ ಇವೆ. 'ನಟರಾಜ'ನೆಂಬ ಪ್ರತಿಮೆಯು ಲೋಕಪ್ರಸಿದ್ಧವಾದುದು.

## ಚಿತ್ರಕಲೆ

ಅಜಂತದ 26 ಗುಹೆಗಳಲ್ಲಿ ವಾಸ್ತು ಶಿಲ್ಪ ಚಿತ್ರಗಳೆಂಬ ಮೂರು ಕಲೆಗಳೂ ಉತ್ಕೃಷ್ಟವಾದುವೆನಿಸಿ ಕಲಾಸಕ್ತರಿಗೆ ಆ ಗುಹೆಗಳು ಯಾತ್ರಾ ಸ್ಥಳಗಳಾಗಿ ಪರಿಣಮಿಸಿವೆ. ಅಲ್ಲಿಯ ಗುಹೆಗಳಲ್ಲಿ ಗೋಡೆಗಳ ಒಳ ಭಾಗದ ಮೇಲೆ ಸಾವಿರಾರು ವರ್ಷಕಾಲದ ಚಿತ್ರಗಳಿವೆ. ಆ ಚಿತ್ರಗಳ ರಾಶಿಯನ್ನು ಕಂಡು ಜಗತ್ತೇ ಬೆರಗಾಗಿದೆ. ಶಿಲ್ಪ ಕಲೆಯು ಮುಸಲ್ಮಾನರ ಆಳ್ವಿಕೆಯಲ್ಲಿ ಪ್ರೋತ್ಸಾಹವನ್ನು ಪಡೆಯಲಿಲ್ಲ; ಚಿತ್ರಕಲೆಯು ಪಡೆಯಿತು. ಬಾದಷಹರ ಮತ್ತು ಆಸ್ಥಾನ ಶ್ರೀಮಂತರ ಚಿತ್ರಗಳು ಮುಘಲ ಕಾಲದಲ್ಲಿ ವಿಶೇಷವಾಗಿದ್ದವು. ದಂತದ ಮೇಲೆ ಚಿತ್ರಗಳನ್ನು ಬರೆಯುವ ಕಲೆಯು ಮುಘಲರ ಕಾಲದಲ್ಲಿ ಚಾತುರ್ಯದಿಂದ ಶೋಭಿಸಿತು.

ಜಹಾಂಗೀರನ ವೃತ್ತಾಂತ

ಚಿತ್ರಕಲಾ ನೈಪುಣ್ಯವನ್ನು ತೋರುವ ಒಂದು ವೃತ್ತಾಂತವುಂಟು. ಜಹಾಂಗೀರ್ ಬಾದಷಹನ ಬಳಿಗೆ ಇಂಗ್ಲಂಡಿನ ದೊರೆಯ ರಾಯಭಾರಿಯಾಗಿ ಸರ್ ಥಾಮಸ್ ರೋ ಎಂಬಾತನು ಬಂದಿದ್ದನಷ್ಟೆ. ಒಂದು ದಿವಸ ಬಾದಷಹನು ಆತನ ಬಳಿಯಿದ್ದ ಒಂದು ಸಣ್ಣ ಭಾವಚಿತ್ರವನ್ನು ಕಂಡು ಅದನ್ನು ಕೊಡೆಂದು ಕಾಡಿದನು; ಅದು ಆತನ ವಧುವಿನ ಚಿತ್ರವಾಗಿದ್ದುದರಿಂದ ಆತನಿಗೆ ಬಾದಷಹನ ಇಷ್ಟದಂತೆ ನಡೆಯುವುದು ಅತಿಕಷ್ಟವಾಯಿತು. ಹೀಗೆಂದು ಸಮಾಚಾರ ತಿಳಿದಮೇಲೆ ಬಾದಷಹನು ಆ ಚಿತ್ರ ತನಗೆ ಬೇಕೇಬೇಕೆಂದು ಹಟ ಹಿಡಿದು ಕಸಿದು ಕೊಂಡುಬಿಟ್ಟನು. ಎಂಟು ಹತ್ತು ದಿನಗಳಾದ ತರುವಾಯ ಬಾದಷಹನು ಸರ್ ಥಾಮಸನನ್ನು ಕರೆಕಳುಹಿಸಿ ಆತನೆದುರಿಗೆ ಐದಾರು ಚಿತ್ರಗಳನ್ನಿಟ್ಟು "ನಿನ್ನ ಸ್ವಂತ ಸರಕನ್ನು ಆರಿಸಿ ತೆಗೆದುಕೋ" ಎಂದನು. ಪರಸ್ಪರ ಭೇದವೇ ಇಲ್ಲದೆ ಅಲ್ಲಿದ್ದವೆಲ್ಲವೂ ತಾನು ಕಳೆದುಕೊಂಡೆನೆಂದು ಭಾವಿಸಿದ್ದ ಚಿತ್ರದಂತೆಯೇ ಇದ್ದವು. ಎಷ್ಟು ಹೊತ್ತು ನೋಡಿದರೂ ತನ್ನದು ಯಾವುದೆಂದು ನಿರ್ಧರಿಸಲು ಆತನಿಗೆ ಆಗಲೇ ಇಲ್ಲ. ಕಡೆಗೆ ಜಹಾಂಗೀರನು

ಒಂದನ್ನೆತ್ತಿಕೊಟ್ಟು "ಇಗೋ ಇದು ನಿನ್ನದು. ಉಳಿದವು ನನ್ನ ಚಿತ್ರಗಾರ ರೆತ್ತಿದ ನಕಲುಗಳು" ಎಂದು ಹೇಳಿ ಸರ್ ಥಾಮಸನ ಭ್ರಾಂತಿಯನ್ನು ಕುರಿತು ಹಾಸ್ಯವನ್ನು ತೋರಿದನು.

## ನೃತ್ಯ-ಅಭಿನಯ

ಅಜಂತದ ಚಿತ್ರಗಳಲ್ಲಿರುವ ನೃತ್ಯಕಲೆಯ ಅಂಶಗಳು ಆಶ್ಚರ್ಯವನ್ನುಂಟುಮಾಡತಕ್ಕವು; ಮದನಕೈ ವಿಗ್ರಹಗಳ ಅಂಗಾಂಗ ವಿನ್ಯಾಸವು ಅದ್ಭುತವಾದವು. ಗಾನ ಕಲೆಯು ನಾರದ ತುಂಬುರರೇ ಅಲ್ಲದೆ ಶ್ರೀಕೃಷ್ಣನ ಅಥವಾ ಸರಸ್ವತಿಯ ಸಂಬಂಧವನ್ನು ಪಡೆದಂತೆಯೇ ನೃತ್ಯವು ಈಶ್ವರನ ಸಂಬಂಧವನ್ನು ಪಡೆಯಿತು. ನೃತ್ಯದಲ್ಲಿಯೂ ಅನೇಕಾನೇಕ ಸಂಕೇತಗಳುಂಟು. ವಾಸ್ತು ಶಿಲ್ಪ ಚಿತ್ರಗಳಂತೆಯೇ ಭಾರತೀಯ ನೃತ್ಯವು ಬಳಕೆಯಲ್ಲಿ ಪ್ರೌಢಾವಸ್ಥೆಯನ್ನು ತೋರುತ್ತಿಲ್ಲ. ಪೂರ್ವಕಾಲದ ಸೊಬಗನ್ನು ಮಾತ್ರ ಸ್ಮರಿಸಬಹುದು. ಮಹಾಭಾರತದಲ್ಲಿ ಅರ್ಜುನನು ಬೃಹನ್ನಟನಾಗಿದ್ದುದನ್ನೂ, ಕಾಳಿದಾಸನ ಮಾಲವಿಕಾಗ್ನಿಮಿತ್ರ ನಾಟಕದಲ್ಲಿ ನಾಟ್ಯಾಚಾರ್ಯರಿಬ್ಬರು ಆರಂಭದಲ್ಲಿಯೇ ಪರಸ್ಪರವಾಗಿ ಸ್ಪರ್ಧಿಸುವುದನ್ನೂ ಎಲ್ಲರೂ ತಿಳಿದೇ ಇರುತ್ತಾರೆ. ಅವನ್ನೇ ನೃತ್ಯಕಲಾಭ್ಯಾಸಕ್ಕೆ ಸೂಚಕಗಳಾಗಿ ಭಾವಿಸಬಹುದು. ಪ್ರಸಿದ್ಧ ನೃತ್ಯಗಳಲ್ಲಿ ಮಯೂರ ನೃತ್ಯವೆಂಬುದು ನಡೆದಾಗ ನರ್ತಕಿಯು ಹೆಜ್ಜೆಯಿಟ್ಟ ಗುರುತುಗಳಿಂದಲೇ ನೆಲದ ಮೇಲೆ ನವಿಲಿನ ಆಕೃತಿಯು ಚಿತ್ರಿತವಾಗಬೇಕಾಗಿತ್ತು. ನೃತ್ಯ, ನಾಟ್ಯ, ಲಾಸ್ಯ, ತಾಂಡವ ಮುಂತಾದವುಗಳ ಭೇದಗಳನ್ನು ತಿಳಿಯಲು ಇವುಗಳ ಶಾಸ್ತ್ರಾಭ್ಯಾಸವು ಅವಶ್ಯಕ. ಅಭಿನಯವೆಂಬುದು ಬೇರೆ; ಆ ಕಲೆಯಲ್ಲಿ ಮುಖ ಚೇಷ್ಟೆಗಳಿಂದಲೇ ಭಾವಪ್ರದರ್ಶನವು ಸಾಧಿತವಾಗುವುದು.

## ಕಲಾಭಿರುಚಿ

ಈ ಪ್ರಸಿದ್ಧ ಕಲೆಗಳೆಲ್ಲವೂ ಪೂರ್ವಕಾಲದಲ್ಲಿ ಪುಷ್ಟಿಯನ್ನೂ ತೇಜಸ್ಸನ್ನೂ ಪಡೆದಿದ್ದವು. ಇಂದಿನ ಭಾರತೀಯನಿಗೆ ಅವುಗಳ ಸ್ಮರಣೆ ಮಾತ್ರವೇ ಇರುವುದಾದರೂ ಅವುಗಳಲ್ಲಿ ಇನ್ನೂ ಉಳಿದಿರುವ ಭಾಗದ ಪರಿಚಯವು ತಕ್ಕಮಟ್ಟಿಗಿರಬೇಕಾದುದು ಸಹಜ. ಪೂರ್ವಕಾಲದಲ್ಲಿ ಕಲಾರಾಶಿಯು

ಸಾಮಾನ್ಯ ಜೀವನದಲ್ಲಿ

ಚತುಷ್ಷಷ್ಟಿ ಕಲೆಗಳಾಗಿ ವಿಕಾಸ ಹೊಂದಿದ್ದಾಗ ಕಲಾಲೋಲರಾದ ಭಾರತೀಯರು 64 ಕಲೆಗಳಲ್ಲಿಯೂ ತಕ್ಕಮಟ್ಟಿಗೆ ಪರಿಚಯವನ್ನು ಪಡೆದಿರಬೇಕಾಗಿದ್ದಿತು. ಕಲಾಭಿರುಚಿಯೇ ಪೂರ್ವಜರ ಜೀವನದಲ್ಲಿ ಹೆಚ್ಚಾಗಿದ್ದು ನಾನಾ ಬಗೆಗಳಲ್ಲಿ ತೋರುತ್ತಿದ್ದಿತು. ಲಿಪಿ, ಪಾತ್ರೆ, ಆಯುಧ, ವಸ್ತ್ರ, ಗೃಹಗಳಲ್ಲಿ ಕಲಾಭಿರುಚಿಯು ಯಾವ ಬಗೆಯಲ್ಲಿ ತೋರಿಕೊಂಡಿತೆಂಬುದರ ಸಾಮಾನ್ಯ ವಿಚಾರವೇ ಸಾಕು. ನವರಾತ್ರಿಯ ಹಬ್ಬದಲ್ಲಿ ನಡೆಯುತ್ತಿದ್ದ ಆಚರಣೆಯೊಂದೇ ಭಾರತೀಯರಲ್ಲಿ ಕಲಾಸಕ್ತಿಯು ಸಾಮಾನ್ಯವಾಗಿದ್ದುದಕ್ಕೆ ಸಾಕಾದ ನಿದರ್ಶನವಾಗಿರುತ್ತದೆ. ಬೃಂದಾವನ, ರಂಗವಲ್ಲಿ, ತಳಿರು ತೋರಣಗಳಿಂದ ಅಲಂಕೃತವಾದ ಭಾರತೀಯ ಮನೆಮಂದಿರಗಳು ವಿಶಿಷ್ಟವಾದ ಕಲಾಲಕ್ಷಣಗಳಿಂದ ಒಡಗೂಡಿಯೇ ಇರುತ್ತವೆ.

## ಮಹಾಪುರುಷರು

ಪ್ರಾಚೀನ ಕಾಲದ ಭಾರತೀಯರು ಸರ್ವತೋಮುಖವಾದ ತೇಜಸ್ಸನ್ನು ಬೀರಿದರೆಂಬುದು ಇತಿಹಾಸದಿಂದಲೇ ಭದ್ರವಾಗಿದೆ. ಭಾರತೀಯರಲ್ಲಿ ಮಹಾಪುರುಷರೆನಿಸಿದವರ ಸಂಖ್ಯೆಯನ್ನು ನಿರ್ಣಯಿಸುವುದೇ ಕಷ್ಟ. ಇತರ ದೇಶಗಳಲ್ಲಿ ಮಹಾಪುರುಷರೆನಿಸಿದವರೊಂದಿಗೆ ಭಾರತೀಯ ಮಹಾಪುರುಷರನ್ನು ತುಲನಮಾಡಿದಲ್ಲಿ ಭಾರತೀಯ ಭಾರವೇ ಹೆಚ್ಚಾಗಿ ಪರಿಣಮಿಸುತ್ತದೆ. ಇಡೀ ಪೃಥ್ವಿಯಲ್ಲಿ ಋಷಿಗಳ ಭೂಮಿಯೆನಿಸಿದುದು ಭರತವರ್ಷವೇ; ಇಂದಿಗೂ ಭಾರತೀಯರಲ್ಲಿ ಎಲ್ಲರಿಗೂ ಪೂಜ್ಯರೆನಿಸಿದವರು ಋಷಿಜನರ ಸ್ಥಾನದಲ್ಲಿ ಇರುವವರಾದ ದಶನಾಮಿ ಸಂನ್ಯಾಸಿಗಳು. ಇವರನ್ನು ಬಿಟ್ಟು ರಾಷ್ಟ್ರಕರ್ತರು, ಶೂರರು, ವೀರರು, ಶಾಸ್ತ್ರಜ್ಞರು, ತತ್ತ್ವಜ್ಞರು, ಕಲಾವಿದರು ಮುಂತಾದ ರೀತಿಯಲ್ಲಿ ಹೋಲಿಸಲು ತೊಡಗಿದರೆ ಭಾರತೀಯರಲ್ಲಿ ಆದರ್ಶಪುರುಷರು ಹೇರಳವಾಗಿ ಕಾಣುವರು. ಏಸುಕ್ರಿಸ್ತ, ಮಹಮ್ಮದ್ ಪೈಗಂಬರ್, ಸೆಂಟ್ ಫ್ರಾನ್ಸಿಸ್ ಮುಂತಾದವರಿಗೆ ಸರಿದೂಗಲು ಶ್ರೀಕೃಷ್ಣ, ಬುದ್ಧ, ನಾನಕ್, ಚೈತನ್ಯ, ಕಬೀರ್ ಮುಂತಾದವರಿದ್ದಾರೆ. ಸಿಕಂದರ್, ಹ್ಯಾನಿಬಾಲ್ ಅಥವಾ ನೆಪೋಲಿಯನ್ನರಿಗೆ ಪ್ರತಿಯಾಗಿ ಮೌರ್ಯಚಂದ್ರಗುಪ್ತ, ಸಮುದ್ರ

ಗುಪ್ತ, ಅಕ್ಬರ್, ಶಿವಾಜಿಗಳಿದ್ದಾರೆ. ಪ್ಲೇಟೊ, ಅರಿಸ್ಟಾಟಲ್, ಮಿಲ್ ಮುಂತಾದವರೊಡನೆ ತೂಗಲು ಪಾಣಿನಿ, ಪತಂಜಲಿ, ಕುಮಾರಿಲ, ಶಂಕರಾಚಾರ್ಯರೇ ಸಾಕು. ಜೋಆಡಿಸಿಯ, ಎಲಿಸಬೆತ್ ಮುಂತಾದವರನ್ನು ದುರ್ಗಾವತಿ, ಚಾಂದ್‌ಬೀಬಿ, ಅಹಲ್ಯಾಬಾಯಿ, ಝಾನ್ಸಿ ರಾಣಿ ಲಕ್ಷ್ಮೀಬಾಯಿಯರೊಂದಿಗೆ ಹೋಲಿಸುವುದಕ್ಕೇ ಆಗುವುದಿಲ್ಲ. ಹೋಮರ್, ಷೇಕ್ಸ್‌ಪಿಯರ್, ಗೆಥೆ (Goethe) ಮುಂತಾದವರು ವಾಲ್ಮೀಕಿ, ವ್ಯಾಸ, ಕಾಲಿದಾಸ, ತುಲಸೀದಾಸರಿಗೆ ಸಮಾನರೆನಿಸುವರೋ ಇಲ್ಲವೋ ಸಂದೇಹವೇ. ಇತರ ಎಲ್ಲ ದೇಶಗಳಲ್ಲಿ ಹುಟ್ಟಿದ ಮಹಾಪುರುಷರೆಷ್ಟು ಸಂಖ್ಯಾಕರೂ ಎಷ್ಟು ತೇಜಸ್ವಿಗಳೂ ಆಗಿರಬಹುದೋ ಅದಕ್ಕೆ ಮಿಗಿಲಾದ ಸಂಖ್ಯೆಯನ್ನೂ ತೇಜಸ್ಸನ್ನೂ ಭಾರತೀಯರಲ್ಲಿ ಮಹಾಪುರುಷರೆನಿಸಿದವರು ಪಡೆದವರಾಗಿದ್ದಾರೆ. ಐರೋಪ್ಯರು ಎಣಿಕೆಮಾಡಿದ ಏಳು ಅದ್ಭುತಗಳಲ್ಲಿ ಪ್ರತಿಯೊಂದಕ್ಕೂ ಏಳೇಳದ್ಭುತಗಳನ್ನು ಭಾರತವರ್ಷವು ತೋರಬಲ್ಲು ದಾಗಿರುತ್ತದೆ.

**ಅವನತಿಯ ಅಚ್ಚರಿ** — **ಶಾರೀರಿಕ, ಮಾನಸಿಕ, ಬೌದ್ಧಿಕ, ಆಧ್ಯಾತ್ಮಿಕ** ಸಾಧನೆಗಳಲ್ಲಿ ಭಾರತೀಯರು ಪ್ರಾಚೀನಕಾಲದಲ್ಲಿ ಎಲ್ಲ ಮಾನವ ರಾಶಿಗಳಿಗಿಂತಲೂ ಮುಂದಾಗಿದ್ದು, ಅವನತಿಯನ್ನು ಪಡೆದಿರುವ ಕಾಲದಲ್ಲಿಯೂ ಕೂಡ ವಿಸ್ಮಯವನ್ನುಂಟುಮಾಡುವ ಚೈತನ್ಯವನ್ನು ತೋರುತ್ತಲಿರುತ್ತಾರೆ. ಗತವೈಭವದ ವೃತ್ತಾಂತ ವಿವರದಲ್ಲಿಯೇ ಅಲ್ಲದೆ ಪ್ರತ್ಯಕ್ಷವಾಗಿ ಸಂಭವಿಸುವ ಅನೇಕಾನೇಕ ಸಂಗತಿಗಳಲ್ಲಿ ಭಾರತೀಯ ಚೈತನ್ಯವು ಅದ್ಭುತವೆನಿಸುತ್ತದೆ. ಭಾರತೀಯ ಮಲ್ಲರು, ಮಾಂತ್ರಿಕರು, ದೊಂಬರು, ಕಡೆಗೆ ಹಾವಾಡಿಗರು ತಮ್ಮ ವಿದ್ಯೆಗಳಿಂದ ಬೆಡಗು ಬೀರಬಲ್ಲರು; ಇವರ ಮಧ್ಯೆ ಯೋಗಿಗಳ ಗುಂಪಿಗೆ ಸೇರಿದವರು ಆಗಾಗ್ಗೆ ಕಾಣಿಸಿಕೊಂಡು ಅದ್ಭುತವಾದ ಮಹಿಮೆಯನ್ನೇ ತೋರಿಸುತ್ತಿರುತ್ತಾರೆ. ಶಾರೀರಿಕ ವ್ಯಾಯಾಮದಲ್ಲಿ ಭಾರತೀಯವಾದ ಯೋಗಸಾಧನೆಗಳನ್ನು ಈಗಲೀಗ ಎಲ್ಲರೂ ಕಲಿಯಲಾರಂಭಿಸಿದ್ದಾರೆ. ಸ್ಮೃತಿ ಶಕ್ತಿಯ ಸಾಧನೆಯಲ್ಲಿ ಲಾರ್ಡ್ ಮೆಕಾಲೆಯು ಬಹಳ ಪ್ರಸಿದ್ಧನಾಗಿದ್ದನು; ಅಂತಹ ಮೆಕಾಲೆಯನ್ನು ಮಿಗಿಲಿಸತಕ್ಕ ಭಾರತೀಯ

ವಿದ್ಯಾರ್ಥಿಗಳೇ ಸೂರಾರಿದ್ದಾರೆ. ಬೌದ್ಧಿಕ ಚಮತ್ಕಾರದಲ್ಲಿ ಶತಾವಧಾನಿಗಳು ತಮ್ಮ ವಿದ್ಯೆಯನ್ನು ತೋರಿದಾಗ ದಿಗ್ಭ್ರಮೆಯುಂಟಾಗುವಷ್ಟು ಅದ್ಭುತವೆನಿಸುತ್ತದೆ. ಪ್ರಾಬಲ್ಯವನ್ನು ಕಳೆದು ಕ್ಷೀಣವಾಗುತ್ತಲಿದ್ದರೂ ಭರತವರ್ಷವು ಪಾಶ್ಚಾತ್ಯರಿಗೆ ಅದ್ಭುತವೂ ಗೂಢವೂ ಆದ ಪ್ರಭಾವವನ್ನು ಡಗಿಸಿಟ್ಟುಕೊಂಡಿರುವ ದೇಶದಂತೆಯೇ ಭಾಸವಾಗುತ್ತದೆ.

## ಸೌಶೀಲ್ಯದ ವಿಶಿಷ್ಟತೆ

ಅತಿಥಿ ಸತ್ಕಾರ

ಸೂಕ್ಷ್ಮದೃಷ್ಟಿಯಿಂದ ನೋಡುವುದಾದರೆ ಭಾರತೀಯರ ಸಾಮಾನ್ಯ ಜೀವನದಲ್ಲಿಯೇ ಅದ್ಭುತವೆನಿಸುವ ಸಂಗತಿಗಳು ಕಾಣುತ್ತವೆ. ಶಾರೀರಿಕ ಬೌದ್ಧಿಕ ವ್ಯವಸಾಯಗಳಿಗಿಂತಲೂ ಭಾರತೀಯರ ಸಾಧನೆಯಲ್ಲಿ ನೈತಿಕ ವ್ಯವಸಾಯವು ಹೆಚ್ಚಿನದೆನಿಸುವುದು. ಪಾಶ್ಚಾತ್ಯ ದೇಶಗಳಲ್ಲಿ ಮದ್ಯಪಾನವನ್ನು ಬಿಡುವುದು ಎಷ್ಟು ಕಷ್ಟವೆಂದು ತೋರಬಹುದೋ ಭಾರತೀಯರಲ್ಲಿ ಕೆಲವು ಗುಂಪುಗಳಿಗೆ ಮದ್ಯಪಾನ ಮಾಡುವುದು ಅಷ್ಟು ಕಷ್ಟವೆಂದು ತೋರುವುದು. ಗೋಮಾಂಸ ಸೇವನೆಯು ಇತರ ದೇಶಗಳ ಜನರಿಗೆಷ್ಟು ಸುಲಭವೋ ಭಾರತೀಯರಿಗೆ ಅಷ್ಟು ಕಷ್ಟವಾದುದು. ಅನ್ನವನ್ನು ಮಾರುವುದು ಭಾರತೀಯರಲ್ಲಿ ಹೇಯವೆನಿಸಿದ ಒಂದಂಶದ ವಿಮರ್ಶೆಯೇ ಸಾಕು. ನೈತಿಕ ಶಿಕ್ಷಣದ ಪರಿಣಾಮವು ಭಾರತೀಯ ಜನಜೀವನದಲ್ಲಿ ಸರ್ವಸಾಧಾರಣವಾಗಿದ್ದಿತೆನ್ನುವುದಕ್ಕೆ ಭರತವರ್ಷದಲ್ಲಿ ಅತಿಥಿಗಳಿಗೂ ಅಭ್ಯಾಗತರಿಗೂ ನಡೆಯುವ ಆದರವೇ ನಿದರ್ಶನ. ಭರತವರ್ಷದಲ್ಲಿ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ನಿಶ್ಚಿಂತೆಯಾಗಿ ನಿವಾಸಿಗಳ ಅತಿಥಿಯಾಗಿಯೇ ದೂರವನ್ನು ಕಳೆಯಬಹುದು. ಇತರರ ಕಷ್ಟಗಳನ್ನರಿತು ಪರಿತಾಪಪಡುವುದರಲ್ಲಾಗಲಿ, ದಾನಮಾಡುವುದರಲ್ಲಾಗಲಿ ಭಾರತೀಯ ಜನರು ಸಹಜವಾಗಿ ಉದಾರಿಗಳು. ಭಾರತೀಯ ಜನಸಮೂಹದ ಪ್ರಧಾನ ಗುಣಗಳನ್ನು ಮೆಗಾಸ್ಥನೀಸ್ ಮೊದಲ್ಗೊಂಡು ಅನೇಕ ಪ್ರಯಾಣಿಕರು ವರ್ಣಿಸಿದ್ದಾರೆ. ಅವುಗಳಲ್ಲೆಲ್ಲ ಭಾರತೀಯರ ಮೃದು ಸ್ವಭಾವವೂ, ಮಧುರ ನುಡಿಯೂ, ಸತ್ಯನಿಷ್ಠೆಯೂ, ಅತಿಥಿ ಪೂಜೆಯೂ ಪುನಃ ಪುನಃ

ಸ್ತೋತ್ರಪಾತ್ರವಾಗಿವೆ. ಪರದೇಶಿಗಳಲ್ಲಿಯೂ ಪ್ರಯಾಣಿಕರಲ್ಲಿಯೂ ಸಾಮಾನ್ಯ ಜನರೂ ಕೂಡ ಎಷ್ಟು ಆದರವನ್ನೂ ಔದಾರ್ಯವನ್ನೂ ತೋರ ತಕ್ಕವರೆಂಬುದಕ್ಕೆ ಜೇಮ್ಸ್ ಫೋರ್ಬ್ಸ್ (James Forbes) ಎಂಬ ಆಂಗ್ಲೇಯನು ತನ್ನ ಸ್ವಂತ ಅನುಭವ ಬರೆದಿಟ್ಟುದನ್ನು ಒಂದು ದೃಷ್ಟಾಂತ ವಾಗಿ ಕಾಣಬಹುದು :—

"ಪರಂಗಿಯವರನ್ನು ಕಾಣಲೇ ಕಾಣದೆ ಅವರ ವಿಷಯವನ್ನೂ ತಿಳಿಯದೆ ಇದ್ದ ಸ್ಥಳ ಗಳಲ್ಲಿ ನಾನು ಸುಳಿದಾಡುತ್ತಿದ್ದೆ. ಅಲ್ಲಿಯ ಜನರ ರೀತಿ ನೀತಿಗಳು ನಾವು ಬೈಬಲ್ ಪುಸ್ತಕದಲ್ಲಿ ಪುರಾತನವೆಂದು ಓದಿ ತಿಳಿಯುವ ರೀತಿ ನೀತಿಗಳಂತೆಯೇ ಇದ್ದುವು. ಪವಿತ್ರ ಗ್ರಂಥಗಳಲ್ಲಿ ವರ್ಣಿತವಾಗಿ, ನಮ್ಮ ಮನಸ್ಸುಗಳು ಮೆಚ್ಚಿ ನಿಷ್ಕಲ್ಮಷವೆನ್ನುವ ರೀತಿಯಲ್ಲಿ ಹಿಂದೂ ಗ್ರಾಮಸ್ಥರು ನನ್ನನ್ನು ಕಂಡು ಆದರಿಸಿದರು.

ಬಿಸಿಲಿನ ತಾಪ ಹೆಚ್ಚಾಗಿದ್ದ ಒಂದು ದಿನ ನಾನು ವೇಗವಾಗಿ ಸವಾರಿಮಾಡುತ್ತ ನನ್ನ ಪರಿವಾರದವರನ್ನು ಹಿಂದೆಹಾಕಿ ಒಂದು ಹಳ್ಳಿಯನ್ನು ಸಮೀಪಿಸಿದೆನು. ಅಲ್ಲಿ ನಾನು ಒಂದು ಹುಣಸೆಮರದ ನೆರಳಲ್ಲಿ ನಿಂತು ವಿಶ್ರಮಿಸಿಕೊಳ್ಳುತ್ತಲೂ ಪರಿವಾರದವರನ್ನು ನಿರೀಕ್ಷಿಸುತ್ತಲೂ ಇದ್ದಾಗ ಸಮೀಪದಲ್ಲಿದ್ದ ಬಾವಿಗೆ ಒಬ್ಬ ಹೆಂಗಸು ಬಂದಳು. ನಾನು ಕುಡಿಯಲು ನೀರನ್ನು ಬೇಡಿದೆ; ಆದರೆ ನಮ್ಮಿಬ್ಬರಲ್ಲಿಯೂ ಪಾನಪಾತ್ರೆಯೇ ಇರಲಿಲ್ಲ. ಬೇಗ ಬೇಗನೆ ಆಕೆಯು ಹೊರಟುಹೋದಳು. ಪ್ರಾಯಶಃ ಮಣ್ಣಿನ ಪಾತ್ರೆಯೊಂದನ್ನು ತರುವಳೆಂದು ನಾನು ಭಾವಿಸಿದೆ. ಆದರೆ ಆಕೆಯು ಒಂದು ಪಾತ್ರೆಯ ತುಂಬ ಹಾಲನ್ನೂ ಒಂದು ಬಾಳೆಲೆ ಸೀಳಿನ ಮೇಲೆ ಒಂದುಂಡೆ ಬೆಣ್ಣೆಯನ್ನೂ ತಂದಳು. ನಾನು ಸಂತೋಷ ದಿಂದ ಆ ಹಾಲನ್ನು ಸ್ವೀಕರಿಸಿದೆನು. ಬೆಣ್ಣೆ ಬೇಡವೆಂದು ನಾನು ಸೂಚಿಸಿದಾಗ ಆಕೆಯು ಅದನ್ನು ಎರಡು ಭಾಗಮಾಡಿ ನನ್ನ ಬಂಡಿಗೆ ಕಟ್ಟಿದ್ದ ಎರಡೆತ್ತುಗಳಿಗೂ ತಿನ್ನಿಸಿದಳು."

ದಾಕ್ಷಿಣ್ಯ

ಸೂಕ್ಷ್ಮರೀತಿಯಲ್ಲಿ ಮತ್ತೊಬ್ಬರ ಇಂಗಿತವನ್ನು ತಿಳಿದುಕೊಂಡು ತಕ್ಕಂತೆ ಕೋಮಲತನದಿಂದ ವರ್ತಿಸುವುದರಲ್ಲಿ ಭಾರತೀಯರು ಹೆಸರುವಾಸಿಯಾಗಲು ಕಾರಣ ಅವರ ದಾಕ್ಷಿಣ್ಯ ಸ್ವಭಾವವೆಂಬುದು. ಶಾಂತಿಯೇ ಪರಮ ಲಕ್ಷ್ಯವಾದ ಸಂಸ್ಕೃತಿಯುಳ್ಳವರಾದುದರಿಂದ ಮತ್ತೊಬ್ಬರ ಮನಸ್ಸಿಗೆ ಯಾತನೆಯನ್ನು ಕೊಡಲು ಭಾರತೀಯರು ಹಿಂಜರಿಯುವರು.

ಕಠೋರತೆಯಿಂದಲಾಗಲಿ ಕಾಠಿಸ್ಯದಿಂದಲಾಗಲಿ ವರ್ತಿಸುವುದು ಅವರಲ್ಲಿ ಅಪರೂಪ.

ಸತ್ಯನಿಷ್ಠೆ

ಸತ್ಯನಿಷ್ಠೆಯು ಹರಿಶ್ಚಂದ್ರನ ಕಾಲದಲ್ಲಿ ಮಾತ್ರವೇ ಅತಿಶ್ರೇಷ್ಠ ಸ್ಥಿತಿಯಲ್ಲಿದ್ದಿತೆಂದು ಭಾವಿಸಬಾರದು. ಫಾಹಿಯನ್, ಹಿಯೆಂತ್ಸಾಂಗ್, ಅಲ್ಬಿರೂನಿ ಮುಂತಾದವರ ವಿವರಗಳನ್ನು ಕಂಡೇ ಸತ್ಯ ಗೌರವವು ಭಾರತೀಯ ಜನರಲ್ಲಿ ಸರ್ವಸಾಮಾನ್ಯವಾಗಿ ನೆಲೆಸಿದ್ದ ಗುಣವೆಂದು ತಿಳಿಯಬಹುದು. ಕಾಗದಪತ್ರಗಳೇ ಭಾರತೀಯರಿಗೆ ಅನವಶ್ಯಕವಾಗಿದ್ದುವೆಂಬ ಮಾತಿಗೆ ಅರ್ಥ ಸತ್ಯನಿಷ್ಠೆಯೆಂಬ ಸಹಜ ಗುಣದ ಪ್ರಾಚುರ್ಯ. ದೇಶದಲ್ಲಿ ಈಚಿಗೆ ಅಧಿಕಾರಯುಕ್ತನಾಗಿದ್ದ ಸರ್ ಜಾನ್ ಹೆವಿಟ್ಬೆಂಬಾತನು (Sir John Hewitt) ಕ್ಷಾಮ ಬಂದಿದ್ದ ಪ್ರಾಂತದಲ್ಲಿ ಕ್ಷಾಮ ನಿವಾರಣೆಗಾಗಿ ರೈತರಿಗೆ ಸಾಲಗಳನ್ನು ಕೊಡಿಸಿದ್ದು, ಆ ಸಾಲದ ಹಣವನ್ನು ದುರುಪಯೋಗಪಡಿಸದಿದ್ದುದು ಮಾತ್ರವಲ್ಲದೆ ನಿಯಮಿತ ಕಾಲಕ್ಕೆ ಹಿಂದಕ್ಕೆ ಸಲ್ಲಿಸಿದ ಜನರ ಪ್ರಾಮಾಣಿಕತೆಯನ್ನು ಶ್ಲಾಘಿಸುತ್ತ "ಇಂಡಿಯ ದೇಶವೊಂದನ್ನು ಬಿಟ್ಟು ಇತರ ಯಾವ ದೇಶವೇ ಆಗಲಿ ಇಂತಹ ಅನುಭವವುಂಟಾದೀತೇ ಎಂದು ನಾನು ಸಂದೇಹಪಡುತ್ತೇನೆ" ಎಂದು ಹೇಳಿದನು. ಭಾರತೀಯರ ಸತ್ಯಸಂಧತೆಯನ್ನು ಪ್ರಕಟಗೊಳಿಸುವ ಲೇಖನಗಳು ನೂರಾರಿವೆ. ಆ ಗುಣವು ಸಮಸ್ತ ದೇಶದ ಜನರಿಗೆ ಸಾಮಾನ್ಯ ಗುಣವಾಗಿ ಪರಿಣಮಿಸಿದ ಅಂಶವನ್ನೂ ಅದಕ್ಕೆ ಕಾರಣವಾದ ಶಿಕ್ಷಣ ಸಂಪ್ರದಾಯವನ್ನೂ ಇಂದಿನ ಭಾರತೀಯರು ಮನಸ್ಸಿನಲ್ಲಿಡತಕ್ಕುದು.

ಕೃತಜ್ಞತೆ

ಮಾಡಿದ ಉಪಕಾರವನ್ನೊಪ್ಪಿಕೊಂಡು ಕೃತಜ್ಞತೆಯನ್ನು ಸೂಚಿಸುವ 'ಥ್ಯಾಂಕ್ಸ್' (Thanks) ಎಂಬ ಪ್ರಯೋಗಕ್ಕೆ ಸರಿದೂಗುವ ಪ್ರಯೋಗವೇ ಭಾರತೀಯರಲ್ಲಿಲ್ಲದಿರುವಾಗ್ಗೆ ಭಾರತೀಯರು ಕೃತಜ್ಞತೆಯುಳ್ಳವರೆಂದು ಹೇಳುವುದು ಹೇಗೆ? ಇದು ಅಜ್ಞತೆಯ ಪ್ರಶ್ನೆ. ಭಾರತೀಯ ಜೀವನದ ರೀತಿಯನ್ನು ಪ್ರತ್ಯಕ್ಷವಾಗಿ ತಿಳಿದುಕೊಳ್ಳಬೇಕೆಂದು ತಪಿಸಿದ ಸಿಸ್ಟರ್ ನಿವೇದಿತಾ ಎಂಬ ಸಾಧ್ವೀಮಣಿಯು ತನಗೆ ಮಾಡಿದ ಯಾವುದೋ ಒಂದು

ಅಲ್ಪ ಸೇವೆಗಾಗಿ ಒಬ್ಬಾನೊಬ್ಬ ಬ್ರಾಹ್ಮಣನನ್ನು ಕುರಿತು " Thank you" ಎಂದಳು. ಆಗ ಆ ಬ್ರಾಹ್ಮಣನು ಅಸಮಾಧಾನವನ್ನು ತೋರಿದನು. ನಿವೇದಿತಾ ಮೊದಲು 'ಇದೇನು ಜೋಪ್ಸ್'ವೆಂದುಕೊಂಡು ತರುವಾಯ ಅದರ ಅರ್ಥವನ್ನು ತಿಳಿದಳು. "ಪುಣ್ಯಕ್ಕಾಗಿ ಮಾಡಿದ ಕೆಲಸಕ್ಕೆ ಥ್ಯಾಂಕ್ಸ್ ಎಂಬುದೇನು? ಸೇವೆ ಮಾಡುವುದೂ ಉಪಕಾರ ಮಾಡುವುದೂ ಎಲ್ಲರ ಕರ್ತವ್ಯ; ಕರ್ತವ್ಯಪಾಲನೆಗಾಗಿ ಕೊಂಡಾಡುವುದೇನು?" ಎಂದು ಆ ಬ್ರಾಹ್ಮಣನು ಹೇಳತಕ್ಕವನಾಗಿದ್ದನು. ಉಪಕಾರ ಸ್ಮರಣೆಯು ಭಾರತೀಯರಲ್ಲಿ—ಒಂದು ದಿನವಲ್ಲ, ಒಂದು ವರ್ಷವಲ್ಲ, ಒಂದು ತಲೆಯಲ್ಲ,—ವಂಶಪರಂಪರೆಯಾಗಿ ನೆಲೆಸಿರುವುದು ಎಲ್ಲರ ಅನುಭವದಲ್ಲಿಯೇ ಇರುವುದು. ಉಪಕಾರಿಯನ್ನು ತಂದೆಯೆಂದೋ ದೇವರೆಂದೋ ಹೇಳುವುದೇ ಭಾರತೀಯರ ಪದ್ಧತಿ. ಈ ಗುಣವನ್ನೂ ಅನೇಕಾನೇಕರು ಹೊಗಳಿದ್ದಾರೆ.

**ಭಾರತೀಯ ವಿನಯ**

ಶಾಂತಿ ಲಕ್ಷ್ಯವುಳ್ಳ ಸಂಸ್ಕೃತಿಯನ್ನು ಸಾಧಿಸುವ ಜನರ ಸಾಧಾರಣ ಜೀವನದಲ್ಲಿ ಎಂತೆಂತಹ ಗುಣಗಳು ನೆಲೆಸಿ ವಂಶಪರಂಪರೆಯಾಗಿ ನಡೆದುಬರಬಹುದೆಂಬುದನ್ನು ಭಾರತೀಯರ ಗುಣಕಥನದಲ್ಲಿ ಸುಲಭವಾಗಿ ಕಾಣಬಹುದು. ಭಾರತೀಯರ ನಡತೆಯನ್ನು ಇತರರೊಂದಿಗೆ ಹೋಲಿಸಿದಲ್ಲಿ ಭಾರತೀಯವೆನಿಸಬಹುದಾದ ಗುಣಗಳು ಎದ್ದು ತೋರಿಕೊಳ್ಳುತ್ತವೆ. ಪಾಶ್ಚಾತ್ಯವಿದ್ಯಾಪ್ರಚಾರವು ಪ್ರಾರಂಭವಾದ ಕಾಲದಲ್ಲಿ ಭಾರತೀಯರಲ್ಲಿ ಸುಸಂಸ್ಕೃತರೆನಿಸಿದವರ ನಡತೆಯ ವಿವರವು ಕೆಲವೆಡೆಗಳಲ್ಲಿ ದೊರಕುತ್ತದೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಕಾಣಬಹುದು.

"ಪ್ರತಿಷ್ಠೆಯೇ ಇಲ್ಲದೆ ಸಾಮಾನ್ಯರಾಗಿಯೂ ಸರಳರಾಗಿಯೂ ಇದ್ದವರನ್ನು ನಾನು ಕಂಡೆ. ಇಂಗ್ಲೆಂಡ್ ಸ್ಕಾಟ್ಲೆಂಡುಗಳಲ್ಲಿ ಅತಿ ಹೀನರಾದ ವ್ಯವಸಾಯಗಾರರ ನೆನಪು ನನಗಾಯಿತು; ಅವರಂತೆಯೇ ಬಹು ಸರಳರಾಗಿ ಕಂಡರೂ ಈ ಭಾರತೀಯರಲ್ಲಿ ಸ್ವಲ್ಪವಾದರೂ ಒರಟುತನವಾಗಲಿ ಮರ್ಯಾದಾರಾಹಿತ್ಯವಾಗಲಿ ಇಲ್ಲ. ಅನಾಗರಿಕಜನರಂತೆ ಇವರು ಒಂದೆರಡು ವಸ್ತ್ರಗಳನ್ನೇ ಉಟ್ಟಿರುತ್ತಾರೆ. ಅವರ ಮನೆಗಳಾದರೋ ದರಿದ್ರ ಗುಡಿಸಲುಗಳು. ಅಂತಹವುಗಳಲ್ಲಿ ಅಲ್ಪಮನಸ್ಕರು ಮಾತ್ರ ಜೀವಿಸಬಹುದೆಂದು

ಮನಸ್ಸಿನಲ್ಲಿ ತೋರಬಹುದು. ಆದರೂ ಈ ಜನರು ಅತಿಗಹನವಾದ ವ್ಯಾಕರಣ ವಿಶೇಷಗಳನ್ನೂ ಸೂಕ್ಷ್ಮಗಳನ್ನೂ ತಿಳಿದವರಲ್ಲದೆ ಅವುಗಳನ್ನುಪಯೋಗಿಸಬಲ್ಲವರು. ತಮ್ಮ ದೇಶದ ಧರ್ಮ, ತತ್ವ, ಸಾಹಿತ್ಯ ರಾಶಿಗಳಲ್ಲಿ ನುರಿತವರು ; ತರ್ಕದಲ್ಲಿ ಆಸಕ್ತಿಯನ್ನೂ ಜಾಣ್ಮೆಯನ್ನೂ ತೋರತಕ್ಕವರು. ಸಾಧಾರಣವಾಗಿ ಅವರು ಸೂಕ್ಷ್ಮಗ್ರಾಹಿಗಳು, ವಿವೇಚನಾಪರರು ಮತ್ತು ಮೃದುವರ್ತಿಗಳು. ಅವರ ನಿಗರ್ವ ಗುಣವು ಶ್ರೇಷ್ಠಾಧಿಕಾರಿಯಾದವನೆದುರಿನಲ್ಲಿ ದೀನನಾಗಿ ವರ್ತಿಸುವುದರಲ್ಲಿ ಪ್ರಕಟವಾಗುವುದಿಲ್ಲ ; ಅವರಲ್ಲಿಯೇ ಪರಸ್ಪರವಾಗಿ ತೋರಿಕೊಳ್ಳುವುದು. ಅವರಲ್ಲಿ ಅಮೋಘ ಪಾಂಡಿತ್ಯವನ್ನು ಸಂಪಾದಿಸಿದ್ದವರು ತಮ್ಮ ಸ್ವಂತ ಪಾಂಡಿತ್ಯವನ್ನು ಕುರಿತು ದೈನ್ಯದಿಂದಲೂ, ಆಗಂತುಕನ ಪಾಂಡಿತ್ಯವನ್ನು ಕುರಿತು ಮೆಚ್ಚಿಕೆಯಿಂದಲೂ, ದೂರಸ್ಥನಾಗಿದ್ದಾತನ ಪಾಂಡಿತ್ಯವನ್ನು ಕುರಿತು ಗೌರವದಿಂದಲೂ, ಎದುರಿಗಿದ್ದಾತನ ಪಾಂಡಿತ್ಯವನ್ನು ಆತನೆದುರಿನಲ್ಲಿ ಸ್ತೋತ್ರಮಾಡದೆ ಆತನು ಹೊರಟುಹೋದ ಕೂಡಲೆ ಶ್ಲಾಘನೆಯಿಂದಲೂ ಪ್ರಸ್ತಾಪಿಸಿದುದನ್ನು ನಾನು ಪ್ರತ್ಯಕ್ಷವಾಗಿ ನೋಡಿದ್ದೇನೆ."

ಎಂಬ ಅರ್ಥವನ್ನು ಕೊಡುವ ವಾಕ್ಯಗಳನ್ನು ಆಡಂ (Adam) ಎಂಬ ಇಂಗ್ಲಿಷ್ ವಿದ್ವಾಂಸನು ಬರೆದಿಟ್ಟನು.

ಪ್ರಸಿದ್ಧಿ ಪಡೆದ ಮ್ಯಾಕ್ಸ್ ಮುಲ್ಲರ್ (Max Muller) ಎಂಬಾತನು

"ಅಂತರಂಗದ ಗುಣವು ತಾನಾಗಿಯೇ ಹೊರಕ್ಕೆ ಕಾಣಿಸಿಕೊಳ್ಳುವಂತಹ ಅನೇಕ ಸಂದರ್ಭಗಳಲ್ಲಿ ನಾನು ಭಾರತೀಯ ಪಂಡಿತರನ್ನು ಕಂಡಿದ್ದೇನೆ; ಯಾವ ಸಂದರ್ಭವೆಂದರೆ ಗ್ರಂಥ ವ್ಯಾಸಂಗ ಚರ್ಚೆಗಳಲ್ಲಿ. ಅವರು ತಮ್ಮಲ್ಲಿಯೂ ಯುರೋಪ್ಯ ವಿದ್ವಾಂಸರಲ್ಲಿಯೂ ವಾದ ವಿವಾದಗಳನ್ನು ನಡೆಸಿದುದನ್ನು ನೋಡಿರುವೆನು ; ಯುರೋಪ್ ಅಮೆರಿಕಾ ದೇಶಗಳಲ್ಲಿ ನಮಗೆ ಅನುಭವದಲ್ಲಿ ಬಾರದ ಸತ್ಯ, ಗೌರವ, ಧೈರ್ಯ, ಔದಾರ್ಯಗಳನ್ನು ಭಾರತೀಯ ಪಂಡಿತರೆಲ್ಲರೂ ತೋರಿದರೆಂದು ನಾನು ಹೇಳಬೇಕಾಗಿದೆ. ಅವರು ಬಲವನ್ನು ತೋರಿದರೂ ಸ್ವಲ್ಪವಾದರೂ ಒರಟುತನವನ್ನು ತೋರುವುದಿಲ್ಲ. ಅಷ್ಟೇಕೆ, ಕೆಲವು ವಿದ್ವಾಂಸರು ಬಯ್ಯಾಟಕ್ಕೆ ತೊಡಗಿದಾಗ ಅವರು ಅತಿಶಯವಾಗಿ ಆಶ್ಚರ್ಯಪಟ್ಟರು ; ಏಕೆಂದರೆ ಮಾತಿನಲ್ಲಿ ಒರಟುತನವು ತೋರಿದರೆ ಅದಕ್ಕೆ ದುರ್ವಿನಯ ಮಾತ್ರವಲ್ಲದೆ ಜ್ಞಾನ ರಾಹಿತ್ಯವೂ ಕಾರಣವೆಂದು ಭಾರತೀಯ ಪಂಡಿತರ ಅಭಿಪ್ರಾಯ. ತಪ್ಪಾದ ಸಮಯಗಳಲ್ಲಿ ಅವರು ತಪ್ಪನ್ನೊಪ್ಪಿಕೊಳ್ಳಲು ಸಿದ್ಧರಾಗಿರುತ್ತಾರೆ; ತಮ್ಮ ಪ್ರತಿವಾದಿಗಳು ತಪ್ಪಾಗಿದ್ದ ಸಮಯಗಳಲ್ಲಿ ಅವರನ್ನೆಂದೂ

**ಅವಹೇಳನ ಮಾಡಿದವರಲ್ಲ. ಅವರಲ್ಲಿ ವಕ್ರತೆಯಾಗಲಿ ಅಸತ್ಯವಾಗಲಿ ನೀಚತನವಾಗಲಿ ಇರುವುದಿಲ್ಲ. ...... ಭಾರತೀಯರು ವ್ಯಾಪಾರದಲ್ಲಿಯೂ ಪ್ರಾಮಾಣಿಕರೆಂದೂ ಸುಳ್ಳುಪತ್ರಗಳು ಅವರಲ್ಲಿ ಅಪರೂಪವೆಂದೂ ಇಂಗ್ಲಿಷ್ ವರ್ತಕರು ನನ್ನೊಡನೆ ಪುನಃಪುನಃ ಹೇಳಿದ್ದಾರೆ"**

ಎಂಬುದಾಗಿ ಬರೆದನು.

ಸಂಪ್ರದಾಯ ಶುದ್ಧಿ

ಇದೇ ಧ್ವನಿಯನ್ನು ಕೊಡುವ ಅನೇಕಾನೇಕ ವಾಕ್ಯಗಳನ್ನು ಸರ್ ಥಾಮಸ್ ಮನ್ರೋ, ಬಿಷಪ್ ಹೆಬರ್, ಸ್ಲೀಮನ್ ಮುಂತಾದ ಆಂಗ್ಲೇಯರ ಗ್ರಂಥಗಳಲ್ಲಿ ನೋಡಬಹುದು. ಭಾರತೀಯ ಜನರ ಸೌಮ್ಯಗುಣ ಸಂಪತ್ತಿಯೇ ಅಲ್ಲದೆ ಪರದೇಶೀಯರಿಗೆ ಜನಜೀವನದಲ್ಲಿ ಸಾಮಾನ್ಯವಾಗಿ ಕಾಣುವ ಆಚಾರ ಪದ್ಧತಿಗಳೂ ಆಶ್ಚರ್ಯವನ್ನುಂಟು ಮಾಡಿವೆ. ಮೊಸರು, ಗೋಮೂತ್ರ, ಜೇವು, ತುಳಸಿ ಮುಂತಾದವುಗಳ ಉಪಯೋಗವು ಇತ್ತೀಚೆಗೆ ಶಾಸ್ತ್ರಾಧಾರ ಸಹಿತವಾದುವೆಂದು ತಿಳಿದು ಬಂದಿದೆ. ಭಾರತೀಯರು ಜಾತ್ರೆಗೆಂದು ಗುಂಪು ಗುಂಪಾಗಿ ಕೂಡಿ ವಿನೋದಗಳನ್ನು ಅನುಭವಿಸುವ ಅಂಶವನ್ನು ಇತರ ದೇಶಗಳಲ್ಲಿ ನಡೆಯುವ ವಿನೋದ ಕೂಟಗಳೊಂದಿಗೆ ಹೋಲಿಸಿ ವಿಚಾರಮಾಡಿದಲ್ಲಿ ಘನವಾದ ವ್ಯತ್ಯಾಸವು ತೋರಿಕೊಳ್ಳುವುದು. ಭಾರತೀಯನು ವಿನೋದವನ್ನು ಪಟ್ಟು ಮನಸ್ಸಿನ ಭಾರವನ್ನು ಇಳಿಸಿಕೊಳ್ಳುವುದಲ್ಲದೆ ಪವಿತ್ರ ಭಾವನೆಗಳನ್ನು ತುಂಬಿಕೊಳ್ಳುವನು; ವಿನೋದಾಸಕ್ತಿಯು ಅವನನ್ನು ನೀಚತನಕ್ಕೆ ಸೆಳೆಯದಂತೆ ಜಾತ್ರೆಗಳು ನೆರವೇರುತ್ತವೆ. ನಾಗರಿಕತೆಯನ್ನು ಪಡೆದ ಇತರ ದೇಶಗಳ ವಿನೋದ ಕೂಟಗಳಲ್ಲಿ ನೀಚತನವೊಂದೇ ಅಲ್ಲವೆ ನಿರ್ಮಾನುಷ ವ್ಯಾಪಾರಕ್ಕೂ ಸುಲಭವಾಗಿ ಅವಕಾಶವೊದಗುವುದು. ದಂತವ್ಯಾಧಿಗಳೂ ತ್ವಕ್ಸಂಬಂಧವಾದ ರೋಗಗಳೂ ಭಾರತೀಯರಲ್ಲಿ ಕಡಿಮೆಯಾಗಿರಲು ಯಾವ ಸಾಮಾನ್ಯಾಚರಣೆಗಳು ಕಾರಣವೆಂಬುದನ್ನು ವಿಚಾರಿಸಿದಲ್ಲಿ ಭಾರತೀಯ ಆಚಾರಗಳ ಮೇಲ್ಮೆಯು ಮನದಟ್ಟಾಗುವುದು. ಹಿಂದೂ ಜನರ ಪದ್ಧತಿಗಳಲ್ಲಿ ಯಾವುದೊಂದನ್ನೂ ವಿಚಾರವಿಲ್ಲದೆ ತಿರಸ್ಕರಿಸಬಾರದೆಂಬುದು ಇವುಗಳಿಂದ ಗ್ರಾಹ್ಯವಾಗುತ್ತದೆ.

## ಅತಿ ಸೋಜಿಗ

ಇವುಗಳೆಲ್ಲವೂ ಆಶ್ಚರ್ಯಕರಗಳೇ. ಆದರೆ ಅವೆಲ್ಲವುಗಳಿಗಿಂತಲೂ ಆಶ್ಚರ್ಯಕರವಾದ ಅಂಶವು ಬೇರೆಯೊಂದುಂಟು.

ಚೈತನ್ಯ

ಅದೇನೆಂದರೆ ಭಾರತೀಯ ಸಂಸ್ಕೃತಿಯೆಂಬುದರ ಚೈತನ್ಯ. ಇತರ ಸಂಸ್ಕೃತಿಗಳು ಹುಟ್ಟಿ ಬೆಳೆದು ಸರ್ವನಾಶವನ್ನು ಪಡೆದಾಗ್ಯೂ ಭಾರತೀಯ ಸಂಸ್ಕೃತಿಯೆಂಬುದು ಕಾಲ ಪುರುಷನನ್ನೇ ಎದುರಿಸಿ ಇನ್ನೂ ಸಚೇತನವಾಗಿದೆ. ಪದೇ ಪದೇ ದೇಶವು ಅನ್ಯ ಜನರ ದಾಳಿಗಳಿಗೆ ಸಿಕ್ಕಿ ಆಕ್ರಾಂತವಾದಾಗ್ಯೂ ದೇಶದ ನಾಗರಿಕತೆಯು ಏಕರೀತಿಯಾಗಿಯೇ ಇದೆ. ಗ್ರೀಕರು ರೋಮಕರಿಂದ ಪರಾಜಿತರಾದಾಗ ಸಂಸ್ಕೃತಿ ರಂಗದಲ್ಲಿ ಅವರನ್ನು ಅಡಿಯಾಳುಗಳಾಗಿ ಮಾಡಿಕೊಳ್ಳುವಷ್ಟು ಸಂಸ್ಕೃತರಾಗಿದ್ದರು; ಭಾರತೀಯರು ತಮ್ಮ ದೇಶದಲ್ಲಿ ನುಗ್ಗಿ ಬಂದು ತಮ್ಮನ್ನು ಜಯಿಸಿದ ತಂಡೋಪತಂಡಗಳನ್ನು ಸಂಸ್ಕೃತಿ ಪ್ರಭಾವದಿಂದ ಅಡಿಯಾಳುಗಳನ್ನಾಗಿ ಪರಿವರ್ತಿಸಿಕೊಂಡದ್ದೇ ಅಲ್ಲದೆ ಅವರ ಪ್ರತ್ಯೇಕತೆಯನ್ನು ನೀಗಿಸಿ ಭಾರತೀಯರನ್ನಾಗಿ ಮಾಡಿಕೊಂಡರು. ಐರೋಪ್ಯರಲ್ಲಿ ಅಗ್ರಣಿಗಳೆನಿಸಿದ್ದ ಗ್ರೀಕರು ಭಾರತಭೂಮಿಗೆ ಬಂದುದರ ಪರಿಣಾಮವಾಗಿ ಭಾರತೀಯ ಧರ್ಮವನ್ನೊಪ್ಪಿಕೊಂಡುಬಿಟ್ಟರು; ಗ್ರೀಕರ ಸಂಪರ್ಕದ ಪ್ರಭಾವವು ಭಾರತೀಯರಲ್ಲಿ ಹೇಗೆ ತೋರಿತು ಎಂಬ ಪ್ರಶ್ನೆಗೆ 'ತೋರಲೇ ಇಲ್ಲ'ವೆಂಬ ಉತ್ತರ. ಚೀನಾ ಮುಂತಾದ ಮೂಡಲ ಜನಸ್ತೋಮಗಳು ಭಾರತೀಯರನ್ನು ಅಗ್ರಸ್ಥಾನದಲ್ಲಿಟ್ಟು ಗೌರವಿಸುವವರಾದರು. ಮಧ್ಯಏಷ್ಯಾ ಪ್ರಾಂತಗಳಿಂದ ಹಿಂಡು ಹಿಂಡುಗಳಾಗಿ ಬಂದ ಶಕ, ತುಷಾರ, ಹೂಣ ಮುಂತಾದವರು ದೇಶದಲ್ಲಿ ಬಂದ ತರುವಾಯ ಸಂಸ್ಕಾರವನ್ನು ಪಡೆದು ಭಾರತೀಯರಲ್ಲಿ ಸೇರಿಕೊಂಡರು. ಇಸ್ಲಾಮಿ ಧರ್ಮವು ತೋರಿಕೊಂಡಾಗ ಪಿರನೀಸ್ ಪರ್ವತಗಳಿಂದ ಹಿಂದೂಕುಷ್ ಪರ್ವತದವರೆಗೂ ಇರುವ ದೇಶಗಳೆಲ್ಲವೂ ಅತ್ಯಲ್ಪಕಾಲದಲ್ಲಿಯೇ ತಮ್ಮ ಪೂರ್ವ ಧರ್ಮಾಚರಣೆಗಳನ್ನು ತ್ಯಜಿಸಿ ಇಸ್ಲಾಮಿ ದೀಕ್ಷೆಯನ್ನು ತಾಳಿದವು. ಅಷ್ಟು ಪ್ರಚಂಡವಾದ ಇಸ್ಲಾಮಿ ಧರ್ಮವು ಭರತವರ್ಷವನ್ನು ಆಕ್ರಮಿಸಿದಾಗಲೂ ಭಾರತೀಯ ಸಂಸ್ಕೃತಿಯು ಭಾರತೀಯ

ವಾಗಿಯೇ ಉಳಿಯಿತು. ಇಷ್ಟು ಅಜೇಯವಾಗಿರುವ ಚೈತನ್ಯಕ್ಕೆ ಮೂಲವೆಲ್ಲಿ? ಇತರ ದೇಶಗಳಲ್ಲಿ ತೋರಿಕೊಳ್ಳದ ಪರಿಣತಿಯು ಈ ದೇಶದ ಜನರಲ್ಲಿ ತೋರಿ ಪುಷ್ಟಿಗೊಳ್ಳಲು ಸಾಧಕಗಳು ಯಾವುವು? ಎಂಬ ಪ್ರಶ್ನೆಯು ಕಠಿಣವಾದುದಾದರೂ ಬಲು ಮುಖ್ಯವಾದುದು. ಪ್ರೌಢಿಮೆಯನ್ನೂ ಚೈತನ್ಯವನ್ನೂ ಉಂಟುಮಾಡಲು ಅನೇಕಾನೇಕ ಕಾರಣಗಳಿರಬಹುದು. ಅವುಗಳಲ್ಲಿ ಭಾರತೀಯ ಸಮಾಜದಲ್ಲಿ ರೂಢಮೂಲವಾದ ಮುಖ್ಯ ಲಕ್ಷಣಗಳನ್ನು ತಿಳಿಯುವುದು ನಮ್ಮ ಕರ್ತವ್ಯ.

## ಸಮಾಜ ಸಂಸ್ಥೆಗಳು

ಭಾರತೀಯರ ಸಮಾಜದಲ್ಲಿಯೂ ರಾಷ್ಟ್ರ ವ್ಯವಸ್ಥೆಯಲ್ಲಿಯೂ ಮುಖ್ಯ ಲಕ್ಷಣವೆನಿಸಿದುದು **ಅವಿಭಕ್ತ ಕುಟುಂಬ**ವೆಂಬುದು. ಭರತವರ್ಷದಲ್ಲಿ ಕುಟುಂಬ ಅಥವಾ ಮನೆಯೆಂದರೆ ದಂಪತಿಗಳು ಮತ್ತು ಮಕ್ಕಳು ಮಾತ್ರರಲ್ಲ; ಅಂತಹ ದಂಪತಿ ಮಕ್ಕಳುಗಳು ಅನೇಕವಾಗಿ ಕಲೆತು ಒಂದು ದೊಡ್ಡ ಮನೆಯಲ್ಲಿ ಅಥವಾ ಸಮೀಪದಲ್ಲಿಯೇ ಇರುವ ಮನೆಮನೆಗಳಲ್ಲಿ ಇರುವ ಸಮೂಹ. ಒಂದು ಮನೆಯವರೆಂದರೆ ನೂರು ನೂರೈವತ್ತು ಮಂದಿಯಾಗಿರುವುದು ಏನೂ ಅಪರೂಪವಲ್ಲ. ಇತ್ತೀಚೆಗೆ ಕೆಲವು ಕಾರಣಗಳಿಂದ ಭಾರತೀಯ ಕುಟುಂಬಗಳು ಅಥವಾ 'ಮನೆ'ಗಳು ಒಡೆದುಹೋಗುತ್ತಲಿರುವುದು ವಾಸ್ತವ; ಆದರೂ ವ್ಯವಹಾರದಲ್ಲಿಯೂ ಸಂಸ್ಕಾರಗಳಲ್ಲಿಯೂ ಒಂದು ಮನೆಯವರೆನಿಸಿದವರೆಲ್ಲರೂ ಒಟ್ಟು ಸೇರಿಯೇ ವರ್ತಿಸುವರು. ಮದುವೆ ಮುಂಜಿಗಳ ಸಮಯದಲ್ಲಿ ಆಹ್ವಾನ ಪತ್ರಿಕೆಗಳನ್ನು ಬರೆಯುವುದು ಇನ್ನೂ ಮನೆಗೆ ದೊಡ್ಡವರಾದವರ ಹೆಸರಿನಲ್ಲಿಯೇ. 'ಮನೆ' ಎಂಬುದಕ್ಕೆ ಸಂಬಂಧಿಸಿದ ಸಪಿಂಡ, ಸಕುಲ್ಯ, ಸಮಾನೋದಕ, ಗೋತ್ರಗಳೆಂಬ ವಿಭಾಗಗಳನ್ನು ವ್ಯವಹಾರದಲ್ಲಿ ತಿಳಿಯಬೇಕಾಗುವುದು. ಅವಿಭಕ್ತ ಕುಟುಂಬವೆಂಬುದರ ಮೂಲವನ್ನೂ ವಿಕಾಸವನ್ನೂ ಇತಿಹಾಸದಲ್ಲಿ ಕಾಣಬೇಕು; ಆ ವ್ಯವಸ್ಥೆಯ ಅನುಕೂಲ ಅನಾನುಕೂಲಗಳನ್ನು ಬೇರೆಡೆಯಲ್ಲಿ ವಿಚಾರಮಾಡಬೇಕು. ಆದರಿಂದ ಭಾರತೀಯ ಸಂಸ್ಕೃತಿಯು ಪುಷ್ಟಿಪಡೆದುದನ್ನು ಮಾತ್ರ ಇಲ್ಲಿ ನಾವು ಕಾಣಬೇಕು.

**ಮನೆಯ ಶಿಕ್ಷಣ**

ಭಾರತೀಯನೆನಿಸಿದವನು ಮನೆಯಲ್ಲಿ ಬೆಳೆದ ಹಾಗೆ ಮನೆಯ ಶಿಕ್ಷಣವನ್ನೂ ಪಡೆಯುತ್ತಿದ್ದನು. ಅನೇಕ ದಂಪತಿಗಳೂ ಮಕ್ಕಳೂ ಹಿರಿಯರೂ ಕಿರಿಯರೂ ಸೇರಿ ಜೀವಿಸುತ್ತಿದ್ದುದರಿಂದ ವ್ಯಕ್ತಿಯಲ್ಲಿ ಸೌಮ್ಯ ಸಹನ ಗುಣಗಳು ಬೇರೂರಿದವು. ಮನೆಯ ಐಶ್ವರ್ಯಕ್ಕೆ ಅಥವಾ ಜೀವನದ ಅನುಕೂಲ ಸೌಕರ್ಯಗಳಿಗೆ ಮನೆಯವರೆಲ್ಲರೂ ಸಮಾನಾಧಿಕಾರಿಗಳು; ಆದುದರಿಂದ ವ್ಯಕ್ತಿಯಾದವನು ತಾನೇ ಬೇರೆಯೆಂದೋ ಹೆಚ್ಚೆಂದೋ ಯೋಚಿಸದೆ ಸ್ವಾರ್ಥವನ್ನು ದಮನಮಾಡಬೇಕಾಗಿತ್ತು. ದಾಕ್ಷಿಣ್ಯ ಗುಣವೆನ್ನುವುದು ಮನೆಯಲ್ಲಿಯೇ ಬೆಳೆಯತಕ್ಕದ್ದಾಗಿತ್ತು. ಈ ಮನೆಯ ಶಿಕ್ಷಣದಿಂದಲೇ ಭಾರತೀಯವೆನ್ನಬಹುದಾದ ಗುಣಗಳು ವೃದ್ಧಿಯಾದ ಅಂಶವನ್ನು ಸ್ಲೀಮನ್ (Sleeman) ಎಂಬ ಇಂಗ್ಲಿಷ್ ಗ್ರಂಥಕರ್ತನು ಕೊಟ್ಟಿರುವ ಒಂದು ವಿವರದಲ್ಲಿ ಮನಗಾಣಬಹುದು. ಕಂಪೆನಿಯ ಸಿಪಾಯಿ ಸೈನ್ಯಗಳಲ್ಲಿ ಕೆಲಸಕ್ಕೆ ಸೇರಿದವರನ್ನು ಕುರಿತು ಬರೆಯುತ್ತ ಆತನು

“ಅವರೆಲ್ಲರೂ ವ್ಯವಸಾಯವನ್ನವಲಂಬಿಸುವ ಭಾರತೀಯ ಜನರ ಗುಂಪಿಗೇ ಸೇರಿದವರು. ಸಂಖ್ಯೆಯು ಹೆಚ್ಚುತ್ತ ಬಂದಂತೆ ಅವರ ಮನೆಗಳಲ್ಲಿ ಕೆಲವರು ಹೊರಗೆ ಉದ್ಯೋಗಗಳನ್ನು ಹುಡುಕಿಕೊಂಡು ಹೊರಡುತ್ತಾರೆ. . . . . . . . ತಂದೆತಾಯಿಗಳಲ್ಲಿ ಭಕ್ತಿಯು ಇವರಲ್ಲಿ ಬೆಳೆದಂತೆ ಯಾರಲ್ಲಿಯೂ ಬೆಳೆಯುವುದಿಲ್ಲ. ನಮ್ಮ ಸಿಪಾಯಿಗಳ ಮನೆಗಳಲ್ಲಿ ಶೈಶವದಲ್ಲಾಗಲಿ ಬಾಲ್ಯದಲ್ಲಾಗಲಿ ಯೌವನದಲ್ಲಾಗಲಿ ತಾಯಿತಂದೆಗಳನ್ನು ಅಗೌರವದಿಂದ ಕಾಣುವುದೆಂಬುದೇ ಇಲ್ಲ. ಮಗನಾದವನು ತಾಯಿತಂದೆಗಳನ್ನು ಸ್ವಲ್ಪ ಆಕ್ಷೇಪಮಾಡಿದರೂ ಕೂಡ ನೆರೆಹೊರೆಯವರೆಲ್ಲರೂ ಆಶ್ಚರ್ಯಚಕಿತರಾಗಿ ಅವನಿಗೆ ಬುದ್ಧಿ ಹೇಳುವರು. ತಂದೆಯು ತೀರಿದ ಸಮಯದಲ್ಲಿ ಹಿರಿಯ ಮಗನು ಮನೆಗೆ ದೊಡ್ಡವನೆನಿಸಿ ಅದೇ ಮರ್ಯಾದೆಯನ್ನೂ ವಿಶ್ವಾಸವನ್ನೂ ಪಡೆಯುವನು. ಹಿರಿಯ ಮಗನು ಯಾವ ಕಾರಣದಿಂದಲಾದರೂ ದೂರದಲ್ಲಿದ್ದ ಪಕ್ಷದಲ್ಲಿ ಅನುಕೂಲವಿದ್ದಂತೆ ಊರಿಗೆ ಹೊರಟು ಮನೆಯ ಯಾಜಮಾನ್ಯವನ್ನು ವಹಿಸುವನು. ಅಂತಹ ಅನುಕೂಲವಿಲ್ಲದೆ, ಮನೆಯವರು ತನ್ನ ಸಂಪಾದನೆಯನ್ನು ನಂಬಿಕೊಂಡಿರತಕ್ಕ ಸ್ಥಿತಿಯಿದ್ದಲ್ಲಿ ತಾನು ಕೆಲಸದಲ್ಲಿಯೇ ಇದ್ದು ತನ್ನ ಸುಖಸೌಕರ್ಯಗಳನ್ನು ತಗ್ಗಿಸಿಕೊಂಡು ಸಾಧ್ಯವಾದಷ್ಟನ್ನು ಉಳಿಸಿ ಊರಿಗೆ ಕಳುಹಿಸಿಕೊಡುವನು.

"ತಮ್ಮಂದಿರು ದೂರ ಹೊರಡುವ ವೇಳೆಗಳಲ್ಲಿ ತಮ್ಮ ಹೆಂಡಿರು ಮಕ್ಕಳನ್ನು ತಂದೆಯ ಬಳಿ ಹೇಗೆ ಬಿಟ್ಟು ಹೋಗಬಹುದೋ ಹಾಗೆಯೇ ಅಣ್ಣನ ವಶದಲ್ಲಿ ಬಿಟ್ಟು ಹೊರಡುವರು. ಹಿರಿಯನಿಗೆ ಯಾಜಮಾನ್ಯವು ಬಂದಾಗ ಅದನ್ನು ಆತನು ದುರುಪಯೋಗಪಡಿಸುವುದಿಲ್ಲ; ಅಂತೆಯೇ ಕೇವಲ ಅಣ್ಣನೆನಿಸಿದ್ದವನು ಯಜಮಾನನಾದಾಗ ಆತನಲ್ಲಿ ತಮ್ಮಂದಿರ ಪ್ರೀತಿ ವಿಶ್ವಾಸಗಳು ಕಡಿಮೆಯಾಗುವುದೂ ಇಲ್ಲ."

**ಮನೆಯ ಉಪಕಾರ**

ಮನೆಯಲ್ಲಿ ಅನೇಕರು ಒಟ್ಟಾಗಿ ಕೂಡಿ ಬಾಳುವಾಗ ಅನ್ಯೋನ್ಯತೆಯು ವೃದ್ಧಿಯಾದುದಲ್ಲದೆ ಅಂಗಹೀನರಾದವರಿಗೂ ಮತಿವಿಕಲರಾದವರಿಗೂ ವೃದ್ಧರಾದವರಿಗೂ ಇತರ ಅದೃಷ್ಟಹೀನರಿಗೂ ಯಥೋಚಿತವಾದ ಪೋಷಣೆಯೂ ಸಹಾಯವೂ ದೊರಕುತ್ತಿದ್ದಿತು. ಮನೆಯ ಹೆಸರಿನಲ್ಲಿ ಮನೆಯವರೆಲ್ಲರಿಗೂ ಕುತೂಹಲವೂ ಹೆಮ್ಮೆಯೂ ನೆಲೆಸಿದ್ದುದು ಉತ್ಕರ್ಷಕವಾಗಿಯೇ ಇತ್ತು. ಸಾಲಸೋಲಗಳನ್ನು ಒಟ್ಟಿಗೆ ತಲೆ ತಲಾಂತರಗಳಾದರೂ ನಡೆಸಿ ಸಾಲಪತ್ರಗಳಿಲ್ಲದೆ ಇದ್ದಾಗ್ಯೂ ಪ್ರಮಾಣದಂತೆ ನಡೆಸುತ್ತಲಿದ್ದುದು ಇದಕ್ಕೆ ನಿದರ್ಶನ. ಕಷ್ಟ ಒಂದಾಗ ಒಬ್ಬರಿಗೊಬ್ಬರು ಸಹಾಯವಾಗಿರಬೇಕಾಗಿದ್ದಿತು. ಸ್ತ್ರೀಯರ ಗೌರವ ಪದವಿಗಳು ಭದ್ರಗೊಂಡವು. ಮನೆಯ ಆಸ್ತಿಪಾಸ್ತಿಗಳು ಮನೆಯದೆನಿಸಿ ಸ್ಥಿರಪಟ್ಟವು. ಅವಲಂಬಿಸಿದ ಉದ್ಯೋಗದಲ್ಲಿ ಅಪ್ರಾರ್ಥಿತವಾಗಿ ಶಿಕ್ಷಣವು ಲಭಿಸುತ್ತಿದ್ದು ದಲ್ಲದೆ ಚಾತುರ್ಯವು ತೋರಿಕೊಂಡು ವಿಕಾಸವಾಗಲು ಅನುಕೂಲವಾದ ಪರಿಸ್ಥಿತಿಯು ಸಿದ್ಧವಾಗುತ್ತಿತ್ತು.

## ಜಾತಿ

ಮನೆಯೆಂಬ ಗುಂಪಿಗಿಂತ ದೊಡ್ಡ ಗುಂಪು ಜಾತಿಯೆಂಬುದು. ಪ್ರತಿಯೊಬ್ಬರೂ ಒಂದು ಮನೆಗೆ ಸೇರಿದ್ದಂತೆಯೇ ಒಂದು ಜಾತಿಗೂ ಸೇರಿದವರು. ಜಾತಿ ಪದ್ಧತಿಗಳು ಭರತವರ್ಷದಲ್ಲಿ ವೃದ್ಧಿಗೊಂಡಹಾಗೆ ಪೃಥ್ವಿಯಲ್ಲಿ ಇನ್ನೆಲ್ಲಿಯೂ ವೃದ್ಧಿಪಡೆಯಲಿಲ್ಲ. ಭಾರತೀಯರು ನಾನಾ ಜಾತಿಗಳಾಗಿ ಜೀವನಮಾಡುವುದು ಲೋಕಪ್ರಸಿದ್ಧ. ಜಾತಿಯೆಂಬ ವ್ಯವಸ್ಥೆಯ ಉತ್ಪತ್ತಿ ವಿಕಾಸಗಳನ್ನಾಗಲಿ ಗುಣದೋಷ ವಿಮರ್ಶೆಯನ್ನಾಗಲಿ ಇಲ್ಲಿ

ಮಾಡಲಾರೆವು. ಆ ವ್ಯವಸ್ಥೆಯಿಂದ ಭಾರತೀಯ ಸಂಸ್ಕೃತಿ ಸಂಪತ್ತು ಹೇಗೆ ವೃದ್ಧಿ ಪಡೆಯಿತೆಂಬುದನ್ನು ಮಾತ್ರ ಕಾಣಬೇಕು.

ಸಂಸ್ಕೃತಿ ಮೂಲ

ಜಾತಿಯೆಂಬ ಮಾತಿಗೆ ಗೌರವವೇ ಅರ್ಥವೆಂದು ಗ್ರಹಿಸಬೇಕು. ಜಾತಿ ಕೆಡುವುದೆಂಬ ಮಾತಿಗೆ ಗೌರವ ನಷ್ಟವೆಂದೇ ಅರ್ಥ. ಯಾವ ಜಾತಿಯಾದರೂ ಜಾತಿಯ ಗೌರವವು ಎಡೆಬಿಡದೆ ಇರುತ್ತದೆ. ಮನೆಯಲ್ಲಿ ಶಿಕ್ಷಿತನಾದವನು ಹೆಚ್ಚಿನ ಶಿಕ್ಷಣವನ್ನು ಜಾತಿಯಲ್ಲಿ ಪಡೆಯುತ್ತಿದ್ದನು. ಭಾರತೀಯ ಗುಣವಿಕಾಸಕ್ಕೆ ಅವಿಭಕ್ತ ಕುಟುಂಬದಂತೆಯೇ ಜಾತಿಯೆಂಬುದೂ ಮೂಲಕಾರಣ ಮತ್ತು ಪೋಷಕ. ಔದ್ಯೋಗಿಕ ಕೌಶಲಕ್ಕೂ ಹಾಗೆಯೇ. ಜಾತಿಗೊಂದು ಕಸಬು ರೂಢಿಯಾದ ತರುವಾಯ ಆ ಕಸಬಿಗೆ ಮತ್ತೊಂದು ಜಾತಿಯಿಲ್ಲ; ಅಥವಾ ವೃತ್ತಿ ಸ್ಪರ್ಧೆ ನಡೆಯಬೇಕಾದುದು ಜಾತಿಯೊಳಗೆ ಮಾತ್ರ. ಸಮಾಜದ ಭದ್ರತೆಗೆ ಆರ್ಥಿಕಸ್ಥಿತಿ ಭದ್ರತೆಯು ಮೂಲ; ಆರ್ಥಿಕವಾದ ಉದ್ಯೋಗಗಳೂ ಕಸಬುಗಳೂ ಈ ರೀತಿಯಲ್ಲಿ ಜಾತಿಗಳನ್ನನುಸರಿಸಿ ವಿಭಾಗವಾದುದರಿಂದ ವೃತ್ತಿ ವಿಭೇದಗಳೂ ಜಾತಿ ವಿಭೇದಗಳೂ ಭದ್ರಗೊಂಡವು. ಕೌಶಲವು ತೋರಿಕೊಳ್ಳುವುದೇ ಅಲ್ಲದೆ ಕೌಶಲದ ಅಂತಸ್ತು ಹೆಚ್ಚುತ್ತಿರುವುದೇ ಸಹಜವಾಯಿತು.

ಮನೆಯ ಹೆಸರು ಎಂಬ ಯೋಜನೆಯು ನಡತೆಯಲ್ಲಿ ಪರಿಣಾಮ ಕಾರಕವಾದಂತೆಯೇ ಜಾತಿಯೂ ಕೂಡ ಪರಿಣಾಮಕಾರಕವಾಯಿತು. ಜಾತಿ ಪದ್ಧತಿಯಿಂದ ವ್ಯಕ್ತಿಗೆ ಒದಗುವ ಅನುಕೂಲ ಸೌಕರ್ಯಗಳನ್ನು ಇಂಗ್ಲಿಷ್ ಅಧಿಕಾರಿಯೊಬ್ಬಾತನು ಈ ರೀತಿಯಲ್ಲಿ ವಿವರಿಸಿದ್ದಾನೆ:—

"ಹಿಂದೂ ಜನರಿಗೆ ಮಾತ್ರವೇ ಅಲ್ಲದೆ ಸಮಸ್ತ ದೇಶಕ್ಕೂ ಜಾತಿಪದ್ಧತಿಯೆಂಬುದು ಭದ್ರತೆಯನ್ನೊದಗಿಸಿರುವುದು ನಿಸ್ಸಂದೇಹ. ಜಾತಿಯಿಂದ ದೇಶದಲ್ಲಿ ಸಮಾಧಾನ ಸ್ಥಿತಿಯು ಏರ್ಪಡುವುದು. ಪ್ರತಿಯೊಬ್ಬಾತನೂ ತನ್ನ ಜಾತಿಯನ್ನು ನೆನಸಿ ಸಂತೋಷಪಡುವುದಲ್ಲದೆ ಹೆಮ್ಮೆಗೊಳ್ಳುತ್ತಾನೆ; ಎಂತಹ ಸಮಯ ಬಂದರೂ ಜಾತಿಯನ್ನು ಬಿಡುವವನು ಯಾರೂ ಇಲ್ಲ. ಭಾರತೀಯ ಜಾತಿಯೊಂದರಲ್ಲಿ ಸೇರಿದವನಿಗೆ ಇರುವಷ್ಟು ಆಪತ್ಕಾಲದ ಬಂಧುಗಳು ಇತರ ಯಾವುದೇ ದೇಶದಲ್ಲಾಗಲಿ ಯಾರೇ ಆಗಲಿ ಇರುವುದಿಲ್ಲ.

ಜಾತಿಗೆ ಸೇರಿದವರೆಲ್ಲರೂ ಅನ್ಯೋನ್ಯವಾಗಿದ್ದು ಒಬ್ಬರ ಸುಖದುಃಖಗಳನ್ನೊಬ್ಬರು ವಿಚಾರಿಸುತ್ತ ಸಹಾಯಮಾಡುತ್ತ ಇರುತ್ತಾರೆ. ಭರತವರ್ಷದಂತಹ ವಿಶಾಲ ದೇಶದಲ್ಲಿಯೂ, ಭಾರತೀಯರಷ್ಟು ಬಹು ಸಂಖ್ಯಾಕ ಜನಸಮೂಹದಲ್ಲಿಯೂ ಇದು ಬಲು ಮುಖ್ಯವಾದುದು. ಈ ಪದ್ಧತಿಯಿಲ್ಲದಿದ್ದ ಪಕ್ಷದಲ್ಲಿ ಸಹಾಯ ಮಾಡುವವರಾರೂ ಇಲ್ಲದೆ ಅಲೆದಾಡಬೇಕಾಗುವವರಿಗೆ ಕೊನೆಮೊದಲಿಲ್ಲವಾಗುತ್ತಿತ್ತು. ಎಲ್ಲಿ ಹೋದರೂ ತಾನಿಂತಹ ಜಾತಿಯವನೆಂದು ಹೇಳಿದೊಡನೆಯೇ ನಿಷ್ಕೃಷ್ಟವಾದ ಪದವಿ ಮರ್ಯಾದೆಗಳು ಲಭಿಸುವುವು; ಜಾತಿಯ ಹೆಸರೇ ಯೋಗ್ಯತೆಯ ಕುರುಹು. ತನ್ನ ಜಾತಿಯವರಿದ್ದೆಡೆಗಳಲ್ಲಿ ಬೇರೆಯವರ ಸಹಾಯವೇ ಬೇಕಿಲ್ಲ. ತನಗೆ ಆದರವು ಸಲ್ಲುವುದೆಂಬ ಧೈರ್ಯವುಂಟು. ಭಾರತೀಯರು ತಮ್ಮ ಬಂಧುಮಿತ್ರರಿಗೆ ಸಹಾಯ ಮಾಡುವುದನ್ನು ಕರ್ತವ್ಯವೆಂದು ಭಾವಿಸುವುದಲ್ಲದೆ ತಮ್ಮ ಜಾತಿಯವರೆಲ್ಲರಿಗೂ ನೆರವಾಗುವುದು ತಮ್ಮ ಅವಶ್ಯ ಕರ್ತವ್ಯವೆಂದು ತಿಳಿಯುವರು. ಭಾರತದೇಶದಲ್ಲಿ ಇದುವರೆಗೂ ಬಡಬಗ್ಗರ ವಿಚಾರದಲ್ಲಿ ಆಡಳಿತದವರು ಅನಾಥಾಲಯಗಳನ್ನಾಗಲಿ ಕಾನೂನುಗಳನ್ನಾಗಲಿ ಏರ್ಪಡಿಸುವ ಅವಶ್ಯ ತೋರಿಲ್ಲ. ಜಾತಿಯಲ್ಲಿ ಹುಟ್ಟಿದವನು ತನ್ನ ವೃತ್ತಿಯೇನೆಂದು ಹುಡುಕಿಕೊಂಡು ಹೊರಡಬೇಕಾಗಿಲ್ಲ; ವೃತ್ತಿಯು ಸಿದ್ಧವಾಗಿಯೇ ಇರುವುದು. ಮತ್ತು ತನ್ನ ಸಂಪಾದನೆಯ ಮಾರ್ಗವನ್ನು ಗೊತ್ತುಪಡಿಸಿಕೊಳ್ಳುವ ಪ್ರಯತ್ನದಲ್ಲಿ ತನ್ನ ಜಾತಿಯವರ ಪೂರ್ಣ ಸಹಾಯವನ್ನು ನಿರೀಕ್ಷಿಸಬಲ್ಲನು. ಇದಲ್ಲದೆ ಪ್ರಾಪ್ತವಯಸ್ಕನಾಗುವ ವೇಳೆಗೆ ಜಾತಿಯವರೇ ಈತನ ವಿವಾಹವನ್ನೂ ನೆರವೇರಿಸಿ ಸಹಧರ್ಮಿಣಿಯನ್ನೂ ಒದಗಿಸುವರು........ಜಾತ್ಯಾಚಾರಗಳೆಂಬುವು ಸುನೀತಿಯನ್ನು ಬಿಟ್ಟೆಂದಿಗೂ ಇರುವುದಿಲ್ಲ; ಅನೇಕ ಆಚಾರಗಳು ನೀತಿಗಾಗಿಯೇ ಇರುತ್ತವೆ."

ಇದನ್ನು ಬೆಂಟನ್ (Benton, I.C.S.) ಎಂಬ ಅಧಿಕಾರಿಯು ಬೇರೆ ಸಂದರ್ಭದಲ್ಲಿ ಬರೆದುದಾದರೂ ಜಾತಿಯ ಉಪಯುಕ್ತತೆಯನ್ನು ಸಂಕ್ಷೇಪವಾಗಿ ತಿಳಿಸತಕ್ಕುದಾಗಿದೆ.

**ವಿಚಿತ್ರ**

ಜಾತಿಪದ್ಧತಿಗಳಿಗೆ ಕೊನೆಮೊದಲಿಲ್ಲ. ಅವುಗಳೆಲ್ಲವನ್ನೂ ನಾವು ಕಾಣಲಾಗುವುದಿಲ್ಲ. ವಿಚಿತ್ರವೆನಿಸಬಹುದಾದ ಒಂದು ಪದ್ಧತಿಯನ್ನು ಮಾತ್ರ ವಿಚಾರಮಾಡಬಹುದು. ವ್ಯಾಪಾರದಲ್ಲಿಯೋ ಕಸುಬಿನಲ್ಲಿಯೋ ನಷ್ಟಪಟ್ಟ ಗೃಹಸ್ಥನು ಆ ಸಮಯದಲ್ಲಿಯೇ ತನ್ನ ಜಾತಿಯವರನ್ನು ಕರೆಸಿ ಅವರಿಗೆ ಔತಣವನ್ನು ನಡೆಸುವುದುಂಟು.

ಬೊಕ್ಕಮೇಲೆ ಕುರು ಎದ್ದಂತೆ ಸರ್ವನಾಶವಾದ ಸಮಯದಲ್ಲಿ ಔತಣದ ವೆಚ್ಚವನ್ನೇಕೆ ನಡೆಸಬೇಕು ಎನ್ನಿಸಬಹುದು. ಆದರೆ ಅದರ ಆಚಾರವೇ ಬೇರೆ. ಆ ಔತಣಕ್ಕೆ ಬಂದವರೆಲ್ಲರೂ ತಮ್ಮ ಶಕ್ತ್ಯನುಸಾರವಾಗಿ ಕಾಣಿಕೆಯನ್ನು ತಂದುಕೊಡುವುದು ಆಗ ನಡೆಯುವ ಪದ್ಧತಿ; ಅಂತಹ ಸಮಯದಲ್ಲಿ ಬಾರದಿದ್ದ ಗೃಹಸ್ಥನು ಇತರ ಗೃಹಸ್ಥರ ಅಥವಾ ಜಾತಿವಂತರ ಪಂಚಾಯತಿಯಲ್ಲಿ ದಂಡನೆಗೊಳಗಾಗುವ ಸಂಭವವುಂಟು.

ಉಪಕಾರ

ಭಾರತೀಯನಿಗೆ ಜಾತಿಯೇ ಸರ್ವಸ್ವ. ರಾಜಾಧಿಕಾರಿಗಳಿಂದ ನೆರವೇರದಂತಹ ಸುಧಾರಣೆಯು ಜಾತಿಯೆಂಬುದರಿಂದ ಕೈಗೂಡುವುದು. ಆಹಾರ ಶುದ್ಧಿಯೇ ಆಗಲಿ ಆಹಾರ ರೀತಿಯೇ ಆಗಲಿ ಜಾತಿ ಗೌರವವನ್ನು ಅವಲಂಬಿಸುವುದರಲ್ಲಿಯೇ ಅದಕ್ಕೆ ನಿದರ್ಶನವನ್ನು ಕಾಣಬಹುದು. ಕಸಬುಗಳಲ್ಲಿ ಉಚ್ಚ ನೀಚಗಳೆಂಬವು ಇರತಕ್ಕದ್ದಲ್ಲವಾದರೂ ಕಾರಣಾಂತರಗಳಿಂದ ಅಂತಹ ಭಾವನೆಯು ಹುಟ್ಟಿಗೊಂಡಿದೆ. ಅದರ ಪರಿಣಾಮವಾಗಿ ನೀಚವಾದ ಅಥವಾ ಹೀನವಾದ ಕಸಬನ್ನು ಅನುಸರಿಸಿದ ಜಾತಿಗೂ ಜಾತಿ ಗೌರವವೆಂಬುದುಂಟು. ಭಾರತೀಯ ಸಂಸ್ಕೃತಿ ಸೌಭಾಗ್ಯದಲ್ಲಿ ಕೀರ್ತಿದಾಯಕಗಳಾದ ಬ್ರಾಹ್ಮಣರ ಬುದ್ಧಿಬಲ, ರಾಜಪುತ್ರರ ಕ್ಷಾತ್ರ, ಕಲಾವಂತರ ಕೌಶಲ ಮುಂತಾದವುಗಳು ಜಾತಿಪದ್ಧತಿಯಿಂದಲೇ ಒಲಗೊಂಡು ಪರಂಪರೆಯಾಗಿ ದೃಢಗೊಂಡವು. ಜಾತಿಪದ್ಧತಿಯು ಸಂಸ್ಕೃತಿ ಸಂಪತ್ತಿನ ಮೂಲವೂ ಹೌದು, ಪರಿಣಾಮವೂ ಹೌದು. ದೀರ್ಘವಿಚಾರಮಾಡಿದಲ್ಲದೆ ಆ ವ್ಯವಸ್ಥೆಯ ಗುಣದೋಷಗಳು ಇತ್ಯರ್ಥವಾಗುವುದಿಲ್ಲ.

## ಗ್ರಾಮಜೀವನ

ಹಿಂದೂ ಧರ್ಮ ಅಥವಾ ಭಾರತೀಯ ಸಂಸ್ಕೃತಿ ವ್ಯವಸ್ಥೆಯಲ್ಲಿ ಅವಿಭಕ್ತ ಕುಟುಂಬವೆಂಬುದೂ ಜಾತಿಪದ್ಧತಿಯೆಂಬುದೂ ಪ್ರಧಾನ ಲಕ್ಷಣಗಳು. ಭಾರತೀಯ ಚೈತನ್ಯವನ್ನು ಕುರಿತು ಪ್ರಸ್ತಾಪಿಸುವಾಗ ನಾವು ಆ ಚೈತನ್ಯಕ್ಕೆ ಬಲಕಾರಿಯಾದ ಮತ್ತೊಂದು ವ್ಯವಸ್ಥೆ

ಯನ್ನೂ ಎಣಿಸಬೇಕು. ಅದೇನೆಂದರೆ **ಗ್ರಾಮಸಮುದಾಯ ಜೀವನ** ವೆಂಬುದು. ದೇಶದಲ್ಲಿ ಈಗ ಸುಮಾರು ಏಳು ಲಕ್ಷ ಗ್ರಾಮಗಳುಂಟು: ಅವುಗಳಲ್ಲಿಯೇ ಸೇಕಡ 89 ಪಾಲು ಜನರು ವಾಸವಾಗಿರುವುದು. ಹಿಂದಿನ ಕಾಲದಲ್ಲಿ ಸಂಖ್ಯೆಯು ಕಡಿಮೆಯಾಗಿದ್ದಿರಬೇಕು; ಆದರೆ ಪ್ರಮಾಣವು ಮಾತ್ರ ಬಹುಶಃ ಇಷ್ಟೇ ಆಗಿದ್ದಿತೆಂದು ಧಾರಾಳವಾಗಿ ಹೇಳ ಬಹುದು. ಭರತವರ್ಷವೆಂಬುದು ಲಕ್ಷಗಟ್ಟಲೆ ಗ್ರಾಮಗಳ ಸಮುದಾಯವೇ. ಅವುಗಳನ್ನೂ ಅವುಗಳಲ್ಲಿನ ಸಮುದಾಯ ಜೀವನವನ್ನೂ ಕುರಿತು,—

"ತಮಗೆ ಬೇಕಾದುದೆಲ್ಲವನ್ನೂ ತಮ್ಮಲ್ಲಿಯೇ ಪಡೆಯುತ್ತ, ಇತರರ ಸಹಾಯವನ್ನು ಸ್ವಲ್ಪವಾದರೂ ಅಪೇಕ್ಷಿಸದೆ ಇದ್ದ ಗ್ರಾಮಸಮುದಾಯಗಳು ಪ್ರತ್ಯೇಕವೂ ಸ್ವತಂತ್ರವೂ ಆಗಿದ್ದ ಸಣ್ಣಸಣ್ಣ ರಾಷ್ಟ್ರಗಳಂತೆಯೇ ಸರಿ. ಯಾವುದು ನಾಶವಾದರೂ ಅವು ಮಾತ್ರ ನಾಶವನ್ನು ಹೊಂದುವುದಿಲ್ಲ. ರಾಜವಂಶಗಳು ಒಂದಾದಮೇಲೊಂದು ತೋರಿಕೊಂಡು ಮಾಯವಾಗಬಹುದು; ವಿಪ್ಲವದ ಮೇಲೆ ವಿಪ್ಲವವು ಸಂಭವಿಸ ಬಹುದು; ಪಠಾನ, ಮುಘಲ, ಮರಾಟಾ, ಸಿಕ್ಖ, ಇಂಗ್ಲಿಷ್ ಜನರು ಕ್ರಮವಾಗಿ ಒಡೆಯರಾದರು; ಆದರೆ ಗ್ರಾಮಸಮುದಾಯಗಳು ಏಕರೀತಿಯಾಗಿಯೇ ಉಳಿದಿವೆ. ಅಪಾಯ ಕಾಲದಲ್ಲಿ ಗ್ರಾಮಸ್ಥರು ಆಯುಧಗಳನ್ನು ಹಿಡಿದು ಕೋಟೆ ಕಟ್ಟಿಕೊಳ್ಳು ತ್ತಿದ್ದರು; ಶತ್ರು ಸೈನ್ಯಗಳು ದೇಶದಲ್ಲಿ ನುಗ್ಗಿದಾಗ ಗ್ರಾಮಸ್ಥರು ತಮ್ಮ ಪಶುಗಳ ಮಂದೆಗಳನ್ನು ಕೋಟೆಯೊಳಕ್ಕೆ ಹೊಡಿಕೊಂಡು, ಶತ್ರು ಸೈನ್ಯಗಳ ಮಾರ್ಗದಲ್ಲಿ ಅಡ್ಡವಾಗಿ ತೋರಿಕೊಳ್ಳದೆ ಸ್ವಸ್ಥರಾಗಿದ್ದುಬಿಡುತ್ತಿದ್ದರು. ತಮ್ಮ ಗ್ರಾಮವನ್ನು ಲೂಟಿಮಾಡಲು ಶತ್ರುಗಳು ತೊಡಗಿದಾಗ ಪ್ರತಿಭಟಿಸಲಾಗದಿದ್ದರೆ ಗ್ರಾಮಸ್ಥರು ತಮ್ಮ ಗ್ರಾಮವನ್ನು ಬಿಟ್ಟು ಸ್ವಲ್ಪ ದೂರದ ಗ್ರಾಮಗಳಿಗೆ ಹೊರಟು ಅವುಗಳಲ್ಲಿ ಕಾಲ ಕಳೆದು ವಿಪತ್ಕಾಲ ಕಳೆದ ಕೂಡಲೆ ಹಿಂದಿರುಗಿ ತಮ್ಮ ಮನೆಮಾರುಗಳನ್ನು ಹಿಂದಿನಂತೆ ಕಟ್ಟಿಕೊಳ್ಳುತ್ತಿದ್ದರು. ಒಂದು ತಲೆಯವರಿಗೆ ಆ ಪ್ರಾಪ್ತಿಯಿಲ್ಲದೆ ಇದ್ದರೂ ಮುಂದಿನ ತಲೆಯವರಿಗಿತ್ತು; ಅವರು ಸ್ವಗ್ರಾಮವೆಂಬುದಕ್ಕೆ ಸಕಾಲದಲ್ಲಿ ಹಿಂತಿರುಗುತ್ತಿದ್ದರು."

"ಗ್ರಾಮಸಮುದಾಯಗಳ ಈ ವ್ಯವಸ್ಥೆಯಿಂದಲೇ ಭಾರತೀಯರು ಎಷ್ಟು ವಿಪತ್ಪರಂಪರೆಗಳು ಒದಗಿದಾಗ್ಯೂ ಸುರಕ್ಷಿತರಾಗಿರುವರೆಂದು ನನಗೆ ತೋರುತ್ತದೆ;

ಭಾರತೀಯರು ಪಡೆಯುವ ಸುಖಸೌಕರ್ಯಗಳಿಗೂ ಅನುಭವಿಸುವ ಸ್ವಾತಂತ್ರ್ಯಕ್ಕೂ ಗ್ರಾಮವ್ಯವಸ್ಥೆಯೇ ಸಹಾಯವನ್ನೊದಗಿಸಿತು."

ಎಂಬುದಾಗಿ ಸರ್ ಚಾರ್ಲ್ಸ್ ಮೆಟ್ಕಾಫ್ (Sir Charles Metcalfe) ಎಂಬಾತನು ಬರೆದುದು ಈಗಲೂ ಪ್ರಸಿದ್ಧವಾಗಿದೆ.

**ಹನ್ನೆರಡು ಆಯಗಾರರು**

ಭಾರತೀಯರ ಮೇಲ್ಮೆಗೆ ಮೂಲಕಾರಣವಾದ ಈ ಸಮುದಾಯ ಸಂಸ್ಥೆಗಳ ವಿವರವನ್ನು ನಾವು ಪೂರ್ತಿಯಾಗಿ ಪಡೆಯಲಾರೆವು; ಕಳೆದ ನೂರೈವತ್ತು ವರ್ಷಗಳ ಕಾಲದಲ್ಲಿ ಗ್ರಾಮಸಮುದಾಯಗಳ ಪರಿಯೇ ಬದಲಾಗಿ ಅಸ್ತವ್ಯಸ್ತವಾಗಿದೆ. ಪ್ರಧಾನ ಲಕ್ಷಣಗಳನ್ನು ಗುರುತಿಸಲು ಸಾಕಾದಷ್ಟು ವಿಷಯಸಂಗ್ರಹವೇ ಇರುವುದಿಲ್ಲ. ಆದರೂ ಸಮುದಾಯ ಜೀವನವೆಂಬುದಕ್ಕೆ ಸಾಮಾನ್ಯವಾಗಿ ಬಾರಾಬಲೂತಿ ಪದ್ಧತಿಯೆಂದೂ, ಹನ್ನೆರಡು ಆಯಗಾರರ ಪದ್ಧತಿಯೆಂದೂ ಹೆಸರಾಗಿದೆ. ಪಟೇಲ, ಶಾನುಭೋಗ, ಜೋಯಿಸ, ಕಮ್ಮಾರ, ಅಕ್ಕಸಾಲಿಗ, ನಾಯಿಂದ, ಅಯ್ಯ ಅಥವಾ ಉಪಾಧ್ಯಾಯ, ಕುಂಬಾರ, ವೈದ್ಯ, ಅಗಸ, ನೀರುಗಂಟಿ, ತೋಟಿ, ತಳವಾರ ಮುಂತಾಗಿ ಸುಮಾರು ಹನ್ನೆರಡು ಗ್ರಾಮಸೇವಕರು ಗ್ರಾಮಸ್ಥರ ಅನುಕೂಲಗಳನ್ನೊದಗಿಸುತ್ತ ಗ್ರಾಮದ ಆಡಳಿತವನ್ನು ನಡೆಸುತ್ತಿದ್ದ ಪಂಚಾಯತರ ತೀರ್ಪಿನಂತೆ ನಡೆದುಕೊಳ್ಳುತ್ತ ಇರುತ್ತಿದ್ದರು. ಈ ಆಯಗಾರರಿಗೆ ಸಲ್ಲುತ್ತಿದ್ದುದು ವರ್ಷದ ಉತ್ಪತ್ತಿಯಲ್ಲಿ ಭಾಗ; ಒಟ್ಟು ಗ್ರಾಮದ ಉತ್ಪತ್ತಿಯನ್ನೊಂದು ರಾಶಿಯಾಗಿ ಭಾವಿಸಿದ್ದಂಶವು ಅದರಲ್ಲಿ ಮುಖ್ಯವಾದುದು. ಗ್ರಾಮನೈರ್ಮಲ್ಯ, ಶಿಕ್ಷಣ, ರಕ್ಷಣೆ, ನ್ಯಾಯಪಾಲನೆ, ನೀರಾವರಿ, ಆಯವ್ಯಯ, ಸರ್ವೋಪಯುಕ್ತವಾದ ಕೆಲಸಕಾರ್ಯಗಳು, ಅನಾಥರಿಗೆ ಸಹಾಯ, ದಾನಧರ್ಮ, ಉತ್ಸವ ವಿನೋದಗಳು ಮೊದಲಾದ ಗ್ರಾಮದ ಆಡಳಿತದ ಭಾಗಗಳೆಲ್ಲವೂ ಪಂಚಾಯತರ ಅಧಿಕಾರಕ್ಕೊಳಗಾಗಿದ್ದವು.

**ಪಂಚಾಯತನ**

ವರ್ಷಕ್ಕೊಮ್ಮೆ ರಾಜಾಧಿಕಾರಿಯು ಕಾಣಿಸಿಕೊಂಡಾಗ ಪಂಚಾಯತರೇ ರಾಜಾದಾಯವನ್ನು ತಮ್ಮಲ್ಲಿ ಎತ್ತಿದ್ದು ಒಪ್ಪಿಸಿಬಿಡುತ್ತಿದ್ದರು; ಉಳಿದ ವೇಳೆಗಳಲ್ಲಿ ಯಾರ

ಅಡ್ಡಿಯೂ ಆತಂಕವೂ ಇಲ್ಲದೆ ಗ್ರಾಮಸ್ಥರು ತಮ್ಮ ಸಮುದಾಯ ಜೀವನವನ್ನು ನಡೆಸಿಕೊಳ್ಳುತ್ತಲಿದ್ದರು.

ಅನ್ಯೋನ್ಯತೆ

ಭಾರತೀಯ ಗ್ರಾಮಗಳಲ್ಲಿ ಸಮುದಾಯಜೀವನವು ಯಾವ ಬಗೆಯಲ್ಲಿ ನಡೆಯುತ್ತಿತ್ತೆಂದು ಕೆಲವು ಉದಾಹರಣೆಗಳಿಂದ ಭಾವಿಸಿಕೊಳ್ಳಬಹುದು. ಗ್ರಾಮಸ್ಥರಲ್ಲಿ ಸುಗ್ಗಿಕಾಲ, ಯುಗಾದಿ, ಸಂಕ್ರಾಂತಿ ಮುಂತಾದ ಹಬ್ಬಗಳು ನಡೆಯುವಾಗ ಎಲ್ಲ ಮನೆಯವರೂ ಸೇರಿಕೊಂಡೇ ಉತ್ಸವ ಕೂಟಗಳನ್ನು ನಡೆಸುತ್ತಾರೆ. ಯಾವುದಾದರೊಂದು ಮನೆಯಲ್ಲಿ ಸಾವು ಸಂಭವಿಸಿದರೆ ಮೃತದೇಹದ ಸಂಸ್ಕಾರವು ಮುಗಿಯುವವರೆಗೂ ಯಾರ ಮನೆಯಲ್ಲಿಯೂ ಒಲೆಯನ್ನೇ ಹೊತ್ತಿಸುವುದಿಲ್ಲ. ಮದುವೆ ಮುಂಜಿಗಳಲ್ಲಿ ಗ್ರಾಮಸ್ಥರೆಲ್ಲರೂ ಒಂದೇ. ಮಕ್ಕಳು ಎಲ್ಲ ಗ್ರಾಮಸ್ಥರ ಮಕ್ಕಳೆಂಬ ರೀತಿಯೇ ಇತ್ತು. ಒಡವನಾದವನ ಮಗಳ ಮದುವೆಯಾಗುವಲ್ಲಿ ಮದುವೆಯ ವೆಚ್ಚವನ್ನು ಗ್ರಾಮಸ್ಥರೆಲ್ಲರೂ ವಹಿಸುವುದುಂಟು. ಈ ರೀತಿಯಲ್ಲಿ ಅನ್ಯೋನ್ಯವಾಗಿ ಜೀವನವು ನಡೆಯುತ್ತಿದ್ದುದಲ್ಲದೆ ಜೀವನದಲ್ಲಿ ದಾನಧರ್ಮಗಳು ಸಹಜವಾಗಿ ಬೇರೂರಿದವು. ಗ್ರಾಮದಲ್ಲಿ ಯಾರಾದರೂ ಉಪವಾಸವಿದ್ದರೆ ಗ್ರಾಮಸ್ಥರೆಲ್ಲರಿಗೂ ಚಿಂತೆ; ಅನ್ನವನ್ನು ಮಾರುವುದೆಂಬುದೇ ಅಚಿಂತ್ಯ. ಈಗಲೂ ಕೆಲವು ಹಳ್ಳಿಗಳಲ್ಲಿ ಹಾಲು ಮೊಸರುಗಳನ್ನು ಮಾರುವುದಿಲ್ಲ; ಯೋಗ್ಯತೆಯಿದ್ದಷ್ಟು ಉಚಿತವಾಗಿಯೇ ಕೊಡುತ್ತಾರೆ. ಇವುಗಳಿಂದ ಸಮುದಾಯಜೀವನದ ಅನ್ಯೋನ್ಯತೆಯನ್ನೂ ಗ್ರಾಮಗಳಲ್ಲಿ ನೆಲೆಸಿದ್ದ ಸೌಭಾಗ್ಯವನ್ನೂ ತಿಳಿಯಬಹುದು.

ಗೌರವ

ಚರಿತ್ರೆಯ ಆದಿಯಲ್ಲಿಯೇ ರೂಪಗೊಂಡ ಗ್ರಾಮಸಮುದಾಯ ವ್ಯವಸ್ಥೆಯು ಭಾರತೀಯ ಜನತೆಯ ಬೆನ್ನುಮೂಳೆಯಂತೆ ಎಲ್ಲ ಕಾಲಗಳಲ್ಲಿಯೂ ಭದ್ರವಾಗಿತ್ತು. ಹಿಂದೂ ರಾಜರೂ ಚಕ್ರವರ್ತಿಗಳೂ ಆಳಿದ ಕಾಲದಲ್ಲಿ ಪ್ರಭುಗಳೂ ರಾಜಾಧಿಕಾರಿಗಳೂ ಗ್ರಾಮಸ್ಥರ ಕೂಟಗಳನ್ನು **ಮಹಾಜನ**ರೆಂದು ಗೌರವಿಸಿ ತಾವೇನು ಕೆಲಸಮಾಡಿದರೂ ಮಹಾಜನರ ಸಮ್ಮತಿಯನ್ನು ಆಶಿಸುತ್ತಿದ್ದರು. ಮುಸಲ್ಮಾನರ ಆಡಳಿತದಲ್ಲಿಯೂ

ಗ್ರಾಮಸಮುದಾಯಗಳಿಗೆ ಯಾವ ಭಂಗವೂ ತೋರಲಿಲ್ಲ. ಮುಘಲ ಬಾದಷಾಹಿಯು ಧ್ವಂಸವಾದ ತರುವಾಯ ದೇಶದಲ್ಲಿ ಸೈನ್ಯಗಳು ಸುಳಿದಾಡುತ್ತಲಿದ್ದಾಗಲೂ ಗ್ರಾಮಸಮುದಾಯಗಳಿಗೆ ಆಪತ್ತೊದಗಿದರೂ ತಾತ್ಕಾಲಿಕವಾಗಿತ್ತು. ಬ್ರಿಟಿಷ್ ಆಡಳಿತವು ರೂಢವಾದ ಮೇಲೆಯೇ ಗ್ರಾಮಸಮುದಾಯ ವ್ಯವಸ್ಥೆಗೆ ಎಪತ್ತೊದಗಿ ರೂಪವೇ ಬದಲಾಯಿತು.

**ಆಡಳಿತ**

ಮನೆ, ಜಾತಿ, ಗ್ರಾಮಗಳೆಂಬುವಲ್ಲದೆ ಜನಜೀವನದಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸಿ ಭದ್ರತೆಯನ್ನೂ ಅಭಿವೃದ್ಧಿಯನ್ನೂ ಒದಗಿಸಿದ ಬೇರೆ ಕೆಲವು ಸಂಸ್ಥೆಗಳೂ ಇದ್ದವು. ಜಾತಿ ಪಂಚಾಯುತಿಗಳಲ್ಲದೆ ಪಟ್ಟಣಗಳಲ್ಲಿ ವರ್ತಕರು ಕೂಡಿ **ಶ್ರೇಣಿ** ಅಥವಾ **ನಿಗಮಸಭೆ**ಗಳೆಂಬುದನ್ನೂ ಅಕ್ಕಪಕ್ಕದ ಗ್ರಾಮಸಮುದಾಯಗಳು ಒಟ್ಟಾಗಿ ಸೇರಿ **ಪೂಗ**ಗಳೆಂಬ ಸಭೆಗಳನ್ನೂ ನಡೆಸುತ್ತಲಿದ್ದುದರಿಂದ ರಾಷ್ಟ್ರದ ಆಡಳಿತವನ್ನು ವಹಿಸಿದವರಿಗೆ ಕರ್ತವ್ಯವು ಹೆಚ್ಚೆನಿಸಿರಲಿಲ್ಲ. ರಾಜ್ಯಭಾರವೆಂದರೆ ಸಾಮಾನ್ಯವಾಗಿ ದುಷ್ಟಶಿಕ್ಷಣ ಶಿಷ್ಟರಕ್ಷಣಗಳೆಂದು ಮಾತ್ರವೇ ಸೂಚಿತವಾಗುತ್ತಿತ್ತು. ಪರದೇಶದ ಶತ್ರುಗಳಿಂದ ತೊಂದರೆ ಬಾರದಂತೆ ಸೈನ್ಯ ಪೋಷಣೆ ಮಾಡಿಕೊಂಡಿದ್ದು ದೇಶದೊಳಗೆ ಕಳ್ಳಕಾಕರನ್ನೂ ದುಷ್ಟರನ್ನೂ ದಂಡಿಸುತ್ತ ಶಾಂತಿಯನ್ನು ರಕ್ಷಿಸುವುದೆಷ್ಟೋ ಅಷ್ಟುಮಾತ್ರವೇ ಪ್ರಾಚೀನಕಾಲದ ರಾಜ್ಯಭಾರವಾಗಿತ್ತು. ಸೈನ್ಯ ಪೋಷಣೆ ನ್ಯಾಯ ರಕ್ಷಣೆಗಳೇ ಪ್ರಧಾನವಾಗಿ ಅನಿವಾರ್ಯವೆನಿಸಿದ್ದ ಕರ್ತವ್ಯಗಳು. ಸಂಚಾರ ಸೌಕರ್ಯಗಳನ್ನು ನಿರ್ಮಿಸುವುದು, ನೀರಾವರಿಯ ಅನುಕೂಲಗಳನ್ನೇರ್ಪಡಿಸುವುದು, ವಿದ್ವಾಂಸರನ್ನೂ ಕಲಾಸಕ್ತರನ್ನೂ ಪ್ರೋತ್ಸಾಹಿಸುವುದು, ದಾನಧರ್ಮಗಳನ್ನು ಮಾಡುವುದು—ಇವಿಷ್ಟೂ ಐಚ್ಛಿಕವಾಗಿದ್ದವೆನ್ನಬಹುದು. ಗ್ರಾಮಗಳ ಮಹಾಜನರನ್ನೂ ಪಟ್ಟಣದ ಸ್ವಾಮಿ ಅಥವಾ ಶ್ರೇಷ್ಠಿಯನ್ನೂ ಗೌರವಿಸುತ್ತ ಜಾತ್ಯಾಚಾರಗಳನ್ನಾಗಲಿ ಮತಧರ್ಮವೆಂಬುದನ್ನಾಗಲಿ ತೊಂದರೆಪಡಿಸದೆ ಇದ್ದಷ್ಟುಕಾಲ ಪ್ರಭುಗಳಿಗೆ ಆಡಳಿತವು ನಡೆಯಿತು.

## ರಾಷ್ಟ್ರ ಪದ್ಧತಿ

ಧರ್ಮಶಾಸ್ತ್ರ

ಪ್ರಾಚೀನಕಾಲದಲ್ಲಿ ಭಾರತೀಯ ರಾಜ್ಯಭಾರ ನಿರ್ವಾಹವು ಕೇವಲ ರಾಜತ್ವದಿಂದಲೇ ನಡೆಯಿತೆಂಬುದು ತಥ್ಯವಲ್ಲ. ರಾಜತ್ವವೇ ಸಾಮಾನ್ಯವಾಗಿದ್ದಾಗ್ಯೂ ರಾಜನೇ ಇಲ್ಲದಿದ್ದ ಲಿಚ್ಛವಿ, ಕಠ, ಯೌಧೇಯಗಣಗಳಂತಹ ರಾಷ್ಟ್ರಗಳೂ ಸಾವಿರಾರು ವರ್ಷಕಾಲ ಶೋಭಿಸಿದವು. ರಾಜ ಶಬ್ದೋಪಜೀವಿ, ಶಸ್ತ್ರ ಶಬ್ದೋಪಜೀವಿ, ವಾರ್ತೋಪಜೀವಿಗಳೆಂಬ ಗಣಗಳ ವಿವರವನ್ನು ಕೌಟಿಲೀಯ ಅರ್ಥಶಾಸ್ತ್ರ ಮುಂತಾದ ಗ್ರಂಥಗಳಲ್ಲಿ ಕಾಣಬಹುದು. ಯುದ್ಧದಲ್ಲಿ ಪಾಂಡಿತ್ಯವನ್ನು ಸಂಪಾದಿಸಿ, ಗ್ರೀಕರ ಸ್ಪಾರ್ಟ ಎಂಬುದನ್ನು ಯೋಧಶಿಕ್ಷೆಯಲ್ಲಿ ಮೀರಿಸಿ, ಸೌಂದರ್ಯವನ್ನೇ ಸಾಧಿಸಿದ ಗಣಗಳ ವಿವರವೂ ಉಂಟು. ಅತಿಪುರಾತನಕಾಲದಲ್ಲಿಯೇ ರಾಜನೀತಿ, ದಂಡನೀತಿ, ನಯ, ಅರ್ಥಶಾಸ್ತ್ರಗಳೆಂಬ ಹೆಸರುಗಳಿಂದ ರಾಷ್ಟ್ರನೀತಿಯೆಂಬುದು ವಿಸ್ತಾರವಾದ ಶಾಸ್ತ್ರವಾಗಿ ಪರಿಣಮಿಸಿತು. ಧರ್ಮ ಶಾಸ್ತ್ರಗಳೆಂಬ ಅಪಾರವಾದ ರಾಶಿಯೇ ಈ ವಿಷಯಕ್ಕೆ ಸಂಬಂಧಿಸಿದವು. ದುಷ್ಟ ದರ್ಪಿಷ್ಠ ರಾಜರನ್ನು ಹೆಡಮುರಿಗಟ್ಟಿ ಅವರ ದೌಷ್ಟ್ಯಕ್ಕೆ ಅವಕಾಶ ವಿಲ್ಲದಂತೆ ನೆರವೇರಿಸಿದುದಲ್ಲದೆ ಧರ್ಮಶಾಸ್ತ್ರಗಳೆಂಬುವು ರಾಜನು ರಾಷ್ಟ್ರ ಸೌಭಾಗ್ಯ ಮೂರ್ತಿಯೆಂದು ಆತನ ಶ್ರೇಷ್ಠತೆಯನ್ನು ಸ್ಥಾಪಿಸಿದಾಗ್ಯೂ ದುಷ್ಟರಾಜನು ಹುಚ್ಚುನಾಯಿಯಂತೆ ವಧಾರ್ಹನೆಂದು ವಿವರಿಸಿ ನಿರಂಕುಶ ಪ್ರಭುತ್ವಕ್ಕೆ ಆಸ್ಪದವಿಲ್ಲದಂತೆ ಮಾಡಿಬಿಟ್ಟವು. ಈ ಕಾರಣದಿಂದ ಇತರ ದೇಶಗಳ ರಾಜಪುರುಷರಲ್ಲಿ ನಿರಂಕುಶ ಪ್ರವರ್ತನೆಯು ತೋರಿಕೊಂಡಂತೆ ಭಾರತೀಯ ರಾಜಪುರುಷರಲ್ಲಿ ತೋರಿಕೊಳ್ಳಲಿಲ್ಲ. ಭಾರತೀಯರ ರಾಜತ್ವವೆಂಬುದು ಧರ್ಮಬದ್ಧವಾದ ರಾಜತ್ವ. ನ್ಯಾಯ ತತ್ವವು ಹೀಗೆ ಎಂದು ನಿರ್ಣಯಿಸುವ ಮೂಲಾಧಿಕಾರವು ರಾಜನಿಗೆ ಸೇರಿರಲಿಲ್ಲ; ನಿರ್ಣೀತವಾಗಿದ್ದ ನ್ಯಾಯವನ್ನು ಅನುಸರಿಸಿ ನಡೆಸುವ ಅಧಿಕಾರವು ಆತನದಾಗಿತ್ತು. ಶಾಸನಮಾಡಬೇಕಾಗಿದ್ದ ರಾಜನು ಶಾಸನಕ್ಕೆ ಅಸ್ತಿಭಾರವಾದ ನ್ಯಾಯ ನಿರ್ದೇಶಾಧಿಕಾರವನ್ನು ಪಡೆದಿರಲಿಲ್ಲ. ಆದ್ದರಿಂದ ತಾನು ಮಾಡಿದ್ದೇ ನ್ಯಾಯವೆಂಬುದು ಭಾರತೀಯ ರಾಜರಲ್ಲಿ ತೋರದಾಯಿತು.

ಏಕರೀತಿ ರಾಜರು

ಚರಿತ್ರೆಯಲ್ಲಿ ಅಸಂಖ್ಯಾಕರಾಗಿ ಕಾಣುವ ಭಾರತೀಯ ರಾಜಪುರುಷರಲ್ಲಿ ಒಬ್ಬರಿಕೊಬ್ಬರಿಗೆ ವಿಶೇಷವಾದ ಭೇದವು ತೋರುವುದಿಲ್ಲ. ಆದರ್ಶವು ಸ್ಥಿರವಾದ ಮೇಲೆ ರಾಜರಾದವರು ತಮ್ಮ ಯೋಗ್ಯತಾನುಸಾರವಾಗಿ ಆದರ್ಶವನ್ನು ಅನುಸರಿಸುತ್ತ ಇದ್ದುದರಿಂದ ಅವರೆಲ್ಲರೂ ಏಕರೀತಿಯನ್ನು ತೋರುವರು. ಇತರ ದೇಶಗಳ ರಾಜವಂಶಗಳ ಇತಿಹಾಸದಲ್ಲಿ ಇಂತಹ ಏಕರೀತಿಯು ಕಾಣುವುದಿಲ್ಲ; ರಾಜಪದವಿಯು ತಲೆಯಿಂದ ತಲೆಗೆ ಪ್ರಾಪ್ತವಾಗುವುದರಲ್ಲಿ ಇತರ ದೇಶಗಳಲ್ಲಿ ಕಾಲಸ್ಥಿತಿಯೇ ಬದಲಾಯಿಸಬಹುದಾಗಿತ್ತು. ಭಾರತೀಯ ವ್ಯವಸ್ಥೆಯಲ್ಲಿ ರಾಜರೆಲ್ಲರೂ ಒಂದೇ ಶಿಕ್ಷಣವನ್ನೂ ಒಂದೇ ಲಕ್ಷ್ಯವನ್ನೂ ಪಡೆದವರಾಗಿದ್ದರು. ರಾಜ್ಯಭಾರ ನಿರ್ವಾಹದ ರೀತಿಯು ಒಂದೇ ಸಮನಾಗಿತ್ತು.

ದಿಗ್ವಿಜಯ ಪದ್ಧತಿ

ಭಾರತೀಯ ಇತಿಹಾಸದ ಗತಿಯಲ್ಲಿ ಪ್ರಧಾನ ಲಕ್ಷ್ಯವಾದ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡೇ ಭಾರತೀಯ ರಾಜ್ಯವ್ಯವಸ್ಥೆಯ ವಿಚಾರವನ್ನು ತೊಡಗಬೇಕು. ಪ್ರಕೃತಿ ನಿರ್ಮಾಣದಲ್ಲಿ ಭರತವರ್ಷವೆಂಬ ವಿಶಾಲವಾದ ಭೂಭಾಗವು ಏಕದೇಶವಾಗಿ ಸಿದ್ಧವಾಯಿತು; ದೇಶದೊಳಗೆ ಸಂಚಾರಕ್ಕೆ ಚಿರಕಾಲ ಅಡ್ಡಿಯಾಗುವ ಪ್ರತಿಬಂಧಕಗಳಿಲ್ಲ. ಸಾವಿರಾರು ಮೈಲಿಗಳ ದೂರ ಮೈದಾನಗಳೇ ಇರುವುದರಿಂದ ಒಂದು ಮೂಲೆಯಲ್ಲಿ ಪ್ರಾರಂಭವಾದುದು ಮತ್ತೊಂದು ಮೂಲೆಗೆ ಚಲಿಸುವ ಅನುಕೂಲವಿರುವುದು. ಈ ಸಂಗತಿಯು ರಾಷ್ಟ್ರೀಯ ಚರಿತ್ರೆಯಲ್ಲಿ ಎಂತಹ ಪರಿಣಾಮವನ್ನುಂಟುಮಾಡಿತೆಂಬುದನ್ನು ಮರೆಯತಕ್ಕುದಲ್ಲ. ಏಕದೇಶವಾದುದರಿಂದ ಏಕರಾಷ್ಟ್ರವಾಗಿ ಪರಿಣಾಮ ಹೊಂದುವುದು ಸಹಜವಾದ ಗತಿ; ಈ ಸಹಜ ಗತಿಯನ್ನೇ ಪೂರ್ವ ರಾಜರ ದಿಗ್ವಿಜಯ ಪ್ರಯತ್ನಗಳಲ್ಲಿ ಕಾಣಬೇಕು. ಭಾರತವರ್ಷದಲ್ಲಿ ಛಪ್ಪನ್ನಾರು ರಾಜ್ಯಗಳು, ರಾಜರೆಲ್ಲರೂ ಪರಸ್ಪರವಾಗಿ ಕಾದಾಡುವ ಜಗಳಗಂಟೆಗಳು ಎಂಬುದು ಮಿಥ್ಯವಲ್ಲವಾದರೂ ಒಂದು ಬಗೆಯ ಭ್ರಾಂತಿಯನ್ನು ಮನಸ್ಸಿನಲ್ಲಿ ಉಂಟುಮಾಡುವುದು. ವಿಶಾಲವಾದ ಭೂಭಾಗದಲ್ಲಿ ಅನೇಕವಾದ ರಾಜ್ಯಗಳು ಹುಟ್ಟಿದುದು ಆಶ್ಚರ್ಯವಲ್ಲ. ರಾಜರು

ಪರಸ್ಪರವಾಗಿ ಹೆಣಗಾಡುತ್ತ ನಿರಂತರವಾಗಿ ಯುದ್ಧ ಪ್ರತಿಯುದ್ಧಗಳಲ್ಲಿ ತೊಡಗಿದ್ದರೆಂಬುದರ ಅರ್ಥವನ್ನು ಮಾತ್ರ ಸಕಾರಣವಾಗಿ ತಿಳಿಯ ತಕ್ಕದ್ದು. ಅಖಂಡವಾದ ವಿಶಾಲ ಕ್ಷೇತ್ರದ ಒಂದು ಭಾಗದಲ್ಲಿ ರಾಜ ಪದವಿಯನ್ನು ಪಡೆದವನು ಇತರ ರಾಜರಿಂದ ತನಗೆ ತೊಂದರೆ ಸಂಭವಿಸ ದಂತೆ ಎಚ್ಚರವುಳ್ಳವನಾಗಿ, ತಾನು ಇತರರಿಂದ ಆಕ್ರಾಂತನಾಗುವ ಮೊದಲು ತಾನೇ ಇತರರನ್ನು ಆಕ್ರಮಿಸಿ ತನ್ನ ಬಲ್ಮೆಯನ್ನು ತೋರಿಸುವುದು ಅವಶ್ಯ ವಾಗಿತ್ತು. ಪಟ್ಟವೇರಿದೊಡನೆಯೇ ದಿಗ್ವಿಜಯ ಹೊರಡಬೇಕಾಗಿದ್ದುದು ಜಗಳಗಂಟಿತನದಿಂದಲ್ಲ; ತನ್ನ ಪದವಿಯ ಭದ್ರತೆಗಾಗಿ. ಯೂರೋಪಿನಲ್ಲಿ ತುಂಡು ತುಂಡಾಗಿ ಪ್ರಕೃತಿ ನಿರ್ಮಾಣವಿರುವ ಕಾರಣದಿಂದ ಅಲ್ಲಿಯ ರಾಜರು ಭದ್ರತೆಯನ್ನು ಪಡೆದ ತರುವಾಯ ರಾಜ್ಯ ವಿಸ್ತರಣಕ್ಕೆ ಯತ್ನಿಸು ತ್ತಿದ್ದುದು ಸಹಜಗತಿ; ಭರತವರ್ಷದಲ್ಲಿ ರಾಜರು ಭದ್ರತೆಯನ್ನು ಪಡೆಯುವ ಉದ್ದೇಶಕ್ಕಾಗಿಯೇ ವಿಸ್ತರಣಕ್ಕೆ ತೊಡಗುತ್ತಿದ್ದುದು ಸಹಜ ಗತಿ. ಇದರಿಂದ ಭಾರತೀಯ ಇತಿಹಾಸದಲ್ಲಿ ರಾಜ್ಯವು ವಿಸ್ತಾರಗೊಂಡುತ್ತ ಕಾಲಕ್ರಮದಲ್ಲಿ ಸಾಮ್ರಾಜ್ಯವಾಗಿ ಪರಿಣಮಿಸಬೇಕಾಗಿತ್ತು. ದೇಶಕ್ಕೆ ಸಮುದ್ರವೇ ಮೇರೆಯಾದುದರಿಂದ ರಾಷ್ಟ್ರಕ್ಕೂ ಸಮುದ್ರವೇ ಎಲ್ಲೆ. ಆಸಮುದ್ರಕ್ಷಿತೀಶರಾಗುವುದೇ ರಾಜರ ಲಕ್ಷ್ಯ; ಅಥವಾ ಅಖಿಲ ಭಾರತ ವರ್ಷಕ್ಕೆ **ಏಕರಾಷ್ಟ್ರ ಸಿದ್ಧಿಯೇ** ಪರಮ ಲಕ್ಷ್ಯ.

ಹೀಗಾಗಿ ನಮಗೆ ಪ್ರಾರಂಭದಲ್ಲಿಯೇ ಮೌರ್ಯ ಸಾಮ್ರಾಜ್ಯದ ರೂಪವು ಇತಿಹಾಸದಲ್ಲಿ ಕಾಣಿಸಿಕೊಳ್ಳುವುದು.

**ಯುದ್ಧ ನೀತಿ**

ಎಲ್ಲ ಕಾಲಗಳಲ್ಲಿಯೂ ಏಕರಾಷ್ಟ್ರ ಸಾಧನೆಯೇ ರಾಜಕೀಯ ಸ್ಥಿತಿಗತಿಗಳಿಗೆ ಗುರಿಯಾಗಿದ್ದುದು. ಮೌರ್ಯ, ಶಾತವಾಹನ, ವಿಂಧ್ಯಕ-ಗುಪ್ತ, ವರ್ಧನ, ರಾಷ್ಟ್ರಕೂಟ, ಚೋಳವಂಶಜರ ಚರಿತ್ರೆಯಲ್ಲಿ ಸ್ಪಷ್ಟವಾಗುತ್ತದೆ. ಸಾಮ್ರಾಜ್ಯ ಪದವಿಯ ಪ್ರಾಪ್ತಿಗಾಗಿ ನಿರಂತರವಾಗಿ ಯುದ್ಧ ಪ್ರತಿಯುದ್ಧಗಳು ನಡೆಯುತ್ತಿದ್ದುದು ಅನಿವಾರ್ಯವಾಗಿತ್ತು; ಅನಿವಾರ್ಯವಾಗಿದ್ದರೂ ಯುದ್ಧಗಳ ರೀತಿಯಲ್ಲಿ ಭಾರತೀಯವೆನ್ನಬಹುದಾದ ನೀತಿಯೊಂದು ನೆಲೆಸಿತ್ತು. ನೆರೆ ರಾಜನನ್ನು ಸೋಲಿಸಿದ ರಾಜನು ಶರಣಾಗತನಾದ ರಾಜನ ಸರ್ವಸ್ವವನ್ನೂ ಕಿತ್ತು

ಕೊಂಡು ಆ ರಾಜ್ಯವನ್ನು ತನ್ನ ರಾಜ್ಯಕ್ಕೆ ಸೇರಿಸಿಬಿಡುತ್ತಿರಲಿಲ್ಲ; ಸೋತ ರಾಜನಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ ತನ್ನ ಶ್ರೇಷ್ಠತೆಯನ್ನು ನೆಲೆಗೊಳಿಸಿ ತೃಪ್ತನಾಗುತ್ತಿದ್ದನು. ಸಾಮ್ರಾಜ್ಯಕ್ಕಾಗಿ ನಡೆಯುತ್ತಿದ್ದ ಹೋರಾಟಗಳಲ್ಲಿ ರಾಜರೂ ರಾಜರೂ ತೊಡಗುತ್ತಿದ್ದರು; ಸಾಮಾನ್ಯ ಜನರಿಗೆ ತೊಂದರೆ ತೋರುತ್ತಿರಲಿಲ್ಲ. ಮೆಗಾಸ್ಥೆನೀಸನು 'ತನ್ನ ಪಕ್ಕದ ಕ್ಷೇತ್ರದಲ್ಲಿ ಭಯಂಕರವಾದ ಯುದ್ಧವು ನಡೆಯುತ್ತಿದ್ದರೂ ಕೃಷೀವಲನು ನಿಶ್ಚಿಂತೆಯಾಗಿ ತನ್ನ ನೆಲವನ್ನು ತಾನು ಉಳುತ್ತಿರುತ್ತಾನೆ' ಎಂದು ಆಶ್ಚರ್ಯಪಟ್ಟನು; ಅದೇ ಅಂಶವನ್ನೇ ಇತರ ವಿದೇಶೀಯರೂ ಕಂಡು ಅಚ್ಚರಿಹೊಂದಿದರು. ಕ್ಷತ್ರಿಯರಿಗೆ ಅಥವಾ ರಾಜಪುತ್ರರಿಗೆ ಪರಸ್ಪರ ಯುದ್ಧವೇ ವಿನಾ ಸಾಮಾನ್ಯ ಜನರಿಗಲ್ಲ. ಯೋಧರು ಯೋಧರೊಂದಿಗೆ ಕದನ ಮಾಡಬೇಕಾಗಿದ್ದಿತೇ ವಿನಾ ವಿದ್ವಾಂಸರನ್ನಾಗಲಿ, ವರ್ತಕರನ್ನಾಗಲಿ, ಕೃಷೀವಲರನ್ನಾಗಲಿ ತೊಂದರೆಪಡಿಸಬಾರದಾಗಿತ್ತು. 'ಯೋಧರಲ್ಲದ ಇತರರು ಅವಧ್ಯರು, ಅವರಿಗೆ ತೊಂದರೆಯುಂಟುಮಾಡಿದಲ್ಲಿ ಮಾನವೇ ಹೋದೀತು' ಎಂಬುದು ರಾಜಪುತ್ರನ ಮನಸ್ಸಿನಲ್ಲಿರಬೇಕಾಗಿತ್ತು. ರಾಜರೂ ರಾಜಭಟರೂ ಈ ರೀತಿಯಲ್ಲಿ ನಡೆಸಿದ ಯುದ್ಧಗಳು ಪರೀಕ್ಷೆಗಳಂತೆಯೇ ಇದ್ದವೆಂದು ಹೇಳಬಹುದು. ವಾಸ್ತವವಾಗಿ ಭಾರತೀಯ ಚರಿತ್ರೆಯಲ್ಲಿ ಪರೀಕ್ಷೆಗಳಂತಹ ಕದನಗಳು ಹೇರಳವಾಗಿವೆ; ಅನೇಕಾನೇಕ ಸಲ ಕದನಗಳನ್ನಾಡಿ ಐರೋಪ್ಯರು ಪರಸ್ಪರವಾಗಿ ಬೆಳೆಸಿಕೊಂಡಂತಹ ಯುದ್ಧಪರಂಪರೆಗಳಿಲ್ಲ.*

**ಏಕರಾಷ್ಟ್ರ ಸಾಧನೆ**

ಏಕರಾಷ್ಟ್ರ ಸಾಧನೆಯೇ ಪ್ರಧಾನಗತಿಯಾದುದನ್ನು ಎಲ್ಲ ಕಾಲಗಳಲ್ಲಿಯೂ ಕಾಣಬಹುದು. ವಾಯುವ್ಯದ ಮೂಲೆಯಲ್ಲಿ ರಾಜ್ಯವನ್ನು ಮೊದಲಿಟ್ಟ ತುರುಷ್ಕರು ಕ್ರಮವಾಗಿ ಎಲ್ಲ ದೇಶವನ್ನೂ ಆಕ್ರಮಿಸಲು ಯತ್ನಿಸಿದುದು ಅದಕ್ಕೆ ನಿದರ್ಶನ. ಬಂಗಾಳದಿಂದ ಪ್ರಾರಂಭಮಾಡಿದ ಬ್ರಿಟಿಷರು

* ಇಂಗ್ಲಿಷ್ ಭಾಷೆಯಲ್ಲಿ War, Battle ಎಂಬ ಶಬ್ದಗಳುಂಟು. ಅವುಗಳಲ್ಲಿ War ಎಂಬ ಶಬ್ದಕ್ಕೆ ಸರಿಯಾದ ಮಾತೇ ನಮ್ಮಲ್ಲಿರುವುದಿಲ್ಲ. ಇದಕ್ಕೂ, "There are battles but no Wars in Indian History" ಎಂಬುದಕ್ಕೂ ಕಾರಣವು ಸ್ಪಷ್ಟ.

'ಮನಸ್ಸಿಲ್ಲದೆ ಸಮಸ್ತ ದೇಶವನ್ನೂ ಸಾಧಿಸಿದರು', ಅಥವಾ 'ನಿರ್ವಾಹ ಎಲ್ಲದೆ ಅಖಿಲ ಭಾರತವರ್ಷವನ್ನೂ ವಶಪಡಿಸಿಕೊಂಡರು' ಎಂಬುದರಲ್ಲಿಯೂ ಅದೇ ಅಂಶವು ವ್ಯಕ್ತವಾಗುವುದು. ಸಮುದ್ರದ ಆಚೆಯಿಂದ ಬಂದ ಬ್ರಿಟಿಷರಿಗೆ ಹಿಂದೆ ಸಾಧಿತವಾಗದಿದ್ದುದು ಸಾಧ್ಯವಾಯಿತು. ಅಖಿಲ ಭಾರತ ವರ್ಷವು ಏಕರಾಷ್ಟ್ರಸಿದ್ಧಿಯನ್ನು ಪಡೆಯಿತು. ಬ್ರಿಟಿಷರ ಆಡಳಿತದಲ್ಲಿ ಅದೊಂದು ಮುಖ್ಯವಾದ ಪರಿಣಾಮ. ಏಕರಾಷ್ಟ್ರಸಿದ್ಧಿಯನ್ನು ಪಡೆಯಲು ಭಾರತೀಯರಲ್ಲಿ ಇಷ್ಟು ವಿಳಂಬವಾಯಿತೇಕೆ ಎಂದು ವಿಚಾರಮಾಡುವಾಗ ದೇಶದ ವೈಶಾಲ್ಯವನ್ನೂ, ಜನತೆಯ ಭಿನ್ನ ಭಿನ್ನ ಆಚಾರ ಸಂಪ್ರದಾಯ ಗಳನ್ನೂ, ಪದೇ ಪದೇ ಘಟಿಸುತ್ತಿದ್ದ ಪರದೇಶೀಯರ ಹಾವಳಿಗಳನ್ನೂ ಮನಸ್ಸಿನಲ್ಲಿಡಬೇಕು. ದೇಶವು ಪುಟ್ಟದಾಗಿ, ಜನತೆಯು ಏಕರೀತಿಯಾಗಿ, ನೆರೆಯವರನ್ನೂ ಆಕರ್ಷಿಸದೆ ಇದ್ದ ರಾಷ್ಟ್ರಗಳು ಐಕ್ಯತಾಸಿದ್ಧಿಯನ್ನು ಪಡೆಯಲು ನೂರಾರು ವರ್ಷಗಳಕಾಲ ಕಳೆಯಬೇಕಾಗಿದ್ದಲ್ಲಿ ಭರತವರ್ಷವು ರಾಜಕೀಯ ಐಕ್ಯತೆಯನ್ನು ಹೊಂದಲು ಬೇಕಾಗಿಬಂದ ಕಾಲಪ್ರಮಾಣವು ಅಷ್ಟು ದೀರ್ಘವೆನಿಸುವುದಿಲ್ಲ.

## ಕಾಲ ವಿಪರ್ಯಾಸ

**ಬ್ರಿಟಿಷರ ಸಾಧನೆ**

ಆರು ಸಾವಿರ ಮೈಲಿಗಳ ದೂರದಿಂದ ವ್ಯಾಪಾರಕ್ಕಾಗಿ ಬಂದ ಹಲಕೆಲವರು ಇಂಗ್ಲಿಷ್ ಜನರು ತಮ್ಮ ಸ್ವಂತ ದೇಶದ ಹದಿನೇಳರಷ್ಟು ವಿಶಾಲವಾದ ಭೂಭಾಗ ವನ್ನು ಸಂಪಾದಿಸಿಕೊಂಡು, ತಮ್ಮ ಆಡಳಿತವನ್ನು ನೆಲೆಗೊಳಿಸಿದ ಸಂಗತಿಯು ಚರಿತ್ರೆಯ ಅದ್ಭುತ ಸಂಗತಿಗಳಲ್ಲಿ ಅದ್ಭುತ ವಾದುದು. ತಮ್ಮ ಆಡಳಿತಕ್ಕೆ ಅಪಾಯ ತೋರದಂತೆ ಅವರು ಯುರೋಪ್ಯ ವಿರೋಧಿಗಳಿಗಾಗಲಿ ದೇಶೀಯರಿಗಾಗಲಿ ಆಸ್ಪದವಿಲ್ಲದಿರಲು ನಡೆಸಿದ ಸಂಧಾನ ಸನ್ನಾಹಗಳೂ ಅದ್ಭುತವೆನಿಸಿವೆ. ಅವರ ಆಡಳಿತದಲ್ಲಿ ಸಮಸ್ತ ಭಾರತವರ್ಷವೂ ಸೇರಿದ ತರುವಾಯ ಭರತವರ್ಷದ ಮೇರೆಯು ದೂರ ದೂರವಾಗಿ ಸರಿಯಿತು. ಅಟ್ಲಾಂಟಿಕ್ ಸಾಗರದಿಂದ ಪೆಸಿಫಿಕ್ ಸಾಗರದ ವರೆಗಿರುವ ಭೂಪ್ರದೇಶಗಳೆಲ್ಲವೂ ಅವರ ವಿಚಾರ ದೃಷ್ಟಿಗೆ ಬಿದ್ದು ಭರತ

ವರ್ಷದ ಮೇರೆಗಳ ರಕ್ಷಣೆಗೆ ಪಾರ್ಸೀಸ್ಥಾನ, ಅಫ್ಘಾನಸ್ಥಾನ, ಬಲೂಚಿಸ್ಥಾನ, ತಿಬ್ಬತ್, ಸಯಾಂ ಮುಂತಾದ ರಾಷ್ಟ್ರಗಳೊಡನೆ ಸಂಧಾನಗಳು ನಡೆದವು. ಜಿಬ್ರಾಲ್ಟರ್ ಜಲಸಂಧಿಯಿಂದ ಹಾಂಕಾಂಗಿನವರೆಗೆ ಸಮುದ್ರಗಳೆಲ್ಲವೂ ಸ್ವಾಧೀನವಾದವು. **ಏಕರಾಷ್ಟ್ರ ಸ್ವರೂಪವು** ಸಿದ್ಧವಾದುದಲ್ಲದೆ ಬ್ರಿಟಿಷರ ಆಡಳಿತದ ಪ್ರಭಾವದಿಂದ ಭರತವರ್ಷದಲ್ಲಿ ಶಾಂತಿ ಸ್ಥಿತಿಯು ಭದ್ರಗೊಂಡಿತು. ಆ ಆಡಳಿತದ ಪರಿಣಾಮಗಳಲ್ಲಿ ಹಲವು ಮುಖ್ಯವಾದವು; ಅವುಗಳನ್ನು ಚರಿತ್ರೆಯಲ್ಲಿಯೇ ವಿಸ್ತಾರವಾಗಿ ಕಾಣತಕ್ಕದ್ದಾದರೂ ಇಲ್ಲಿ ಮೂರಂಶಗಳನ್ನು ಸ್ಮರಿಸಬೇಕು.

**ಆರ್ಥಿಕ ಪರಿಣಾಮ**

ಬ್ರಿಟಿಷರ ಸಂಪರ್ಕ ಪ್ರಭಾವದಿಂದ ಭರತವರ್ಷದಲ್ಲಿ ಆರ್ಥಿಕ ರೀತಿಯಲ್ಲಿ ಮುಖ್ಯವಾದ ಬದಲಾವಣೆಗಳೊದಗಿದವು. 1800ರಿಂದ ಮೊದಲ್ಗೊಂಡು ದೇಶದ ಹೊರಗಿನ ವ್ಯಾಪಾರದಲ್ಲಿ ಸಿದ್ಧ ಸರಕನ್ನು ರಫ್ತುಮಾಡುವ ಲಕ್ಷಣವು ವರ್ಷೇ ವರ್ಷೇ ಮಾಯವಾಗುತ್ತ ಬಂತು. ಭಾರತೀಯರು ತಮ್ಮ ಕೈಗಾರಿಕೆಯಿಂದ ಸಿದ್ಧಗೊಳಿಸುತ್ತಿದ್ದ ಸರಕಿನ ವ್ಯಾಪಾರವೇ ನಿಂತುಹೋಯಿತು; ಇಂಗ್ಲಂಡಿನ ಕೈಗಾರಿಕೆಗಳನ್ನು ತರಿಸಿಕೊಳ್ಳುವುದು ಮೊದಲಾಗಿ ವರ್ಷೇ ವರ್ಷೇ ಹೆಚ್ಚಿತು. ಆ ಕೈಗಾರಿಕೆಗಳಿಗೆ ಸಾಧಕವಾದ ಸಾಮಗ್ರಿಯನ್ನು ಬೆಳೆಸಿ ಕಳುಹಿಸುವುದೂ ಒಡನೆಯೇ ಪ್ರಾರಂಭವಾಯಿತು. ಇದರ ಪರಿಣಾಮವು ಅನೇಕ ಮುಖವಾಗಿ ತೋರಿಕೊಂಡಿತು. ಕೈಗಾರಿಕೆಗಳಲ್ಲಿಯೂ ಕುಶಲಕಲೆಗಳಲ್ಲಿಯೂ ನಿರತರಾಗಿದ್ದ ಭಾರತೀಯರಿಗೆ ಉದ್ಯೋಗವೇ ನಷ್ಟವಾಗಿ ಗತ್ಯಂತರವಿಲ್ಲದೆ ವ್ಯವಸಾಯವನ್ನೇ ಅವಲಂಬಿಸಬೇಕಾಯಿತು. ನೂತನ ವಾಹಕ ಸೌಕರ್ಯಗಳು ದೇಶದಲ್ಲಿ ತೋರಿದ ಹಾಗೆಲ್ಲ ಪೂರ್ವದಿಂದಲೂ ವಾಹಕೋದ್ಯೋಗವನ್ನವಲಂಬಿಸಿದ್ದ ಜನರಿಗೂ ಅದೇ ಗತಿಯಾಯಿತು. ಆರ್ಥಿಕರಂಗದಲ್ಲಿ ಇನ್ನೂ ಅನೇಕ ಸಂಗತಿಗಳು ನಡೆದು ದೇಶದಲ್ಲಿ ದಾರಿದ್ರ್ಯವು ವರ್ಷೇ ವರ್ಷೇ ಹೆಚ್ಚುವಂತಾಯಿತು. ಬ್ರಿಟಿಷರ ಆಡಳಿತದಲ್ಲಿ ದಾರಿದ್ರ್ಯವು ರೂಪಗೊಂಡ ಸಂಗತಿಯನ್ನೂ ಅದರ ಪರಿಣಾಮವನ್ನೂ ಭಾರತೀಯನು ಅತ್ಯವಶ್ಯವಾಗಿ ತಿಳಿದಿರತಕ್ಕದ್ದು.

ಭಾರತೀಯ ಸಂಸ್ಕೃತಿಯು ಸಮೃದ್ಧಿಪೂರಿತವಾದ ದೇಶದಲ್ಲಿ ಪೂರ್ವ ಕಾಲದಿಂದಲೂ ವೃದ್ಧಿವಿಕಾಸಗಳನ್ನು ಹೊಂದಿತ್ತು.

**ಸಾಂಸ್ಕೃತಿಕ ಘರ್ಷಣೆ** ಬ್ರಿಟಿಷರ ಆಡಳಿತದ ಪ್ರಾರಂಭದಿಂದ ಪಾಶ್ಚಾತ್ಯ ಸಂಸ್ಕೃತಿಯು ಭಾರತವರ್ಷದಲ್ಲಿ ತೋರಿಕೊಂಡಿತು. ಎರಡು ಸಂಸ್ಕೃತಿಗಳಲ್ಲಿ ಉತ್ತಮವಾದುದು ಯಾವುದು ಎಂಬ ಪ್ರಶ್ನೆಯು ವಿಚಾರ ಶಕ್ತಿಗೆ ಪೋಷಕವಾದುದು ಮಾತ್ರ; ನಿಷ್ಕೃಷ್ಟವಾಗಿ ಉತ್ತರ ಹೇಳಲು ಯತ್ನಿಸುವುದು ವ್ಯರ್ಥ. ಒಬ್ಬರಿಗೊಗ್ಗುವ ಸಂಸ್ಕೃತಿಯು ಮತ್ತೊಬ್ಬರಿಗೆ ಒಗ್ಗಲಾರದು ಎಂಬ ತತ್ವವು ಮಾತ್ರ ಪ್ರಧಾನವಾದುದು. ಪಾಶ್ಚಾತ್ಯ ಸಂಸ್ಕೃತಿಯು ಭಾರತವರ್ಷದಲ್ಲಿ ತೋರಿಕೊಂಡ ಕಾಲದಿಂದ ಪೌರಸ್ತ್ಯ ಪಾಶ್ಚಾತ್ಯ ಸಂಸ್ಕೃತಿಗಳ ಪರಸ್ಪರ ಘರ್ಷಣೆಯು ಆರಂಭ ವಾಯಿತು. ಪೌರಸ್ತ್ಯರಾದ ಭಾರತೀಯರಲ್ಲಿ ಕೆಲವರು ಪಾಶ್ಚಾತ್ಯ ಸಂಸ್ಕೃತಿಯೇ ಮೇಲೆಂದು ಅದನ್ನು ಅನುಕರಿಸಿದರು; ಬಹು ಭಾಗದವರು ಸಂಶಯಗ್ರಸ್ತರಾದರು. ಇದರ ಪರಿಣಾಮವಾಗಿ ಭರತವರ್ಷದಲ್ಲಿ ಪ್ರಾಚೀನಕಾಲದಿಂದಲೂ ನಡೆದುಬಂದು ಸಚೇತನವಾಗಿಯೇ ಇರುವ ವಿಶಿಷ್ಟ ಸಂಸ್ಕೃತಿಯು ಪಾಶ್ಚಾತ್ಯ ಸಂಸ್ಕೃತಿಯೆದುರಿನಲ್ಲಿ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಳ್ಳಲು ಯತ್ನಿಸುತ್ತಲಿದೆ.

ಮತ್ತೊಂದಂಶವು ಇದರ ಭಾಗ ಮಾತ್ರವಾದರೂ ಪ್ರತ್ಯೇಕವಾಗಿಯೇ ಆಲೋಚ್ಯವಾದುದು. ಬ್ರಿಟಿಷರ ಆಡಳಿತದಲ್ಲಿ

**ರಾಷ್ಟ್ರನೀತಿಯ ಭೇದ** ಪಾಶ್ಚಾತ್ಯ ಶಿಕ್ಷಣವನ್ನು ಪಡೆದ ಪ್ರಯುಕ್ತ ಅನೇಕ ಭಾರತೀಯರು ಇಂಗ್ಲಂಡಿನಲ್ಲಿರುವ ರಾಷ್ಟ್ರಪದ್ಧತಿಗಳೇ ಭರತಖಂಡದಲ್ಲಿಯೂ ಸ್ಥಾಪಿತವಾಗಬೇಕೆಂದು ಆಶಿಸಿದರು. ಇಂಗ್ಲಂಡಿನಲ್ಲಿರುವುದು ಪಾರ್ಲಿಮೆಂಟರಿ ಅಥವಾ ಪ್ರಾತಿನಿಧ್ಯ ತತ್ವಗಳನ್ನೊಳಗೊಂಡ ರಾಷ್ಟ್ರನೀತಿ. ಅಂತಹ ರಾಷ್ಟ್ರನೀತಿ ವಿಧಾನಗಳೇ ಭಾರತೀಯರಿಗೂ ಆದರ್ಶವೆನಿಸಿ, ನಡೆದ ಪ್ರಯತ್ನದ ಫಲವಾಗಿ ಆಡಳಿತದಲ್ಲಿ ಆಗಿಂದಾಗ್ಗೆ ರೂಪಭೇದಗಳು ತೋರಿಕೊಂಡವು. ಭಾರತೀಯರ ದೇಶಭಕ್ತಿಯು ಇದೇ ಕಾಲದಲ್ಲಿಯೇ ರಾಷ್ಟ್ರಭಕ್ತಿಯ ರೂಪವನ್ನು ತಾಳಿತು. ರಾಷ್ಟ್ರಭಕ್ತಿಯುತರಾದ ಭಾರತೀಯರು ಇತ್ತೀಚೆಗೆ ನಡೆಸಿದ

ಪ್ರಯತ್ನಗಳ ವೃತ್ತಾಂತವನ್ನು ಬೇರೆಡೆಯಲ್ಲಿ ಕಾಣಬೇಕು. ಆಡಳಿತದ ಬಗೆಯು ಬದಲಾಗಿ ಪ್ರಾತಿನಿಧ್ಯ ತತ್ವವನ್ನು ಹೆಚ್ಚು ಹೆಚ್ಚಾಗಿ ಅವಲಂಬಿ ಸುತ್ತಲಿರುವ ಸಂಗತಿಯು ಪೌರನೀತಿಯ ವ್ಯಾಸಂಗದಲ್ಲಿ ಮುಖ್ಯ ವಾದುದು. ನಾಳೆ ಭಾರತೀಯ ಪೌರರ ಸಮೂಹದಲ್ಲಿ ಸೇರತಕ್ಕವನು ಪ್ರಾತಿನಿಧ್ಯ ತತ್ವದ ಆಚರಣೆಯನ್ನೂ ಸಮಾಜ, ರಾಷ್ಟ್ರ, ಸರ್ಕಾರ ಮುಂತಾದ ರಾಷ್ಟ್ರನೀತಿಯ ಅಂಶಗಳನ್ನೂ ತಿಳಿದುಕೊಳ್ಳತಕ್ಕುದು ಆ ಕಾರಣದಿಂದ ಅತ್ಯವಶ್ಯವಾದುದು.

## II. ರಾಷ್ಟ್ರ ಪರಿಸ್ಥಿತಿ

# 1. ರಾಷ್ಟ್ರಸಿದ್ಧಿ ಕರ್ತವ್ಯ ಸ್ವರೂಪಗಳು

**ರಾಷ್ಟ್ರಸಿದ್ಧಿ, ರಾಷ್ಟ್ರಕರ್ತವ್ಯ, ರಾಷ್ಟ್ರಾಂಗಗಳು. ರಾಷ್ಟ್ರಭಾರದ ಅಂಶಗಳು : ರಕ್ಷಣೆ, ಸೈನ್ಯಪೋಷಣೆ, ಸಂಧಿವಿಗ್ರಹ, ದುಷ್ಟಶಿಕ್ಷಣ, ನ್ಯಾಯಸ್ಥಾಪನೆ, ರಾಷ್ಟ್ರಾದಾಯವ್ಯಯ, ಸರ್ವವ್ಯಾಪ್ತ ಕರ್ತವ್ಯ, ರಾಷ್ಟ್ರಗೌರವ ಪಾಲನೆ. ರಾಷ್ಟ್ರಭೇದಗಳು : ಸಂಯುಕ್ತರಾಜ್ಯ, ಫ್ರಾನ್ಸ್, ಅಮೆರಿಕ.**

**ರಾಷ್ಟ್ರನೀತಿ ವಿಚಾರ**

ಬ್ರಿಟಿಷರ ಸಂಪರ್ಕ ಪ್ರಭಾವದಿಂದ ಭಾರತೀಯರಲ್ಲಿ ತೋರಿಕೊಂಡ ಪ್ರಾತಿನಿಧ್ಯಯುಕ್ತವಾದ ರಾಷ್ಟ್ರರಚನೆಯ ವಿಚಾರವು ಪಾಶ್ಚಾತ್ಯ ದೇಶಗಳಲ್ಲಿ ಶತಮಾನದ ಹಿಂದೆಯೇ ಹುಟ್ಟಿ ಪುನಃಪುನಃ ವ್ಯವಸ್ಥೆಯಾಯಿತು. ಎಲ್ಲ ದೇಶಗಳಲ್ಲಿಯೂ ಈಗಿನ ಕಾಲದಲ್ಲಿ ಬಹು ಮಟ್ಟಿಗೆ ರಾಷ್ಟ್ರಭಕ್ತಿಯು ಉಜ್ವಲವಾಗಿರುವುದಲ್ಲದೆ ರಾಷ್ಟ್ರಬಂಧದ ವಿಚಾರದಲ್ಲಿ ಆಸಕ್ತಿಯು ಹೆಚ್ಚುತ್ತಲಿದೆ. ಪೌರಧರ್ಮವನ್ನು ತಿಳಿಯುವ ಪ್ರಯತ್ನದಲ್ಲಿ ರಾಷ್ಟ್ರನೀತಿಯನ್ನು ತಿಳಿಯಲೇಬೇಕಾಗುವುದರಿಂದ ದೇಶ, ಸಮಾಜ, ರಾಷ್ಟ್ರ, ರಾಷ್ಟ್ರಾಂಗ, ರಾಷ್ಟ್ರಾಂಗ ಸಂಯೋಜನೆ, ರಾಷ್ಟ್ರಭಾರ, ಸರ್ಕಾರ ಮುಂತಾದ ಶಬ್ದಗಳ ಅರ್ಥನಿಷ್ಕರ್ಷೆಯನ್ನು ಮೊದಲೇ ಮಾಡಿಕೊಳ್ಳುವುದು ಅವಶ್ಯ.

## ರಾಷ್ಟ್ರಸಿದ್ಧಿ

ದೇಶವೆಂಬುದು ಸುಲಭವಾಗಿ ಅರ್ಥವಾಗುವುದು. ಪ್ರಕೃತಿ ನಿರ್ಮಿತವಾದ ರೀತಿಯಲ್ಲಿ ಭೂಮಿಯು ಚಿತ್ರವಿಚಿತ್ರವಾದ ಆಕಾರದಲ್ಲಿ ಎತ್ತರ ತಗ್ಗುಗಳಿಂದೊಡಗೂಡಿ ಮಧ್ಯೆ ಮಧ್ಯೆ ಸುಲಭ ಸಂಚಾರಕ್ಕೆ ಅಡ್ಡಿಯಾಗುವ ಮೇರೆಗಳ ದೆಸೆಯಿಂದ ಭಿನ್ನಭಿನ್ನವಾಗಿದೆ. ಇವುಗಳಲ್ಲಿ ಮಾನವ ವರ್ಗದವರು ಪರಸ್ಪರ ಸಹಾಯವಿಲ್ಲದೆ ನೆಮ್ಮದಿಯಿಂದ ಜೀವಿಸಲಾರರು. ಎಲ್ಲಿಯೋ ಕೆಲವರು ಸಂನ್ಯಾಸಿಗಳನ್ನು ಬಿಟ್ಟು ಉಳಿದವರೆಲ್ಲರೂ ಒಬ್ಬರನ್ನೊಬ್ಬರಾಶ್ರಯಿಸಿಕೊಂಡು ಒಬ್ಬರಿಂದೊಬ್ಬರು ಸಹಾಯ ಹೊಂದುತ್ತಲೇ ಬದುಕಬೇಕು. ಭೂಮಿಯಲ್ಲಿ ಜೀವನವನ್ನು ತೊಡಗಿದಾಗ

ಪರಸ್ಪರ ಬಂಧುಗಳಾಗಿದ್ದವರು ಒಟ್ಟಿಗೇ ಇದ್ದು ಮನೆಗಳನ್ನು ಅಕ್ಕ ಪಕ್ಕದಲ್ಲಿಯೇ ಕಟ್ಟಿಕೊಳ್ಳುತ್ತ, ಕ್ರಮವಾಗಿ ಹೆಚ್ಚು ಹೆಚ್ಚು ನೆಲವನ್ನು ರೂಢಿಸಿಕೊಂಡು ಅಭಿವೃದ್ಧಿಪಡೆಯಬೇಕಾಗಿತ್ತು. ಹೀಗೆ ಜನರ ನೆಲಸುಗಳು ವಿಸ್ತಾರಗೊಳ್ಳುತ್ತ ಎತ್ತರವಾದ ಪರ್ವತವೋ ಆಳವಾದ ನದಿಯೋ ಸಮುದ್ರಭಾಗವೋ ಅಡ್ಡಿಯಾದಾಗ ಅಲ್ಲಿಗೆ ತಮ್ಮ ಆಕ್ರಮಣವನ್ನು ನಿಲ್ಲಿಸಬೇಕಾಗುತ್ತಿತ್ತು. ಜನರು ಗುಂಪು ಕೂಡಿ ಸಾಮಾನ್ಯವಾದ ಹಿತವನ್ನು ಸಾಧಿಸುವುದಕ್ಕಾಗಿ ಒಟ್ಟಾಗಿ ಯತ್ನಶೀಲರಾದ ಕೂಡಲೆ ಅವರಿಗೆ ಸಮಾಜವೆಂಬ ಹೆಸರು ಸಲ್ಲುವುದು. ಪ್ರಕೃತಿ ನಿರ್ಮಾಣದಲ್ಲಿಯೇ ಭಿನ್ನವಾಗಿ ಏರ್ಪಟ್ಟ ದೇಶದಲ್ಲಿ ನೆಲೆಸಿ, ಪರಸ್ಪರ ಸಹಾಯದಿಂದ ಜೀವನ ಮಾಡುತ್ತಲಿರುವ ಜನರ ಗುಂಪು ಸಮಾಜವೆನಿಸಿದಮೇಲೆ ಎಲ್ಲರ ಹಿತವನ್ನೂ ಸಾಧಿಸುವ ಪ್ರಯತ್ನದಲ್ಲಿ ರಾಷ್ಟ್ರವೆಂಬುದು ಹುಟ್ಟುತ್ತದೆ. ಅನುಕೂಲವನ್ನೇ ಉಂಟುಮಾಡುತ್ತಿದ್ದ ನದಿಯು ಪ್ರವಾಹದಿಂದೊಡ ಗೂಡಿ ಮೇರೆವರಿದು ನಾಶಕಾರಕವಾದಾಗಲೋ, ದುಷ್ಟ ಮೃಗಗಳೂ ಶತ್ರುಗಳೂ ಕಾಣಿಸಿಕೊಂಡು ಎಲ್ಲರಿಗೂ ವಿಪತ್ತನ್ನೊಡ್ಡಿದಾಗಲೋ ಎಲ್ಲರಿಗೂ ಒದಗುವ ಅಪಾಯ ನಿವಾರಣೆಗಾಗಿ ಎಲ್ಲರೂ ಒಟ್ಟಿಗೇ ಸೇರಿ ಪ್ರಯತ್ನಮಾಡಬೇಕಾಯಿತು. ಹೀಗೆ ಸರ್ವರಿಗೂ ಬೇಕಾದ ಪ್ರಯತ್ನವನ್ನು ಸರ್ವರೂ ಸೇರಿ ಹಿಡಿದಾಗ ರಾಷ್ಟ್ರವೆಂಬುದು ತೋರಿಕೊಂಡಿತು. ಕಾಲ ಕ್ರಮದಲ್ಲಿ ಸರ್ವರಿಗೂ ಅವಶ್ಯವಾದ ಹಿತಕಾರ್ಯಗಳನ್ನು ಸಾಧಿಸಲು ವ್ಯವಸ್ಥೆಯನ್ನು ಪಡೆದು ಸಮಾಜವು ರಾಷ್ಟ್ರವಾಗಿ ಪರಿಣಮಿಸಿತು. ಪ್ರಕೃತಿಸಿದ್ಧವಾದುದು **ದೇಶ** (Country); ಅಲ್ಲಿ ನೆಲೆಸಲಾರಂಭಿಸಿದ ಮಾನವರು ಮೇರೆಗಳನ್ನು ಕಂಡು ಅವುಗಳೊಳಗೇ ಇರಬೇಕೆಂಬುದನ್ನು ತಿಳಿದಾಗ ಅವರು ಆ ದೇಶದ **ಜನ** (People); ಪರಸ್ಪರವಾಗಿ ಸಹಾಯ ಮಾಡಿಕೊಳ್ಳುತ್ತ ಜೀವನ ನಡೆಸಿಕೊಂಡಾಗ **ಸಮಾಜ** (Society); ಎಲ್ಲರ ಹಿತಸಾಧನೆಗಾಗಿಯೂ ವ್ಯವಸ್ಥೆಯುಳ್ಳವರಾದಾಗ **ರಾಷ್ಟ್ರ** (State). ಈ ರೀತಿಯಲ್ಲಿ ರಾಷ್ಟ್ರವೆಂಬ ಪ್ರಯೋಗದಲ್ಲಿ ಗೊತ್ತಾದ ಒಂದು ದೇಶದ ಸೂಚನೆಯೂ ಉಂಟು, ಅಲ್ಲಿ ವ್ಯವಸ್ಥೆಯನ್ನು ಪಡೆದ ಒಂದು ಮಾನವ ಸಮಾಜದ ಸೂಚನೆಯೂ ಉಂಟು.

ರಾಷ್ಟ್ರ—ಸರ್ಕಾರ

ಸರ್ವ ಹಿತಸಾಧನೆಯನ್ನು ರಾಷ್ಟ್ರವು ನೆರವೇರಿಸುವುದು ಹೇಗೆ ಎಂದರೆ ರಾಷ್ಟ್ರದ ಕರ್ತವ್ಯವನ್ನು ನಡೆಸುವ ಸರ್ಕಾರದಿಂದ. ಸಾಮಾನ್ಯ ಮಾತಿನಲ್ಲಿ ಸರ್ಕಾರ ಎಂದರೆ ಆಳ್ವಿಕೆಯನ್ನು ನಡೆಸತಕ್ಕ ಅಧಿಕಾರಿಗಳಿಗೆ ಹಿಂದಿರುವ ಯಾವುದೋ ಒಂದು ಏರ್ಪಾಟು, ಒಂದು ಶಕ್ತಿ ಎಂದು ಅರ್ಥವಾಗುತ್ತದೆ. ಶಾಸ್ತ್ರೀಯವಾಗಿ ಹೇಳುವಾಗ ಸರ್ಕಾರವು ರಾಷ್ಟ್ರದ ಉದ್ದೇಶವನ್ನು ಹೊತ್ತು ಕಾರ್ಯವನ್ನು ನಡೆಸುವ ಅಂಗ ಎಂದು ಹೇಳಬೇಕು. ದೇಹಕ್ಕೆ ಕೈ ಹೇಗೆ ಕೆಲಸಮಾಡತಕ್ಕ ಅಂಗವೋ ಹಾಗೆಯೇ ಸರ್ಕಾರವೆಂಬುದು ರಾಷ್ಟ್ರದ ಕೈ ಅಥವಾ ಮುಖ. ಸರ್ಕಾರವೆಂಬುದು ಬೇರೆ, ಪ್ರಜಾ ಎಂಬುದು ಬೇರೆ; ಎರಡೂ ಒಟ್ಟು ಸೇರಿ ರಾಷ್ಟ್ರವಾಗುವುದು. ಸರ್ಕಾರವು ಪ್ರಜಾರಾಶಿಯನ್ನಾಳುವುದು ಎಂದು ಹೇಳಬಹುದು ಆ ಕಾರಣದಿಂದ. ರಾಷ್ಟ್ರವೆಂಬುದು ಸರ್ವಹಿತವನ್ನೂ ಸಾಧಿಸುವ ಸಮಾಜ ವ್ಯವಸ್ಥೆಯಾದ್ದರಿಂದ ಎಲ್ಲರೂ ರಾಷ್ಟ್ರಕ್ಕೆ ಸೇರಿದವರೇ ಆಗಿರುತ್ತಾರೆ. ಸರ್ಕಾರದಲ್ಲಿ ಎಲ್ಲರೂ ಸೇರಿರುವುದಿಲ್ಲ. ರಾಷ್ಟ್ರವೆಂಬುದು ಸ್ಥಿರವಾದುದು; ಸರ್ಕಾರವಾದರೆ ರೂಪಾಂತರವನ್ನು ಹೊಂದಬಹುದು, ನಾಶವನ್ನೂ ಪಡೆಯಬಹುದು. ಸರ್ಕಾರವು ಅಸ್ತವ್ಯಸ್ತವಾಗಿ ವಿಪ್ಲವಕ್ಕೊಳಗಾದರೂ ರಾಷ್ಟ್ರವು ಇರುತ್ತದೆ. ಸರ್ಕಾರವನ್ನು ರಾಷ್ಟ್ರಮುಖವೆಂದೋ ರಾಷ್ಟ್ರದ ಸಾಧಕವೆಂದೋ ಹೇಳಬಹುದು.

ಹೊಯ್! ಸಳ!

ರಾಷ್ಟ್ರವೆಂಬ ವ್ಯವಸ್ಥೆಯ ಉದ್ದೇಶವೇನು? ಸರ್ವ ಹಿತಸಾಧನೆಯೆಂದರೆ ಅದನ್ನು ವಿವರಿಸುವುದು ಹೇಗೆ? ಹೊಯಿಸಳರ ಮೂಲಪುರುಷನ ಕಥೆಯನ್ನು ದೃಷ್ಟಾಂತವಾಗಿ ಕಾಣಬಹುದು. ಸೊಸೆಯೂರೆಂಬ ಊರಿನಲ್ಲಿ ಒಂದಾನೊಂದು ಹುಲಿಯು ಎಲ್ಲರಿಗೂ ಭಯವನ್ನುಂಟುಮಾಡುತ್ತಿತ್ತು. ಜೈನ ಯತಿಯೊಬ್ಬಾತನು ಸಳನೆಂಬುವನನ್ನು ಪ್ರೇರಿಸಿ ಆತನಿಂದ ಆ ಹುಲಿಯನ್ನು ಕೊಲ್ಲಿಸಿದನು. ಸರ್ವರಿಗೂ ಹಿತವಾದ ಕೆಲಸವು ನೆರವೇರಿತು. ಆಗ ಆ ಯತಿಯು ಗ್ರಾಮಸ್ಥರಿಗೆ "ನಿಮ್ಮೆಲ್ಲರಿಗೂ ಉಪಕಾರಮಾಡಿದ ಈ ಸಳನು ಸಮರ್ಥನಾಗಿಯೂ ಯೋಗ್ಯನಾಗಿಯೂ

ಇದ್ದಾನೆ. ನಿಮಗೆ ದುಷ್ಟ ಮೃಗಗಳಿಂದಾಗಲಿ ದುಷ್ಟರಿಂದಾಗಲಿ ಶತ್ರುಗಳಿಂದಾಗಲಿ ಅಪಾಯವೊದಗದಂತೆ ರಕ್ಷಿಸಲು ಅವನು ದಕ್ಷನಾಗಿದ್ದಾನೆ. ಆದ್ದರಿಂದ ನೀವೆಲ್ಲರೂ ಆತನನ್ನು ಮುಂದಿಟ್ಟುಕೊಂಡು ಆತನಿಗೆ ಕಾಣಿಕೆಯನ್ನು ಕೊಟ್ಟು ಆತನ ದೆಸೆಯಿಂದ ಭಯವನ್ನು ನೀಗಿ ಸುಖದಿಂದ ಬಾಳಿ'' ಎಂದು ಹೇಳಿದನು. ಇಲ್ಲಿ ಹುಲಿಯ ಭಯದಿಂದ ಪಾರಾಗುವುದೇ ಎಲ್ಲರಿಗೂ ಬೇಕಾಗಿದ್ದ ಹಿತ; ಶತ್ರುಭಯವಿಲ್ಲದಂತೆ ಜೀವಿಸುವ ಆಸೆಯು ಎಲ್ಲರಲ್ಲಿಯೂ ಇದ್ದ ಆಸೆ. ಎಲ್ಲರಿಗೂ ಬೇಕಾದ ಪ್ರಯೋಜನವನ್ನು ಸಾಧಿಸಿಕೊಟ್ಟ ಸಳನು ಆಳತಕ್ಕವನಾದವನು. ಸರ್ವಹಿತಸಾಧನೆಯೇ ಆಳ್ವಿಕೆ ಅಥವಾ ಆಡಳಿತವೆಂಬುದು. ಹೊರಗಿನಿಂದ ಗ್ರಾಮಸ್ಥರ ಬದುಕಿಗೆ ಆತಂಕ ತೋರದಂತೆ ಕಾಪಿಡುವುದು ಸಳನ ಕರ್ತವ್ಯವಾಯಿತು. ದೇಶದ ರಕ್ಷಣೆಯೆಂಬುದು ರಾಷ್ಟ್ರದ ಉದ್ದೇಶಗಳಲ್ಲೊಂದು. ತಮ್ಮ ಕೆಲಸಕಾರ್ಯಗಳಿಗೆ ಅಡ್ಡಿಯಾಗಿ ಬಂದವರ ಕಾಟವನ್ನು ನಿಲ್ಲಿಸಕೊಡಬೇಕೆಂದು ಗ್ರಾಮಸ್ಥರು ಸಳನನ್ನು ಕೇಳಬಹುದಾಗಿದ್ದಿತು. ಈ ರೀತಿಯಲ್ಲಿ ಸಳನು ಹೊರಗಿನಿಂದ ಬರಬಹುದಾಗಿದ್ದ ಹುಲಿಯನ್ನೋ ಶತ್ರುವನ್ನೋ ಅಡಗಿಸಬೇಕಾಗಿದ್ದುದಲ್ಲದೆ ಒಳಗೇ ತುಂಟತನವನ್ನು ಮಾಡಿದಂಥವರನ್ನೂ ಅಡಗಿಸ

**ರಕ್ಷಣೆ**

ಬೇಕಾಗಿದ್ದಿತು. ಇದನ್ನೇ ಶಾಸ್ತ್ರೀಯವಾಗಿ ರಾಷ್ಟ್ರ ರಕ್ಷಣೆಯೆನ್ನುವುದು. ದೇಶದ ಹೊರಗಿನಿಂದ ಬಂದ ಶತ್ರುವನ್ನು ಅಡ್ಡಿಮಾಡಿ ಅಟ್ಟುವುದು ಮಾತ್ರವೇ ಅಲ್ಲದೆ ಶತ್ರುವು ತೋರಿಕೊಳ್ಳದಂತೆ ಸಂಧಾನವನ್ನು ನಡೆಸುವುದೂ ಸನ್ನದ್ಧವಾದ ಸೈನ್ಯವನ್ನು ಪೋಷಿಸುವುದೂ ಸರಕಾರದ ಕರ್ತವ್ಯ.

## ರಾಷ್ಟ್ರ ಕರ್ತವ್ಯ

ಯಾವ ದೇಶವೇ ಆಗಲಿ, ಯಾವ ಕಾಲವೇ ಆಗಲಿ, ರಾಷ್ಟ್ರ ರಕ್ಷಣೆಯು ಸರಕಾರದ ಪ್ರಧಾನ ಕರ್ತವ್ಯವೆನಿಸಿಯೇ ಇದೆ.

**ರಾಷ್ಟ್ರ ಕರ್ತವ್ಯ**

ರಕ್ಷಣೆಯ ಕರ್ತವ್ಯದಲ್ಲಿ ಸೈನ್ಯ ಪೋಷಣೆಯೊಂದು ಕಡೆ, ದುಷ್ಟ ಶಿಕ್ಷೆಯೊಂದು ಕಡೆ; ಅವುಗಳ ನಿರ್ವಾಹಕ್ಕೆ ಬಲಿ ಅಥವಾ ಕರಗ್ರಹಣ ಅಥವಾ ತೆರಿಗೆಯನ್ನೆತ್ತುವುದು;

ಇವು ಮೂರು ಅನಿವಾರ್ಯವೆನಿಸಿದ ಕೆಲಸಗಳು. ಪ್ರಾಚೀನ ಭಾರತೀಯ ಪದ್ಧತಿಗಳ ದುಷ್ಟಶಿಕ್ಷಣ ಶಿಷ್ಟರಕ್ಷಣೆಯೆಂಬುದೂ ಇದೇ. ರಾಷ್ಟ್ರದಲ್ಲಿ ಶಾಂತಿಯನ್ನುಂಟುಮಾಡುವ ಉದ್ದೇಶವನ್ನು ಸಾಧಿಸುವುದಕ್ಕಾಗಿ ಸೈನ್ಯ ಶಾಖೆಯನ್ನೂ, ಕಂಟಕರನ್ನು ಹಿಡಿದು ದಂಡನೆಗೆ ಗುರಿಮಾಡುವ ಕಂಟಕ ಗ್ರಾಹಕ ಮತ್ತು ದಂಡಧಾರಿ ಶಾಖೆಗಳನ್ನೂ ಏರ್ಪಾಟುಮಾಡಿಡುವುದು ಮೊದಲನೆಯ ಕರ್ತವ್ಯ. ಇತರ ಕರ್ತವ್ಯಗಳನ್ನು ನೆರವೇರಿಸಿದರೂ ನೆರವೇರಿಸದಿದ್ದರೂ ಆಡಳಿತದಲ್ಲಿ ಈ ಎರಡು ತಪ್ಪುವುದಿಲ್ಲ; ಆದ್ದರಿಂದ ಇವಕ್ಕೆ **ಅನಿವಾರ್ಯ** ಕರ್ತವ್ಯಗಳೆಂತಲೂ, ಇತರ ಕೆಲಸಕಾರ್ಯಗಳಿಗೆ **ಐಚ್ಛಿಕ** ಕರ್ತವ್ಯಗಳೆಂದೂ ಹೇಳುವುದುಂಟು. ಆದರೆ ಆ ವಿಭಾಗವು ದೃಢವಾದುದಲ್ಲ; ಸರ್ಕಾರದ ಕರ್ತವ್ಯಗಳು ಒಂದನ್ನೊಂದು ಅವಲಂಬಿಸಿರುವುದರಿಂದ ಎಲ್ಲ ಕರ್ತವ್ಯಗಳೂ ಸರ್ಕಾರಕ್ಕೆ ವಿಧಿಯೇ, ಅವಶ್ಯವೇ ಎಂಬುದು ಸ್ವಲ್ಪ ವಿಚಾರದಿಂದಲೇ ಸಿದ್ಧವಾಗುವುದು. ತೆರಿಗೆ ಸುಂಕ ಮುಂತಾದುವುಗಳಿಲ್ಲದೆ ಸರ್ಕಾರವು ಕಾರ್ಯನಿರ್ವಾಹ ಮಾಡಲಾಗುವುದಿಲ್ಲ; ತೆರಿಗೆ ಸುಂಕಗಳು ಸಕಾಲಕ್ಕೆ ಒದಗಬೇಕಾದಲ್ಲಿ ಜನರ ನೆಮ್ಮದಿಯು ಚನ್ನಾಗಿರಬೇಕು; ನೆಮ್ಮದಿಯು ಭದ್ರವಾಗಿದ್ದು ಅಭಿವೃದ್ಧಿ ಪಡೆಯುವುದಕ್ಕೆ ವ್ಯವಸಾಯ ಉದ್ಯೋಗಗಳು ಸುಸ್ಥಿತಿಯಲ್ಲಿದ್ದು ಬೇಕಾದ ಅನುಕೂಲಗಳನ್ನು ಪಡೆಯಬೇಕು. ಆದುದರಿಂದ ಸರ್ಕಾರವೆಂಬುದು ಮೊದಲನೆ ಕರ್ತವ್ಯಪಾಲನೆಗಾಗಿಯೇ ಐಚ್ಛಿಕವೆಂದು ಹೇಳಬಹುದಾದ ವ್ಯವಸಾಯ ಶಾಖೆಯನ್ನು ತೆರೆದಿಟ್ಟುಕೊಂಡು ಕೃಷಿ ವಿಧಾನಗಳನ್ನು ಸುಧಾರಿಸುವ ಪ್ರಯತ್ನವನ್ನು ಮಾಡಬೇಕಾಗುವುದು. ಜನತೆಯ ಅಭ್ಯುದಯಕ್ಕೆ ಏನೇನು ಮಾಡಬಹುದೋ ಅದನ್ನೆಲ್ಲವನ್ನೂ ಸರ್ಕಾರವು ಚಿಂತಿಸಿ ವಹಿಸಬೇಕಾದುದು ಕರ್ತವ್ಯ. ಜನತೆಯ ಸರ್ವಸಿದ್ಧಿಯು ರಾಷ್ಟ್ರದ ಹೆಗ್ಗುರಿಯಾದಮೇಲೆ ಆ ಸಿದ್ಧಿಗೆ ಬೇಕಾದ ಕೆಲಸಗಳೆಲ್ಲವನ್ನೂ ಸರ್ಕಾರವು ಮಾಡಲೇಬೇಕು. ಆದ್ದರಿಂದ ಸರ್ಕಾರದ ಕರ್ತವ್ಯಗಳನ್ನೆಣಿಸಿ ಮಿತಿಯನ್ನು ಗೊತ್ತುಮಾಡಿ ಇಷ್ಟೇ ಎಂದು ನಿರ್ಣಯಿಸಲಾಗುವುದಿಲ್ಲ.

ಇತಿಹಾಸವನ್ನೋದಿದರೆ ರಾಷ್ಟ್ರಗಳೆಂಬ ವ್ಯವಸ್ಥೆಗಳು ಯಾವ ಯಾವ ಕರ್ತವ್ಯಗಳನ್ನು ನಿರ್ವಹಿಸಿದವೋ ಅವು ವಿಶದವಾಗಿ ತಿಳಿಯುವುವು.

ರಾಷ್ಟ್ರವು ಸಮಾಜದಲ್ಲಿ ಮುಖ್ಯವಾದುದು; ಶಿರಸ್ಸಿನಂತೆ ಪ್ರಧಾನವಾದುದು.

**ಮೂಲ ಕರ್ತವ್ಯ**

ಜನರು ಅನ್ಯೋನ್ಯವಾಗಿ ಕಲೆತು ವರ್ತಿಸುವ ಅನೇಕಾನೇಕ ರಂಗಗಳುಂಟು ; ಅವುಗಳೆಲ್ಲಕ್ಕಿಂತಲೂ ವಿಶಾಲವಾದುದೂ ಆಧಾರಭೂತವಾದುದೂ ರಾಷ್ಟ್ರವೆಂಬ ರಂಗ. ರಾಷ್ಟ್ರಗಳು ನಿರ್ವಹಿಸಲು ಯತ್ನಿಸಿದ ಕರ್ತವ್ಯಗಳನ್ನು ಪಟ್ಟಿ ಮಾಡುವುದು ಸುಲಭ. ಮೈಸೂರು ಸರ್ಕಾರದವರ ವರದಿಯೊಂದನ್ನು ಕಂಡರೆಯೇ ಅದರಲ್ಲಿ ಸರ್ಕಾರದ ಕರ್ತವ್ಯನಿರ್ವಾಹದ ವೃತ್ತಾಂತವೆಲ್ಲವೂ ಸಿದ್ಧವಾಗಿ ದೊರಕುವುದು. ಸಾಮಾನ್ಯವಾಗಿ ರಾಷ್ಟ್ರವೆಂಬುದು ಯಾವ ಕರ್ತವ್ಯಗಳನ್ನು ನಿರ್ವಾಹ ಮಾಡಿದೆಯೆಂಬುದಕ್ಕೆ ರಾಷ್ಟ್ರವು (1) ಆರ್ಥಿಕಾಭಿವೃದ್ಧಿಗಾಗಿ ಜನರನ್ನು ವ್ಯವಸ್ಥೆಗೊಳಿಸಿ ಪ್ರಯತ್ನವು ಎಲ್ಲರಿಂದಲೂ ನಡೆಯುವಂತೆ ನೆರವೇರಿಸಿರುವುದು, (2) ಯುದ್ಧಗಳನ್ನು ನಡೆಸಿರುವುದು, (3) ನ್ಯಾಯ ಸ್ಥಿತಿಯನ್ನು ಕಾಪಾಡಿ ಜಗಳಗಳನ್ನು ತೀರ್ಮಾನಮಾಡಿರುವುದು, (4) ಕ್ಷೇಮವನ್ನು ಒದಗಿಸಿರುವುದು, (5) ಸ್ವತಂತ್ರಸ್ವಾಮ್ಯಗಳ ರೀತಿ ನೀತಿಯನ್ನು ನಿಷ್ಕರ್ಷಿಸಿರುವುದು, (6) ಕೆಲವೇಳೆ ವಿಶಿಷ್ಟವಾದ ನೀತಿಯನ್ನೋ ಮತವನ್ನೋ ನೆಲೆಗೊಳಿಸಲು ಪ್ರಯತ್ನಿಸಿರುವುದು ಎಂದು ಭಾವಿಸಬಹುದು. ಇತ್ತೀಚಿಗೆ ರಾಷ್ಟ್ರಗಳು ಹೆಚ್ಚುಹೆಚ್ಚಾಗಿ ಆರ್ಥಿಕಸ್ಥಿತಿಗತಿಗಳ ಮೇಲ್ಮೆಗಾಗಿಯೇ ಪ್ರಯತ್ನಿಸುತ್ತ ಉದ್ಯೋಗ ಕ್ಷೇತ್ರದಲ್ಲಿ ಹೆಚ್ಚುಹೆಚ್ಚಾಗಿ ಪ್ರವೇಶಿಸುತ್ತಲಿವೆ; ಜನತೆಯ ಆರೋಗ್ಯವನ್ನೂ ಸುಶಿಕ್ಷಣವನ್ನೂ ಸಾಧಿಸಲು ಅನೇಕ ಕಾರ್ಯಗಳನ್ನು ಕೈಗೊಳ್ಳುತ್ತಲಿವೆ.

**ರಾಷ್ಟ್ರದ ಯೋಗ್ಯತೆ**

ಇಂತಹ ಸರ್ವಸಿದ್ಧಿಯ ಪ್ರಯತ್ನಗಳನ್ನು ನಡೆಸಲು ರಾಷ್ಟ್ರವೆಂಬುದೇ ಯೋಗ್ಯತೆಯನ್ನುಳ್ಳುದು. ಕೆಲವರು ಮಾತ್ರ ಸೇರಿಕೊಂಡು ಪ್ರಯತ್ನಮಾಡುವುದಕ್ಕಿಂತ ಎಲ್ಲರೂ ಸೇರಿ ಪ್ರಯತ್ನಿಸುವುದರಲ್ಲಿ ಕಾರ್ಯಸಿದ್ಧಿಯು ಸುಲಭವಾಗಿಯೂ ಶೀಘ್ರವಾಗಿಯೂ ನೆರವೇರುವುದು. ರಕ್ಷಣೆಯ ಕರ್ತವ್ಯವನ್ನೇ ನಿದರ್ಶನವೆಂದು ಭಾವಿಸಿ ಪರೀಕ್ಷಿಸೋಣ. ದೇಶದ ಎಂಟು ದಿಕ್ಕುಗಳಲ್ಲಿರುವ ಎಂಟು ವಿಭಾಗದವರು ತಂತಮ್ಮ ದಿಕ್ಕಿನ ರಕ್ಷಣೆಯನ್ನು ತಾವೇ ನಿರ್ವಹಿಸಬೇಕೆಂಬ ನಿಯಮವಿದ್ದಲ್ಲಿ ಕೆಲವರು

ಅತಿಬಲರಾಗಿಯೂ ಕೆಲವರು ಬಲಹೀನರಾಗಿಯೂ ಇರುವುದಲ್ಲದೆ ಎಲ್ಲಿ ಮೇರೆಯು ದುರ್ಬಲವೋ ಅಲ್ಲಿಗೆ ತಕ್ಕಷ್ಟು ಬಲವು ಏರ್ಪಡುವುದಿಲ್ಲ. ರಾಷ್ಟ್ರವೇ ಒಟ್ಟು ಕೆಲಸವನ್ನೂ ಕೈಗೊಂಡಪಕ್ಷದಲ್ಲಿ ಈ ದೋಷಗಳು ತೋರುವುದೇ ಇಲ್ಲ; ಮತ್ತು ಅಷ್ಟು ವೆಚ್ಚವೂ ಆಗುವುದಿಲ್ಲ. ಹೀಗೆಯೇ ಇತರ ಕರ್ತವ್ಯಗಳ ಪಾಲನೆಯಲ್ಲಿಯೂ ಕೂಡ. ಪ್ಲೇಗ್ ತೋರಿಕೊಂಡಾಗ ಯಾವ ಮೂಲೆಯಲ್ಲಿ ಮೊದಲಾಯಿತೋ ಅಲ್ಲಿಯವರು ಮಾತ್ರ ನಿವಾರಣೆಯ ಕೆಲಸವನ್ನು ಹೊರಬೇಕಾದಲ್ಲಿ ಕಷ್ಟವಾಗಿಯೂ, ರಾಷ್ಟ್ರವೇ ಆ ಕೆಲಸವನ್ನು ಹೊತ್ತರೆ ಸುಲಭವಾಗಿಯೂ ಪರಿಣಮಿಸುವುದು. ಈ ಕಾರಣದಿಂದ ಜನರ ಸೌಭಾಗ್ಯಸಿದ್ಧಿಗೆ ನಡೆಯುವ ಪ್ರಯತ್ನವು ರಾಷ್ಟ್ರಮುಖವಾಗಿಯೇ ನಡೆಯುವುದರಲ್ಲಿ ಸೌಲಭ್ಯವಲ್ಲದೆ ಹೆಚ್ಚು ಅನುಕೂಲವೂ ಉಂಟು; ವ್ಯರ್ಥವಾಗುವ ಸಂಭವವು ತೀರ ಕಡಿಮೆ.

**ವಿಧಿಯ ಸ್ವಾಮ್ಯ**

ಸರ್ಕಾರದ ವರದಿಯನ್ನು ಹಿಡಿದು ನೋಡಿದರೆ ಸರ್ಕಾರದ ಶಾಖೆಗಳು ಅನೇಕಾನೇಕವಾಗಿರುವುದು ತಿಳಿಯುವುದು. ರೆವಿನ್ಯೂ, ಸರ್ವೆ, ಕಾಡು, ಆಬ್ಕಾರಿ, ರೆಜಿಸ್ಟ್ರೇಷನ್, ಲೆಕ್ಕ, ನ್ಯಾಯತೀರ್ಮಾನ, ಪೋಲೀಸ್, ಶಿಕ್ಷಣ, ಆರೋಗ್ಯ, ವೈದ್ಯ, ವ್ಯವಸಾಯ, ಉದ್ಯೋಗ ಮುಂತಾದ ಶಾಖೆಗಳು ಹೇರಳವಾಗಿ ಕಾಣುತ್ತವೆ. ಆ ಶಾಖೆಗಳನ್ನು ಸಂಪಾದಿಸುವ ಶಾಖೆಗಳು, ವೆಚ್ಚಗೊಳಿಸುವ ಶಾಖೆಗಳು ಎಂದು ಬೇಕಾದರೆ ವಿಂಗಡಿಸಿಕೊಳ್ಳಬಹುದು. ಇಷ್ಟು ಶಾಖೆಗಳಲ್ಲಿಯೂ ಅಧಿಕಾರಿಗಳೂ ನೌಕರರೂ ಕೆಲಸವನ್ನು ಮಾಡುತ್ತಲೇ ಇರುತ್ತಾರೆ; ಅವರಲ್ಲಿ ಯಾರೂ ಇಷ್ಟಬಂದಂತೆ ಸ್ವೇಚ್ಛೆಯಾಗಿ ವರ್ತಿಸಲಾರರು. ನಿಯಮ ನಿಬಂಧನೆಗಳನ್ನು ಸ್ವಲ್ಪವಾದರೂ ಅತಿಕ್ರಮಿಸದೆ ಕೆಲಸವನ್ನು ಸಾಂಗವಾಗಿಯೂ ಕ್ರಮವಾಗಿಯೂ ನೆರವೇರಿಸಬೇಕು. ಯಾವ ಶಾಖೆಯವರಾದರೂ ವಿಧಿಗೆ ಬದ್ಧರಾಗಿಯೇ ಇರಬೇಕು. ಆದ್ದರಿಂದ ಅಧಿಕಾರಿ ವರ್ಗದವರೆಲ್ಲರಿಗೂ ವಿಧಿಯೆಂಬುದು ಯಜಮಾನನಂತೆ. ವಿಧಿಯ ಸ್ವರೂಪವು ಕಾನೂನು, ಕಟ್ಟಳೆ, ನಿಯಮ, ನಿಬಂಧನೆ ಮೊದಲಾದವುಗಳಲ್ಲಿ ತೋರುವುದು. ವಿಧಿಯೇ ರಾಷ್ಟ್ರದಲ್ಲಿ ಸ್ವಾಮಿಯೆಂಬುದು. ಸಾಧಾರಣವಾಗಿ ಎಲ್ಲ ರಾಷ್ಟ್ರ

ಗಳಲ್ಲಿಯೂ ಹಿರಿಯರೂ ಕಿರಿಯರೂ, ಸರ್ಕಾರದವರೂ ಪ್ರಜೆಗಳೂ, ಸರ್ವರೂ ಅನುಸರಿಸಬೇಕಾದುದರಿಂದ ಎಲ್ಲರಿಗೂ ಸ್ವಾಮಿಯಾದುದು ವಿಧಿ. ಅದನ್ನೇ **ವಿಧಿಯ ಸ್ವಾಮ್ಯ** (Sovereignty of Law) ಎಂಬುವರು. ವಿಧಿಯೇ ಕಾರ್ಯಕ್ಕೆ ಮೂಲ; ಅಧಿಕಾರಕ್ಕೂ ಮೂಲ. ಆದ್ದರಿಂದ ವಿಧಿ ಸಿದ್ಧಿಯು ರಾಷ್ಟ್ರಪಾಲನೆಗೆ ಮುಖ್ಯವಾದುದು.

## ರಾಷ್ಟ್ರಾಂಗಗಳು

**ಮೂರು ಅಂಗಗಳು**

ವಿಧಿಯು ನಾನಾರಂಗಗಳಲ್ಲಿ ನಾನಾ ಬಗೆಗಳಾಗಿ ತೋರಿಕೊಳ್ಳುವುದು. ಸಿವಿಲ್ ಮತ್ತು ಕ್ರಿಮಿನಲ್ ವಿಧಿಗಳೆಂಬುದನ್ನು ಎಲ್ಲರೂ ಕೇಳಿರುತ್ತಾರೆ; ಸಾಮಾಜಿಕ ವಿಧಿ, ಆರ್ಥಿಕ ವಿಧಿ, ಶಿಕ್ಷಣ ವಿಧಿ ಮುಂತಾಗಿ ಇತರ ಬಗೆಗಳನ್ನು ನಾವೇ ವಿಂಗಡಿಸಬಹುದು. ಈ ವಿಧಿಗಳನ್ನು ಸಿದ್ಧಗೊಳಿಸುವ ಕರ್ತವ್ಯವು ಎಲ್ಲಕ್ಕೂ ಮೂಲ; ಅದನ್ನು ಶಾಸಕ ಕರ್ತವ್ಯವೆಂದು ಕರೆಯಬಹುದು. ರಾಷ್ಟ್ರದಲ್ಲಿ ಶಾಸಕ ವಿಧಿಯನ್ನು ನಿರ್ಣಯಿಸುವ ಅಂಗವನ್ನು ಶಾಸಕಾಂಗವೆಂತಲೂ, ಕರ್ತವ್ಯವನ್ನು ಶಾಸಕ ಕರ್ತವ್ಯವೆಂತಲೂ ಕರೆಯೋಣ. ಶಾಸನ ಎಂಬ ಮಾತನ್ನು ವಿಧಿಯೆಂಬರ್ಥದಲ್ಲಿಯೇ ಇಟ್ಟು ಉಪಯೋಗಿಸೋಣ. ಶಾಸನ ಸಿದ್ಧಿಯಲ್ಲಿ ಆಧಾರತತ್ವವಾಗಿರತಕ್ಕದ್ದು ನ್ಯಾಯವೆಂಬುದನ್ನು ಮರೆಯಬಾರದು. ನ್ಯಾಯವೆಂದರೆ ಎಲ್ಲರಿಗೂ ಸಮಾನತೆಯೆಂದೇ ಸುಲಭವಾಗಿ ವಿವರಿಸಿಕೊಂಡು, ನ್ಯಾಯವನ್ನು ನೆಲೆಗೊಳಿಸುವುದು ರಾಷ್ಟ್ರದ ಉದ್ದೇಶವಾದುದರಿಂದ ಆ ಉದ್ದೇಶ ಸಾಧನೆಗಾಗಿ ರಾಷ್ಟ್ರದಲ್ಲಿ ವಿಧಿಗಳು ನ್ಯಾಯ ತತ್ವಗಳಿಗನುಸಾರವಾದ ಸುರೂಪವನ್ನು ಪಡೆಯಬೇಕಾದುದು ರಾಷ್ಟ್ರಸ್ಥಿತಿಗೇ ಆಧಾರಭೂತವಾದುದೆಂದು ನೆನಪಿನಲ್ಲಿಟ್ಟಿರೋಣ. ರಾಷ್ಟ್ರದ ಒಂದು ಅಂಗವು ಶಾಸಕ ಕರ್ತವ್ಯವನ್ನು ತಾಳಬೇಕು; ಮತ್ತೊಂದು ಅಂಗವು ನ್ಯಾಯವನ್ನು ಇತ್ಯರ್ಥಮಾಡಿ ನೆಲೆಗೊಳಿಸಬೇಕು; ಮತ್ತೊಂದು ಅಂಗವು ಶಾಸನ ಅಥವಾ ವಿಧಿಯನ್ನನುಸರಿಸಿ ಕಾರ್ಯವನ್ನು ಕೈಕೊಂಡು ನಡೆಸಬೇಕು. ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳೆಂಬ ರಾಷ್ಟ್ರದ ಈ ಮೂರು ಅಂಗಗಳ ಜೋಡಣೆಯನ್ನು ಸಂಯುಕ್ತ ರಾಜ್ಯದ ವಿವರದಲ್ಲಿ ಹಿಂದೆಯೇ ಕಂಡೆವು.

ಆಡಳಿತ-ನೀತಿಭಾಗ

ಕಾರ್ಯಾಂಗವನ್ನೇ ಕೆಲವೇಳೆ ಸರ್ಕಾರವೆಂದು ಕರೆಯುವುದೂ ಉಂಟು; ಅಂತಹ ಸಂದರ್ಭಗಳಲ್ಲಿ ಸರ್ಕಾರವೆಂದರೆ ಅಧಿಕಾರಿಗಳ ಗುಂಪನ್ನೋ ಅವರ ಅಧಿಕಾರ ಬಲವನ್ನೋ ಮನಸ್ಸಿನಲ್ಲಿ ಭಾವಿಸಿಕೊಳ್ಳುವೆವು. ಕಾರ್ಯಾಂಗಕ್ಕೆ ಕರ್ತವ್ಯರಾಶಿಯನ್ನೂ ಅದರ ನಿರ್ವಾಹಕ್ಕೆ ತಕ್ಕ ಅಧಿಕಾರ ಬಲವನ್ನೂ ರಾಷ್ಟ್ರವಿಧಿಯೇ ಒದಗಿಸುತ್ತದೆ. ಕರ್ತವ್ಯ ನಿರ್ವಾಹದಲ್ಲಿ ಅಧಿಕಾರಿಗಳು ನಿಯಮಗಳನ್ನುಲ್ಲಂಘಿಸದೆ ಇದ್ದು ಅನುಸರಿಸುವ ಮಾರ್ಗವನ್ನು ನೀತಿಯೆಂದು ಕರೆಯುವುದೂ ಉಂಟು. ಯಾವುದಾದರೊಂದು ರಾಷ್ಟ್ರದ ನೀತಿಯು ಸಾಧುವೋ ದುಷ್ಟವೋ ಎಂದು ಪ್ರಸ್ತಾಪಿಸಿದಾಗ ನೀತಿಯೆಂದರೆ ಆರಿಸಿಕೊಂಡ ಗತಿ ಅಥವಾ ಮಾರ್ಗವೆಂದು ಅರ್ಥವಾಗುತ್ತದೆ. ನೀತಿ ಶಬ್ದಕ್ಕೆ ಇದು ಸಂಕುಚಿತವಾದ ಅರ್ಥ ಅಥವಾ ವಿಶಿಷ್ಟವಾದ ಪ್ರಯೋಗ; ರಾಷ್ಟ್ರಶಾಸ್ತ್ರದಲ್ಲಿ ಪರಿಭಾಷೆ. ಮಾನವರಾಶಿಗಳು ಸಾಮಾಜಿಕವಾಗಿ ಅನುಸರಿಸಬೇಕಾದ ನೀತಿಯು, ಅಥವಾ ನ್ಯಾಯಾನ್ಯಾಯಗಳ ಅಥವಾ ಪುಣ್ಯಪಾಪಗಳ ವಿಚಾರವಿಮರ್ಶೆಗಳು ರಾಷ್ಟ್ರನೀತಿಯೆಂಬುದಕ್ಕಿಂತ ವಿಸ್ತಾರವಾದ ಭಾಗ. ಸಮಾಜ ನೀತಿಯಲ್ಲಿ ರಾಷ್ಟ್ರನೀತಿಯು ಒಂದು ಪಾಲು ಮಾತ್ರ. ಕಾರ್ಯಾಂಗದ ಕರ್ತವ್ಯರಾಶಿಯ ಅಂಶಗಳಲ್ಲಿ ನೀತಿಯು ಹೇಗಿರಬಹುದೆಂಬುದನ್ನು ಸ್ಥೂಲವಾಗಿ ವಿಚಾರ ಮಾಡಿದಲ್ಲಿ ಅನೇಕ ವಿಚಾರಗಳು ನಮಗೆ ತೋರುವುವು. ಕಾರ್ಯಾಂಗದ ಕರ್ತವ್ಯವನ್ನೇ ಸಾಮಾನ್ಯವಾಗಿ ಆಳ್ವಿಕೆಯೆನ್ನುವುದು. ಆಳ್ವಿಕೆಯ ಭಾಗಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ನಾವು ಸ್ಥೂಲವಾಗಿ ಕಾಣಬಹುದು.

## ರಾಷ್ಟ್ರಭಾರದ ಅಂಶಗಳು

ರಕ್ಷಣೆಯ ಕರ್ತವ್ಯ

ಮೊದಲು ಹೊರಗಿನಿಂದ ಆತಂಕ ತೋರದಂತೆ ವ್ಯವಸ್ಥೆಗೊಳಿಸುವ ರಕ್ಷಣೆಯ ಭಾಗದ ವಿವರವನ್ನು ಕಾಣುವ. ಶತ್ರುಗಳು ತೋರಿಕೊಂಡಾಗ ಮಾತ್ರ ಸೈನ್ಯವನ್ನು ಸೇರಿಸಿ ಸಜ್ಜಾಗೋಣ ಎಂಬುದು ಹಾಸ್ಯಕ್ಕೆ ಆಸ್ಪದವಾದುದು. ಶತ್ರುಗಳು ತೋರಿಕೊಂಡ ಸಮಯದಲ್ಲಿ ಅವರನ್ನು

ಎದುರಿಸಿ ಯುದ್ಧಮಾಡುವುದೇನೋ ಅನಿವಾರ್ಯವಾದುದು ; ಆದರೆ ಶತ್ರುಗಳು ಅಂತಹ ಯೋಚನೆಯನ್ನೇ ಮಾಡದಂತೆ ಸ್ವಬಲವನ್ನು ಸದಾ ಸನ್ನದ್ಧವಾಗಿಟ್ಟಿರುವುದು ಕರ್ತವ್ಯ. ರಾಷ್ಟ್ರದ ಎಲ್ಲೆಗಳನ್ನು ಭದ್ರಗೊಳಿಸಿ ತಕ್ಕಷ್ಟು ಅಥವಾ ಸಾಧ್ಯವಾದಷ್ಟು ಬಲವನ್ನು ಸದಾ ಸಿದ್ಧವಾಗಿಟ್ಟಿರುವುದಲ್ಲದೆ ಶತ್ರುಗಳಾಗಬಹುದಾದವರನ್ನು ದೃಷ್ಟಿಯಲ್ಲಿಟ್ಟಿದ್ದು ಅವರು ಅಸಮಾಧಾನಪಡಬಹುದಾದ ಸಮಯ ಸಂದರ್ಭಗಳಲ್ಲಿ ಅತಿಜಾಗರೂಕತೆಯಿಂದ ಸಂಬಂಧ ವ್ಯವಹಾರಗಳನ್ನು ನಡೆಸುತ್ತಲಿರುವುದೂ ಈ ಕರ್ತವ್ಯದ ಭಾಗವೇ. ಆದ್ದರಿಂದ ರಾಷ್ಟ್ರಗಳು ತಮ್ಮ ಸರಹದ್ದುಗಳನ್ನು ಭದ್ರಪಡಿಸಿಕೊಂಡು ಕಾಪಿಟ್ಟು ಬಲ ಸಿದ್ಧತೆಯನ್ನು ಪಡೆದಿರುವುದಲ್ಲದೆ ಅನ್ಯದೇಶಗಳೊಂದಿಗೆ ವ್ಯವಹಾರವನ್ನು ನಡೆಸುತ್ತ ತಮ್ಮ ರಾಯಭಾರಿಗಳನ್ನು ಇತರ ರಾಷ್ಟ್ರಗಳಲ್ಲಿಟ್ಟುಕೊಂಡು ಇತರ ದೇಶಗಳ ರಾಯಭಾರಿಗಳನ್ನು ಬರಮಾಡಿಕೊಂಡು ಎಚ್ಚರದಿಂದಿರುತ್ತವೆ. ಸಂಯುಕ್ತರಾಜ್ಯಕ್ಕೆ ಮೇರೆಯಾದ ಸಮುದ್ರತೀರದಲ್ಲಿ ಯುದ್ಧದ ಹಡಗುಗಳು ಸದಾ ಸಿದ್ಧವಾಗಿರುವುವು ; ಜಲಸೈನ್ಯವಲ್ಲದೆ ಭೂಸೈನ್ಯವೂ ಆಕಾಶ ಸೈನ್ಯವೂ ವಿಸ್ತಾರವಾದ ಶಾಖೆಗಳಾಗಿರುವುವು ; ಅವುಗಳಿಗೆ ಶಿಕ್ಷಣಕ್ಷೇತ್ರಗಳೂ ಸಿಬಿರಗಳೂ ಅಧಿಕಾರಿ ಸಮೂಹಗಳೂ ಇರುವುವಲ್ಲದೆ ಯುದ್ಧೋದ್ಯಮ ಸಿದ್ಧತೆಗಳಿಗಾಗಿಯೇ ಒಬ್ಬ

**ಸಂಯುಕ್ತ ರಾಷ್ಟ್ರದಲ್ಲಿ**

ಮಂತ್ರಿಯಿರುವನು (Secretary of State for War). ಅನ್ಯದೇಶಗಳೊಡನೆ ವ್ಯವಹಾರವನ್ನು ನಡೆಸಲು ಒಬ್ಬ ಮಂತ್ರಿಯೂ (Secretary of State for Foreign affairs), ಆತನ ಆಜ್ಞಾಧಾರಕರಾಗಿ ಅನೇಕಾನೇಕ ರಾಯಭಾರಿಗಳೂ ದೂತರೂ ಇರುವರು. ಸೈನ್ಯಭಾಗಗಳು ಸದಾ ಸಿದ್ಧತೆಯನ್ನು ಪಡೆದಿರುವುದರಿಂದ ಮಂತ್ರಿಯು ಸೂಚನೆ ಕೊಟ್ಟಕೂಡಲೆ ಪರರನ್ನು ಆಕ್ರಮಿಸುವುದಕ್ಕೇ ಆಗಲಿ, ಪರರ ಆಕ್ರಮಣ ಪ್ರಯತ್ನವನ್ನು ತಡೆಯುವುದಕ್ಕೇ ಆಗಲಿ, ಸ್ವಂತ ರಾಷ್ಟ್ರದಲ್ಲಿ ತೋರಿಕೊಂಡ ದಂಗೆ ಅಥವಾ ಗುಲ್ಲನ್ನು ಅಡಗಿಸುವುದಕ್ಕೇ ಆಗಲಿ ತಕ್ಕ ಏರ್ಪಾಟು ವಿಳಂಬವಿಲ್ಲದೆ ನಡೆಯುವುದು.

ರಾಷ್ಟ್ರ ಕ್ಷೇಮವು ಎಲ್ಲರಿಗೂ ಬೇಕಾದುದು. ಆದುದರಿಂದ ಸರ್ಕಾರದವರು ಎಲ್ಲರ ಪರವಾಗಿಯೂ ಯುದ್ಧಗಳನ್ನು ನಡೆಸುತ್ತಾರೆ, ಪರರಾಷ್ಟ್ರಗಳನ್ನು ಆಕ್ರಮಿಸುವ ಸನ್ನಾಹವನ್ನೂ ಮಾಡುತ್ತಾರೆ.

ಜನರ ಸಿದ್ಧತೆ

ರಾಷ್ಟ್ರಸ್ಥಿತಿಗೆ ಅತಿಮುಖ್ಯವಾದ ಈ ಕರ್ತವ್ಯ ನಿರ್ವಾಹದಲ್ಲಿ ದೇಶಭಕ್ತಿಯುಳ್ಳವರೆಲ್ಲರೂ ತಾವಾಗಿಯೇ ಮುಂದಾಗಿ ಬರುವರು. ಯುದ್ಧವು ಸಂಭವವೆಂದು ತೋರಿದ ಕೂಡಲೆ ಜನರೂ ಮುಂದಾಗಿ ತಾವೇ ಸ್ವಯಂ ಸೈನ್ಯಗಳನ್ನು ರಚನೆಮಾಡಿಕೊಳ್ಳಲು ಆತುರರಾಗುತ್ತಾರೆ. ರಾಷ್ಟ್ರ ಭಕ್ತಿಯುಳ್ಳ ದೇಶಗಳಲ್ಲಿ ರಾಷ್ಟ್ರಕ್ಕಾಗಿ ಪ್ರಾಣವನ್ನು ಕೊಡುವುದು ತಮ್ಮ ಕರ್ತವ್ಯವೆಂದು ಜನರು ತಿಳಿದು ಮುಂದಾಗುತ್ತಾರೆ. ಅವಶ್ಯ ತೋರಿದಂತೆ ಸರ್ಕಾರದವರು ಬಲವನ್ನು ಹೆಚ್ಚಿಸುವರು; ಸಮಯ ಬಂದಂತೆ ದೇಶೀಯ-ರನ್ನು ಬಲವಂತದಿಂದ ಸೈನ್ಯದಲ್ಲಿ ಸೇರಿಸಿಕೊಳ್ಳುವರು. ಅಪಾಯಕಾಲದಲ್ಲಿ ಆ ರೀತಿಯಲ್ಲಿ ಜನರನ್ನು ನಿರ್ಬಂಧಪಡಿಸುವುದೂ ಆಳ್ವಿಕೆಯ ನೀತಿಯೆನಿಸುತ್ತದೆ. ವಿಪತ್ಕಾಲಕ್ಕೆ ಸಿದ್ಧವಾಗಿರುವಂತೆ ಜನರಿಗೆ ಬಲವಂತದ ಚಮೂ ಶಿಕ್ಷಣವನ್ನು ವಿಧಿಸುವುದೂ ರಾಷ್ಟ್ರಗಳಲ್ಲಿ ಸಾಮಾನ್ಯವಾಗಿದೆ.

ಭರತವರ್ಷದ ಮೇರೆಯೆಂಬುದು ಪ್ರಕೃತಿಸಿದ್ಧವಾಗಿ ದುಸ್ಸಾಧ್ಯ ಪರ್ವತಶ್ರೇಣಿಗಳಾಗಿಯೂ ಸಮುದ್ರವಾಗಿಯೂ ಇದೆ. ಭೂಮಿಯ ಮೇರೆಯೆಂಬುದು 6,000 ಮೈಲಿ ದೂರವುಂಟು. ಸಿಂಧು ನದಿಯು ದಕ್ಷಿಣ ದಿಕ್ಕಿಗೆ ತಿರುಗುವ ಎಡೆಯಿಂದ ಬ್ರಹ್ಮಪುತ್ರಾ ನದಿಯು ದಕ್ಷಿಣಗಾಮಿಯಾಗುವ ಸ್ಥಳದವರೆಗೆ ಉತ್ತರದ ಮೇರೆ; ಆ ಮೇರೆಯುದ್ದಕ್ಕೂ ಹಿಮವತ್ಪರ್ವತವೇ ಇದೆ. ಆ ಮೇರೆಯ ಹೊರಗಿರುವುದು ತಿಬ್ಬತ್ ಎಂಬ ರಾಷ್ಟ್ರ. ಆ ರಾಷ್ಟ್ರದವರೊಡನೆ ಬ್ರಿಟಿಷರಿಗೆ ಸ್ನೇಹವೇ ನೆಲೆಸಿದೆ. ತಿಬ್ಬತ್ತಿಗಿರುವುದೊಂದೇ ಮಾರ್ಗ, ಚುಂಬಿ ಕಣಿವೆಯೆಂಬುದು. ತಿಬ್ಬತ್ತಿನ ಜನಸಂಖ್ಯೆಯೂ ಪ್ರಬಲವಲ್ಲ. ಬ್ರಿಟಿಷರಿಗೊಳಪಡದೆ ಇರುವ ನೇಪಾಲ ದೇಶವು ಮೇರೆಯ ಬಳಿಯೇ ಇದೆ. ನೇಪಾಲ ರಾಷ್ಟ್ರವು ಭಾರತೀಯವೇ ಆದಾಗ್ಗೂ ಕಾರಣಾಂತರದಿಂದ ಸ್ವತಂತ್ರವೆಂದೆನಿಸಿದೆ. ನೇಪಾಲಕ್ಕೂ

ನಮ್ಮ ಉತ್ತರದ ಮೇರೆ

ಬ್ರಿಟಿಷರಿಗೂ ಒಂದು ಶತಮಾನ ಕಾಲದಿಂದ ದೃಢವಾದ ಸ್ನೇಹವು ನೆಲೆಗೊಂಡಿದೆ. ಆದ್ದರಿಂದ ಉತ್ತರದ ಮೇರೆಯ ರಕ್ಷಣೆಯೂ ಸುಲಭವಾಗಿಯೇ ಇದೆ.

**ಈಶಾನ್ಯದ ಮೇರೆ**

ಈಶಾನ್ಯ ದಿಕ್ಕಿನಲ್ಲಿ ಅಸ್ಸಾಂ ಪ್ರಾಂತಕ್ಕೆ ಹೊರಗಿನಿಂದ ಬರಲು ಕೆಲವು ಮಾರ್ಗಗಳಿವೆ. ಮಾರ್ಗಗಳು ಕಷ್ಟಸಾಧ್ಯವಾಗಿರುವುದರಿಂದ ಶತ್ರುಗಳಾದವರು ಆ ಮಾರ್ಗಗಳನ್ನು ಸಾಧಿಸಿಕೊಂಡು ಪ್ರವೇಶಮಾಡುವ ಸಂಭವವು ಕಡಿಮೆ. ಮುಂದಕ್ಕೆ ಬರ್ಮಾ ಪ್ರಾಂತದ ಉತ್ತರ ಮೇರೆಯು ಚೀನಾ ರಾಷ್ಟ್ರದ ಮೇರೆಯೊಂದಿಗೆ ಹೊಂದಿಕೊಂಡು 1,000 ಮೈಲಿ ದೂರವುಳ್ಳುದಾಗಿದೆ. ಆ ಮೇರೆಯಲ್ಲಿ ಸೈನ್ಯಗಳಿಗೆ ಸಾಧ್ಯವಾದ ಮಾರ್ಗಗಳೂ ಕೆಲವಿವೆ. ಮೇರೆಗೆ ಉತ್ತರದಲ್ಲಿ ಚೀನೀ ಪ್ರಾಂತವಾದ ಯುನ್ನಾನ್ ಎಂಬ ಕ್ಷೇತ್ರವಿದೆ. ಚೀನೀ ರಾಷ್ಟ್ರವು ಸುವ್ಯವಸ್ಥಿತವಾಗಿಲ್ಲ; ಅಂತಃ ಕಲಹಗಳು ಹೆಚ್ಚಾಗಿಯೇ ಇರುವ ಕಾರಣದಿಂದ ಸೈನ್ಯಗಳು ಓಡಾಡುತ್ತಲಿರುತ್ತವೆ. ಇಂತಹ ನೆರೆಯಿರುವಾಗ ಆ ಮೇರೆಯನ್ನು ಭದ್ರಗೊಳಿಸತಕ್ಕುದು ಅವಶ್ಯವೆಂದು ಬ್ರಿಟಿಷರಿಗೆ ಯೋಚನೆಯಿದೆ. ಈಶಾನ್ಯ ಸರಹದ್ದಿನ ಪ್ರಾಂತವೊಂದನ್ನು ನಿರ್ಮಿಸತಕ್ಕುದೆಂಬ ಸಂಧಾನವು ಅದಕ್ಕೇ ಮೊದಲಾಗಿತ್ತು. ಚೀನೀ ಜನರ ಸ್ಥಿತಿಗತಿಗಳನ್ನೂ ಬಲಾಬಲಗಳನ್ನೂ ತಿಳಿಯುತ್ತಲಿದ್ದು ತಕ್ಕ ಬಂದೋಬಸ್ತನ್ನು ನಡೆಸಲು ಬ್ರಿಟಿಷ್ ಸರ್ಕಾರದವರು ಸಿದ್ಧರಾಗಿಯೇ ಇದ್ದಾರೆ.

**ಪೂರ್ವ ದಿಕ್ಕಿನ ಮೇರೆ**

ಪೂರ್ವದ ಮೇರೆಯ ಹೊರಗೆ ಬೇರೆ ರಾಷ್ಟ್ರಗಳಿವೆ. ಬರ್ಮಾಪ್ರಾಂತದ ಮೂಡಲಲ್ಲಿ ಉತ್ತರ ದಕ್ಷಿಣವಾಗಿ ಮೊದಲು ನೂರು ಮೈಲಿ ದೂರದವರೆಗೂ ನೆರೆಯಲ್ಲಿರುವುದು ಲೇಯೂಸ್ (Laos) ಎಂಬ ಹಿಂದೂಚೀನಾ ರಾಷ್ಟ್ರದ ವಿಭಾಗ. ಆ ರಾಷ್ಟ್ರವು ಫರಾಸ್ಸೀ ಜನರಿಗೆ ಸೇರಿದುದು. ಬ್ರಿಟಿಷರೂ ಫರಾಸ್ಸೀ ಜನರೂ ಪರಸ್ಪರ ಸ್ನೇಹವನ್ನು ಕಾಪಾಡಿಕೊಂಡಿರುವಾಗ್ಗ ಆ ಮೇರೆಯಲ್ಲಿ ತೊಂದರೆ ತೋರುವುದಿಲ್ಲ. ಲೇಯೂಸ್ ತರುವಾಯ 600 ಮೈಲಿ ದೂರ ಸಯಾಂ ಅಥವಾ ಶ್ಯಾಮವೆಂಬ ಸ್ವತಂತ್ರ ರಾಷ್ಟ್ರವಿದೆ.

ಈ ರಾಷ್ಟ್ರದವರೊಡನೆಯೂ ಬ್ರಿಟಿಷರು ಮೈತ್ರಿಯನ್ನು ಕಟ್ಟಿದ್ದಾರೆ. ಬರ್ಮಾ ಪ್ರಾಂತದ ಮೂಡಲಲ್ಲಿ ಮಾರ್ಗಗಳು ಸುಗಮವಾಗಿಲ್ಲದಿರುವುದರಿಂದಲೂ ನೆರೆರಾಷ್ಟ್ರಗಳೊಡನೆ ಸ್ನೇಹವೇ ನಡೆಯುತ್ತಲಿರುವುದರಿಂದಲೂ ಮೇರೆಯು ಭದ್ರವಾಗಿಯೇ ಇದೆ.

**ವಾಯುವ್ಯ - ನೆರೆ ರಾಷ್ಟ್ರಗಳು**

ಉತ್ತರದಲ್ಲಿ, ಈಶಾನ್ಯದಲ್ಲಿ ಮತ್ತು ಪೂರ್ವದಲ್ಲಿ ತೊಂದರೆಯು ಅಸಂಭವವಾದರೂ ಬ್ರಿಟಿಷ್ ಸರ್ಕಾರದವರು ಸಿದ್ಧತೆಯನ್ನು ವಹಿಸಿಯೇ ಇರುತ್ತಾರೆ. ವಾಯುವ್ಯದ ಮೇರೆಯ ವಿಚಾರವೇ ಬೇರೆ. ಮೊದಲಿನಿಂದಲೂ ವಾಯುವ್ಯದ ಕಣಿವೆಗಳೇ ದೇಶದೊಳಕ್ಕೆ ಬರಲು ದಾರಿಗಳು. ವಾಯುವ್ಯದ ಮೇರೆಯ ಹೊರಗೆ ಇರುವ ರಾಷ್ಟ್ರಗಳು ಅಫ್ಘಾನಸ್ಥಾನ, ಪಾರ್ಸೀಸ್ಥಾನ ಮತ್ತು ರಷ್ಯಾ. ಪಾರ್ಸೀಸ್ಥಾನ ಮತ್ತು ಅಫ್ಘಾನಸ್ಥಾನ ರಾಷ್ಟ್ರಗಳೊಂದಿಗೆ ಬ್ರಿಟಿಷರು ಮೈತ್ರಿಯನ್ನು ಕಟ್ಟಿಕೊಂಡು ಪಾಲಿಸುತ್ತಲೇ ಇರುತ್ತಾರೆ. ರಷ್ಯಾ ರಾಷ್ಟ್ರವು ಇತ್ತೀಚೆಗೆ ಮಾತ್ರ ಮಿತ್ರರಾಷ್ಟ್ರವಾಗಿ ಪರಿಣಮಿಸುತ್ತಲಿದೆ. ಮೈತ್ರಿಯಿದ್ದಾಗ್ಯೂ ಸಿಂಧುನದಿಗೆ ಪಶ್ಚಿಮದಲ್ಲಿರುವ ಜನರ ಸ್ಥಿತಿಗತಿಗಳ ಕಾರಣದಿಂದ ಮೇರೆಯನ್ನು ಕಾಪಿಡಲು ವಿಶೇಷವಾದ ಪ್ರಯತ್ನವೇ ನಡೆಯಬೇಕಾಗಿರುತ್ತದೆ. ಅಫ್ಘಾನಸ್ಥಾನದೊಂದಿಗೆ 1919ರಲ್ಲಿ ಯುದ್ಧವು ಸಂಭವಿಸಿತ್ತು. ಯುದ್ಧಸೂಚನೆಯು ಸಂಭವವು ಇಲ್ಲದಿದ್ದಾಗ್ಯೂ, ಅಫ್ಘಾನಸ್ಥಾನದ ಜನಬಲವು 120 ಲಕ್ಷಗಳು ಮಾತ್ರವೇ ಇದ್ದಾಗ್ಯೂ ಆ ರಾಷ್ಟ್ರದ ಒತ್ತಿನಲ್ಲಿ ಬ್ರಿಟಿಷರು ಸದಾ ಯುದ್ಧಸನ್ನದ್ಧರಾಗಿಯೇ ಇರಬೇಕಾಗಿದೆ.

**ಕುಲಸ್ಥರು**

ಸಿಂಧುನದಿಗೆ ಪಶ್ಚಿಮದಲ್ಲಿ ಸರಹದ್ದಿನ ಪ್ರಾಂತವೆಂಬುದೂ, ಬಲೂಚಿಸ್ಥಾನವೆಂಬುದೂ ಇವೆ. ಕಾಬೂಲ್ ನದಿಗೆ ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಸರಹದ್ದಿನ ಪ್ರಾಂತಕ್ಕೆ ಸೇರಿದ ಹಾಗೆಯೇ ಇರುವ ಕ್ಷೇತ್ರಗಳಿವೆ. ಆ ಕ್ಷೇತ್ರಗಳು ಅಲ್ಲಿಯ ನಾನಾ ಕುಲಸ್ಥರಿಗೆ ಸೇರಿದವು. ಆ ಕುಲಸ್ಥರು ರಣ ಕುತೂಹಲಿಗಳಾಗಿರುವುದಲ್ಲದೆ ಬೆಟ್ಟಗುಡ್ಡಗಳಲ್ಲಿಯೇ ಜೀವನವನ್ನು ನಡೆಸತಕ್ಕವರು; ಅವರ ಸ್ವಂತ ದೇಶ ಫಲವತ್ತಾದುದಲ್ಲ

ವಾದುದರಿಂದ ಇತರ ಜನರನ್ನು ದರೋಡೆ ಮಾಡಿಯೇ ಜೀವನ ಮಾಡುತಲಿದ್ದವರು. ಅವರು ಇಸ್ಲಾಮಾ ಮತವನ್ನು ಅತಿ ನಿಷ್ಠೆಯಿಂದ ಅನುಸರಿಸುವವರು. ಈ ಕಾರಣಗಳಿಂದ ಅವರು ಯಾವಾಗ ಮೇರೆಯನ್ನತಿ ಕ್ರಮಿಸುವರೋ ಎಂದು ಹೊಂಚಿರಬೇಕಾಗಿರುತ್ತದೆ. ಈ ಕುಲಸ್ಥರು ಅಫ್ಘಾನಸ್ಥಾನದ ಅಮೀರನಿಗೂ ಅಧೀನರಲ್ಲದವರು. ಇವರನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಬ್ರಿಟಿಷರು ಹೆಚ್ಚು ಸಂಧಾನ ಸನ್ನಾಹಗಳನ್ನೇ ನಡೆಸಿದ್ದಾರೆ. ಸರಹದ್ದಿನ ಪ್ರಾಂತದಲ್ಲಿ ಆಡಳಿತದ ಮೇರೆಯು ಬೇರೆ; ರಾಷ್ಟ್ರ ಮೇರೆಯು ಬೇರೆ. ಕುಲಸ್ಥರ ಭುಕ್ತಿಗಳು ಅಫ್ಘಾನಸ್ಥಾನಕ್ಕೆ ಸೇರಿಲ್ಲವಾದರೂ ಬ್ರಿಟಿಷರ ಆಡಳಿತಕ್ಕೆ ಸೇರಿದ ವಿಭಾಗಗಳಲ್ಲ. ಅಲ್ಲಿಯ ಕುಲಸ್ಥರನ್ನು ವ್ಯವಸ್ಥೆಗೊಳಿಸಿ ಸ್ವಸ್ಥಾನದಲ್ಲಿಯೇ ಅಭಿವೃದ್ಧಿ ಪಡೆಯುವಂತೆ ಮಾಡಲು ಎಂತೆಂತಹ ಸನ್ನಾಹಗಳನ್ನು ನಡೆಸಬಹುದೋ ಅವುಗಳೆಲ್ಲವನ್ನೂ ಬ್ರಿಟಿಷರು ಕೈಕೊಂಡಿದಾರೆ. ವಾಯವ್ಯದ ರಾಜಕೀಯ ಮೇರೆಯನ್ನು ದೂರವಾಗಿ ನೆಲೆಗೊಳಿಸಿರುವುದಲ್ಲದೆ ದೇಶದ ಒತ್ತಿನಲ್ಲಿರುವ ಕ್ಷೇತ್ರಗಳ ಜನರಲ್ಲಿಯೂ ತಳಮಳವುಂಟಾಗದಂತೆ ವಿರ್ಪಡಿಸುವ ಮಾರ್ಗವನ್ನೇ ಬ್ರಿಟಿಷರು ಸಾಧಿಸಿದ್ದಾರೆ. ಈ ಮೇರೆಯನ್ನು ಈ ರೀತಿಯಲ್ಲಿ ವ್ಯವಸ್ಥೆಗೊಳಿಸಿದವರು ಮತ್ತೆ ಯಾರೂ ಇಲ್ಲ. ಬಲೂಚಿಸ್ಥಾನದ ಬಹುಭಾಗವನ್ನು ತಮ್ಮ ಸ್ವಾಧೀನದಲ್ಲಿಯೇ ಇಟ್ಟುಕೊಂಡು ಬೋಲನ್ ಕಣಿವೆಯ ಕಾಪಿಗಾಗಿ ಕ್ವೆಟ್ಟ ಎಂಬ ದುರ್ಗವನ್ನು ನಿರ್ಮಿಸಿದ್ದಾರೆ. ಕಾಬೂಲ್ ನದಿಯು ಹರಿಯುವೆಡೆಯಲ್ಲಿರುವ ಖೈಬರ್ ಕಣಿವೆಯ ಕಾಪಿಗಾಗಿ ಪೆಷಾವರ್ ಎಂಬುದನ್ನು ಭದ್ರಪಡಿಸಿದ್ದಾರೆ. ಎರಡು ಸ್ಥಳಗಳಲ್ಲಿಯೂ ಪಡೆವೀಡು (Cantonment)ಗಳನ್ನು ಸ್ಥಾಪಿಸಿದ್ದಾರೆ.

**ಸೈನ್ಯರಾಶಿ**

ಸಮುದ್ರದ ತೀರವನ್ನು ರಕ್ಷಿಸಲು ಜಲಸೈನ್ಯ ಅಥವಾ ಯುದ್ಧದ ಹಡಗುಗಳು ಅವಶ್ಯ. ಭೂಮಿಯ ಮೇರೆಗಳನ್ನೂ ಸಮುದ್ರದ ಮೇರೆಗಳನ್ನೂ ರಕ್ಷಿಸಲು ಬ್ರಿಟಿಷರಿಟ್ಟಿರುವ ಬಲವು ಮೂರು ಭಾಗಗಳಾಗಿರುವುದು : (1) ಸೈನ್ಯ, (2) ವಿಮಾನವ್ಯೂಹ, (3) ಜಲಸೈನ್ಯ. ಬ್ರಿಟಿಷರು ಪೋಷಿಸಿ

ಟ್ಟಿರುವ ಈ ಭಾಗಗಳಲ್ಲದೆ ದೇಶೀಯ ಸಂಸ್ಥಾನಗಳ ಅರಸರು ಪೋಷಿಸಿಟ್ಟಿರುವ ಸೈನ್ಯವು 37,000ದಷ್ಟುಂಟು. ಈ ಎಲ್ಲ ವಿಭಾಗಗಳೂ ಸಮಸ್ತ ಸೈನ್ಯಾಧಿಪತಿ (Commander-in-Chief) ಯೆಂಬ ಬ್ರಿಟಿಷ್ ಅಧಿಕಾರಿಯ ವಶದಲ್ಲಿವೆ. ಸಮಸ್ತ ಸೈನ್ಯಾಧಿಪತಿಯು ವೈಸ್‌ರಾಯಿಯ ಮಂತ್ರಾಲೋಚನ ಸಭೆಯಲ್ಲಿ ಒಬ್ಬನಾಗಿಯೂ ಇದ್ದು ಬಲಶಾಖೆಯ ಪರವಾಗಿ ನಡೆಯುವ ವಿಚಾರಗಳೆಲ್ಲಕ್ಕೂ ಬಾಧ್ಯನಾಗಿರುತ್ತಾನೆ.

**ಸೈನ್ಯ ವಿಭಾಗ**

ಸೈನ್ಯದಾಡಳಿತವು ಉತ್ತರ ದಕ್ಷಿಣ ಪೂರ್ವ ಪಶ್ಚಿಮಗಳೆಂಬುದಾಗಿ ನಾಲ್ಕು ಕ್ಷೇತ್ರ ವಿಭಾಗವನ್ನುಳ್ಳದಾಗಿದೆ. ಒಂದೊಂದು ಕ್ಷೇತ್ರಕ್ಕೂ ಒಬ್ಬ ಸೈನ್ಯಾಧಿಪತಿಯಿರುವನು. ಬರ್ಮಾದೇಶವು ಪ್ರತ್ಯೇಕವಾದ ಕ್ಷೇತ್ರವಾಗಿಯೇ ಇದೆ. ಒಟ್ಟು ಸೈನ್ಯದಲ್ಲಿ 58,000 ಭಾಗವು ಬ್ರಿಟಿಷ್ ಭಾಗ; ಅಂದರೆ ಅದರಲ್ಲಿರುವ ಅಧಿಕಾರಿಗಳೂ ಭಟರೂ ಎಲ್ಲರೂ ಬ್ರಿಟಿಷರು. ಭಾರತೀಯವೆಂಬುದು ಇನ್ನೊಂದು ಭಾಗ; ಈ ಭಾಗದಲ್ಲಿ 1,32,000 ಸೈನಿಕರು ಸದಾ ಸಿದ್ಧರಾಗಿಯೂ, 34,000 ಸೈನಿಕರು ಸಮಯೋಪಯುಕ್ತರಾಗಿ (Reserve) ಯೂ ಇರುತ್ತಾರೆ. ಈ ಭಾರತೀಯ ವಿಭಾಗದಲ್ಲಿ ಅಧಿಕಾರಿಗಳಾಗಿರುವವರು ಬಹುಮಟ್ಟಿಗೆ ಬ್ರಿಟಿಷರು. ಈ ಸೈನ್ಯದ ಆಡಳಿತಕ್ಕಾಗಿರುವ ಕಾರ್ಯಾಲಯಗಳಲ್ಲಿರುವವರನ್ನೂ ಸೇರಿಸಿಕೊಂಡು ಒಟ್ಟು ಸಂಖ್ಯೆಯೆಷ್ಟೆಂದು ನೋಡಿದಲ್ಲಿ 2,12,000 ಆಗುತ್ತದೆ; ಅಥವಾ 1,500 ಜನರಿಗೊಬ್ಬ ಸೈನಿಕನಾದಂತಾಯಿತು. ಅವರಲ್ಲಿ ರಣಸಿದ್ಧರಾದವರು 1,48,000. ಇವರಲ್ಲದೆ 32,000 ಸಂಖ್ಯೆಯುಳ್ಳ ಸಹಾಯಕ ಸೈನ್ಯ (Auxiliary Force) ವೆಂಬುದಿದೆ; ಅದರಲ್ಲಿ ಸೇರುವವರೆಲ್ಲರೂ ಬಿಳಿಯರೇ ಆಗಿರುತ್ತಾರೆ. ಕ್ಷೇತ್ರ ಸೈನ್ಯ (Territorial Force) ಎಂಬುದೂ ಒಂದುಂಟು; ಅದರಲ್ಲಿ 15,000 ಸೈನಿಕರೂ ಅಧಿಕಾರಿಗಳೂ ಇರುತ್ತಾರೆ. ಈ ಕ್ಷೇತ್ರ ಸೈನ್ಯವೆಂಬುದರಲ್ಲಿ ಪ್ರಾಂತ ಸೈನ್ಯಗಳೆಂಬುವೂ, ಚಿಕಿತ್ಸಾ ಶಾಖೆಯೆಂಬುದೂ, ವಿಶ್ವವಿದ್ಯಾನಿಲಯಗಳಲ್ಲಿ ಜಮೂ ಶಿಕ್ಷಣ ಪಡೆದ ಗುಂಪುಗಳೂ ಸೇರಿರುತ್ತವೆ.

ಆಕಾಶ ಸೈನ್ಯ ವಿಭಾಗ ಅಥವಾ ವಿಮಾನಗಳ ಪಡೆಯೆಂಬುದೂ ಸಮಸ್ತ ಸೈನ್ಯಾಧಿಪತಿಯ ಅಧಿಕಾರಕ್ಕೆ ಒಳಗಾಗಿ ರುತ್ತದೆ. ಅದಕ್ಕೇ ಪ್ರತ್ಯೇಕವಾಗಿ ವಿಮಾನ ವ್ಯೂಹಾಧಿಪತಿ (Air Marshal) ಯು ಸಮಸ್ತ ಸೈನ್ಯಾಧಿಪತಿಯ ಅಧೀನನಾಗಿರುತ್ತಾನೆ. ಈ ಪಡೆಯಲ್ಲಿರುವ ಅನೇಕ ಬಗೆಗಳ ವಿಮಾನಗಳ ಒಟ್ಟು ಸಂಖ್ಯೆಯು 215ರಷ್ಟು. ಕರಾಚಿಯಲ್ಲಿ ಉಗ್ರಾಣವೂ ಲಾಹೋರಿನಲ್ಲಿ ವಿಮಾನಗಳ ಗುಲ್ಮವೂ ಉಂಟು. ವಿಮಾನ ಗಳೆಲ್ಲವೂ ಸಾಮಾನ್ಯವಾಗಿ ಅಂಬಾಲಾ ನಗರದಿಂದ ಕೈಬರ್ವರೆಗಿರುವ ಸರಹದ್ದಿನ ಬಳಿಯಲ್ಲಿಯೇ ಇರುತ್ತವೆ.

ವಿಮಾನ ವ್ಯೂಹ

ಭರತವರ್ಷಕ್ಕಾಗಿಯೇ ಇರುವ ಜಲಸೈನ್ಯವು ದೊಡ್ಡದಾಗಿಲ್ಲ. ವಿಶಾಲವಾದ ಹಿಂದೂಸಾಗರದ ಮಾರ್ಗಗಳನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿರುವುದರಿಂದಲೂ, ಆ ಸಾಗರದ ತೀರವನ್ನು ಪಡೆದಿರುವ ಇತರ ಯಾವ ರಾಷ್ಟ್ರವೂ ಗಣ್ಯವಾದ ಜಲಸೈನ್ಯವನ್ನು ಕಟ್ಟಿಕೊಂಡಿಲ್ಲದೆ ಇರುವುದರಿಂದಲೂ ಬ್ರಿಟಿಷರು ದೊಡ್ಡದೆನಿಸುವ ಜಲಸೈನ್ಯವನ್ನು ಇಲ್ಲಿಡಲು ಅವಶ್ಯ ತೋರಲಿಲ್ಲ. ಭಾರತೀಯ ಜಲಸೈನ್ಯವೆಂಬುದೊಂದುಂಟು. 1929 ರಲ್ಲಿ ಅದರ ಪದವಿ ಗೌರವಗಳು ಸುಧಾರಣೆಗೊಳಗಾಗಿ ವ್ಯವಸ್ಥೆಯು ಪ್ರಾಪ್ತಿಯಾಯಿತು. ಅದರಲ್ಲಿ ಒಟ್ಟು 125 ಹಿರಿಯ ಅಧಿಕಾರಿಗಳೂ ಬಗೆಬಗೆಯ 16 ಹಡಗುಗಳೂ ಇವೆ. ಅವೆಲ್ಲಕ್ಕೂ ಅಧಿಪತಿಯಾಗಿ ರಿಯರ್ ಅಡ್ಮಿರಲ್ (Rear-Admiral) ಎಂಬ ಹುದ್ದೆದಾರನು ಸಮಸ್ತ ಸೈನ್ಯಾಧಿಪತಿಯ ಆಜ್ಞೆಗೊಳಗಾಗಿಯೇ ಇರುತ್ತಾನೆ.

ನೌಕಾ ವ್ಯೂಹ

ಇತರ ದೇಶಗಳೊಂದಿಗೆ ಹೋಲಿಸಿ ನೋಡಿದಲ್ಲಿ ಭರತವರ್ಷದ ಮೇರೆಗಳ ರಕ್ಷಣೆಯು ಕಷ್ಟವೆಂದು ತೋರುವುದಿಲ್ಲ. ಮೇರೆಗಳನ್ನು ರಕ್ಷಿಸುವ ಕರ್ತವ್ಯವು ಪಡೆವೀಡುಗಳ ಅಥವಾ ದುರ್ಗಗಳ ನಿರ್ಮಾಣದಿಂದಲೇ ಕೈಗೂಡು ವುದಿಲ್ಲ; ಅನ್ಯ ರಾಷ್ಟ್ರ ಸಂಬಂಧ ವ್ಯವಹಾರಗಳ ಬಲಾಬಲಗಳಿಂದ ಕೈಗೂಡುವುದು. ಭರತವರ್ಷವನ್ನು ಆಕ್ರಮಿಸಲು ಅನ್ಯ ರಾಷ್ಟ್ರದವರು

ಕ್ಯಾಬಿನೆಟ್ಟಿನ ಎಚ್ಚರ

ಯಾರಾದರೂ ಪ್ರಯತ್ನಪಟ್ಟರೆ ಸಂಯುಕ್ತರಾಜ್ಯದ ಮಂತ್ರಿಗಳು ಅವರನ್ನು ಶತ್ರುಗಳಂತೆ ಕಾಣುವರು. ಭರತವರ್ಷದ ರಕ್ಷಣೆಯಲ್ಲಿ ಇಲ್ಲಿರುವ ಸೈನ್ಯಬಲಕ್ಕಿಂತಲೂ ಸಂಯುಕ್ತರಾಜ್ಯದ ಬಲವೇ ಮುಖ್ಯವಾದುದು. ಭರತವರ್ಷದ ಪರವಾಗಿ ಯುದ್ಧಗಳನ್ನು ನಡೆಸುವುದೂ ಬಿಡುವುದೂ ಸಂಯುಕ್ತರಾಜ್ಯದ ಮಂತ್ರಿಮಂಡಲಿಗೆ ಸೇರಿದ್ದು. ಭಾರತೀಯ ಭದ್ರತೆಗಾಗಿ ಬ್ರಿಟಿಷರು ಇತರರೊಡನೆ ನಡೆಸಿದ ಕರಾರುಗಳ ಅಥವಾ ಯುದ್ಧಗಳ ವಿವರವನ್ನು ಇತಿಹಾಸದಲ್ಲಿ ಕಾಣಬಹುದು. ಈ ರೀತಿಯಲ್ಲಿ ಭರತವರ್ಷದ ರಕ್ಷಣೆಯ ಹೊಣೆಗಾರಿಕೆಯು ಸಂಯುಕ್ತ ರಾಜ್ಯದ ಮಂತ್ರಿಮಂಡಲಿಗೆ ಸೇರಿನುದು; ಭಾರತೀಯ ಜನರ ಕ್ಷೇಮಕ್ಕೆ ಸಂಯುಕ್ತರಾಷ್ಟ್ರದ ಬಲವೇ ಬೆಂಬಲ.

ರಕ್ಷಕ ಕರ್ತವ್ಯದಲ್ಲಿ ಸೈನ್ಯ ಪೋಷಣೆಯೂ, ಅನ್ಯ ರಾಷ್ಟ್ರಗಳೊಡನೆ ಸಂಧಿವಿಗ್ರಹಗಳೂ ಒಂದು ಭಾಗ. ದೇಶದೊಳಗೆ ದಂಗೆಯೇಳದಂತೆಯೂ ದುಷ್ಟರಿಗೆ ಅವಕಾಶವಿಲ್ಲದಂತೆಯೂ ಏರ್ಪಡಿಸುವುದು ಇನ್ನೊಂದು ಭಾಗ.

**ದುಷ್ಟ ಶಿಕ್ಷಣ**

ಶಾಂತಿಯು ಸರ್ವ ಸೌಭಾಗ್ಯಕ್ಕೂ ಮೂಲವಾದುದರಿಂದ ಆಡಳಿತದಲ್ಲಿ ಪ್ರಧಾನ ಲಕ್ಷ್ಯವು ಶಾಂತಿ ರಕ್ಷಣೆಯೇ ಆಗಿರುತ್ತದೆ. ದಂಗೆಗಳು ಸಂಭವಿಸಿದರೆ ಶಾಂತಿ ಭಂಗವಾದಂತೆಯೇ ದುಷ್ಟವಾದ ಕೆಲಸವನ್ನು ಒಬ್ಬನು ಮಾಡಿದರೂ ಶಾಂತಿ ಭಂಗವಾಗುತ್ತದೆ. ಶಾಂತಿ ಭಂಗಕ್ಕೆ ಕಾರಣರಾದವರೆಲ್ಲರನ್ನೂ ದಂಡಕ್ಕೆ ಗುರಿಮಾಡುವುದು ಪೂರ್ವಕಾಲದಿಂದ ಆಡಳಿತದ ಭಾಗವಾಗಿದೆ. ರಾಷ್ಟ್ರಕ್ಕೆ ಶಾಂತಿಯು ಅತ್ಯವಶ್ಯಕವಾದುದರಿಂದ ಶಾಂತಿಗೆ ಭಂಗವನ್ನುಂಟುಮಾಡಿದವನು ರಾಷ್ಟ್ರಕ್ಕೆ ಅಹಿತವನ್ನಾಚರಿಸಿದಂತೆಯೇ ಪರಿಣಮಿಸುವುದು. ಇದಕ್ಕೇ ಕಳ್ಳಕಾಕರನ್ನು ರಾಷ್ಟ್ರಕಂಟಕರೆಂದು ಕರೆಯುತಕ್ಕದ್ದು. ದುಷ್ಟಶಿಕ್ಷಣವೆಂಬ ಈ ಭಾಗದ ಕರ್ತವ್ಯವನ್ನು ಸರ್ಕಾರವು ನಿರ್ವಹಿಸಲು ಸಾಧಕಗಳು ಮೂರೆಂಬುದಾಗಿ ಭಾವಿಸಬಹುದು: (1) ವಿಧಿ, (2) ವಿಧಿಗಳನ್ನನುಸರಿಸಿ ನ್ಯಾಯವನ್ನು ಸ್ಥಾಪಿಸತಕ್ಕ ಅಧಿಕಾರಿ ವರ್ಗ, (3) ರಾಷ್ಟ್ರಕಂಟಕರನ್ನು ಹಿಡಿದು ನ್ಯಾಯಸ್ಥಾನಗಳಿಗೊಪ್ಪಿಸುವ ಕಂಟಕಗ್ರಾಹಿಗಳ ಶಾಖೆ ಅಥವಾ ಪೋಲೀಸ್ ಇಲಾಖೆ. ಕ್ರಿಮಿನಲ್ ಲಾ

(Criminal Law) ಎಂಬುದೇ ಆ ವಿಧಿ; ಅಪರಾಧವನ್ನು ನಿಷ್ಕರ್ಷೆಮಾಡಿ ಅದಕ್ಕೆ ತಕ್ಕ ದಂಡನೆಯನ್ನು ಗೊತ್ತುಮಾಡುವುದು ಆ ವಿಧಿಯನ್ನನುಸರಿಸಿಯೇ. ಸಾಧಾರಣವಾಗಿ ಸಿವಿಲ್ ಮತ್ತು ಕ್ರಿಮಿನಲ್ ಎಂಬ ಇಂಗ್ಲೀಷು ಶಬ್ದಗಳನ್ನು ನಾವೆಲ್ಲರೂ ಉಪಯೋಗಿಸುತ್ತೇವೆ.

**ನ್ಯಾಯ ವಿಧಿ**

ಎರಡೂ ನ್ಯಾಯಶಾಸ್ತ್ರದ ವಿಭಾಗಗಳೇ ಆದರೂ ಬೇರೆ ಬೇರೆ. ಸ್ವತ್ತಿನ ಸಂಬಂಧವಾದ ವಿಚಾರಗಳು, ಕರಾರುಗಳು, ಸಾಲದ ಪತ್ರಗಳು, ದಾಯ ಭಾಗ, ವಿವಾಹ ಧರ್ಮ ಮುಂತಾದವು **ಸಿವಿಲ್** ಎನ್ನಿಸತಕ್ಕವು. ಮೇಲೆ ಬಿದ್ದು ಹೊಡೆಯುವುದು, ಕದಿಯುವುದು, ಸುಳ್ಳುಪತ್ರ ಬರೆಯುವುದು, ಮಾನಭಂಗ ಮಾಡುವುದು, ಹತ್ಯ ಮುಂತಾದುವು **ಕ್ರಿಮಿನಲ್** ಎನ್ನಿಸತಕ್ಕವು. ಕ್ರಿಮಿನಲ್ ಎಂಬುದನ್ನು ಸಾಹಸ ವಿಭಾಗವೆಂದೂ, ಸಿವಿಲ್ ವಿಭಾಗವನ್ನು ಮಮತ್ವ (Property) ಭಾಗವೆಂದೂ ಸ್ಥೂಲವಾಗಿ ಭಾವಿಸಬಹುದು. ಸಿವಿಲ್ ವಿಭಾಗದಲ್ಲಿ ನ್ಯಾಯವು ಯಾವ ಪಕ್ಷದಲ್ಲಿರುವುದೆಂದು ನ್ಯಾಯಾಧಿಕಾರಿಯು ನಿಷ್ಕರ್ಷೆ ಮಾಡಬೇಕು. ಕ್ರಿಮಿನಲ್ ವಿಭಾಗದಲ್ಲಿ ಶಾಂತಿ ಭಂಗಕ್ಕೆ ಕಾರಣರಾದವರನ್ನು ಕಂಟಕಗ್ರಾಹಿಗಳು ಹಿಡಿದುತಂದು ವಿಚಾರಣೆಗೆ ಗುರಿಮಾಡುವರು; ಆಗ ದಂಡಾಧಿಕಾರಿ(Magistrate)ಯು ಆಪಾದಿತನಾದವನು ವಾಸ್ತವವಾಗಿಯೂ ಅಪರಾಧಿಯೇ

**ವಿಚಾರಣೆಯ ನೀತಿ**

ಎಂಬುದನ್ನು ಕೂಲಂಕಷವಾಗಿ ಪರೀಕ್ಷಿಸಿ ಅಪರಾಧವು ದೃಢವಾದಮೇಲೆ ತಕ್ಕ ಶಿಕ್ಷೆಯನ್ನು ವಿಧಿಗೆ ಅನುಸಾರವಾಗಿ ವಿಧಿಸಬೇಕು. ಆಪಾದಿತನು ಎದುರಿಗೆ ಬಂದೊಡನೆಯೆ ಅವನು ಅಪರಾಧಿಯೆಂದು ಭಾವಿಸಿ 'ಈತನ ನಿರಪರಾಧಿತನವು ಸಿದ್ಧವಾದರೆ ಸರಿ. ಇಲ್ಲವಾದರೆ ದಂಡನೆಯನ್ನು ವಿಧಿಸುವೆನು' ಎಂದು ಕರ್ತವ್ಯವನ್ನು ನಡೆಸಿದಲ್ಲಿ ನ್ಯಾಯ ನೀತಿಯೇ ಇರುವುದಿಲ್ಲ; ಚೋರಗ್ರಾಹಕರಿಗೆ ದಂಡಾಧಿಕಾರವನ್ನೊಪ್ಪಿಸಿದರೆ ಹೇಗಾದೀತೋ ಹಾಗೆಯೇ ಪರಿಣಮಿಸುವುದು. ಚೌರ್ಯ ಮಾಡಿದುದನ್ನು ಚೋರಗ್ರಾಹಕರು ಸಾಕ್ಷಿಸಹಿತ ಸ್ಥಾಪಿಸಿದ ಹೊರತು ಆಪಾದಿತನು ಚೋರನೆಂದು ದೃಢಪಡುವುದಿಲ್ಲ.

ವಿಧಿಯೂ ದಂಡವಿಧಾನವೂ ಈ ವಿಷಯಗಳಲ್ಲಿ ನ್ಯಾಯತತ್ವಗಳನ್ನು ಅನುಸರಿಸಬೇಕು.

**ಶಾಂತಿ ಭಂಗ**

ರಾಷ್ಟ್ರದಲ್ಲಿ ಎಂತಹ ಸಾಹಸ ಕೃತ್ಯವು ನಡೆದರೂ ಶಾಂತಿ ಭಂಗವಾಯಿತೆಂದೇ ಭಾವಿಸಬೇಕು. ಪಾತ್ರೆಗಳನ್ನು ಕದ್ದ ಕಳ್ಳನು ನಷ್ಟಪಟ್ಟವನಲ್ಲಿ ಮಾತ್ರವೇ ಅಪರಾಧವನ್ನೆಸಗಿರುವುದಿಲ್ಲ, ಒಟ್ಟು ಸಮಾಜಕ್ಕೇ ಅಪರಾಧವನ್ನು ಮಾಡಿ ರಾಷ್ಟ್ರಕಂಟಕನೆನಿಸುತ್ತಾನೆ. ಪ್ರತಿ ಸಾಹಸ ಕೃತ್ಯವೂ ರಾಷ್ಟ್ರ ವಿರೋಧವೆಂದೇ ನಿಶ್ಚಿತವಾಗುವುದು. ಆತ್ಮಹತ್ಯೆ ಮಾಡಿಕೊಳ್ಳುವವನು ಇತರರಿಗೆ ನಷ್ಟವನ್ನು ಮಾಡದೆ ತನ್ನ ಪ್ರಾಣವನ್ನೇ ತಾನು ತೆಗೆದರೂ ಶಾಂತಿ ಭಂಗವನ್ನುಂಟುಮಾಡುವುದಲ್ಲದೆ ರಾಷ್ಟ್ರದ ಮುಖ್ಯೈಶ್ವರ್ಯವಾದ ಜನಬಲವನ್ನು ನಷ್ಟಪಡಿಸುತ್ತಾನೆ. ಆದ್ದರಿಂದ ಸಾಹಸ ಅಥವಾ ಅಪರಾಧವೆಂಬ ಕೃತ್ಯಗಳೆಲ್ಲವೂ ರಾಷ್ಟ್ರ ಸಮುಖದಲ್ಲಿ ನಡೆದ ಅಕೃತ್ಯಗಳೆಂದೇ ನಿರ್ಣೀತವಾಗುತ್ತವೆ.

**ದಂಡನೆಯ ಗುರಿ**

ಅಪರಾಧಿಗಳನ್ನು ಹಿಡಿದು ದಂಡನೆಗೆ ಗುರಿಮಾಡುವ ವಿಧಿಯಲ್ಲಿ ಅಡಗಿರುವ ನ್ಯಾಯವೇನು? "ನನ್ನ ತಲೆಗೊಂದೇಟು ಹೊಡೆದವನ ಬುರುಡೆಗೆ ನಾನೂ ಒಂದೇಟು ಹೊಡೆಯುತ್ತೇನೆ" ಎಂಬ ಆಗ್ರಹವು ಸ್ವಾಭಾವಿಕ. ಇಲ್ಲಿ ತೋರುವುದು ಪ್ರತಿಕ್ರಿಯಾ ದೃಷ್ಟಿ ಮಾತ್ರ. ಒಬ್ಬನು ಒಂದು ಹತ್ಯವನ್ನು ನಡೆಸಿದಾಗ ಅದಕ್ಕೆ ಪ್ರತಿಕ್ರಿಯೆಯಾಗಿ ಮತ್ತೊಂದು ಹತ್ಯವನ್ನು ನಡೆಸುವುದರಿಂದ ರಾಷ್ಟ್ರಕ್ಕೆ ಉಭಯ ನಷ್ಟವುಂಟಾಗುವುದಲ್ಲದೆ ಸಭ್ಯತೆ ಯಿರುವುದಿಲ್ಲ. ದಂಡನೆಯನ್ನೋ ಶಿಕ್ಷೆಯನ್ನೋ ವಿಧಿಸುವಾಗ ಪ್ರತಿ ಕ್ರಿಯೆಯು ಉದ್ದೇಶಪಡುವುದು ಸಭ್ಯತೆಯ ಲಕ್ಷಣವೇ ಅಲ್ಲ. 'ಅಪರಾಧಿ ಯನ್ನು ಶಿಕ್ಷೆಗೆ ಗುರಿಮಾಡಿದರೆ ಪುನಃ ಅಪರಾಧವನ್ನು ಅವನು ಮಾಡದಂತಾಗುವುದು; ಅವನೇ ಅಲ್ಲದೆ ಅವನ ಗತಿಯನ್ನು ತಿಳಿದವರೆಲ್ಲರೂ ಶಿಕ್ಷೆಗೆ ಹೆದರಿ ಅಪರಾಧವನ್ನು ಮಾಡದೆ ಇರುವರು' ಎಂಬ ಎರಡನೆ ವಾದವೂ ಉಂಟು. ಮೊದಲನೆಯದು **ಪ್ರತಿಕ್ರಿಯಾವಾದ**ವಾದರೆ ಇದು

**ನಿವಾರಣಾವಾದ**. ಮೂರನೆಯ ವಾದವೂ ಉಂಟು ; ಅದು ಸಂಸ್ಕಾರಕ ವಾದ ಅಥವಾ ಸುಧಾರಕವಾದ. ಸಭ್ಯತೆಯನ್ನು ಪಡೆದ ಎಲ್ಲ ರಾಷ್ಟ್ರಗಳಲ್ಲಿಯೂ **ಸುಧಾರಕವಾದ**ವೆಂಬುದೇ ಆಚರಣೀಯವಾಗಿದೆ. ಅಪರಾಧವನ್ನು ಮಾಡಿದವನು ಆರ್ಥಿಕ ಸ್ಥಿತಿಯಿಂದ ಪ್ರೇರಿತನಾಗಿಯೋ ಮನೋವಿಕಾರಗಳಿಂದ ಪ್ರೇರಿತನಾಗಿಯೋ ತಪ್ಪಿತಸ್ಥನಾಗಿರುತ್ತಾನೆ. ಆರ್ಥಿಕ ಕಾರಣವೇ ಆದಲ್ಲಿ ಅಪರಾಧಿಗೆ ಯಾವುದಾದರೂ ಉದ್ಯೋಗವನ್ನು ಹೇಳಿಕೊಟ್ಟು ಸಭ್ಯನನ್ನಾಗಿ ಮಾಡಿದರೆ ರಾಷ್ಟ್ರದ ಹಿತಸಾಧನೆಯಾಗುವುದು ; ಬರೀ ಶಿಕ್ಷೆಯನ್ನೇ ವಿಧಿಸಿದರೆ ಅಪರಾಧಿಯು ಸಮಾಜಕ್ಕೆ ಬದ್ಧವೈರಿಯಾಗಿ ಪರಿಣಮಿಸುವನು. ದ್ವೇಷ, ಅಸೂಯೆ, ದುರಾಸೆ ಮುಂತಾದ ಮನೋವಿಕಾರಗಳಿಗೆ ತುತ್ತಾಗಿ ಸಾಹಸಕ್ಕೆ ತೊಡಗುವವರನ್ನು ರೋಗಿಗಳಂತೆ ಕಾಣುವುದು ಉತ್ತಮ. ಈ ನೀತಿಯನ್ನು ಸ್ವೀಕರಿಸಿದ ರಾಷ್ಟ್ರಗಳಲ್ಲಿ ಸೆರೆಮನೆಗಳನ್ನು ಶಿಕ್ಷಣಾಲಯಗಳಾಗಿ ಮಾರ್ಪಡಿಸಿದ್ದಾರೆ; ಮರಣ ಶಿಕ್ಷೆಯನ್ನು ನಿಷಿದ್ಧವೆಂಬುದಾಗಿ ಭಾವಿಸಿದ್ದಾರೆ.

ಏಕರೂಪ

ರಕ್ಷಣ ಕರ್ತವ್ಯ ಪಾಲನೆಯಲ್ಲಿ ಸಾಹಸ ವಿಭಾಗದ ವ್ಯವಸ್ಥೆಯಲ್ಲಿ ದಂಡಾಧಿಕಾರಿಗಳೂ, ಪೋಲೀಸ್ ಪಡೆಯೂ, ನ್ಯಾಯವನ್ನೂ ರಾಷ್ಟ್ರಹಿತವನ್ನೂ ಬಿಡದ ವಿಧಿಗಳ ಸಂಗ್ರಹವೂ ಅವಶ್ಯಕ. ವಿಧಿಗಳ ವಿಚಾರದಲ್ಲಿ ಮುಖ್ಯವಾಗಿರತಕ್ಕ ಲಕ್ಷಣವೊಂದನ್ನು ನಾವು ಗಮನಿಸಬೇಕು. ರಾಷ್ಟ್ರಪಾಲನೆಯಲ್ಲಿ **ದಂಡವಿಧಿ**ಯೆಂಬುದು ರಾಷ್ಟ್ರದ ಎಲ್ಲೆಡೆಗಳಲ್ಲಿಯೂ **ಏಕರೀತಿ**ಯಾಗಿಯೂ **ಏಕಮುಖ**ವಾಗಿಯೂ ಇರಬೇಕು. ಒಂದೊಂದು ಪ್ರಾಂತದಲ್ಲಿ ಒಂದೊಂದು ಬಗೆಯಾದ ದಂಡವಿಧಾನವು ರೂಢಿಯಾಗಿದ್ದ ಪಕ್ಷದಲ್ಲಿ ಶಾಂತಿ ಭಂಗವೇ ತೋರಿಕೊಳ್ಳುವುದು. ಹಂತಕನಾದವನಿಗೆ ಒಂದೆಡೆಯಲ್ಲಿ ಗಲ್ಲು, ಮತ್ತೊಂದೆಡೆಯಲ್ಲಿ ದಂಡ ಅಥವಾ ಜುಲ್ಮಾನೆ ಮಾತ್ರ ಶಿಕ್ಷೆಯಾದ ಪಕ್ಷದಲ್ಲಿ ಹಂತಕರಿಗೆ ಕೆಲವೆಡೆಗಳಲ್ಲಿ ಪ್ರೋತ್ಸಾಹವು ದೊರೆತಂತಾಗುವುದಲ್ಲದೆ ನ್ಯಾಯತತ್ವವೇ ನೆಲೆಸಿದಂತಾಗುವುದಿಲ್ಲ. ರಾಷ್ಟ್ರದಲ್ಲಿ ದಂಡವಿಧಾನವು ಸರ್ವತ್ರ ಒಂದೇರೀತಿಯಾಗಿರತಕ್ಕದ್ದು ರಾಷ್ಟ್ರ ಪಾಲನೆಯಲ್ಲಿ ಮುಖ್ಯವಾದ ಅಂಶ.

ಇಂಗ್ಲಿಷ್ ಮಾತಿನಲ್ಲಿ ಮ್ಯಾಜಿಸ್ಟ್ರೇಟ್ ಎಂಬುದಕ್ಕೆ ದಂಡಾಧಿಕಾರಿಯೆಂದೇ ಅರ್ಥವಾಗುವುದು. ಜಡ್ಜ್ ಎಂದರೆ ಸಿವಿಲ್ ವಿಚಾರಣೆಗಳಲ್ಲಿ ನ್ಯಾಯ ನಿರ್ಣಯ ಮಾಡತಕ್ಕ ನ್ಯಾಯಾಧಿಕಾರಿ ಎಂದರ್ಥವಾಗುವುದು.

ನ್ಯಾಯ ಸ್ಥಾಪನೆ

ಸಿವಿಲ್ ವಿಚಾರಗಳೆಂಬುವು ಸಾಮಾನ್ಯವಾಗಿ ಜನರಲ್ಲಿಯೇ ಪರಸ್ಪರವಾಗಿ ತೋರಿಕೊಳ್ಳುವ ವ್ಯಾಜ್ಯಗಳು. ಕ್ರಿಮಿನಲ್ಲಿನಲ್ಲಾದರೆ ಅಪಾದಿತನೊಂದು ಪಕ್ಷ, ರಾಷ್ಟ್ರದ ಅಧಿಕಾರಿಗಳು ಮತ್ತೊಂದು ಪಕ್ಷ. ಸಿವಿಲ್ಲಿನಲ್ಲಿ ವಾದಿ ಪ್ರತಿವಾದಿಗಳು ಬಹುಶಃ ಪೌರರಾಗಿಯೇ ಇರುತ್ತಾರೆ. ಎರಡು ಬಗೆಯ ವ್ಯವಹಾರಗಳಲ್ಲಿಯೂ ನ್ಯಾಯಶಾಸ್ತ್ರವನ್ನೂ ವಿಧಿಗಳ ಬಲಾಬಲಗಳನ್ನೂ ತೋರುವ ನ್ಯಾಯವಾದಿಗಳು ನ್ಯಾಯತೀರ್ಮಾನದಲ್ಲಿ ಸಹಾಯಕರಾಗುತ್ತಾರೆ. ಶಾಂತಿರಕ್ಷಣೆಯ ಕರ್ತವ್ಯವು ದಂಡಾಧಿಕಾರಿ ವರ್ಗದವರಿಂದ ನೆರವೇರುತ್ತದೆ; ನ್ಯಾಯಸ್ಥಾಪನೆಯು ನ್ಯಾಯಾಧಿಕಾರಿಗಳಿಂದ ಒಡಗೂಡುತ್ತದೆ. ನ್ಯಾಯವೇ ರಾಷ್ಟ್ರದ ತಳಹದಿಯಾದುದರಿಂದ ರಾಷ್ಟ್ರದಲ್ಲಿರತಕ್ಕ ನ್ಯಾಯಸ್ಥಾನಗಳು ಪವಿತ್ರ ಸ್ಥಾನಗಳೆಂದೆನಿಸುತ್ತವೆ.

ನ್ಯಾಯಾಧಿಕಾರಿ ವರ್ಗ

ನ್ಯಾಯ ಸ್ಥಾಪನೆಯನ್ನು ಮಾಡುವ ಅಂಗವು ನ್ಯಾಯಾಂಗವೆಂಬ ಹೆಸರನ್ನು ಆಗಲೇ ಪಡೆಯಿತು. ಎಂತೆಂತಹ ಸಮಯ ಸಂದರ್ಭವಾದರೂ ನ್ಯಾಯಾಧಿಕಾರಿಗಳು ಶುದ್ಧವೂ ಪವಿತ್ರವೂ ಆದ ನ್ಯಾಯತತ್ವವನ್ನೇ ಅನುಸರಿಸುತ್ತಲಿರಬೇಕಾದುದು ರಾಷ್ಟ್ರದ ಸುಸ್ಥಿತಿಗೆ ಅತ್ಯವಶ್ಯಕ. ನ್ಯಾಯಾಧಿಕಾರಿಗಳೇ ದುಷ್ಟರಾದರೆ ರಾಷ್ಟ್ರವು ದುರ್ಗತಿಯನ್ನು ಹೊಂದುವುದು. ನ್ಯಾಯಾಧಿಕಾರಿಗಳು ಸ್ಥಿರಚಿತ್ತರಾಗಿರತಕ್ಕದ್ದಲ್ಲದೆ ನಿರ್ಭೀತರಾಗಿಯೂ ಸುಚರಿತ್ರರಾಗಿಯೂ ಇರುವುದು ಪ್ರಧಾನವಾದುದು. ಆಸೆಯ ಮೋಹಕ್ಕೆ ಮನಸೋಲದೆ ನ್ಯಾಯಾಧಿಕಾರಿಗಳು ಪ್ರವರ್ತಿಸುತ್ತಲಿರುವಂತೆ ಏರ್ಪಡಿಸಲು ನ್ಯಾಯಾಧಿಕಾರಿಗಳಿಗೆ ಹೆಚ್ಚು ಹೆಚ್ಚು ವೇತನಗಳನ್ನು ಕೊಡಿಸುವುದುಂಟು. ಭಾರಿ ಸಂಬಳಗಳನ್ನು ಗೊತ್ತುಮಾಡಿಕೊಟ್ಟು ಇತರ ಅಧಿಕಾರಸ್ಥರ ಹಂಗೇ ಇಲ್ಲದಂತೆ ಸ್ವಾತಂತ್ರ್ಯವನ್ನು ಒದಗಿಸಿಕೊಟ್ಟರೂ ಕೂಡ ಲಂಚಕೋರತನವು ನಿಂತುಹೋಗುವುದೆಂದು

ಹೇಳಲು ಸಾಧ್ಯವಿಲ್ಲ. ಕೆಲವು ರಾಷ್ಟ್ರಗಳಲ್ಲಿ ನ್ಯಾಯಾಧಿಕಾರವು ಕೆಲವು ಕ್ಷೇತ್ರಗಳಲ್ಲಿ ಗೌರವ ಮಾತ್ರದಿಂದಲೇ ಕೂಡಿರುವಂತೆ ಏರ್ಪಾಡಿದೆ. ರಾಷ್ಟ್ರ ಭಕ್ತಿಯಿಂದ ಪ್ರೇರಿತನಾಗಿ ಪ್ರತಿಫಲವನ್ನು ನಿರೀಕ್ಷಿಸದೆ ಗೌರವಕ್ಕಾಗಿ ಅಧಿಕಾರವನ್ನು ವಹಿಸುವುದರಲ್ಲಿ ಎಷ್ಟೋ ಮೇಲ್ಮೆಯಿರುವುದು. ಹಾಗೆ ಕಾರ್ಯನಿರತರಾದಲ್ಲಿ ಕೇವಲ ಪುಣ್ಯಲಾಭಕ್ಕಾಗಿ ಮಾಡಿದ ಕೆಲಸದಂತೆ ತೃಪ್ತಿಕರವಾಗಿಯೇ ಕಾರ್ಯ ನೆರವೇರುವುದು. ಆದರೆ ಕೆಲಸಕಾರ್ಯಗಳೆಲ್ಲ ವನ್ನೂ ಆ ರೀತಿಯಲ್ಲಿ ಗೌರವದಾಸೆಯಿಂದಲೇ ನಿರ್ವಹಿಸಲು ಸಾಧ್ಯ ವಾಗುವುದಿಲ್ಲ.

**ರಾಷ್ಟ್ರದಾಯ ವ್ಯಯ**

ಸೈನ್ಯಪೋಷಣೆಯನ್ನೂ ದಂಡಾಧಿಕಾರಿಗಳನ್ನೂ ಏರ್ಪಡಿಸಿ ರಾಷ್ಟ್ರ ದಲ್ಲಿ ಶಾಂತಿಯನ್ನು ಸ್ಥಾಪಿಸಿ ನ್ಯಾಯಸ್ಥಾನ ಗಳ ಮೂಲಕ ನ್ಯಾಯತತ್ವಗಳ ಅನುಸಾರವಾಗಿ ಜನತೆಯ ಕ್ಷೇಮವನ್ನು ನೆಲೆಗೊಳಿಸಿದಲ್ಲಿ ಆಡಳಿತದ ಕರ್ತವ್ಯ ಭಾಗವು ತೀರಲಿಲ್ಲ. ಸೈನ್ಯಬಲವನ್ನು, ಕಂಟಕಗ್ರಾಹಿಗಳನ್ನು, ದಂಡಾಧಿಕಾರಿಗಳನ್ನು ಮತ್ತು ನ್ಯಾಯಸ್ಥಾನಗಳನ್ನು ನಡೆಸುತ್ತಿರು ವುದಾದರೂ ಹೇಗೆ? ಇವುಗಳಿಂದ ಶಾಂತಿಕ್ಷೇಮಗಳನ್ನು ಪಡೆದು ಉಪ ಕೃತರಾದ ಜನರು ಇವುಗಳ ವೆಚ್ಚದ ಭಾರವನ್ನು ಹೊರತಕ್ಕದ್ದು ನ್ಯಾಯ ವಾಗಿಯೇ ಇರುತ್ತದೆ. ಆದ್ದರಿಂದ ಆಡಳಿತದ ವೆಚ್ಚವನ್ನು ಜನರಿಂದಲೇ ಕಂದಾಯ, ತೆರಿಗೆ, ಸುಂಕ ಮುಂತಾದ ರೂಪಗಳಿಂದ ಎತ್ತಬೇಕಾಗುವುದು. ಹೀಗೆ ಆಡಳಿತದ ವೆಚ್ಚಕ್ಕಾಗಿ ಜನರಿಂದ ನಾನಾರೂಪವಾಗಿ ಎತ್ತಿದ ದ್ರವ್ಯ ರಾಶಿಯು ರಾಷ್ಟ್ರದಾಯವೆನಿಸಿಕೊಳ್ಳುವುದು. ಆದಾಯವೆಂದರೆ ಲಾಭ ವಾದುದರಿಂದ ಆಡಳಿತವೂ ವ್ಯಾಪಾರದಂತೆಯೇ ಸರಿಯೆಂದೂ ಆ ವ್ಯಾಪಾರದಲ್ಲಿ ಲಾಭ ಹುಟ್ಟುವುದೆಂದೂ ಭಾವಿಸಬಾರದು. ಬಂಗಾಳವು ತಮ್ಮ ಸ್ವಾಧೀನವಾದ ಮೊದಲಿನಲ್ಲಿ ವರ್ತಕಮಂಡಲಿಯವರಾಗಿದ್ದ ಕಂಪೆನಿಯವರು ಆ ಪ್ರಾಂತದ ಆದಾಯದಲ್ಲಿ ಹಣವನ್ನುಳಿಸಿಕೊಂಡು ಅದನ್ನು ತಮ್ಮ ಲಾಭವೆಂದು ಗಣಿಸುತ್ತಿದ್ದುದರಿಂದಲೇ ಅನೇಕ ಅನರ್ಥಗಳು ಸಂಭವಿಸಿದವು. ರಾಷ್ಟ್ರದಲ್ಲಿ ಹುಟ್ಟಿದ ಆದಾಯವು ರಾಷ್ಟ್ರಕ್ಕಾಗಿಯೇ ರಾಷ್ಟ್ರದಲ್ಲಿಯೇ ವೆಚ್ಚವಾಗತಕ್ಕದ್ದೆಂಬುದು ಒಂದು ಪ್ರಧಾನ ತತ್ವ.

ಪ್ರತಿಫಲವಿಲ್ಲದೆಯೇ ರಾಷ್ಟ್ರದ ಉತ್ಪತ್ತಿಯ ಭಾಗವು ವೆಚ್ಚವಾದಲ್ಲಿ ದುರ್ವ್ಯಯವೆನಿಸುವುದು ; ಪ್ರತಿಫಲವಿಲ್ಲದೆಯೇ ಆದಾಯದ ಭಾಗವು ಬೇರೆಡೆಯಲ್ಲಿ ಉಪಯುಕ್ತವಾದರೆ ಅದು ರಾಷ್ಟ್ರಕ್ಕೆ ನಷ್ಟವಾಗಿಯೇ ಪರಿಣಮಿಸುವುದು. ಚೌಥಾಯವನ್ನು ತೆರುತ್ತಿದ್ದ ಪ್ರಾಂತಗಳು ಪ್ರತಿಫಲವಿಲ್ಲದೆ ಚೌಥಾಯವನ್ನು ಕೊಟ್ಟಂತೆಲ್ಲ ನಷ್ಟಪಡುತ್ತಿದ್ದವು.

**ರಾಷ್ಟ್ರೀಯ ಋಣ**

ತೆರಿಗೆ ಸುಂಕಗಳನ್ನು ಎತ್ತುವುದು ಕೇವಲ ಶಾಂತಿ ಕ್ಷೇಮಗಳ ನೆಲೆಗಾಗಿಯೇ ಅಲ್ಲ. ಸರ್ಕಾರಗಳು ತೆರಿಗೆ ಸುಂಕಗಳನ್ನೆತ್ತುವುದು ಮಾತ್ರವೇ ಅಲ್ಲದೆ ಸಾಲಗಳನ್ನೂ ಎತ್ತುವ ವಿಚಾರವನ್ನು ಕೇಳಿರುತ್ತೇವೆ. ಸರ್ಕಾರವು ಸಾಲಮಾಡಬಹುದೇ ಎಂದರೆ ಎಲ್ಲರೂ ಸಾಲ ಮಾಡಿದಂತೆಯೇ ರಾಷ್ಟ್ರದ ಯೋಗಕ್ಷೇಮದ ಭಾರವನ್ನು ವಹಿಸಿದ ಸರ್ಕಾರವೂ ಸಾಲ ಮಾಡುವುದು. ವಿಪತ್ಕಾಲದಲ್ಲಿ, ಅಂದರೆ ಯುದ್ಧವೊದಗಿದಾಗಲೋ ಕ್ಷಾಮಡಾಮರಗಳು ತೋರಿಕೊಂಡ ಕಾಲಗಳಲ್ಲಿಯೋ, ಸರ್ಕಾರದವರು ಸಾಲವನ್ನೆತ್ತಲೇ ಬೇಕು. ಸಾಲದಲ್ಲಿಯೂ ಬಗೆಗಳಿವೆ. ವರ್ತಕತನದಲ್ಲಿ ಸಾಲ ತೆಗೆದೇ ವ್ಯಾಪಾರಮಾಡಿ ಲಾಭ ಸಂಪಾದಿಸಿ ಬಡ್ಡಿಯನ್ನೂ ಅಸಲನ್ನೂ ಸಲ್ಲಿಸಿ ಧನಿಕರಾಗುವುದಿಲ್ಲವೇ? ಅದರಂತೆಯೇ ಸರ್ಕಾರವೂ ಕೂಡ ಲಾಭಕರವಾದ ಉದ್ಯೋಗವು ತೋರಿಕೊಂಡಾಗ ಸಾಲವನ್ನು ಮಾಡಿಕೊಂಡು ಆ ಉದ್ಯೋಗದಲ್ಲಿ ತೊಡಗಬಹುದು. ಸರ್ಕಾರವು ಮಾಡುವ ಸಾಲಕ್ಕೆ ರಾಷ್ಟ್ರೀಯ ಸಾಲವೆಂದು ಹೆಸರು. ಹೆಸರುವಾಸಿಯಾದ ಎಲ್ಲ ರಾಷ್ಟ್ರಗಳಲ್ಲಿಯೂ ರಾಷ್ಟ್ರೀಯ ಸಾಲವೆಂಬುದಿದ್ದೇ ಇರುತ್ತದೆ. ಈ ಸಾಲವೆತ್ತುವುದರಲ್ಲಿ ಸಾಧ್ಯವಾದಮಟ್ಟಿಗೂ ಕಡಿಮೆ ಬಡ್ಡಿಗೆ ಎತ್ತಬೇಕೆಂಬುದು ನಿಯಮ.

**ತೆರಿಗೆಗಳ ನೀತಿ**

ತೆರಿಗೆ ಸುಂಕಗಳನ್ನೆತ್ತುವ ವಿಧಾನಗಳು ಅನೇಕವಾಗಿ ಉಂಟು. ಸಭ್ಯತೆಯನ್ನು ಪಡೆದವೆಂದು ಹೆಸರಾದ ರಾಷ್ಟ್ರಗಳಲ್ಲೆಲ್ಲ ರಾಷ್ಟ್ರದ ಆದಾಯ ವ್ಯಯದ ನಿಷ್ಕರ್ಷೆಯನ್ನು ವರ್ಷೇ ವರ್ಷೇ ಮಾಡಿ ವರದಿಯನ್ನೊಪ್ಪಿಸುವರು. ಆಯ ವ್ಯಯ ಸಚಿವ ಅಥವಾ ಕೋಶಾಧಿಕಾರಿ

ಯೆಂಬಾತನು ಕಳೆದ ವರ್ಷದ ಅನುಭವದಿಂದ ಮುಂದಿರುವ ವರ್ಷದಲ್ಲಿ ವೆಚ್ಚವೆಷ್ಟಾದೀತು, ಆದಾಯವೆಷ್ಟನ್ನು ತೆರಿಗೆ ಸುಂಕಗಳ ರೂಪದಿಂದ ಎತ್ತಬೇಕು, ಸಾಲವನ್ನೆತ್ತುವುದೆಷ್ಟು, ತೀರಿಸುವುದೆಷ್ಟು ಮುಂತಾದ ವಿಷಯಗಳನ್ನು ಸಮಾಲೋಚಿಸಿ **ಬಜೆಟ್** ಎಂಬ ಅಂದಾಜನ್ನು ಸಿದ್ಧಪಡಿಸುವನು. ಆಧುನಿಕ ಕಾಲದಲ್ಲಿ ರಾಷ್ಟ್ರಗಳ ಯೋಗ್ಯತಾಶಕ್ತಿಗಳು ಈ ಆಯವ್ಯಯ ವಿಚಾರದಿಂದಲೇ ನಿರ್ಣಯವಾಗುತ್ತವೆ. ಆದಾಯವನ್ನು ಬರಮಾಡಿಕೊಳ್ಳುವಾಗ ಅನೇಕ ಬಗೆಯಾಗಿ ಬರಮಾಡಿಕೊಳ್ಳಬಹುದು. ಆದರಲ್ಲಿ ಅತಿ ಮುಖ್ಯವಾದ ನಿಯಮವೇನೆಂದರೆ ನ್ಯಾಯವನ್ನು ಬಿಟ್ಟಿರಬಾರದು. ತೆರಿಗೆ ಸುಂಕಗಳ ಭಾರವೆಲ್ಲವೂ ಕೆಲವರ ಮೇಲಿದ್ದು, ಬೇರೆ ಕೆಲವರಿಗೆ ಅದರ ಸೋಂಕೇ ಇಲ್ಲದಿದ್ದರೆ ಅನ್ಯಾಯವು ತಲೆಯೆತ್ತಿದಂತಾಗಿ ಕಡೆಗೆ ಹಾನಿಯು ಸಂಭವಿಸುವುದು. ಫ್ರಾನ್ಸ್ ದೇಶದಲ್ಲಿ ಎರಡು ವರ್ಗದವರು ತೆರಿಗೆಗಳ ಭಾರವೇ ಇಲ್ಲದಂತೆ ಮೆರೆಯುತ್ತಿದ್ದುದರ ಪರಿಣಾಮವಾಗಿ ರಾಷ್ಟ್ರವಿಪ್ಲವವೇ ಸಂಭವಿಸಿತು. ನ್ಯಾಯವಾಗಿರುವುದು ಮಾತ್ರವೇ ಅಲ್ಲದೆ ತೆರಿಗೆ ಸುಂಕಗಳು ಕೂಡಿದಮಟ್ಟಿಗೂ ಹಗುರವಾಗಿರಬೇಕಾದುದೂ ಅವಶ್ಯವಾದ ಅಂಶವೇ.

**ರಾಷ್ಟ್ರ ಪ್ರಯತ್ನ**

ರಾಷ್ಟ್ರಭಾರವನ್ನು ವಹಿಸಿದ ಸರ್ಕಾರವು ರಕ್ಷಣೆಯನ್ನು ತೊಡಗಿ ಸೈನ್ಯವನ್ನು ಪೋಷಿಸಿದಾಗಲೇ ಸೈನ್ಯದ ಸುಲಭ ಸಂಚಾರಕ್ಕಾಗಿ ಹೆದ್ದಾರಿಗಳನ್ನೂ ವಾಹಕ ಸಾಮಗ್ರಿಗಳನ್ನೂ ಒದಗಿಸುವ ಕೆಲಸವನ್ನು ಕೈಕೊಳ್ಳಬೇಕಾಗುತ್ತದೆ. ಸಮಾಚಾರ ವಾಹಕಗಳನ್ನು (Means of Communication) ಪಟುತ್ವದಿಂದ ನಡೆಸಬೇಕಾಗಿರುತ್ತದೆ. ರಾಷ್ಟ್ರ ರಕ್ಷಣೆಯನ್ನು ಪೂರ್ತಿಯಾಗಿ ಸಾಧಿಸುವ ಕೆಲಸದಲ್ಲಿಯೇ ಸರ್ಕಾರವೆಂಬುದು ಅನೇಕಾನೇಕ ಕೆಲಸಗಳನ್ನು ಕೈಕೊಳ್ಳಬೇಕಾಗುತ್ತದೆ. ರಕ್ಷಣೆಯೆಂಬ ಪ್ರಯೋಜನವನ್ನು ಪಡೆಯಲು ಸರ್ಕಾರವು ಜನತೆಗೆ ಸಾಧಕವಾದಂತೆ ಇತರ ಪ್ರಯೋಜನಗಳ ಸಿದ್ಧಿಗೂ ಏಕಾಗಬಾರದು? ಕೆಲವು ದೊಡ್ಡ ಕೆಲಸಗಳನ್ನು ಜನರು ತಾವಾಗಿಯೇ ಮಾಡಲಾಗದಿರಬಹುದು; ತಾವೇ ಪ್ರಾರಂಭಿಸಿ ನಡೆಸಿದರೂ ತೃಪ್ತಿಕರವಾಗಿ ನಡೆಯದಿರಬಹುದು. ಸರ್ಕಾರವೇ

ಅಂತಹ ಕೆಲಸಗಳನ್ನೇಕೆ ನಡೆಸಬಾರದು? ಎಷ್ಟು ದೊಡ್ಡ ಪ್ರಯತ್ನವಾದರೂ ಸರ್ಕಾರಕ್ಕೆ ಅಸಾಧ್ಯವಾಗುವುದಿಲ್ಲ; ಮತ್ತು ಕೆಲಸವು ಕ್ಷಿಪ್ರತೆಯಿಂದಲೂ ಸಮಾಧಾನಕರವಾಗಿಯೂ ನೆರವೇರಬಹುದು.

ಸರ್ವವ್ಯಾಪ್ತ ಕರ್ತವ್ಯ

ಸರ್ಕಾರವು ನಡೆಸಿದರೆಯೇ ನೆರವೇರತಕ್ಕ ಕೆಲವು ಕೆಲಸಕಾರ್ಯಗಳು ರಕ್ಷಣೆಯ ಭಾಗದಲ್ಲಿ ತೋರಿಕೊಳ್ಳುತ್ತವೆ. ಯುದ್ಧ ಸಿದ್ಧತೆಗೆ ಮದ್ದು, ಗುಂಡು, ಫಿರಂಗಿ, ವಿಮಾನ ಮುಂತಾದುವು ಬೇಕು. ಅವುಗಳನ್ನು ಸಿದ್ಧಗೊಳಿಸುವುದರಲ್ಲಿ ಕೈಗಾರಿಕೆಯನ್ನು ಹೂಡಿ ನಡೆಸಿದಂತಾಗಲಿಲ್ಲವೆ? ಸೈನ್ಯವನ್ನು ಸುಶಿಕ್ಷಿತವಾಗಿಟ್ಟಿರುವುದಕ್ಕೆ ಸೈನಿಕರ ಶಿಕ್ಷಣವು ನಡೆಯಬೇಕು, ಸೈನ್ಯಾಧಿಕಾರಿಗಳಿಗೆ ಉತ್ತಮ ಶಿಕ್ಷಣವೊದಗಬೇಕು ಮತ್ತು ಸೈನ್ಯದ ಆರೋಗ್ಯಸ್ಥಿತಿಯನ್ನು ಕಾಪಾಡಬೇಕು. ಇಲ್ಲಿ ಸರ್ಕಾರವು ಶಿಕ್ಷಣಾ ಕರ್ತವ್ಯವನ್ನು ವಹಿಸಬೇಕಾಯಿತು. ಯುದ್ಧದ ಯಂತ್ರಗಳನ್ನು ನಿರ್ಮಿಸುವುದರಲ್ಲಿ ಯಂತ್ರವಿದ್ಯೆಗೆ ಪ್ರೋತ್ಸಾಹವನ್ನು ನೀಡುತ್ತ ರೋಗಗಳನ್ನು ನಿವಾರಣೆ ಮಾಡುವುದರಲ್ಲಿ ವೈದ್ಯವಿದ್ಯೆಗೂ ಶಾಸ್ತ್ರ ಪರಿಶೋಧನೆಗೂ ತಕ್ಕ ಏರ್ಪಾಟನ್ನು ಮಾಡಬೇಕಾಗುವುದು. ಇದರಿಂದ ಅನಿವಾರ್ಯವೆನಿಸಿದ ಕರ್ತವ್ಯನಿರ್ವಾಹದಲ್ಲಿಯೇ ಸರ್ಕಾರವು ಐಚ್ಛಿಕ ಭಾಗವೆನಿಸಿದ ಗುಂಪಿನಲ್ಲಿ ಸೇರತಕ್ಕ ಕರ್ತವ್ಯಗಳನ್ನೂ ನಿರ್ವಹಿಸಬೇಕಾಯಿತು. ಸರ್ಕಾರಕ್ಕೆ ಕೇವಲ ಶಾಂತಿ ರಕ್ಷಣೆಯೇ ಅಲ್ಲದೆ ರಾಷ್ಟ್ರದ ಸುಸ್ಥಿತಿಯೂ ಮೇಲ್ಮೆಯೂ ಲಕ್ಷ್ಯಗಳಾಗಿರುತ್ತವೆ. ಆದುದರಿಂದ ಕೇವಲ ರಕ್ಷಣೆಯ ಭಾರವನ್ನು ಮಾತ್ರ ಹೊತ್ತು ಸರ್ಕಾರವು ತಟಸ್ಥವಾಗಿರಲಾಗುವುದಿಲ್ಲ. ಜನತೆಯ ಅಥವಾ ರಾಷ್ಟ್ರದ ಅಭ್ಯುದಯಕ್ಕೆ ಸಾಧಕವಾದ ಕೆಲಸಕಾರ್ಯಗಳೆಲ್ಲವನ್ನೂ ವಹಿಸಬೇಕು.

ಆರೋಗ್ಯಪಾಲನೆ

ಇತರ ಕೆಲಸಕಾರ್ಯಗಳಿಗೆ ಕೊನೆಯೇ ಇಲ್ಲ. ದೇಶಾಭ್ಯುದಯಕ್ಕಾಗಿ ಸರ್ಕಾರವು ಮಾಡಬಾರದ ಕೆಲಸ ಯಾವುದೂ ಇಲ್ಲ. ಜನತೆಯ ಅಭಿವೃದ್ಧಿಯನ್ನು ಸಾಧಿಸುವ ಕರ್ತವ್ಯ ಯಾವುದಾದರೂ ಸರ್ಕಾರವು ಕೈಕೊಳ್ಳಬೇಕಾದುದೇ. ಜನತೆಯ ಆರೋಗ್ಯಪಾಲನೆ, ಶಿಕ್ಷಣಗಳೆಂಬವು ಆಧಾರ

ಭೂತವಾದ ಕರ್ತವ್ಯಗಳು. ಅನಾರೋಗ್ಯಕ್ಕೆ ಅವಕಾಶಕೊಡುವುದು ಕಶ್ಮಲದೂಷಿತವಾದ ಸ್ಥಲಗಳು ಅಥವಾ ಪ್ರವರ್ತನೆ. ನೈರ್ಮಲ್ಯ ರಕ್ಷಣೆಯನ್ನು ವಹಿಸಿ ರೋಗರುಜನಗಳಿಗೆ ಆಸ್ಪದವಿಲ್ಲದಂತೆ ಎಸಗುವುದಲ್ಲದೆ ರೋಗಗ್ರಸ್ತರಾದವರ ಚಿಕಿತ್ಸೆಗೆ ತಕ್ಕ ವ್ಯವಸ್ಥೆಯನ್ನೂ ಮಾಡತಕ್ಕದ್ದು ಕರ್ತವ್ಯ. ಆ ಕಾರಣದಿಂದ ಸರ್ಕಾರದಲ್ಲಿ ನೈರ್ಮಲ್ಯ ರಕ್ಷಣೆ, ಆರೋಗ್ಯಸಾಧನೆ, ಚಿಕಿತ್ಸಾ ಶಾಖೆಗಳು ಕಾರ್ಯವನ್ನು ಕೈಗೊಂಡಿರುವುವು. ಜನರ ದೈಹಿಕ ಸ್ಥಿತಿಯನ್ನು ಮಾತ್ರ ಲಕ್ಷ್ಯದಲ್ಲಿಟ್ಟಿದ್ದರೆ ಸಾಲದು. ಬುದ್ಧಿಯೂ ಸುಸ್ಥಿತಿಯಲ್ಲಿರಬೇಕು. ಆದ್ದರಿಂದ ಜನಶಿಕ್ಷಣ ಕರ್ತವ್ಯವೂ ತನ್ನದೇ ಎಂದು ಭಾವಿಸಿ ಸರ್ಕಾರವು ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಿಕ್ಷಣ ಶಾಖೆಗಳನ್ನು ಪೋಷಿಸುತ್ತಲಿರಬೇಕು. ಜನಶಿಕ್ಷಣವನ್ನೆಷ್ಟು ಮಾತ್ರ ಸಾಧಿಸಿದ್ದರೆ ಅಷ್ಟು ಯೋಗ್ಯತೆಯು ಸರ್ಕಾರಕ್ಕೆ ಸಲ್ಲುತ್ತದೆ. ಶಿಕ್ಷಣ ಭಾಗದಲ್ಲಿ ಜನತೆಯ ವಿನೋದಭಾಗವೂ ಸೇರುತ್ತದೆ. ಜನರು

**ಶಿಕ್ಷಣ**

ಮನಸ್ಸಿನ ಆಯಾಸವನ್ನು ಕಳೆದು ಉಲ್ಲಾಸದಿಂದಲೂ ಚೈತನ್ಯದಿಂದಲೂ ಕೂಡಿರಲು ತಕ್ಕ ವಿನೋದಗಳು ಒದಗುವಂತೆ ಏರ್ಪಡಿಸುವುದೂ ಸರ್ಕಾರದ ಕರ್ತವ್ಯವಾಗಿದೆ. ಚಿಕಿತ್ಸಾಲಯಗಳೂ ಶಾಲೆಗಳೂ ಅಲ್ಲದೆ ನಾಟಕ ಮಂದಿರಗಳು, ಉದ್ಯಾನಗಳು, ಚಿತ್ರವಸ್ತುಸಂಗ್ರಹನಿಲಯಗಳು, ವಿನೋದ ಕೂಟಗಳು ಮುಂತಾದವು ರಾಷ್ಟ್ರಭಾರದಲ್ಲಿ ಎಣಿಕೆಯಾಗತಕ್ಕ ಕರ್ತವ್ಯಗಳೇ. ಜನತೆಯು ಅಭಿವೃದ್ಧವಾಗುತ್ತಿದೆಯೇ ಅಥವಾ ದುರ್ಬಲವಾಗುತ್ತಿದೆಯೇ ಎಂದು ಆಗಾಗ್ಗೆ ವಿಚಾರಣೆಯನ್ನು ನಡೆಸುತ್ತ ಜನಗಣತಿ ಅಥವಾ ಖಾನೇಷುಮಾರಿಯನ್ನು ಹತ್ತು ವರ್ಷಗಳಿಗೊಮ್ಮೆಯಾದರೂ ನಡೆಸುವುದು ಇವುಗಳಿಗೆ ಸಂಬಂಧಪಟ್ಟುದೇ. ದೇಶದ ಆರ್ಥಿಕ ಸ್ಥಿತಿಗತಿಗಳನ್ನು ಪರಿಶೀಲಿಸಿ ಅರ್ಥಾಭ್ಯುದಯಕ್ಕೆ ಸಾಧಕವಾದ ಕರ್ತವ್ಯಗಳನ್ನು ಅವಲಂಬಿಸುವುದು ಅತಿಮುಖ್ಯವಾದುದು. ಜನಜೀವನದಲ್ಲಿ ವ್ಯವಸಾಯ, ಉದ್ಯೋಗ, ಕೈಗಾರಿಕೆ, ವ್ಯಾಪಾರಗಳು ಮುಖ್ಯವಾದ ಉಪಜೀವನಗಳಾಗಿರುತ್ತವೆ. ಅವೆಲ್ಲವುಗಳಿಗೂ ತಕ್ಕ ಸೌಕರ್ಯಗಳನ್ನು ರಚಿಸಿಕೊಡುವುದು ಸರ್ಕಾರದ ಕರ್ತವ್ಯ. ವಾಹಕ ಸೌಕರ್ಯಗಳು ಅಂದರೆ

ಸಮಾಚಾರವನ್ನು, ಸಾಮಾನನ್ನು, ಪ್ರಯಾಣಿಕರನ್ನು ಒಯ್ಯುವ ಸಾಧಕ ಗಳು ಉತ್ತಮ ಸ್ಥಿತಿಯಲ್ಲಿರಬೇಕಾದುದು ಆರ್ಥಿಕಸ್ಥಿತಿಗೆ ಮುಖ್ಯವಾದು ದರಿಂದ ಟಪ್ಪಾಲು, ತಂತಿ, ರೈಲು, ಹಡಗು, ರಸ್ತೆ, ಕಾಲುವೆ ಮುಂತಾದ ವಾಹಕ ಸೌಕರ್ಯಗಳು ಸಮರ್ಪಕವಾಗಿರಬೇಕು.

ಅಭಿವೃದ್ಧಿ

ಒಳದೇಶದ ಮತ್ತು ಹೊರದೇಶದ ವ್ಯಾಪಾರದ ಅಭಿವೃದ್ಧಿಗೆ ನ್ಯಾಯದ ಶಿಸ್ತು ಉತ್ತಮವಾಗಿರಬೇಕಾ ದುದಲ್ಲದೆ ಅಳತೆ ತೂಕಗಳೂ ನಿಷ್ಕೃಷ್ಟವಾಗಿರಬೇಕು. ವ್ಯವಸಾಯಕ್ಕೆ ನೀರಾವರಿಯ ಅನುಕೂಲವನ್ನಲ್ಲದೆ ಇತರ ಅನುಕೂಲಗಳನ್ನೂ ಅಭಿವೃದ್ಧಿ ಸಾಧಕಗಳನ್ನೂ ಒದಗಿಸಬೇಕು. ಒಟ್ಟಿನಲ್ಲಿ ಜನಸ್ತೋಮದ ಜೀವನವು ಯೋಗ್ಯರೀತಿಯಿಂದ ನಡೆಯಲು ಸರ್ಕಾರವು ಸರ್ವ ಸನ್ನಾಹವನ್ನು ಮಾಡು ತ್ತಿರಬೇಕು. ವಾಹಕ ಸೌಕರ್ಯಗಳನ್ನು ಒದಗಿಸಿ ಸುಂಕಗಳನ್ನು ಗೊತ್ತುಮಾಡಿ ನ್ಯಾಯದ ಶಿಸ್ತು ಮುಂತಾದುವನ್ನು ಏರ್ಪಡಿಸುವುದಲ್ಲದೆ ಸರ್ಕಾರವು ದೇಶದಲ್ಲಿ ನಿರುದ್ಯೋಗಿಗಳೆಷ್ಟು ಜನರಿದ್ದಾರೆಂದು ತಿಳಿಯು ತ್ತಲಿದ್ದು ಅವರಿಗೆ ಉದ್ಯೋಗ ಪ್ರಾಪ್ತಿಯಾಗುವ ಪ್ರಯತ್ನವನ್ನೂ ಮಾಡಬೇಕು. ಅನೇಕ ರಾಷ್ಟ್ರಗಳಲ್ಲಿ ನಿರುದ್ಯೋಗಿಗಳಾದವರಿಗೆ ಸರ್ಕಾರ ದವರು ತಾತ್ಕಾಲಿಕವಾದ ಸಾರಿಗೆಗಳನ್ನು ಕೊಡುತ್ತಿರುತ್ತಾರೆ. ಬಡತನವೇ ದೇಶದಲ್ಲಿಲ್ಲದ ಹಾಗೆ ನೆರವೇರಿಸುವುದು ಸರ್ಕಾರಗಳ ಕರ್ತವ್ಯ ಮಾತ್ರವೆನಿಸಿ ರುತ್ತದೆ. ಆಕಸ್ಮಿಕವಾಗಿ ಕ್ಷಾಮದೋರಿದಾಗ ಮಾತ್ರ ಸರ್ಕಾರದವರು ನಿವಾರಣೆಯ ಪ್ರಯತ್ನವನ್ನು ತೊಡಗುವುದಲ್ಲದೆ ಸದಾ ಪ್ರಯತ್ನ ನಿರತ ರಾಗಿ ಜನತೆಯ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವ ಉಪಾಯ ಸಂಧಾನಗಳನ್ನು ಹೂಡುತ್ತಲೇ ಇರಬೇಕು.

ಒಳದೇಶದ ಆಡಳಿತದಲ್ಲಿ ಸರ್ಕಾರವು ಮಾಡಬೇಕಾದ ಕರ್ತವ್ಯಗಳು ಇನ್ನೂ ಎಷ್ಟೋ ಇರುತ್ತವೆ. ಜನತೆಯ ಅಭ್ಯು ದಯಕ್ಕೆ ಅಥವಾ ನೆಮ್ಮದಿಗೆ ಅನೇಕಾನೇಕ ಕಾನೂನು ಕಟ್ಟಳೆಗಳನ್ನು ರೂಪಗೊಳಿಸಿ ಆಚರಣೆ ಯಲ್ಲಿ ಬರುವಂತೆ ಮಾಡಬೇಕು. ಗಿರಣಿಗಳು ಇರುವೆಡೆಗಳಲ್ಲಿ ಸಾಧಾರಣವಾಗಿ ಮಾಲೀಕರಿಗೂ ಕೆಲಸಗಾರರಿಗೂ

ಸಾಮಾಜಿಕ ಅನ್ಯಾಯ ನಿರೋಧ

ಜಗಳಗಳು ನಡೆಯುತ್ತಲೇ ಇರುತ್ತವೆ. ಆ ಜಗಳಗಳು ತೋರಿಕೊಳ್ಳದ ಹಾಗೆ ಏರ್ಪಡಿಸುವುದು ಮಾತ್ರವೇ ಅಲ್ಲದೆ ಜಗಳಗಳು ರೇಗಿದಾಗ ಸರ್ಕಾರವು ಪ್ರವೇಶಿಸಿ, ನ್ಯಾಯವು ಹೇಗೆಂದು ನಿರ್ಧರವಮಾಡಿ ಅದನ್ನು ನೆಲೆಗೊಳಿಸಬೇಕು. ಇಂತಹ ಸಂದರ್ಭಗಳಲ್ಲಿ ತಕ್ಕ ಶಾಸನಗಳನ್ನು ರಚಿಸುತ್ತಲಿರುವುದಲ್ಲದೆ ಇತರ ಶಾಸನಗಳನ್ನೂ ಅಭ್ಯುದಯಸಿದ್ಧಿಗೆ ತಕ್ಕಂತೆ ಸರ್ಕಾರದವರು ಸಾಮಾಜಿಕ ರಂಗದಲ್ಲಿಯೂ ನೆಲೆಗೊಳಿಸುತ್ತಲಿರಬೇಕು.

**ರಾಷ್ಟ್ರಗೌರವ ಪಾಲನೆ**

ರಾಷ್ಟ್ರಭಾರ ನಿರ್ವಾಹದಲ್ಲಿ ದೇಶದ ಹೊರಗಡೆ ನಡೆಸಬೇಕಾದ ಕಾರ್ಯಗಳಿಗೆ ಯಾವುದು ಲಕ್ಷ್ಯ? ಪ್ರತಿ ರಾಷ್ಟ್ರಕ್ಕೂ ವೈಶಿಷ್ಟ್ಯವೆನ್ನುವುದುಂಟು. ಆ ವೈಶಿಷ್ಟ್ಯವನ್ನು ಕಾಪಾಡುವುದು ಒಂದು ಗುರಿಯಾಗಿಯೇ ಇರುವುದು. ಅನ್ಯದೇಶಗಳೊಡನೆ ಸಂಧಿವಿಗ್ರಹಗಳನ್ನು ನಡೆಸುವಾಗ ಆರ್ಥಿಕ ಲಕ್ಷ್ಯವೇ ಈಚೆಗೆ ಪ್ರಧಾನವಾಗಿದೆ. ಒಂದು ರಾಷ್ಟ್ರದ ಅಧಿಪತಿ ಅಥವಾ ಒಬ್ಬ ಪ್ರಭುವು ಯಶಃಕಾಮಿಯಾಗಿ ನೆರೆಯ ರಾಷ್ಟ್ರವನ್ನಾಕ್ರಮಿಸುವ ಕಾಲ ಕಳೆದುಹೋಯಿತು. ಯುದ್ಧ ಪ್ರತಿಯುದ್ಧಗಳಿಗೆ ಆರ್ಥಿಕವಾದ ಕಾರಣಗಳೇ ಪ್ರೇರಕಗಳಾಗಿರುತ್ತವೆ. ಆರ್ಥಿಕ ಯುದ್ಧಗಳೇ ಆಧುನಿಕ ಕಾಲದ ಲಕ್ಷಣ. ಬಹುಜನಭರಿತವಾದ ರಾಷ್ಟ್ರಗಳು ತಮ್ಮಲ್ಲಿ ಅಧಿಕವೆನಿಸಿದ ಜನತೆಯ ಪಾಲಿಗಾಗಿ ಕ್ಷೇತ್ರಗಳನ್ನು ಸಂಪಾದಿಸಿಕೊಳ್ಳಲು ಹವಣಿಸುತ್ತಲಿರುತ್ತವೆ; ಸಾಮ್ರಾಜ್ಯವುಳ್ಳ ರಾಷ್ಟ್ರಗಳು ತಮ್ಮ ಸಾಮ್ರಾಜ್ಯವನ್ನುಳಿಸಿಕೊಳ್ಳುವುದೇ ಅಲ್ಲದೆ ವಿಸ್ತಾರಗೊಳಿಸುವುದಕ್ಕೂ ಯತ್ನಿಸುತ್ತಲಿರುತ್ತವೆ. ಅಧೀನವಾದ ರಾಷ್ಟ್ರಗಳು ಸ್ವಾತಂತ್ರ್ಯವನ್ನು ಪಡೆಯುವ ಸಾಧನೆಯಲ್ಲಿ ತೊಡಗಿರುತ್ತವೆ. ಆರ್ಥಿಕ ಸಾಧನೆಗಾಗಿಯೇ ಸಾಲಸೋಲಗಳನ್ನು ಎಂತಹ ರಾಷ್ಟ್ರಗಳಾದರೂ ಎತ್ತುತ್ತಲಿರುತ್ತವೆ. ಐರೋಪ್ಯದೇಶಗಳಲ್ಲಿ ಔದ್ಯೋಗಿಕ ಪರಿವರ್ತನೆಯೆಂಬುದು ನಡೆದಾಗಿನಿಂದ ಪೃಥ್ವಿಯಲ್ಲಿ ಆರ್ಥಿಕ ಸಾಧನೆಯೇ ಪ್ರಧಾನ ಗುರಿಯಾಗಿರುತ್ತದೆ. ಆದ್ದರಿಂದ ಸರ್ಕಾರವು ಸ್ವದೇಶದ ಆರ್ಥಿಕಸ್ಥಿತಿಗತಿಗಳಿಗೆ ಲೋಪ ಬಾರದಂತೆ ಮಾತ್ರವೇ ಅಲ್ಲದೆ ಅಭಿವೃದ್ಧಿಕಾರಕವಾದ ಸಂಧಿ ಸಂಧಾನಗಳನ್ನು ನಡೆಸುತ್ತ ರಾಷ್ಟ್ರದ ಗೌರವವನ್ನು ಕಾಪಾಡುತ್ತ ಕೀರ್ತಿಯು ಏರುತ್ತಲಿರುವಂತೆ ನೆರವೇರಿಸಬೇಕು.

ಸರ್ಕಾರದ ಕರ್ತವ್ಯಗಳನ್ನೇ ರಾಷ್ಟ್ರಭಾರವೆಂದು ಕರೆಯಬಹುದು.

ರಾಷ್ಟ್ರಬಂಧ

ಆ ಕರ್ತವ್ಯಗಳನ್ನು ಪಾಲಿಸತಕ್ಕ ಅಂಗಗಳನ್ನು ಬೇರ್ಪಡಿಸಿ ಶಾಸಕಾಂಗ, ನ್ಯಾಯಾಂಗ, ಕಾರ್ಯಾಂಗಗಳೆಂದು ಮೂರಾಗಿ ಆಗಲೇ ವಿಭಾಗ ಮಾಡಿಕೊಂಡೆವು. ಈ ಮೂರು ಅಂಗಗಳೂ ಪರಸ್ಪರವಾಗಿ ಹೇಗೆ ಹೊಂದಿಕೊಂಡಿರಬಹುದೆಂಬುದನ್ನು ಸಂಯುಕ್ತರಾಷ್ಟ್ರದ ವಿವರದಲ್ಲಿ ಸ್ಥೂಲವಾಗಿ ಕಂಡುದೂ ಆಯಿತು. ಈ ಅಂಗಗಳು ಯಾವ ರೀತಿಯಲ್ಲಿ ಹೊಂದಿಕೊಂಡಿರುತ್ತವೆಯೆಂಬುದು ರಾಷ್ಟ್ರಸ್ವರೂಪದಲ್ಲಿ ಮುಖ್ಯವಾದುದು. ಅವುಗಳ ಹೊಂದಿಕೆಯನ್ನೇ ರಾಷ್ಟ್ರಾಂಗ ಸಂಯೋಜನೆಯೆಂದು ಕರೆಯುವುದು. ರಾಷ್ಟ್ರಸ್ವರೂಪ ನಿರ್ಣಯವೆಂಬುದಾದರೂ ಅದೇ. ರಾಷ್ಟ್ರಸಂಬಂಧವಾದ ಕರ್ತವ್ಯರಾಶಿಯನ್ನು ನಾವು ರಾಷ್ಟ್ರವೆಂಬ ಏರ್ಪಾಟಿನಿಂದ ಜನತೆಗೆ ಒದಗುವ ಸೇವೆ ಅಥವಾ ಪ್ರಯೋಜನವೆನ್ನಬಹುದು. ರಾಷ್ಟ್ರಪ್ರಯೋಜನಗಳನ್ನು ಉತ್ತಮವಾದ ಒಗೆಯಲ್ಲಿ ಪಡೆಯಲು ರಾಷ್ಟ್ರವು ಹೇಗಿರಬೇಕು? ರಾಷ್ಟ್ರಾಂಗಗಳು ಹೇಗೆ ರಚಿತವಾಗಿರಬೇಕು? ರಾಷ್ಟ್ರಸ್ವರೂಪವು ಎಂತಹುದಾಗಿರಬೇಕು? ಎಂಬ ಪ್ರಶ್ನೆಗಳು ರಾಷ್ಟ್ರಶಾಸ್ತ್ರಕ್ಕೆ ಸಂಬಂಧಿಸಿದವು. ರಾಷ್ಟ್ರವೆಂಬುದು ದೇಶದ ಸಮಸ್ತ ಜನರೂ ಸೇರಿಕೊಂಡಿರುವ ಸಂಸ್ಥೆ ಅಥವಾ ಸಮುದಾಯ. ಇತರ ಸಮಾಜಗಳಲ್ಲಿ ಇಷ್ಟವಿದ್ದವರು ಸೇರುತ್ತಾರೆ. ಇಷ್ಟವಿಲ್ಲದಿದ್ದರೆ ಬಿಡುತ್ತಾರೆ. ರಾಷ್ಟ್ರವೆಂಬುದರಲ್ಲಿ ಹಾಗಿಲ್ಲ. ದೇಶದ ಜನರಲ್ಲಿ ಪ್ರತಿಯೊಬ್ಬನೂ—ಇಷ್ಟವಿರಲಿ, ಇಲ್ಲದಿರಲಿ—ರಾಷ್ಟ್ರಕ್ಕೆ ಸೇರಿದವನೇ. ರಾಷ್ಟ್ರವನ್ನು ಬಿಟ್ಟಿರಬೇಕೆಂಬಾತನು ದೇಶಭ್ರಷ್ಟನೇ ಆಗಬೇಕು. ಇಂತಹ ರಾಷ್ಟ್ರಸ್ವರೂಪವು ಹೇಗೆಂದು ತಿಳಿಯುವುದು ಪೌರರಾದವರ ಮತ್ತು ಪೌರರಾಗತಕ್ಕವರ ಕರ್ತವ್ಯ.

ಪೌರನೀತಿ ರಾಷ್ಟ್ರನೀತಿಗಳು

ಏಕೆಂದರೆ ಪೌರನೀತಿಗೂ ರಾಷ್ಟ್ರನೀತಿಗೂ ಆಪ್ತವಾದ ಸಂಬಂಧವುಂಟು. ರಾಷ್ಟ್ರಮುಖವಾದ ಸರ್ಕಾರದ ದೃಷ್ಟಿಯಿಂದ ಕಾಣಬಹುದಾದುದನ್ನೇ ರಾಷ್ಟ್ರದೇಹದಲ್ಲಿ ಮುಖ್ಯವಾದ ಜನತೆಯ ದೃಷ್ಟಿಯಿಂದಲೂ ಕಾಣಬಹುದು. ರಾಷ್ಟ್ರರಚನೆಯನ್ನೂ ಕರ್ತವ್ಯರಾಶಿಗಳನ್ನೂ ಸರ್ಕಾರದವರ ದೃಷ್ಟಿಯಿಂದ ವಿಚಾರಮಾಡಿದಾಗ ಅದು

ರಾಜಕೀಯವೆಂದೆನಿಸುವುದು. ಅದನ್ನೇ ಜನತೆಯ ದೃಷ್ಟಿಯಿಂದ ವಿವರಿಸಿದಾಗ ಪೌರವೆಂದೆನಿಸುವುದು. ಒಂದೇ ವಿಷಯಕ್ಕೆ ಎರಡು ಮುಖಗಳಿವೆಯೆಂದು ಬೇಕಾದರೆ ಭಾವಿಸಬಹುದು. ರಾಷ್ಟ್ರಪಾಲನೆಯು, ಸರ್ಕಾರದಿಂದಲೂ ನಡೆಯುವುದು, ಜನರಿಂದಲೂ ನಡೆಯುವುದು. ಆದುದರಿಂದ ರಾಷ್ಟ್ರನೀತಿ ಪೌರನೀತಿಗಳಿಗಿರುವ ಭೇದವು ವಿಷಯದಲ್ಲಲ್ಲ, ವ್ಯಾಸಂಗದ ದೃಷ್ಟಿಯಲ್ಲಿ. ಲಕ್ಷ್ಯವೂ ಕ್ಷೇತ್ರವೂ ಕರ್ತವ್ಯರಾಶಿಯೂ ಒಂದೇ.

**ರಾಷ್ಟ್ರಭೇದಗಳು**

ರಾಷ್ಟ್ರಭೇದಗಳು ಅನೇಕಾನೇಕವಾಗಿ ಉಂಟು. ಸಣ್ಣ ರಾಷ್ಟ್ರಗಳು, ವಿಶಾಲ ರಾಷ್ಟ್ರಗಳು ಎಂಬ ಭೇದವನ್ನು ಮಾಡಬಹುದು. ಈಚಿನ ಕಾಲದಲ್ಲಿ ವಿಶಾಲರಾಷ್ಟ್ರ (Country States)ಗಳೇ ಹೆಚ್ಚು. ಯಾವುದೋ ಒಂದು ಮತವನ್ನು ನಿಷ್ಠೆಯಿಂದ ಅವಲಂಬಿಸಿ ಆ ಮತತತ್ವಗಳನ್ನೇ ನೆಲೆಗೊಳಿಸಲು ಯತ್ನಿಸಿದ ರಾಷ್ಟ್ರಗಳನ್ನು ಇತಿಹಾಸದಲ್ಲಿ ಕಂಡು ಮತವಿಷಯದಲ್ಲಿ ಅನಾಸಕ್ತಿಯನ್ನೇ (Neutrality, Detachment) ವಹಿಸಿದ ರಾಷ್ಟ್ರಗಳಿಂದ ಬೇರೆಮಾಡಬಹುದು. ಐರೋಪ್ಯದೇಶಗಳಲ್ಲಿ ರೋಮನ್ ಕ್ಯಾಥೊಲಿಕ್ ಮತ್ತು ಪ್ರಾಟೆಸ್ಟೆಂಟ್ ಎಂಬ ಮತಭೇದವು ತೋರಿಕೊಂಡ ಮಧ್ಯಕಾಲದ ರಾಷ್ಟ್ರಗಳಲ್ಲಿ ಮತಭೇದವೇ ಪ್ರಧಾನ ಲಕ್ಷ್ಯವಾಗಿಯೂ ಹೇತುವಾಗಿಯೂ ಇತ್ತು; ಅನೇಕ ಮುಸ್ಲಿಂ ರಾಷ್ಟ್ರಗಳಲ್ಲಿ ಇಸ್ಲಾಮಿನ ಪ್ರಚಾರವೇ ಮುಖ್ಯ ಕರ್ತವ್ಯವೆನಿಸಿತ್ತು. ಈಚಿನ ಕಾಲದಲ್ಲಿ ರಾಷ್ಟ್ರವ್ಯವಸ್ಥೆಯಲ್ಲಿ ಒಂದು ಮತದಲ್ಲಿ ನಿಷ್ಠೆಯೂ ಇತರ ಮತಗಳಲ್ಲಿ ಅಸಹನವೂ ಇಂತಹ ಲಕ್ಷಣವೇ ತೋರಿಕೊಳ್ಳುವುದಿಲ್ಲ. ರಾಷ್ಟ್ರಕ್ಕೂ ಮತಕ್ಕೂ ಸಂಬಂಧವಿರತಕ್ಕುದು ಒಂದಂಶದಲ್ಲಿ ಮಾತ್ರ; ಜನರು ಅವಲಂಬಿಸುವ ಮತಾಚಾರಗಳಲ್ಲಿ ಕೇವಲ ಅನಾಸಕ್ತಿಯನ್ನು ವಹಿಸಿರದೆ ಸಹನವನ್ನು (Toleration)ವಹಿಸಿ, ರಾಷ್ಟ್ರಜೀವನದಲ್ಲಿ ಮತಭೇದಗಳು ದುಷ್ಪರಿಣಾಮಕಾರಕಗಳಾಗದಂತೆ ಎಚ್ಚರದಿಂದ ಇರುವ ಅಂಶದಲ್ಲಿ ಮಾತ್ರ ರಾಷ್ಟ್ರಕ್ಕೆ ಪ್ರವೇಶವಿರುವುದು. ಸ್ವೇಚ್ಛಾಪ್ರವರ್ತಕರೇ ರಾಷ್ಟ್ರಮುಖವಾಗಿದ್ದ ರಾಷ್ಟ್ರಗಳನ್ನು ಶಾಸನಬದ್ಧರಾಗಿ ರಾಷ್ಟ್ರಭಾರವನ್ನು ನಿರ್ವಹಿಸಿದ

ಪ್ರಭುತ್ವವುಳ್ಳ ರಾಷ್ಟ್ರಗಳಿಂದ ಪ್ರತ್ಯೇಕಿಸಬಹುದು. ಈ ವಿಭೇದವೂ ಕೂಡ ಹಳೆಯಕಾಲದ್ದೆನಿಸಿದೆ. ರಾಷ್ಟ್ರನಿರ್ವಹಣದಲ್ಲಿ ಶಾಸನವೇ ಆಧಾರ ಭೂತವಾಗಿರತಕ್ಕುದು ಆಧುನಿಕ ಕಾಲದ ಲಕ್ಷಣ. ನಿರಂಕುಶ ಪ್ರಭುತ್ವ ವೆಂಬುದೂ, ಸ್ವಚ್ಛಂದ ಪ್ರವರ್ತಕ(Despot)ರ ರಾಜ್ಯವೆಂಬುದೂ ಆಧುನಿಕ ಕಾಲದಲ್ಲಿ ಹಲಕೆಲವು ರಾಷ್ಟ್ರಗಳಲ್ಲಿ ಮಾತ್ರ ಇರಬಹುದೇ ವಿನಾ ಸಾಮಾನ್ಯವೇ ಅಲ್ಲ. ಆಧುನಿಕ ಕಾಲದಲ್ಲಿ ಎಲ್ಲೆಲ್ಲಿಯೂ ರಾಷ್ಟ್ರ ಸ್ವರೂಪ ನಿರ್ಮಾಣದಲ್ಲಿ ಜನಸ್ವಾಮ್ಯ(Democracy)ಕ್ಕೆ ಪೂರ್ಣವಾದ ಗೌರವವು ಸಲ್ಲುತ್ತದೆ.

ಪ್ರಭುತ್ವ ಭೇದ

ಜನಸ್ವಾಮ್ಯವೆಂಬುದರಲ್ಲಿ ಜನವೇ ದೇಶಕ್ಕೆ ಸ್ವಾಮಿ(Sovereign), ಸಮಸ್ತಾಧಿಕಾರಕ್ಕೂ ಮೂಲ ಎಂದರ್ಥ. ಪ್ರಭು ಎಂಬ ಶಬ್ದವು ರಾಷ್ಟ್ರದ ಜನಕ್ಕೆ ಸಲ್ಲತಕ್ಕ ತತ್ವವನ್ನೇ ಡೆಮಾಕ್ರೆಸಿಯೆಂದು ಹೇಳುವುದು. ಪಾಶ್ಚಾತ್ಯ ನೀತಿ ಶಾಸ್ತ್ರಕಾರರು ಪ್ರಭುತ್ವವನ್ನು ವಿಂಗಡಿಸುವುದರಲ್ಲಿ ಆಟಾಕ್ರೆಸಿ (Autocracy) ಅಥವಾ ಏಕಪ್ರಭುತ್ವ, ಅರಿಸ್ಟಾಕ್ರೆಸಿ (Aristocracy) ಅಥವಾ ಕೆಲವರ ಪ್ರಭುತ್ವ ಅಥವಾ ಶ್ರೇಷ್ಠವರ್ಗ ಪ್ರಭುತ್ವ, ಮತ್ತು ಡೆಮಾಕ್ರೆಸಿ (Democracy) ಅಥವಾ ಜನಪ್ರಭುತ್ವವೆಂದು ಮೂರು ಬಗೆಗಳನ್ನು ತೋರಿದರು. ರಾಜತ್ವವೆಂಬುದು ಏಕಪ್ರಭುತ್ವದ ವಂಶ ಪಾರಂಪರ್ಯ. ಉತ್ತಮ ಕುಲದವರು ಮಾತ್ರ ರಾಷ್ಟ್ರಮುಖ್ಯರಾಗಿರು ವುದಲ್ಲದೆ ರಾಷ್ಟ್ರಮುಖವಾದ ಸರ್ಕಾರವನ್ನೂ ನಡೆಸುತ್ತ ರಾಷ್ಟ್ರಾಧಿ ಕಾರವನ್ನು ಪಡೆದಿದ್ದಲ್ಲಿ ಅದು ಎರಡನೆಯ ಬಗೆ ಧನಿಕರಾದವರು ಮಾತ್ರ ಧನಬಲವನ್ನು ಪ್ರಯೋಗಿಸಿ ಅಧಿಕಾರವನ್ನು ಪಡೆಯುವುದೂ ಆ ವಿಭಾಗಕ್ಕೆ ಸೇರಿದುದೇ. ಶ್ರೇಷ್ಠತೆಯು ಹೇಗೆ ವರ್ಗಗಳಲ್ಲಿ ನಿರ್ಣೀತವಾಗಬಹುದೋ ಅದರಂತೆ ಶ್ರೇಷ್ಠವೆನಿಸಿದ ವರ್ಗದವರು ಮಾತ್ರ ಅಧಿಕಾರಯುಕ್ತರಾಗ ಬಹುದು. ವಂಶಪಾರಂಪರ್ಯವಾಗಿ ನಡೆಯದೆ ತಾತ್ಕಾಲಿಕವಾಗಿ ನಡೆಯುವ ಏಕಪ್ರಭುತ್ವವು ಇರಬಹುದಾದ ರೀತಿಯಲ್ಲಿಯೇ ಶ್ರೇಷ್ಠಜಾತರ ಪ್ರಭುತ್ವ ದಲ್ಲಿಯೂ ನಾನಾರೀತಿಗಳುಂಟು. ಪಾಶ್ಚಾತ್ಯರ ಅನುಭವದಲ್ಲಿ ಈ ಎರಡು ಬಗೆಗಳೂ ಅತೃಪ್ತಿಕರವಾಗಿ ತೋರಿದ ಕಾರಣದಿಂದ ಮೂರನೆಯ ಬಗೆಯಾದ

ಜನಸ್ವಾಮ್ಯ ತತ್ವವನ್ನು ಅನುಸರಿಸಿ ನಡೆಯುವ ರಾಷ್ಟ್ರರೂಪಗಳನ್ನೇ ಅವರು ಹೆಚ್ಚಾಗಿ ಒಪ್ಪಿಕೊಂಡರು.

ಪ್ರಾತಿನಿಧ್ಯ

ಜನಪ್ರಭುತ್ವವು ನಡೆಯುವುದು ಹೇಗೆ? ಜನವೆಂಬುದು ಕೋಟಿ ಸಂಖ್ಯೆಯುಳ್ಳ ರಾಶಿ. ಅಷ್ಟು ರಾಶಿಯೂ ಆಲೋಚನೆಮಾಡುವುದಾದರೂ ಹೇಗೆ, ಕಾರ್ಯನಿರ್ವಾಹ ಮಾಡುವುದಾದರೂ ಹೇಗೆ? ನಗರ ಮಾತ್ರವೇ ರಾಷ್ಟ್ರವಾಗಿದ್ದಲ್ಲಿ ಗೃಹಸ್ಥರೆಲ್ಲರೂ ಒಂದೆಡೆ ಸೇರಿ ಕರ್ತವ್ಯ ನಿರ್ದೇಶವನ್ನು ಮಾಡಿ ಶಾಸನರೀತಿಯನ್ನು ನಿಶ್ಚಯಮಾಡಬಹುದಾಗಿತ್ತು. ವಿಶಾಲವಾದ ರಾಷ್ಟ್ರದಲ್ಲಿ ಗೃಹಸ್ಥರೆಲ್ಲರೂ ತಮ್ಮ ಕೆಲಸಕಾರ್ಯಗಳನ್ನು ಬಿಟ್ಟು ದೂರ ಪ್ರಯಾಣಮಾಡಿ ರಾಷ್ಟ್ರ ಕರ್ತವ್ಯವನ್ನು ನಿರ್ದೇಶಿಸುವ ಸಭೆಯಲ್ಲಿ ಭಾಗಿಗಳಾಗಲು ಸಾಧ್ಯವಿಲ್ಲ; ಅಂತಹ ಸ್ಥಿತಿಯಲ್ಲಿ ಒಂದೊಂದು ವಿಭಾಗದವರೂ ತಮ್ಮೊಡೆಯಲ್ಲಿಯೇ ತಮ್ಮ ಪ್ರತಿನಿಧಿಯನ್ನು ಗೊತ್ತುಮಾಡಿ, ಆತನ ಮೂಲಕ ತಮ್ಮ ಅಭಿಪ್ರಾಯವನ್ನು ಸಭೆಯಲ್ಲಿ ತಿಳಿಯಪಡಿಸುವ ಆಚಾರವು ತೋರಿಕೊಂಡು ರೂಢಿಯಾಯಿತು. ಚಿಕ್ಕ ರಾಷ್ಟ್ರದಲ್ಲಿ ಜನಪ್ರಭುತ್ವವು ಪ್ರತ್ಯಕ್ಷವಾಗಿ ನಡೆಯಬಹುದು; ವಿಶಾಲವಾದ ರಾಷ್ಟ್ರದಲ್ಲಿ ಪ್ರತಿನಿಧಿಗಳ ಸಭೆಗಳಲ್ಲಿ ಶಾಸನ ನಿರ್ದೇಶವಾಗಿ ಜನಸ್ವಾಮ್ಯವು ಪರೋಕ್ಷ (Indirect) ವಾಗಿ ನಡೆಯಬೇಕು. ಪ್ರತಿನಿಧಿ ತತ್ವ ಅಥವಾ ಪ್ರಾತಿನಿಧ್ಯವೆಂಬುದು ಆಚರಣೆಯಲ್ಲಿ ಬಲವಾಗಿ ಬೆಳೆಯಿತು. ಆಧುನಿಕ ಕಾಲದಲ್ಲಿ ಎಲ್ಲ ರಾಷ್ಟ್ರಗಳಲ್ಲಿಯೂ ಪ್ರಾತಿನಿಧ್ಯ ತತ್ವವು ಅಲ್ಪಸ್ವಲ್ಪವಾಗಿಯಾದರೂ ತಲೆಯೆತ್ತಿದೆ.

ಬಹುಮತ ತತ್ವ

ಪರಿಣಾಮದಲ್ಲಿ ಪ್ರಾತಿನಿಧ್ಯ ತತ್ವವು ಶಾಸಕಾಂಗಕ್ಕೆ ಪ್ರಧಾನಲಕ್ಷಣವಾಯಿತು. ಶಾಸಕ ಸಭೆಗಳು ಸಾಮಾನ್ಯವಾಗಿ ಎಲ್ಲೆಲ್ಲಿಯೂ ಪ್ರತಿನಿಧಿ ಸಭೆಗಳೇ. ಸಭೆಗೂಡಿದ ಪ್ರತಿನಿಧಿಗಳಲ್ಲಿ ಎಲ್ಲರ ಅಭಿಪ್ರಾಯವೂ ಏಕರೀತಿಯಾಗಿರುವುದು ಅಸಂಭವ. ಒಬ್ಬೊಬ್ಬರೂ ಒಂದೊಂದು ಅಭಿಪ್ರಾಯವನ್ನು ಪ್ರಕಟಿಸಬಹುದು. ಹೀಗಿದ್ದರೆ ಸಭೆಯ ಉದ್ದೇಶವನ್ನಾಗಲಿ ಅಭಿಪ್ರಾಯವನ್ನಾಗಲಿ ಇತ್ಯರ್ಥಮಾಡುವ ವಿಧಾನ ಯಾವುದು? ಬಹುಸಂಖ್ಯೆಯ ಸಭಿಕರ ಅಭಿಪ್ರಾಯವನ್ನು ಅಲ್ಪಸಂಖ್ಯೆಯವರೂ ಕೂಡ

ಒಪ್ಪತಕ್ಕದ್ದು ಎಂದರೆ ಯಾರೂ ತಮ್ಮ ಅಭಿಪ್ರಾಯವನ್ನು ಆ ರೀತಿ ಬದಲಾಯಿಸಲು ಸಿದ್ಧರಾಗುವುದಿಲ್ಲ. "ಬಹುಜನರು ಇಷ್ಟಪಡುವುದು ಈ ರೀತಿಯಲ್ಲಿ, ಬಹು ಸಂಖ್ಯೆಗೆ ಗೌರವವನ್ನು ಕೊಡಿ" ಎಂದು ಕೇಳಿ ರಾಷ್ಟ್ರಕರ್ತವ್ಯವು ಅದರಂತೆ ನಡೆಯಲೆಂದು ಮಾತ್ರ ಕೇಳಬಹುದು. ಇದನ್ನೇ ಬಹುಮತ ತತ್ವ (Majority Principle) ವೆಂಬುದು, ಸಭಿಕರ ಅಭಿಪ್ರಾಯವನ್ನು ನಿರ್ಣಯಿಸುವಾಗ ಬಹುಭಾಗದವರ ಅಭಿಪ್ರಾಯವೇ ಸಭೆಯ ಅಭಿಪ್ರಾಯವೆಂಬುದು ಸಂಪ್ರದಾಯವಾಗಿ ಪರಿಣಮಿಸಿತು. ಅಭಿಪ್ರಾಯ ಸೂಚನೆಯನ್ನು ಛಂದ ಅಥವಾ ವೋಟ್ (Vote) ಎಂಬುದರ ಮೂಲಕ ನಿರ್ಣಯಿಸುವುದೂ, ಛಂದಗಳನ್ನೆಣಿಕೆಮಾಡಿ ಬಹುಸಂಖ್ಯೆಯು ಯಾವ ಪಕ್ಷವಾಗಿದೆಯೆಂದು ನಿಶ್ಚಯವಮಾಡುವುದೂ, ಮೊದಲಾದ ಅಂಶಗಳಲ್ಲಿ ಸಭೆಗಳ ಆಚಾರ ಸಂಪ್ರದಾಯಗಳು ವೃದ್ಧಿಗೊಂಡು ರೂಢಮೂಲವಾದವು.

**ಬಂಧ ಭೇದಗಳು**

ಜನತೆಯ ಬಹುಭಾಗದವರ ಅಭಿಮತಕ್ಕನುಸಾರವಾಗಿಯೇ ಶಾಸನ ನಿರ್ದೇಶವಾಗಿ ಶಾಸನವೇ ಒಡೆಯನೆನಿಸಿದ ತರುವಾಯ ಎಲ್ಲರೂ ಶಾಸನಕ್ಕೆ ಕಟ್ಟುಬಿದ್ದು ವರ್ತಿಸುವುದು ರಾಷ್ಟ್ರಲಕ್ಷಣವೆನ್ನಿಸಿತು. ಹೀಗೆ ವೃದ್ಧಿಗೊಂಡ ರಾಷ್ಟ್ರಗಳಲ್ಲಿಯೂ ಅನೇಕ ಬಗೆಗಳುಂಟು. ಶಾಸಕಸಭೆಯೆಂಬುದು ಒಂದೇ ಆಗಿದ್ದರೂ ಇರಬಹುದು; ಎರಡಾಗಿದ್ದರೂ ಇರಬಹುದು. ರಾಷ್ಟ್ರಾಧಿಕಾರವು ಕೇಂದ್ರೀಕೃತ (Centralised) ವಾಗಿರಬಹುದು; ಅಥವಾ ಪೃಥಕ್ಕೃತ (Decentralised) ವಾಗಿರಬಹುದು. ರಾಷ್ಟ್ರರಚನೆಯ ಅಥವಾ ರಾಷ್ಟ್ರಾಂಗ ಸಂಯೋಜನೆಯ ವಿವರವು ಕಾಗದ ಪತ್ರಗಳ ರೂಪ (Written) ವಾಗಿದ್ದರೂ ಇರಬಹುದು; ಸಂಪ್ರದಾಯ ರೂಪ (Unwritten) ವಾಗಿದ್ದರೂ ಇರಬಹುದು. ಸುಲಭ ರೀತಿಯಲ್ಲಿ ರಚನೆಯು ತಿದ್ದುಪಡಿಗೊಗ್ಗುವಂತೆ (Flexible) ಇರಬಹುದು, ಅಥವಾ ತಿದ್ದುಪಡಿಯು ಕಷ್ಟಸಾಧ್ಯ(Rigid)ವಾಗಿರಬಹುದು. ಈ ಭೇದ ಪ್ರಭೇದಗಳೆಲ್ಲವೂ ಸಾಪೇಕ್ಷಕ(Relative)ವಾಗಿರತಕ್ಕವು. ನಾವು ಇವುಗಳಲ್ಲಿ ಪಾರ್ಲಿಮೆಂಟರಿ ಎಂಬ ರಚನೆಯನ್ನೂ, ಪ್ರೆಸಿಡೆನ್ಷಿಯಲ್ ಎಂಬ ರಚನೆಯನ್ನೂ

ಗಮನಿಸಿ ಮುಖ್ಯ ಭೇದಗಳನ್ನು ತಿಳಿದುಕೊಳ್ಳುವುದು ಅವಶ್ಯಕ. ಮತ್ತು ವಿಸ್ತಾರವಾದ ರಾಷ್ಟ್ರಗಳ ಸಂಯೋಗ ಅಥವಾ ವ್ಯೂಹನೆ (Federation) ಯಲ್ಲಿ, ಅಥವಾ ಅನೇಕ ರಾಷ್ಟ್ರಗಳು ಪರಸ್ಪರ ಬಂಧನಗಳಿಂದ ಒಡಗೂಡಿ ಸಾಮಾನ್ಯವಾದ ರಾಷ್ಟ್ರವೊಂದನ್ನು ಪಡೆದ ರಾಷ್ಟ್ರವ್ಯೂಹದಲ್ಲಿ, ಇರಬಹುದಾದ ಭೇದ ವಿಭೇದಗಳನ್ನೂ ಗಮನಿಸತಕ್ಕದ್ದು ಅವಶ್ಯ.

**ರಾಷ್ಟ್ರಸ್ವರೂಪ ನಿರ್ಣಯ**

ಪ್ರಾತಿನಿಧ್ಯ ತತ್ವದ ಆಚರಣೆಗೆ ಸಂಯುಕ್ತರಾಜ್ಯದ ವಿವರವನ್ನೇ ನಿದರ್ಶನವೆಂದು ಭಾವಿಸಿ ಕಾಣುವ ಮೊದಲು ರಾಷ್ಟ್ರಾಂಗ ಸಂಯೋಜನೆ ಅಥವಾ ರಾಷ್ಟ್ರ ಸ್ವರೂಪ ನಿರ್ಮಾಣದಿಂದಲೇ ಸರ್ವಸಿದ್ಧಿಯು ನೆರವೇರಲಾರದೆಂಬುದನ್ನು ಜ್ಞಾಪಕದಲ್ಲಿಡಬೇಕು. ಕೆಲಕಾಲ ರಾಷ್ಟ್ರಗಳು ಉದ್ಧಾರಮಾರ್ಗಕ್ಕೆ ಪ್ರಾತಿನಿಧ್ಯದ ತತ್ವಾವಲಂಬನೆಯೇ ಮುಖ್ಯ ಸಾಧಕವೆಂದು ಭಾವಿಸಿ ರಚನೆಯಲ್ಲಿ ಬದಲಾವಣೆಗಳನ್ನು ನಡೆಸಿದವು; ಒಂದು ರಾಷ್ಟ್ರಕ್ಕೆ ಒಪ್ಪಿದ ರೂಪವು ಮತ್ತೊಂದು ರಾಷ್ಟ್ರಕ್ಕೆ ಒಪ್ಪದಿರಬಹುದೆಂದು ಅನುಭವದಲ್ಲಿಯೇ ತಿಳಿಯಿತು. ರಾಷ್ಟ್ರಸ್ವರೂಪವು ಒಂದು ಸಾಧಕ ಮಾತ್ರ; ಸರ್ವಸಿದ್ಧಿಯೆಂಬುದು ಲಕ್ಷ್ಯವಾಗಿರುವುದರಿಂದ ಸ್ವರೂಪ ನಿರ್ಮಾಣದಲ್ಲಿ ಲಕ್ಷ್ಯವನ್ನು ಮರೆಯಬಾರದು. ಪ್ರತಿ ರಾಷ್ಟ್ರಕ್ಕೂ ವಿಶಿಷ್ಟವೆನಿಸಿದ ಪರಿಸ್ಥಿತಿಯಿರುತ್ತದೆ; ಪರಿಸ್ಥಿತಿಗನುಗುಣವಾದ ಸ್ವರೂಪವನ್ನು ರಾಷ್ಟ್ರವು ತಾಳಬೇಕೇ ವಿನಾ ಅನುಕರಣ ಮಾತ್ರದಿಂದಲೇ ರಾಷ್ಟ್ರೋದ್ಧಾರವಾಗಲಾರದು. ಕೇವಲ ಅನುಕರಣ ಪ್ರಯತ್ನದಿಂದ ಮೇಲಿಗೆ ಬದಲಾಗಿ ಕೇಡೇ ಘಟಿಸಬಹುದು.

**ಸಂಯುಕ್ತರಾಜ್ಯದ ರಾಜ**

ಸಂಯುಕ್ತರಾಜ್ಯದಲ್ಲಿಯೂ ಡುಮಿನಿಯನ್ನುಗಳಲ್ಲಿಯೂ ಇರುವುದು ಸಾಂಕುಶ ರಾಜತ್ವವೆಂದು ಹೆಸರಾಗಿದೆ. ಅಲ್ಲಿ ರಾಜನಾದಾತನು ಜನತೆಯ ಐಕ್ಯತೆಯ ಗುರುತು, ರಾಷ್ಟ್ರಗೌರವ ವೈಭವಗಳ ಮೂರ್ತಿ, ಮತ್ತು ಮರ್ಯಾದೆಯಲ್ಲಿ ಅಗ್ರಗಣ್ಯನು. ರಾಜನಾದಾತನು ಅಟ್ಟಹಾಸದಿಂದ ಅರಮನೆಗಳಲ್ಲಿದ್ದುಕೊಂಡು ಪ್ರಥಮ ಗೌರವಕ್ಕೂ ಭಕ್ತಿಗೂ ಪಾತ್ರನಾಗಿದ್ದಾಗ್ಯೂ ಆತನಿಗೆ ಅಧಿಕಾರವು ಮಾತ್ರ ಕಡಿಮೆ. ರಾಷ್ಟ್ರ

ಶಾಸನಗಳಲ್ಲಿ ಎಷ್ಟು ಮಾತ್ರ ಅಧಿಕಾರವು ಆತನಿಗಿರತಕ್ಕುದೆಂದು ನಿರ್ಣಯವಾಗಿದೆಯೋ ಅಷ್ಟೇ ಆತನ ಅಧಿಕಾರ. ಶಾಸನದ ಎಲ್ಲೆಯನ್ನು ಆತನು ಉಲ್ಲಂಘಿಸಲಾರನು. ಸಮರ್ಥನಾದ ವೇಳೆಯಲ್ಲಿ ಮಂತ್ರಿಗಳನ್ನು ಬಗ್ಗಿಸಿಕೊಂಡು ಇರಬಹುದು; ಅಸಮರ್ಥನಾಗಿದ್ದ ವೇಳೆಯಲ್ಲಿ ಯಾರಿಗೂ ನಷ್ಟವಿಲ್ಲ. ರಾಜ್ಯದಲ್ಲಿ ಅಧಿಕಾರವೆಲ್ಲವೂ ಇರುವುದು ಪಾರ್ಲಿಮೆಂಟಿಗೆ. ಪಾರ್ಲಿಮೆಂಟಿನವರೇ ಕಾರ್ಯಾಂಗವನ್ನು ವಶದಲ್ಲಿಟ್ಟುಕೊಂಡಿರುವರು. ಈ ಪಾರ್ಲಿಮೆಂಟೆಂಬುದು ನೇರ ಶಾಸನ ಕಾರ್ಯವನ್ನು ನಡೆಸುವುದು ಹೇಗೆ?

**ಪ್ರಾತಿನಿಧ್ಯ**

ಕಾಮನ್ಸ್ ಸಭೆಯೆಂಬುದರಲ್ಲಿ 650ರಿಂದ 700ರ ವರೆಗೆ ಸಭಿಕರಿರುತ್ತಾರೆ. ಅವರಲ್ಲಿ ಪ್ರತಿಯೊಬ್ಬ ಸಭಿಕನೂ ಜನಭಾಗವೊಂದರಿಂದ ವೃತನಾಗಿ ಆ ಭಾಗದ ಪ್ರತಿನಿಧಿ ಅಥವಾ ಆ ಭಾಗದ ಜನರ ಬಾಯಿಯಾಗಿರುತ್ತಾನೆ. ಕಾಮನ್ಸ್ ಸಭೆಯ ಅಧಿಕಾರದಲ್ಲಿ ಸಭಿಕನಿಗೆ $\frac{1}{650}$ ಪಾಲು ಇರುವುದು. ಅರ್ಧಲಕ್ಷ ಜನರಿಗೊಬ್ಬ ಪ್ರತಿನಿಧಿಯೆಂದು ಗೊತ್ತಾಗಿದ್ದ ಪಕ್ಷದಲ್ಲಿ ಪ್ರಭುತ್ವ ಅಥವಾ ರಾಷ್ಟ್ರಾಧಿಕಾರದಲ್ಲಿ $\frac{1}{50,000 \times 650}$ ಅಥವಾ $\frac{1}{325,00,000}$ ರಷ್ಟು ಪ್ರಭುತ್ವವನ್ನು ಪ್ರತಿಯೊಬ್ಬನೂ ಪಡೆದಿರುತ್ತಾನೆ. ಸಂಯುಕ್ತ ರಾಜ್ಯದಲ್ಲಿ 460 ಲಕ್ಷ ಜನರಿದ್ದಾರೆ; ಅವರಲ್ಲಿ ಪ್ರಾಪ್ತವಯಸ್ಕರಲ್ಲದ ಮಕ್ಕಳನ್ನೂ, ಮತಿವಿಕಲರನ್ನೂ, ವಿದೇಶಿಗಳನ್ನೂ, ಅಪರಾಧಿಗಳೆಂದು ಶಿಕ್ಷೆಗೆ ಗುರಿಯಾದವರನ್ನೂ ಬಿಟ್ಟುಬಿಟ್ಟರೆ ಉಳಿಯುವ 250 ಲಕ್ಷ ಜನರು ತಮ್ಮ ರಾಷ್ಟ್ರದ ಆಡಳಿತವನ್ನು ತಾವೇ ವಹಿಸಿ, ರಾಷ್ಟ್ರಾಧಿಕಾರವನ್ನು ತಮ್ಮಲ್ಲಿಯೇ ಸಮನಾಗಿ ಹಂಚಿಕೊಂಡು ಸ್ವರಾಜ್ಯವನ್ನನುಭವಿಸುತ್ತಾರೆ. 250 ಲಕ್ಷ ಜನರು ಒಂದು ಸ್ಥಳದಲ್ಲಿ ನೆರೆಯುವುದು ಅಸಾಧ್ಯ; ಎಂತಹ ಸಭಾಮಂದಿರವಾದರೂ ಸಾಲುವುದಿಲ್ಲ, ಮತ್ತು ಪ್ರತಿಯೊಬ್ಬರಿಗೂ ಬೇರೆ ಕೆಲಸಕಾರ್ಯಗಳು ಯಥಾಯೋಗ್ಯವಾಗಿ ಇದ್ದೇ ಇರುತ್ತವೆ. ಆದ್ದರಿಂದ ಪ್ರಾತಿನಿಧ್ಯ ತತ್ವವನ್ನನುಸರಿಸಿ ತಮ್ಮ ಪ್ರತಿನಿಧಿಗಳನ್ನು ವರಿಸಿ, ಅವರಿಗೆ ತಮ್ಮ ಇಷ್ಟಾನಿಷ್ಟಗಳನ್ನು ತಿಳಿಸಿ, ಅವರ ಬಾಯಿಂದ ಅವುಗಳನ್ನು ಹೇಳಿಸಿ ಪಾರ್ಲಿಮೆಂಟಿನ ಮೂಲಕ ತಮ್ಮ ಪ್ರಭುತ್ವವನ್ನು ನಿರ್ವಹಿಸುವರು.

ಪಾರ್ಲಿಮೆಂಟಿನ ಪದ್ಧತಿಗೆ ಇಂಗ್ಲಂಡೇ ಆದರ್ಶಭೂತವಾದುದೆಂದು ಹೆಸರಾಗಿದೆ. ಇಂಗ್ಲಿಷ್ ಪಾರ್ಲಿಮೆಂಟಿಗೆ ಆ ಕಾರಣದಿಂದ ಪಾರ್ಲಿಮೆಂಟುಗಳ ಮಾತೃಸ್ಥಾನವೆಂದು ಹೆಸರಾಗಿದೆ. ರಾಜಾಜ್ಞೆಯಿಂದ ಯಾವು

ವರಣ ವಿವರ

ವಾದರೊಂದು ದಿನ ಗೊತ್ತಾಗಿ ಅಂದೇ ರಾಷ್ಟ್ರದಲ್ಲೆಲ್ಲಿಯೂ ಸಾರ್ವತ್ರಿಕವಾಗಿ ವರಣಗಳು ನಡೆಯತಕ್ಕದ್ದೆಂದು ಪ್ರಕಟವಾಗುವುದು. ಕೂಡಲೆ ಪ್ರತಿಯೊಂದು ಕ್ಷೇತ್ರಕ್ಕೂ ಪ್ರಜ್ಞಾವಂತರಾಗಿಯೂ ಸಮರ್ಥರಾಗಿಯೂ ಇರುವ ಜನಮುಖ್ಯರು ವರಣವನ್ನು ಆಶಿಸಿ ವರಣಾರ್ಥಿ (Candidate) ಗಳಾಗಿ ನಿಲ್ಲುವರು. ಸುಮಾರು 2½ ಲಕ್ಷ ಜನರು ವಾಸವಾಗಿದ್ದರೆ ಅದು ಒಂದು ವರಣಕ್ಷೇತ್ರ(Electorate)ವೆನಿಸುವುದು ; ಆ ಕ್ಷೇತ್ರವು ಪಟ್ಟಣದ ಭಾಗವಾಗಿದ್ದರೂ ಇರಬಹುದು, ಅಥವಾ ಜಿಲ್ಲೆಯ ಭಾಗವಾಗಿದ್ದರೂ ಇರಬಹುದು. ವರಣಕ್ಷೇತ್ರವೆಂದರೆ ಒಬ್ಬ ಸಭಿಕನನ್ನು ವರಿಸುವ ಜನಭಾಗವು ವಾಸಮಾಡಿಕೊಂಡಿರುವ ರಾಷ್ಟ್ರ ಭಾಗ. ಎಷ್ಟು ಸಭಿಕರಿರುವರೋ ಅಷ್ಟು ವರಣಕ್ಷೇತ್ರಗಳಿರುತ್ತವೆ. ಕ್ಷೇತ್ರದಲ್ಲಿ ಒಬ್ಬನೇ ವರಣಾರ್ಥಿ ನಿಂತಿದ್ದಪಕ್ಷದಲ್ಲಿ ವರಣವೇ ಅವಶ್ಯವಿಲ್ಲ ; ಆದರೆ ಸಾಧಾರಣವಾಗಿ ಪ್ರತಿಯೊಂದು ವರಣಕ್ಷೇತ್ರಕ್ಕೂ ಇಬ್ಬರು ಮೂವರು ಸ್ಪರ್ಧಿಸುತ್ತಾರೆ. ಹೀಗೆ ಸ್ಪರ್ಧಿಸುವವರು ಪೌರಸಭೆಗಳಲ್ಲಿ ಜನರಿಗೆ ತಮ್ಮ ಉದ್ದೇಶಗಳನ್ನೂ ರಾಷ್ಟ್ರಹಿತವನ್ನೂ ತಿಳಿಸುತ್ತ ವರ್ತಮಾನ ಪತ್ರಿಕೆಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ಪ್ರಕಟಗೊಳಿಸುತ್ತ ವರಣದಲ್ಲಿ ಜಯಶಾಲಿಗಳಾಗಲು ಪ್ರಯತ್ನಪಡುತ್ತಾರೆ. **ಸಾರ್ವತ್ರಿಕವಾದ ವರಣ** (General Election) ಗಳು ನಡೆದಾಗ ಒಟ್ಟು 650 ಕ್ಷೇತ್ರಗಳಲ್ಲಿಯೂ ಏಕಕಾಲದಲ್ಲಿ ವರಣಗಳಾಗುತ್ತವೆ. ಆಕಸ್ಮಿಕವಾಗಿ ಯಾರಾದರೂ ಸತ್ತಾಗಲೋ ನಿವೃತ್ತರಾದಾಗಲೋ ಆ ಸ್ಥಲದಲ್ಲಿ ಮಾತ್ರ ವರಣವು ನಡೆಯುವುದು. ಇದು **ತಾತ್ಕಾಲಿಕವಾದ ವರಣ** (Bye-election), ಸಾರ್ವತ್ರಿಕವಾದುದಲ್ಲ. ಸಭಿಕನಾಗಿ ವರಣವನ್ನು ಪಡೆದ ತರುವಾಯ ಮಂತ್ರಿಮಂಡಲಿಯಲ್ಲಿ ಸೇರಬೇಕೆಂದೋ, ಬೇರೆ ಸರ್ಕಾರಿ ಹುದ್ದೆಯನ್ನು ಪಡೆಯಬೇಕೆಂದೋ ಇಷ್ಟಪಟ್ಟಾತನು ತನ್ನ ಜನರ ಸಮ್ಮತಿಯಿಲ್ಲದೆ ಹಾಗೆ ಅಧಿಕಾರಸ್ವೀಕಾರ ಮಾಡಲಾರನು.

ಜನರು ಪ್ರತಿನಿಧಿ ಕೆಲಸ ಮಾಡೆಂದು ವರಿಸಿ ಕೊಟ್ಟು ಕಳುಹಿಸಿದರೆ ಅಧಿಕಾರಿಗಳಲ್ಲಿ ಸೇರಿಕೊಳ್ಳುವುದು ನ್ಯಾಯವಲ್ಲ; ಅಂತಹ ಸಂದರ್ಭಗಳಲ್ಲಿ ಅಂತಹ ಸಭಿಕನು ಪುನಃ ವರಣಕ್ಕೆ ನಿಂತು ತನ್ನ ಕ್ಷೇತ್ರ ನಿವಾಸಿಗಳ ಅನುಮತಿಯನ್ನು ತನ್ನ ಅಧಿಕಾರ ಸ್ವೀಕಾರಕ್ಕೆ ಪಡೆಯಬೇಕು. ವರಣಕ್ಕೆ ನಿಂತು ವೃತ (Elected)ನಾದಾತನು ಆ ಕ್ಷೇತ್ರವಾಸಿ ಜನಭಾಗದ ಭೃತ್ಯ ಮಾತ್ರ; ಉದ್ದಿಷ್ಟವಾದ ಕರ್ತವ್ಯವನ್ನು ಬಿಟ್ಟು ಬೇರೆ ಕರ್ತವ್ಯವನ್ನು ವಹಿಸಲು ಅಧಿಕಾರವನ್ನು ಸ್ವಾಮಿಗಳಾದ ಕ್ಷೇತ್ರವಾಸಿ ಭಾಗದವರೇ ಕೊಡತಕ್ಕದ್ದು. ಈ ನಿಯಮವು ನೆಲೆಸಿರುವುದರಿಂದ ಅಧಿಕಾರವನ್ನು ಸಂಪಾದಿಸುವ ಆಸೆಯನ್ನು ಬೆಳೆಸಿಕೊಂಡು, ವರಣಕಾಲದಲ್ಲಿ ಜನರನ್ನು ಭ್ರಾಂತಿಗೊಳಿಸಿ, ಪಾರ್ಲಿಮೆಂಟಿನ ಸಭೆಗೆ ಸೇರಿ ಅಲ್ಲಿ ಲಭಿಸಬಹುದಾದ ಆಸ್ಪದವನ್ನು ದುರುಪಯೋಗಪಡಿಸುವುದು ಸಾಧ್ಯವಿಲ್ಲದೆ ಇದೆ.

**ಕಾಮನ್ಸ್ ಸಭಿಕ**

ಕಾಮನ್ಸ್ ಸಭಿಕನಾಗಿರುವುದೆಂದರೆ ಗೌರವದ ಮತ್ತು ಹೆಮ್ಮೆಯ ಮಾತು. ರಾಷ್ಟ್ರಭಕ್ತಿಯುತನಾಗಿ ಜನಸೇವೆಯನ್ನೂ ರಾಷ್ಟ್ರಸೇವೆಯನ್ನೂ ಮಾಡಲು ಇಷ್ಟಪಡುವಾತನೇ ಸಭಿಕನಾಗುತ್ತಾನೆ. ಜನರ ವಿಶ್ವಾಸಕ್ಕೆ ಪಾತ್ರನಾಗಿ ಜನಮುಖ್ಯನೂ ರಾಷ್ಟ್ರಮುಖ್ಯನೂ ಎನಿಸುವುದಲ್ಲದೆ ಕೇವಲ ಪುಣ್ಯಕ್ಕಾಗಿಯೇ ಶ್ರಮಪಡತಕ್ಕವನೆಂದು ಸಭಿಕನಿಗೆ ಹೆಚ್ಚಿನ ಮರ್ಯಾದೆ ಸಲ್ಲುವುದು. ಸಭಿಕರೆಲ್ಲರೂ ತಂತಮ್ಮ ಸ್ಥಲಗಳಿಂದ ರಾಜಧಾನಿಯಾದ ಲಂಡನ್ ನಗರಕ್ಕೆ ಅನೇಕ ವೇಳೆ ಪ್ರಯಾಣಮಾಡುವರು; ಲಂಡನ್ನಿನಲ್ಲಿ ಆರು ತಿಂಗಳ ಕಾಲವಾದರೂ ಕಳೆಯಬೇಕಾಗುವುದು. ಈ ವೆಚ್ಚವೆಲ್ಲವನ್ನೂ ಸ್ವಂತವಾಗಿಯೇ ಸಭಿಕರು ನಡೆಸಿಕೊಳ್ಳುತ್ತಿದ್ದರು. 1911ರ ವರೆಗೆ ಸಭಿಕರಿಗೆ ಗೌರವ ಮಾತ್ರವೇ ಸಲ್ಲುತ್ತಿತ್ತು, ಸಂಬಳ ಸಂಭಾವನೆಗಳು ಯಾವುವೂ ಇರಲಿಲ್ಲ. 1911ರಿಂದ ಲೇಬರ್ ಪಕ್ಷದವರ ಅನುಕೂಲಕ್ಕಾಗಿ ಸಭಿಕರಿಗೆ ಸಂಬಳವಿರತಕ್ಕುದೆಂದು ತೀರ್ಮಾನವಾಯಿತು. ಸಭಿಕನಿಗೆ ವರ್ಷಕ್ಕೆ £400 ಸಂಬಳ ಸಲ್ಲುವುದು. ಇದನ್ನು ಅನೇಕರು ಸ್ವೀಕರಿಸುವುದೇ ಇಲ್ಲ; ದಾನಧರ್ಮಕ್ಕಾಗಿ ಕೊಟ್ಟುಬಿಟ್ಟು ತಮ್ಮ ಹೆಮ್ಮೆಯನ್ನು ಉಳಿಸಿಕೊಳ್ಳುತ್ತಾರೆ.

ಸಭಿಕನಾದವನಿಗೆ ಕೆಲಸಕಾರ್ಯಗಳು ಹೆಚ್ಚಾಗಿಯೇ ಇರುತ್ತವೆ; ವಿರಾಮ ಹೆಚ್ಚಾಗಿರುವುದಿಲ್ಲ. ರಾಷ್ಟ್ರ ಸ್ಥಿತಿಗತಿಗಳನ್ನು ಚೆನ್ನಾಗಿ ತಿಳಿದುಕೊಂಡು ಅವುಗಳ ವಿಮರ್ಶೆಯನ್ನು ಯೋಗ್ಯತೆಯಿಂದ ಮಾಡುವ ಪರಿಜ್ಞಾನವನ್ನು ಸಂಪಾದಿಸುತ್ತಲೇ ಇದ್ದು ಸಮಯ ಬಂದಾಗ ಯೋಗ್ಯವಾದ ಅಭಿಮತವನ್ನು ಸೂಚಿಸಲು ಶಕ್ತನಾಗಿರಬೇಕು. ತನ್ನನ್ನು ವರಿಸಿ ಕಳುಹಿಸಿಕೊಟ್ಟ ಜನಭಾಗದವರಿಗೆ ಅನೇಕ ವಿಷಯಗಳಲ್ಲಿ ಪ್ರಜ್ಞೆಯನ್ನುಂಟುಮಾಡಬೇಕು, ಮತ್ತು ಅವರ ಇಷ್ಟಾನಿಷ್ಟಗಳನ್ನು ಆಗಾಗ್ಗೆ ತಿಳಿದುಕೊಂಡು ಜಾಗರೂಕನಾಗಿರಬೇಕು. ಕಾಮನ್ಸ್ ಸಭೆಯು ಸುಮಾರು ಆರು ತಿಂಗಳಕಾಲ ಲಂಡನ್ನಿನಲ್ಲಿ ನೆರೆಯುತ್ತದೆ; ಆ ಆರು ತಿಂಗಳೂ ಲಂಡನ್ನಿನಲ್ಲಿದ್ದುಕೊಂಡು ಕಾಮನ್ಸ್ ಸಭೆಗೇ ಅಲ್ಲದೆ ಇತರ ಸಭೆಗಳಿಗೂ ಹೋಗುತ್ತಲಿರಬೇಕು. ಯಾವ ಪಕ್ಷಕ್ಕೆ ಸೇರಿರುತ್ತಾನೆಯೋ ಆ ಪಕ್ಷದವರಲ್ಲಿ ತನ್ನ ಕೆಲಸವನ್ನು ನಿರ್ವಹಿಸಬೇಕು. ಸಾಧಾರಣವಾಗಿ ಪ್ರತಿ ಸಭಿಕನೂ ಯಾವುದಾದರೊಂದು ಕಕ್ಷಿಗೆ ಅಥವಾ ಪಾರ್ಟಿಗೆ ಸೇರಿಯೇ ಇರುತ್ತಾನೆ. ಹೀಗಿರುವಲ್ಲಿ ಸಭಿಕನಾದಾತನಿಗೆ ಕೇವಲ ಟಪ್ಪಾಲಿನ ಕೆಲಸವೇ ದಿನವಹಿ ಎರಡು ಗಂಟೆಗಳ ಕಾಲ ಹಿಡಿಯುತ್ತದೆ. ಸಭಿಕನಾದಾತನು ಪ್ರತಿಷ್ಠೆಗೊಂಡು ಗೌರವವನ್ನನುಭವಿಸುತ್ತ ಉತ್ಸವಮೂರ್ತಿಯಾಗಿರಲು ಅವಕಾಶವೇ ಇರುವುದಿಲ್ಲ.

ಕರ್ತವ್ಯ ರಾಶಿ

ಸಂಯುಕ್ತ ರಾಜ್ಯದಲ್ಲಿ ಮುಖ್ಯವಾಗಿರತಕ್ಕ ಪಾರ್ಟಿಗಳು ಮೂರು: (1) ಕನ್ಸರ್ವೆಟಿವ್, (2) ಲಿಬರಲ್, (3) ಲೇಬರ್ ಎಂಬವು. ಅವುಗಳಲ್ಲಿಯೂ ಸಣ್ಣ ಸಣ್ಣ ಗುಂಪುಗಳಿರಬಹುದು; ಅವುಗಳಲ್ಲದೆ ಹಲಕೆಲವು ಪಾರ್ಟಿಗಳಿದ್ದಾಗ್ಯೂ ಅವು ಅಲ್ಪಸಂಖ್ಯಾಕವಾದವುಗಳು. ಸಂಖ್ಯಾಪ್ರಾಬಲ್ಯವಿರತಕ್ಕದ್ದು ಮೂರು ಪಾರ್ಟಿಗಳಿಗೆ ಮಾತ್ರ. ಶಾಸನವನ್ನು ಅಪೇಕ್ಷಿಸತಕ್ಕ ರಾಷ್ಟ್ರಭಾರದ ಅಂಶಗಳು ಅನೇಕವಾಗಿರುತ್ತವೆ. ತೆರಿಗೆ ಸುಂಕಗಳ ತಿದ್ದುಪಾಡೋ ನಿರುದ್ಯೋಗಿ ವರ್ಗದವರ ಉದ್ಧಾರವೋ ಶಿಕ್ಷಣ ನೀತಿಯೋ ವ್ಯಾಪಾರ ನಿಯಮಗಳೋ ಯಾವ ವಿಷಯವಾದರೂ ಅದರ ಇತ್ಯರ್ಥವು

ಪಕ್ಷ ವಿಪಕ್ಷಗಳ ವಿವರ

ಬೇರೆಬೇರೆ ರೀತಿಗಳಲ್ಲಿ ಆಗಬಹುದು. ಇಂತಹ ಸಮಸ್ಯೆಗಳು ತೋರಿ ಕೊಂಡಿದ್ದಾಗ ಸಾಮಾನ್ಯವಾಗಿ ಕನ್ಸರ್ವೆಟಿವ್ ಪಾರ್ಟಿಯವರ ಅಭಿಪ್ರಾಯವು ಒಂದು ರೀತಿಯಾಗಿರುತ್ತದೆ; ಇತರ ಪಾರ್ಟಿಗಳ ಅಭಿಪ್ರಾಯವು ಅದಕ್ಕೆ ವಿರುದ್ಧವಾಗಿಯೋ ವ್ಯತ್ಯಸ್ತವಾಗಿಯೋ ಇರುತ್ತದೆ. ಪ್ರತಿ ಪಾರ್ಟಿಯೂ ಪ್ರಬಲವಾದ ಒಂದು ಸಂಘ. ಸಂಘಕ್ಕೆ ಅಧ್ಯಕ್ಷ, ಕಾರ್ಯದರ್ಶಿ, ಸಂಖ್ಯಾಪೂರಕ (Whip), ಮಂತ್ರಾಲೋಚನ ಮಂಡಲಿ ಮುಂತಾದ ವ್ಯವಸ್ಥೆಗಳುಂಟು. ವಿಹಾರ ಮಂದಿರ(Clubs)ಗಳೂ ವೃತ್ತಪತ್ರಿಕೆಗಳೂ ಉಂಟು. ಪ್ರತಿ ಪಾರ್ಟಿಯವರೂ ಜನರ ಮನಸ್ಸನ್ನು ಒಲಿಸಿ ತಮಗೆ ಹಿತವೆಂದು ತೋರಿದ ಮಾರ್ಗದಲ್ಲಿ ಸರ್ಕಾರವು ನಡೆಯುವಂತೆ ಏರ್ಪಡಿಸಲು ಉದ್ಯುಕ್ತರಾಗುತ್ತಾರೆ. ವರಣಕ್ಷೇತ್ರಗಳಲ್ಲಿ ತಮ್ಮ ಪಾರ್ಟಿಗೆ ಸೇರಿದವರನ್ನು ನಿಲ್ಲಿಸುತ್ತಾರೆ; ತಮ್ಮ ಪಾರ್ಟಿಗೆ ಸೇರಿದ ಕಾಮನ್ಸ್ ಸಭಿಕರ ಸಂಖ್ಯೆಯನ್ನು ಹೆಚ್ಚಿಸಲು ತಕ್ಕ ಸನ್ನಾಹಗಳನ್ನು ನಡೆಸುತ್ತ ಆ ಸಭೆಯಲ್ಲಿ ಬಹು ಸಂಖ್ಯಾಬಲವನ್ನು ಪಡೆಯಲು ಸದಾ ನಿರತರಾಗಿರುತ್ತಾರೆ. ಬಹು ಸಂಖ್ಯಾಬಲವಿದ್ದರೆಯೇ ತಮ್ಮ ಅಭಿಪ್ರಾಯದಂತೆ ಕೆಲಸಕಾರ್ಯಗಳನ್ನು ನಡೆಸಲು ಸಾಧ್ಯ.

ಸಾರ್ವತ್ರಿಕವಾದ ವರಣಗಳು ಮುಗಿದ ಕೂಡಲೆ ಬಹು ಸಂಖ್ಯಾ ಬಲವುಳ್ಳ ಪಾರ್ಟಿ ಯಾವುದೆಂದು ತಿಳಿದುಬರುವುದು.

ಜನತೆಯ ವಿಶ್ವಾಸ ಪರೀಕ್ಷೆ. ಬಹು ಬಲವು ಯಾರದೆಂದು ದೃಢವಾದ ಕೂಡಲೆ ರಾಜನು ಆ ಪಾರ್ಟಿಯ ನಾಯಕನನ್ನು ಬರಮಾಡಿ ಕೊಂಡು ಮಂತ್ರಿಮಂಡಲಿಯನ್ನು ಜತೆಗೂಡಿಸತಕ್ಕದೆಂದು ನಿರೂಪಿಸುವನು. ಅದುವರೆಗೂ ಅಧಿಕಾರ ನಿರತರಾದವರು ಅದೇ ಪಾರ್ಟಿಯವರಾಗಿದ್ದರೆ ಆ ಪಾರ್ಟಿಯಲ್ಲಿ ಜನರಿಗಿರುವ ವಿಶ್ವಾಸವು ದೃಢವೆನಿಸುವುದು. ಬೇರೆಯವರಾಗಿದ್ದ ಪಕ್ಷದಲ್ಲಿ ವರಣ ಫಲಿತಾಂಶವು ತಿಳಿದೊಡನೆಯೇ ಆ ಮಂತ್ರಿಮಂಡಲಿಯವರು ಒಟ್ಟಿಗೆ ಅಧಿಕಾರದಿಂದ ನಿವೃತ್ತರಾಗುವರು. ಈ ರೀತಿಯಲ್ಲಿ ಬಹುಜನರ ವಿಶ್ವಾಸಕ್ಕೆ ಪಾತ್ರವಾದ ಅಥವಾ ಜನತೆಯ ಬೆಂಬಲವನ್ನು ವಿಶೇಷವಾಗಿ ಪಡೆದ ಪಾರ್ಟಿಯವರೇ ಮಂತ್ರಿವರ್ಗವಾಗಿ ಏರ್ಪಡುವುದು. ಆ ಪಾರ್ಟಿಯ ನಾಯಕನೇ ಮುಖ್ಯಸ್ಥನೆನಿಸಿ ತನ್ನ

ಜತೆಗಾರರನ್ನು ಗೊತ್ತುಮಾಡಿಕೊಂಡು ರಾಷ್ಟ್ರಕ್ಕೆ ನಾಯಕನು ಮಾತ್ರವಲ್ಲದೆ ಪಾರ್ಲಿಮೆಂಟಿಗೂ ನಾಯಕನಾಗುವನು. ಸಾರ್ವತ್ರಿಕ ವರಣಗಳು 5 ವರ್ಷಕ್ಕೊಮ್ಮೆ ನಡೆಯಬೇಕೆಂಬ ಶಾಸನವುಂಟು; ಒಂದು ಸಲ ವೃತರಾದ ಸಭಿಕರಿಂದ ಕೂಡಿದ ಸಭೆಯು 5 ವರ್ಷಗಳವರೆಗೆ ನಡೆಯಬಹುದು. ಮಧ್ಯೆ ಯಾವುದಾದರೂ ಕಾರಣ ತೋರಿಕೊಂಡು ಪಾರ್ಟಿಗಳ ಬಲಾಬಲಗಳು ಸಂದಿಗ್ಧವಾಗಿ ಕಂಡರೆ 5 ವರ್ಷಗಳು ಕಳೆಯದಿದ್ದರೂ ಸಾರ್ವತ್ರಿಕ ವರಣಗಳಾಗತಕ್ಕದೆಂದು ರಾಜಾಜ್ಞೆ ಹೊರಡಬಹುದು. 5 ವರ್ಷಗಳಿಗಿಂತ ಹೆಚ್ಚು ಕಾಲ ಯಾವ ಸಭಿಕನೂ ಪುನಃ ಜನರ ವಿಶ್ವಾಸಬಲದ ಪರೀಕ್ಷೆಯಿಲ್ಲದೆ ಸಭೆಯಲ್ಲಿರಲಾರನು. 5 ವರ್ಷಗಳಿಗೊಮ್ಮೆಯಾದರೂ ಜನರ ವಿಶ್ವಾಸದ ಪರೀಕ್ಷೆಯು ನಡೆದಲ್ಲಿ ಕಾಮನ್ಸ್ ಸಭೆಯು ಜನರ ಇಷ್ಟಾನಿಷ್ಟಗಳನ್ನು ತಕ್ಕಮಟ್ಟಿಗೆ ಪ್ರತಿಧ್ವನಿತವಾಗಿ ಮಾಡತಕ್ಕದ್ದಾಗಿರುತ್ತದೆ.

ಸಭಾಪತಿ

ವರಣ ಪೂರ್ತಿಯಾದ ಕೂಡಲೆ ಲಂಡನ್ನಿನಲ್ಲಿ ಸಭಿಕರಾದವರು ನೆರೆದು ತಮ್ಮ ಸಭೆಗೆ ಯಾರು ಸಭಾಪತಿಯಾಗಿರತಕ್ಕದೆಂದು ವರಣ ವಿಧಾನದಿಂದಲೇ ನಿಶ್ಚಯಿಸುವರು. ಸಭಾಪತಿಯು ರಾಷ್ಟ್ರಮುಖ್ಯರಲ್ಲಿ ಒಬ್ಬನು. ಕಾಮನ್ಸ್ ಸಭೆಯು ನೆರೆದಾಗಲೆಲ್ಲ ಆತನು ಅಧ್ಯಕ್ಷ ಪದವಿಯಲ್ಲಿದ್ದು ಸಭಾಕ್ರಮವನ್ನು ಜರುಗಿಸತಕ್ಕವನು. ಸಭೆಯ ಕರ್ತವ್ಯಕಲಾಪಗಳೆಲ್ಲವೂ ಆತನು ಗೊತ್ತುಪಡಿಸುವ ಕ್ರಮದಂತೆ ನಡೆಯತಕ್ಕದ್ದು. ಸಭೆಯಲ್ಲಿ ಭಾಷಣ ಪ್ರತಿ ಭಾಷಣಗಳು ನಡೆಯುವ ಕಾಲದಲ್ಲಿ ಸಭಿಕರೆಲ್ಲರೂ ಆತನ ವಶವರ್ತಿಗಳಾಗಿಯೇ ಇರಬೇಕು. ಕ್ರಮತಪ್ಪಿ ನಡೆದ ಸಭಿಕರನ್ನು ಆತನು ಶಿಕ್ಷಿಸಬಲ್ಲನು; ಆತನು ಸಭಾಮಂದಿರದಲ್ಲಿ ದಂಡಾಧಿಕಾರಿಯಂತೆಯೇ ಇರುವನು. ಕಾಮನ್ಸ್ ಸಭೆಗಾಗಿಯೇ ಪ್ರತ್ಯೇಕವಾದ ಪೋಲೀಸ್ ಅಥವಾ ಕಂಟಕಗ್ರಾಹಿಗಳ ಸಿಬ್ಬಂದಿಯುಂಟು; ಅದಕ್ಕೆ ಸಭಾಪತಿಯೇ ಸರ್ವಾಧಿಕಾರಿ. ಈ ಸಭಾಪತಿಗೆ ಸ್ಪೀಕರ್ (Speaker) ಎಂಬ ಹೆಸರಿದೆ; ಆದರೆ ಆತನು ಮಾತನಾಡುವುದು ಸ್ವಲ್ಪ. ಯಾವ ಪ್ರಸ್ತಾಪದಲ್ಲಿಯೂ ಆತನು ತನ್ನ ಅಭಿಪ್ರಾಯವನ್ನು ತಿಳಿಸುವುದಿಲ್ಲ. ಛಂದಗ್ರಹಣ ವೇಳೆಯಲ್ಲಿ

ಆತನು ಛಂದವನ್ನೂ ತೋರುವುದಿಲ್ಲ. ಅಪರೂಪವಾಗಿ ಸಭೆಯಲ್ಲಿ ಎರಡು ಪಕ್ಷಗಳು ಸರಿಸಮವಾಗಿ ಏರ್ಪಟ್ಟಿದ್ದು ಯಾವ ವಿಷಯದಲ್ಲಿಯಾದರೂ ಪಕ್ಷ ಪ್ರತಿಪಕ್ಷಗಳು ಸಮಾನ ಛಂದೋಬಲವುಳ್ಳವುಗಳಾಗಿದ್ದರೆ ಸಭಾಪತಿಯು ತನ್ನ ಛಂದವನ್ನು ಪ್ರಕಟಪಡಿಸಿ ವಿಷಯ ನಿಷ್ಕರ್ಷೆಯನ್ನು ಮಾಡಿಬಿಡುವನು. ಸಭೆಯ ಕಾರ್ಯವನ್ನು ನಡೆಸುವುದರಲ್ಲಿ ಅನೇಕಾನೇಕ ಸಂಪ್ರದಾಯಗಳೂ ನಿಯಮಗಳೂ ಉಂಟು. ಚರ್ಚೆಯಾಗುವ ರೀತಿ, ನಿಶ್ಚಯವನ್ನು ಗೊತ್ತುಪಡಿಸುವ ಕ್ರಮ, ಮಸೂದೆಗಳನ್ನು ಒಯ್ಯುವ ವಿಧಾನಗಳು ಬೇರೆಬೇರೆಯಾಗಿ ಉಂಟು. ಇವುಗಳಲ್ಲಿ ಸಭಾಪತಿಯು ಹಿಂದಿನ ಸಂಪ್ರದಾಯಗಳನ್ನು ತಪ್ಪದೆ ನಡೆಸಬೇಕು. ಆರುನೂರು ಏಳು ನೂರು ಸಭಿಕರು ಗುಂಪಾಗಿಕೂಡಿ ವಾದವಿವಾದಗಳನ್ನು ನಡೆಸುವಾಗ ಪುನರುಕ್ತಿಗಳೂ ಅಸಂಬದ್ಧ ಪ್ರಸ್ತಾಪಗಳೂ ಇಲ್ಲದಂತೆ ಸಭಾಪತಿಯು ಎಚ್ಚರದಿಂದಿದ್ದು ಸಭೆಯ ಕೆಲಸವನ್ನು ಸಕಾಲದಲ್ಲಿ ಸಾಂಗಗೊಳಿಸಬೇಕು. ಸಭಾಪತಿಯು ಯಾವ ಪಾರ್ಟಿಗೂ ಸೇರಿರುವುದಿಲ್ಲ. ಹಿಂದೆ ಒಂದು ಪಾರ್ಟಿಗೆ ಸೇರಿದ್ದರೂ ಸಭಾಪತಿಯಾದ ಕೂಡಲೆ ಆ ಪಾರ್ಟಿಯನ್ನು ಬಿಟ್ಟುಬಿಡುತ್ತಾನೆ. ಸಭಾಪತಿಯಾದವನು ನಿಷ್ಪಕ್ಷಪಾತಿಯಾಗಿರಬೇಕಾದ ತತ್ತ್ವವೇ ಅದಕ್ಕೆ ಕಾರಣ. ಸಭಾಪತಿಯ ಆಜ್ಞೆಯನ್ನು ಯಾವ ಸಭಿಕನೂ ಉಲ್ಲಂಘಿಸುವುದಿಲ್ಲ. ತಾವಾಗಿಯೇ ಗೊತ್ತುಮಾಡಿಕೊಂಡ ಯಜಮಾನನಾದುದರಿಂದ ಎಲ್ಲರೂ ಆತನಿಗೆ ವಿಧೇಯರಾಗಿಯೇ ವರ್ತಿಸುತ್ತಾರೆ. ಎಲ್ಲರೂ ವಿಧೇಯರಾಗಿರುವುದು ಅವಶ್ಯವಾದುದರಿಂದ ಸಾಮಾನ್ಯವಾಗಿ ಸಭಾಪತಿಯ ವರಣದಲ್ಲಿ ಎಲ್ಲರೂ ಏಕಮತದಿಂದಲೇ ವರಿಸುತ್ತಾರೆ.

ತರುವಾಯ ಪಾರ್ಲಿಮೆಂಟಿನ ಪ್ರಾರಂಭೋತ್ಸವವು ನಡೆಯುವುದು.

**ಆರಂಭೋತ್ಸವ**

ರಾಜನೇ ಸ್ವತಃ ಮೆರವಣಿಗೆ ಹೊರಟು ಸಭಾಗೃಹವನ್ನು ಪ್ರವೇಶಮಾಡಿ ಒಂದು ಭಾಷಣವನ್ನು ಓದಿ, ಸಭಿಕರು ತಮ್ಮ ಕಾರ್ಯಕ್ಕೆ ತೊಡಗಬಹುದೆಂದು ಸೂಚಿಸಿ, ಅಲ್ಲಿಂದ ಆ ಕೂಡಲೆ ಹೊರಟುಬಿಡುವನು. ರಾಜಭಾಷಣವೆಂಬುದೇ ಇದು; ರಾಜಭಾಷಣವೆಂದು ಹೆಸರಾದರೂ ಆ ಭಾಷಣವನ್ನು ಪ್ರಧಾನಮಂತ್ರಿಯೇ ಸಿದ್ಧಗೊಳಿಸಿರುತ್ತಾನೆ. ರಾಜನು ಸಭಾ

ಮಂದಿರದಲ್ಲಿರುವಷ್ಟು ಕಾಲ ಸಭಿಕರು ಯಾವ ಕೆಲಸವನ್ನೂ ಮಾಡುವುದಿಲ್ಲ. ರಾಜನು ಹೊರಟುಹೋದ ಕೂಡಲೆ ಕೆಲಸವನ್ನು ಪ್ರಾರಂಭಿಸುವರು. ರಾಜನಿಲ್ಲದಿರುವುದೇ ಸಭೆಯ ಸಂಪ್ರದಾಯ. ಪ್ರಾರಂಭದಲ್ಲಿ ಸಭಾಪತಿಯು ವೇದಿಕೆಯನ್ನೇರಿ ತನ್ನ ಸ್ಥಾನದಲ್ಲಿ ಕುಳಿತು ಮುಂದಿನ ಕಾರ್ಯಕ್ರಮ ವನ್ನು ಮೊದಲಿಡುವನು. ಆತನೆದುರಿನಲ್ಲಿ ಬಲಗಡೆಗೆ ಮಂತ್ರಿಮಂಡಲಿ ಯವರೂ ಅವರ ಪಕ್ಷದವರೂ ಇರುತ್ತಾರೆ. ಎಡಗಡೆಗೆ ಅವರಿಗೆ ವಿರೋಧ ವನ್ನು ತೋರುವ ಪ್ರತಿ ಪಕ್ಷದವರಿರುತ್ತಾರೆ. ಎಡಬಲ ಶಬ್ದಗಳು ಈ ರೀತಿಯಲ್ಲಿ ಪಕ್ಷ ವಿಪಕ್ಷಗಳಿಗೆ ಪರ್ಯಾಯವಾಗಿವೆ.

**ಪ್ರಶ್ನೋತ್ತರಗಳು**

ಸಭೆಯ ಕಾರ್ಯಕ್ರಮದಲ್ಲಿ ಪ್ರಶ್ನೋತ್ತರಗಳು, ನಿಶ್ಚಯಗಳು ಮತ್ತು ಮಸೂದೆಗಳೆಂಬುವೇ ಮುಖ್ಯವಾಗಿರು ತ್ತವೆ. ಸರ್ಕಾರವನ್ನು ನಡೆಸಲು ಸಿದ್ಧರಾಗಿ ರಾಷ್ಟ್ರದ ಅಧಿಕಾರವನ್ನೂ ಕರ್ತವ್ಯವನ್ನೂ ವಹಿ ಸಿದ ಮಂತ್ರಿಮಂಡಲಿಯು ಏನುಮಾಡಬೇಕಾದರೂ ಕಾಮನ್ಸ್ ಸಭೆಯ ಅನುಮತಿಯನ್ನು ಪಡೆಯಲೇ ಬೇಕಾಗಿರುವುದರಿಂದ ಅವರು ಸಭೆಗೊದಗಿ ಸುವ ಕಾರ್ಯಕಲಾಪವು ಹೆಚ್ಚಾಗಿಯೂ ಇರುತ್ತದೆ, ಆತುರದ್ದಾಗಿಯೂ ಇರುತ್ತದೆ. ಸಭೆಯ ಕಾರ್ಯಕ್ರಮವನ್ನು ಗೊತ್ತುಪಡಿಸುವ ಸಭಾ ಪತಿಯು, ಮಂತ್ರಿ ಮಂಡಲಿಯವರ ಕೆಲಸವೇ ಮುಖ್ಯವಾದುದರಿಂದ ಅದನ್ನೇ ಮೊದಲು ಏರ್ಪಡಿಸುವನು. ಸಭಾಕಾರ್ಯವು ಬಹುಶಃ ಪ್ರಶ್ನೋತ್ತರಗಳಿಂದ ಮೊದಲಾಗುವುದು. ಸಭಿಕನಾದವನು ಸಮಾಚಾರ ವನ್ನಪೇಕ್ಷಿಸುತ್ತ ಯಾವ ಪ್ರಶ್ನೆಯನ್ನಾದರೂ ಕೇಳಬಹುದು; ಕೇಳಿದ ಪ್ರಶ್ನೆಗಳಿಗೆ ಮಂತ್ರಿಪಕ್ಷದವರು ಸಮಾಧಾನವನ್ನು ಹೇಳಲೇ ಬೇಕಾಗಿರು ತ್ತದೆ. ಪ್ರಶ್ನೆಗಳನ್ನು ಕೇಳುವಾತನು ಜಾಣನಾಗಿದ್ದರೆ ಮುಚ್ಚು ಮರೆ ಮಾಡಿರಬಹುದಾದ ವಿಷಯವನ್ನು ಪ್ರಶ್ನೆಗಳ ಮೂಲಕ ಬಯಲಿಗೆಳೆಯು ವನು; ಪ್ರಶ್ನೆಗಳನ್ನು ಕೇಳುವುದರಲ್ಲಿಯೇ ದೋಷಾರೋಪಣೆಯನ್ನು ಸೂಚಿಸುವನು. ಸಮಾಧಾನ ಹೇಳುವುದರಲ್ಲಿಯೂ ಬಲು ಜಾಣ್ಮೆಯು ಇರಬೇಕು. ರಾಷ್ಟ್ರ ರಹಸ್ಯಗಳನ್ನು ಮಾತ್ರ ಬಿಚ್ಚಿಹೇಳತಕ್ಕದ್ದಿಲ್ಲ; ಉಳಿದ ವಿಷಯ ಯಾವುದಾದರೂ ಸಭಿಕರಿಗೆ ಪ್ರಶ್ನೆ ಹಾಕುವುದರಲ್ಲಿ ಸರ್ವಾಧಿಕಾರ ವುಂಟು. ಸಭೆಯ ಕೆಲಸಕ್ಕೆ ಅಡ್ಡಿಯಾಗುವಷ್ಟು ಹೊತ್ತನ್ನು ಪ್ರಶ್ನೋ

ತ್ತರಗಳು ಆಕ್ರಮಿಸಬಾರದು. ಒಂದು ಪ್ರಶ್ನೆಯನ್ನು ಕೇಳಿ ಅದಕ್ಕೆ ಸಂಬಂಧವಾಗಿ ಇತರ ಪ್ರಶ್ನೆಗಳನ್ನು ಪರಂಪರೆಯಾಗಿ ಕೇಳುವುದೂ ಉಂಟು.

ನಿಶ್ಚಯಗಳು

ನಿಶ್ಚಯಗಳನ್ನು ಯಾವ ವಿಷಯದಲ್ಲಿಯಾದರೂ ಸಭಿಕರು ಬಹು ಮತದಿಂದ ಗೊತ್ತುಪಡಿಸಬಹುದು. ನಿಶ್ಚಯಗಳು ಕಾನೂನುಗಳಾಗಿ ಏರ್ಪಡುವುದಿಲ್ಲ. ಕಾನೂನು ಗಳಾಗಿ ಏರ್ಪಡತಕ್ಕವು ಮಸೂದೆಗಳೆಂಬವು. ಕಾನೂನಾಗತಕ್ಕದ್ದು ಕಾಮನ್ಸ್ ಸಭೆಯಲ್ಲಿಯೇ ಆದುದರಿಂದ ಶಾಸನಗಳು ಅಥವಾ ಕಾನೂನುಗಳು ಮೊದಲು ಮಸೂದೆ (Bill) ಯೆಂಬ ರೂಪದಿಂದಲೇ ಹುಟ್ಟಬೇಕು. ಮಂತ್ರಿಮಂಡಲಿಯವರೇ ಅಲ್ಲದೆ ಇತರ ಸಭಿಕರೂ ಮಸೂದೆಗಳನ್ನು ಪ್ರಾರಂಭಿಸಬಹುದು; ಆದರೆ ಮಂತ್ರಿವರ್ಗದವರ ಮಸೂದೆಗಳಿಗೇ ಮೊದಲಿನ ಅವಕಾಶ ಸಿಕ್ಕುವುದು. ಇಂತಹ ಮಸೂದೆ ಗಳನ್ನು ಮುಂಚಿತವಾಗಿಯೇ ಸಭೆಯ ಕರಣಿಕನಿಗೆ ಕೊಟ್ಟಿರಬೇಕು. ಬಂದ ಮಸೂದೆಗಳೆಲ್ಲವನ್ನೂ ಕರಣಿಕನು ಸಭಾಪತಿಯ ಮುಂದಿಡುವನು; ಸಭಾ ಪತಿಯೇ ಕಾಲವನ್ನೂ ಕ್ರಮವನ್ನೂ ಗೊತ್ತುಮಾಡುವನು. ಗೊತ್ತಾದ ಸಮಯ ಬಂದ ಕೂಡಲೇ ಮಸೂದೆಯನ್ನು ಸೂಚಿಸಿದ ಸಭಿಕನೆದ್ದುನಿಂತು ತಾನು ಸೂಚಿಸುವ ವಿಷಯವನ್ನು ಕುರಿತು ಸಂಕ್ಷೇಪವಾಗಿ ಭಾಷಣ ಮಾಡುವನು. ವಿಷಯದ ವಿವರಕ್ಕೆ ಆಗ ತೊಡಗಲಾಗುವುದಿಲ್ಲ; ಸ್ಥೂಲ ವಾಗಿ ಮಾತ್ರ ಸ್ಥಿತಿಗತಿಗಳನ್ನೂ ತನ್ನ ಸೂಚನೆಯನ್ನೂ ತಿಳಿಸುವನು. ತರುವಾಯ ಆತನ ಪಕ್ಷದವನಿನ್ನೊಬ್ಬನೆದ್ದು ನಿಂತು ಹಲಕೆಲವು ಮಾತು ಗಳನ್ನು ಹೇಳಿ ಅದನ್ನು ಅನುಮೋದಿಸಬೇಕು. ಇಬ್ಬರ ಭಾಷಣಗಳು ಈ ರೀತಿ ಮುಗಿದಮೇಲೆ ಪ್ರತಿಪಕ್ಷದವರಲ್ಲಿ ಒಬ್ಬಾತನೆದ್ದು ನಿಂತು ಸ್ಥೂಲವಾದ ರೀತಿಯಲ್ಲಿಯೇ ವಿಚಾರಮಾಡುತ್ತ ಮಸೂದೆಗೆ ವಿರೋಧವನ್ನು ಸೂಚಿ ಸುವನು; ಆತನಿಗೆ ಸಹಾಯಕನಾಗಿ ಮತ್ತೊಬ್ಬನು ವಿರೋಧವನ್ನು

ಮಸೂದೆ

ಅನುಮೋದಿಸುವನು. ಈ ನಾಲ್ವರ ಸರದಿಯು ಮುಗಿದ ಬಳಿಕ ಸಭಾಪತಿಯು ಅವಕಾಶಕೊಟ್ಟಂತೆ ಇತರ ಸಭಿಕರೂ ತಮ್ಮ ಪಕ್ಷದ ವಾದವನ್ನು ಸ್ಥೂಲ ವಾದ ರೀತಿಯಲ್ಲಿಯೇ ಮಾಡುವರು. ವಾದವಿವಾದಗಳು ತಕ್ಕಮಟ್ಟಿಗೆ ನಡೆದವೆಂದು ಕಂಡಕೂಡಲೆ ಸಭಾಪತಿಯು ಛಂದೋಬಲ ನಿಷ್ಕರ್ಷೆ

ಮಾಡುವನು. ಕೈಯೆತ್ತಿ ಅಭಿಪ್ರಾಯ ಪ್ರಕಾಶಮಾಡುವುದು ಸಾಮಾನ್ಯ; ಆ ರೀತಿಯಲ್ಲಿ ಬೇಗನೆ ನಿಷ್ಕರ್ಷೆಯು ಮುಗಿದುಹೋಗುವುದು. ಹಾಗಲ್ಲದೆ ಅನುಕೂಲ ಪ್ರತಿಕೂಲ ಪಕ್ಷಗಳ ಸಂಖ್ಯಾ ನಿರ್ದೇಶವು ಕ್ರಮವಾಗಿಯೇ ನಡೆಯತಕ್ಕದ್ದೆಂದು ಸೂಚಕನು ಇಷ್ಟಪಟ್ಟಲ್ಲಿ ಸಭಿಕರೆಲ್ಲರನ್ನೂ ಸೇರಿಸಲು ಆಯಾ ಪಕ್ಷದ ಸಂಖ್ಯಾಪೂರಕರು ಓಡಾಡುವರು. ಅನುಕೂಲ ಪಕ್ಷದವರು ಒಂದು ಬಾಗಿಲಿನಲ್ಲಿಯೂ ಪ್ರತಿಕೂಲ ಪಕ್ಷದವರು ಮತ್ತೊಂದು ಬಾಗಿಲಿನಲ್ಲಿಯೂ ಒಬ್ಬೊಬ್ಬರಾಗಿ ಹೊರಡುತ್ತ ತಮ್ಮ ಚಿಕ್ಕಲಗಳನ್ನು ಕಡತದಲ್ಲಿ ಸ್ವಹಸ್ತದಿಂದಲೇ ಬರೆಯುವರು. ಇದೇ ಸಭಾ ವಿಭಜನೆಯೆಂಬುದು. ಇದಕ್ಕೆ ಕಾಲ ಹಿಡಿಯುವುದರಿಂದ ಮುಖ್ಯವಾದ ಸಂದರ್ಭಗಳಲ್ಲಿಯೇ ವಿಭಜನೆಯು ನಡೆಯುವುದು. ಸಾಮಾನ್ಯ ವಿಚಾರಗಳಲ್ಲಿ ಕೈಯೆತ್ತುವುದೇ ಸಾಕಾಗಿರುತ್ತದೆ. ಛಂದೋಬಲ ನಿರ್ದೇಶಗಳಲ್ಲಿ ಮಸೂದೆಗೆ ವಿರೋಧಿಗಳಾದವರೇ ಬಹು ಸಂಖ್ಯಾಕರಾಗಿದ್ದರೆ ಮಸೂದೆಯು ಬಿದ್ದುಹೋಗುವುದು. ಅದರ ಸೂಚಕನು ಶ್ರದ್ಧಾವಂತನಾಗಿದ್ದರೆ ಪುನಃ ಬೇರೊಂದು ಸಂದರ್ಭವನ್ನು ಸಂಪಾದಿಸಿಕೊಂಡು ಮರಳಿ ಪ್ರಯತ್ನ ಮಾಡಬೇಕು. ಅನುಕೂಲರಾದವರ ಸಂಖ್ಯೆಯೇ ಹೆಚ್ಚಾಗಿದ್ದರೆ ಮಸೂದೆಯು ಬಹುಮತದಿಂದ ಒಪ್ಪಿಗೆಯನ್ನು ಪಡೆಯುವುದು. ಫರ್ಸ್ಟ್ ರೀಡಿಂಗ್ (First Reading) ಎಂದು ಈ ಗತಿಗೆ ಹೆಸರು; ಮಸೂದೆಯು ಕಾನೂನಾಗಿ ಏರ್ಪಡುವ ಕ್ರಮದಲ್ಲಿ ಅದೇ ಮೊದಲನೆಯ ಹೆಜ್ಜೆ ಅಥವಾ ಹಂತ. ಈ ಮೊದಲನೆಯ ಹಂತವು ಕಳೆದ ಬಳಿಕ ಎರಡನೇ ಹಂತವೂ ಮೂರನೇ ಹಂತವೂ ಕಳೆಯಬೇಕು. ಮೂರು ಹಂತಗಳನ್ನು ಪರದಿದ್ದರೆ ಮಸೂದೆಯೆಂಬುದು ಕಾನೂನಾಗುವ ಸಂಭವವೇ ಇಲ್ಲ.

ಒಂದನೇ ಹಂತ

ಎರಡನೆಯ ಹಂತವಾದ ಸೆಕಂಡ್ ರೀಡಿಂಗ್ (Second Reading) ಎಂಬುದೇ ಮಸೂದೆಯ ಗತಿಯಲ್ಲಿ ಅತಿಮುಖ್ಯವಾದುದು. ಅದಕ್ಕೆ ವೇಳೆಯೊದಗಿದ ಕೂಡಲೆ ಸೂಚಕನಾದ ಸಭಿಕನೆದ್ದು ಸಭೆಯು ಕಮಿಟಿ ರೂಪದಲ್ಲಿ ಮಸೂದೆಯ ವಿಮರ್ಶೆಯನ್ನು ನಡೆಸತಕ್ಕುದೆಂದು ಸೂಚಿಸುವನು.

ಎರಡನೇ ಹಂತ

ಆ ಸೂಚನೆಯು ಒಪ್ಪಿಗೆಯಾದ ಕೂಡಲೆ ಸಭಾಪತಿಯು ತನ್ನ ಸ್ಥಾನವನ್ನು ಬಿಟ್ಟು ಹೊರಡುವನು. ಎಲ್ಲ ಸಭಿಕರೂ ಇದ್ದೇ ಇರುವರು. ಸಭಾಪತಿಯು ಇದ್ದರೆ ಮಾತಿಗೆ ತಡೆಯಿರುತ್ತದೆ; ಭಾಷಣಗಳನ್ನು ಉಚಿತ ಕ್ರಮದಲ್ಲಿಯೇ ಮಾಡಬೇಕಾಗಿರುತ್ತದೆ. ಆತನಿಲ್ಲದಿದ್ದರೆ ವೇಗವೇಗವಾಗಿ ಮಾತನಾಡಬಹುದು, ಸಣ್ಣ ಸಣ್ಣ ಅಂಶಗಳನ್ನೆತ್ತಿ ವಿಮರ್ಶೆ ಮಾಡಬಹುದು. ಅಲ್ಲದೆ ಮಸೂದೆಯು ಯಾವ ವಿಷಯಕ್ಕೆ ಸಂಬಂಧಪಟ್ಟಿದೋ ಆ ವಿಷಯದಲ್ಲಿ ಪರಿಶ್ರಮವುಳ್ಳ ಸಭಿಕನೇ ಅಧ್ಯಕ್ಷನಾಗಿದ್ದರೆ ಮೇಲಾಗಿರುವುದು. ಇದಕ್ಕಾಗಿ ಎರಡನೆಯ ಹಂತದಲ್ಲಿ ಮಸೂದೆಯಿರುವಾಗ ಬೇರೊಬ್ಬ ಅಧ್ಯಕ್ಷನನ್ನು ಸಭಿಕರು ತಮ್ಮಲ್ಲಿಯೇ ಗೊತ್ತುಮಾಡಿಕೊಳ್ಳುವರು. ಈ ಕಮಿಟಿ ಅವಸ್ಥೆಯಲ್ಲಿ ವಾದವಿವಾದಗಳು, ಚರ್ಚೆಗಳು ಬೇಕುಬೇಕಾದಂತೆ ನಡೆಯುವುವು. ಮಸೂದೆಗೆ ತಿದ್ದುಪಡಿಗಳ ಮೇಲೆ ತಿದ್ದುಪಡಿಗಳು ತೋರಿಕೊಳ್ಳುವುವು. ಮಸೂದೆಯ ಪ್ರತ್ಯಂಶವೂ ಪ್ರತ್ಯಕ್ಷರವೂ ಪರೀಕ್ಷೆಗೂ ವಿಮರ್ಶೆಗೂ ಸಿಕ್ಕಿಬಿದ್ದು ಈ ಅವಸ್ಥೆಯಿಂದ ಪಾರಾಗುವ ವೇಳೆಗೆ ರೂಪಾಂತರವನ್ನೇ ಪಡೆಯುವುದು. ಈ ಎರಡನೆಯ ಹಂತವನ್ನು ದಾಟಿದರೆ ಮಸೂದೆಯು ವಿಪತ್ತನ್ನು ದಾಟಿದಂತೆಯೇ. ಮೂರನೆಯ ಹಂತವೆನ್ನುವುದು ಆಚರಣೆಯ ಕ್ರಮಕ್ಕಾಗಿ ಮಾತ್ರ. ಎರಡನೆಯ ಹಂತವು ಕಳೆದಮೇಲೆ ಮೂರನೆಯ ಹಂತಕ್ಕೆಂದು ನಿಷ್ಕರ್ಷೆಯಾದ ದಿನ ಸೂಚಕನೇ ಎದ್ದು

ಮೂರನೇ ಹಂತ

ಮೂರನೆಯ ಹಂತವನ್ನೂ ಮಸೂದೆಯು ದಾಟಲೆಂದು ಭಾಷಣವನ್ನು ಮಾಡುವನು. ಛಂದೋಬಲ ನಿಷ್ಕರ್ಷೆಯೂ ನಡೆಯುವುದು. ಈ ರೀತಿ ಮೂರು ಹಂತಗಳನ್ನು ದಾಟಿದ ಹೊರತು ಯಾವ ಮಸೂದೆಯಾಗಲಿ ಕಾಮನ್ಸ್ ಸಭೆಯನ್ನು ಪಾರಾಯಿತು, ಅಥವಾ ಒಪ್ಪಿಗೆಯನ್ನು ಪಡೆಯಿತು ಎಂದು ಹೇಳಲಾಗುವುದಿಲ್ಲ.

ಆ ತರುವಾಯ ಮಸೂದೆಯು ಶ್ರೀಮಂತರ ಸಭೆಗೆ ಅಥವಾ ಲಾರ್ಡ್ಸ್ ಸಭೆಗೆ ಹೊರಡುವುದು. ಅಲ್ಲಿಯೂ

ಶ್ರೀಮಂತ ಸಭೆ

700ಕ್ಕೆ ಮೇಲ್ಪಟ್ಟ ಸಭಿಕರಿರುತ್ತಾರೆ. ಆದರೆ ಅಲ್ಲಿಯ ಸಭಿಕರು ವರಣಕ್ಕೊಳಗಾಗಿ ವರಣ ಬಲದಿಂದ ಕೂಡಿದವರಲ್ಲ. ಅವರೆಲ್ಲರೂ ಸ್ಥಿತಿವಂತರಾಗಿ ಶ್ರೀಮಂತ ವರ್ಗಕ್ಕೆ

ಸೇರಿದವರು. ಹಲಕೆಲವರು ಮಾತ್ರ ತಮ್ಮ ಶ್ರೀಮಂತ ವರ್ಗದವರಿಂದಲೇ ವೃತರಾದವರು. ಉಳಿದವರೆಲ್ಲರೂ ವಂಶಪರಂಪರೆಯಾಗಿ ಸದಸ್ಯರಾಗಿರ ತಕ್ಕವರು. ಈ ಶ್ರೀಮಂತ ಸಭೆಯಲ್ಲಿ ಅಲಂಕಾರ ಹೆಚ್ಚು; ಸದಸ್ಯರು ತಮ್ಮ ಬಿರುದುಗಳನ್ನು ತೋರುವುದಲ್ಲದೆ ತಮ್ಮ ಶ್ರೇಷ್ಠಪದವಿಯನ್ನು ತೋರುವ ಅಲಂಕಾರವನ್ನೂ ಧರಿಸಿರುವರು. ಇಲ್ಲಿ ಸಭಾಪತಿಯಾದವನಿಗೆ ಲಾರ್ಡ್ ಛಾನ್ಸೆಲರ್ (Lord Chancellor) ಎಂದು ಹೆಸರು. ಇತನು ಶ್ರೀಮಂತ ಸಭೆಗೆ ಸಭಾಪತಿಯಾಗಿರುವುದಲ್ಲದೆ ರಾಷ್ಟ್ರದ ನ್ಯಾಯಾಧಿಪತಿಗಳಲ್ಲಿ ಅಗ್ರಗಣ್ಯನಾಗಿಯೂ ಇರುವನು. ಡ್ಯೂಕ್ (Duke), ಮಾರ್ಕ್ವಿಸ್ (Marquis), ಅರ್ಲ್ (Earl), ಬ್ಯಾರನ್ (Baron) ಮುಂತಾದ ಅನೇಕಾನೇಕ ವರ್ಗಗಳು ಶ್ರೀಮಂತರಲ್ಲುಂಟು. ಗೌರವದಲ್ಲಿಯೂ ಬಿರುದಾವಳಿಗಳಲ್ಲಿಯೂ ಈ ರೀತಿಯಾದ ವರ್ಗಭೇದಗಳಿದ್ದಾಗ್ಯೂ ಸಭೆಯಲ್ಲಿ ಮಾತ್ರ ಎಲ್ಲರೂ ಸಮಾನಾಧಿಕಾರಿಗಳಾಗಿಯೇ ವರ್ತಿಸುತ್ತಾರೆ. ಕಾಮನ್ಸ್ ಸಭೆಯ ಒಪ್ಪಿಗೆಯನ್ನು ಪಡೆದುಬಂದ ಮಸೂದೆಯು ಇವರಿಗೂ ಒಪ್ಪಿಗೆಯಾಗಬೇಕು. ಇವರಲ್ಲಿಯೂ ಮೂರು ಹಂತಗಳ ಕ್ರಮವು ನಡೆಯಬೇಕು. ಶ್ರೀಮಂತ ಸಭೆಯಲ್ಲಿ ಮಸೂದೆಯು ದುರ್ಗತಿಯನ್ನು ಪಡೆದರೆ ಅಲ್ಲಿಗೆ ಅದರ ಆಯುಷ್ಯವು ತೀರಿದಂತೆಯೇ. ಪುನಃ ಕಾಮನ್ಸ್ ಸಭೆಯವರು ಅದನ್ನೇ ಹುಟ್ಟಿಸಿ ತಮ್ಮಲ್ಲಿ ಮೂರು ಹಂತಗಳ ಕ್ರಮವನ್ನೂ ಯಥಾಪ್ರಕಾರ ನಡೆಯಿಸಿ ಕಳುಹಿಸಿಕೊಡುವವರೆಗೂ ಆ ಪ್ರಸ್ತಾಪವೇ ಇರುವುದಿಲ್ಲ. ಮಸೂದೆಯು ಶ್ರೀಮಂತರ ಸಭೆಯಲ್ಲಿಯೂ ಮೂರು ಹಂತಗಳನ್ನು ಏರಿದರೆ ಮುಂದಕ್ಕೆ ಅದು ರಾಜನ ಒಳಿಗೆ ಹೊರಡುವುದು. ಎರಡು ಸಭೆಗಳಿಗೂ ಒಪ್ಪಿಗೆಯಾದ ಹೊರತು ರಾಜಸಮ್ಮುಖಕ್ಕೆ ಮಸೂದೆಯು ಹೊರಡುವ ಸಂಪ್ರದಾಯವಿಲ್ಲ.

ರಾಜ ಸಮ್ಮತಿ

ಹಾಗೆ ಬಂದ ಮಸೂದೆಗೆ ರಾಜನು ತನ್ನ ಸ್ವಹಸ್ತದ ಗುರುತನ್ನು ಮಾಡಿದಮೇಲೆ ಅದಕ್ಕೆ ಆಕ್ಟ್, ಸ್ಟ್ಯಾಚೂಟ್ ಅಥವಾ ಕಾನೂನಿನ ಬಲವುಂಟಾಗುವುದು. ರಾಜನು ಒಪ್ಪಲಾರೆನೆಂದು ಹೇಳುವ ಸಂಪ್ರದಾಯವೇ ಇಲ್ಲ. ಪಾರ್ಲಿಮೆಂಟು ಒಪ್ಪಿದುದನ್ನು ರಾಜನು ಒಪ್ಪತಕ್ಕದ್ದು ರಾಷ್ಟ್ರಸಂಪ್ರದಾಯ.

ಮಸೂದೆಗಳು ಕಾಮನ್ಸ್ ಸಭೆಯಲ್ಲಿಯೇ ಹುಟ್ಟಬೇಕೆಂಬ ನಿಯಮವೇನೂ ಇಲ್ಲ. ಶ್ರೀಮಂತ ಸಭೆಯಲ್ಲಿಯೂ ಹುಟ್ಟಬಹುದು; ಆದರೆ ಅಲ್ಲಿ ಪಾರಾದ ಕೂಡಲೆ ಕಾಮನ್ಸ್ ಸಭೆಗೆ ಬರಬೇಕು. ಈ ಪರಸ್ಪರ ನಿರ್ವಾಹದಲ್ಲಿ ಎರಡು ಸಭೆಗಳಿಗೂ ಸಮಾನವಾದ ಬಲವಿದೆಯೆಂದು ಭಾವಿಸಕೂಡದು. ಆಯುವ್ಯಯ ಸಂಬಂಧವಾದ ಮಸೂದೆಗಳು ಕಾಮನ್ಸ್ ಸಭೆಯಲ್ಲಿಯೇ ಮೊದಲು ತೋರಿಕೊಳ್ಳಬೇಕು; ಹಣದ ವಿಷಯದಲ್ಲಿ ಕಾಮನ್ಸ್ ಸಭೆಯವರು ಶ್ರೀಮಂತ ಸಭೆಗೆ ಸ್ವಲ್ಪ ಅಧಿಕಾರವನ್ನೂ ಬಿಟ್ಟುಕೊಟ್ಟಿಲ್ಲ. ಆಯುವ್ಯಯ ಸಂಬಂಧವಾದ ಮಸೂದೆಯನ್ನು ಶ್ರೀಮಂತರು ಒಪ್ಪದೆ ಹಾಳುಮಾಡಿದರೂ ಕಾಮನ್ಸ್ ಸಭೆಯವರು ಅದನ್ನೇ ಪುನಃ ಹುಟ್ಟಿಸಿ ಶ್ರೀಮಂತರ ಲಕ್ಷ್ಯವನ್ನೇ ಮಾಡದೆ ರಾಜಸಮ್ಮತಿಯನ್ನು ಪಡೆಯುವ ಕ್ರಮವೊಂದನ್ನು ಸ್ಥಾಪಿಸಿಕೊಂಡಿದ್ದಾರೆ. ಶ್ರೀಮಂತರ ಸಭೆಯೆಂಬುದಿದ್ದೂ ಹಣದ ವಿಷಯದಲ್ಲಿ ಅಧಿಕಾರವನ್ನು ಪಡೆದಿಲ್ಲ. ಇತರ ವಿಷಯಗಳಲ್ಲಿಯೂ ಕೂಡ ಶ್ರೀಮಂತರು ಒಪ್ಪಿಗೆಯನ್ನು ಕೊಡದೆ ಮುಷ್ಕರ ಹಿಡಿದರೆ ಕಾಮನ್ಸ್ ಸಭೆಯ ಮುಖಂಡರಾದ ಮಂತ್ರಿವರ್ಗದವರು ರಾಜನಿಗೆ ಹೇಳಿ ತಮಗೆ ಬೇಕಾದ ಕೆಲವರನ್ನು ಶ್ರೀಮಂತ ಪದವಿಗೆ ಏರಿಸಿ ಅವರ ಸಂಖ್ಯಾಬಲದಿಂದ ಶ್ರೀಮಂತ ಸಭೆಯಲ್ಲಿಯೂ ತಮಗೆ ಬೇಕಾದ ಮಸೂದೆಯ ಕ್ರಮವನ್ನು ನಡೆಸಿಬಿಡುವರು. ರಾಜನನ್ನೇ ತಮ್ಮ ಕಯ್ಯಲ್ಲಿಟ್ಟುಕೊಂಡ ಮಂತ್ರಿವರ್ಗದವರು ಶ್ರೀಮಂತರ ಸಂಖ್ಯಾಬಲವನ್ನೇ ಹೆಚ್ಚಿಸುವ ಬಲವುಳ್ಳವರು.

ಕಾಮನ್ಸ್ ಅಧಿಕಾರ

ಹೀಗಿರುವುದರಿಂದ ಶ್ರೀಮಂತ ಸಭೆಯು ಅಲಂಕಾರಕ್ಕೆ ಮಾತ್ರ ಇದ್ದಂತೆಯೇ ಆಯಿತು. ಆ ಸಭೆಯ ಕಾರ್ಯಕಲಾಪಗಳಲ್ಲಿ ನ್ಯಾಯತೀರ್ಮಾನವೂ ಸೇರಿದ್ದು ನ್ಯಾಯಸ್ಥಾನಗಳಲ್ಲಿ ಶ್ರೇಷ್ಠತಮವಾದುದೆನಿಸಿರುವುದರಿಂದ ಅದರ ಗೌರವವಿದ್ದೇ ಇರುತ್ತದೆ. ಶಾಸಕಾಂಗದ ಭಾಗವೆಂದು ನೋಡಿದಲ್ಲಿ ಶ್ರೀಮಂತರ ಸಭೆಯಿಂದ ನೆರವೇರತಕ್ಕುದು ಕಾಲವಿಳಂಬ ಮಾತ್ರ. ಅನೇಕ ವೇಳೆಗಳಲ್ಲಿ ಕಾಮನ್ಸ್

ದ್ವಿತೀಯ ಸಭೆಯ ಅಧಿಕಾರ

ಸಭೆಯವರ ಆತುರವನ್ನು ತಡೆದು ವಿವೇಕದ ದಾರಿಯನ್ನು ತೋರಬಹುದಾದರೂ ಅನೇಕ ವೇಳೆಗಳಲ್ಲಿ ಪ್ರಬಲ ವಿಘ್ನವಾಗಿಯೇ ಪ್ರವರ್ತಿಸಿರುವುದರಿಂದ ಶ್ರೀಮಂತ ಸಭೆಯಿಂದ ಶಾಸಕಾಧಿಕಾರವನ್ನು ತೆಗೆಯುವ ಯೋಚನೆಯು ಕೆಲವರಲ್ಲಿ ನಡೆಯುತ್ತಲಿದೆ. ಶಾಸಕಸಭಾದ್ವಯುಗಳುಳ್ಳ ರಾಷ್ಟ್ರಗಳಲ್ಲಿ ಜನಸಾಮಾನ್ಯರ ಪ್ರತಿನಿಧಿಗಳು ನೆರೆದ ಸಭೆಗೇ ಅಗ್ರಸ್ಥಾನವಿರುವುದು; ಅದನ್ನೇ ಪ್ರಥಮ ಸಭೆಯೆಂದು ನಿರ್ದೇಶಿಸುವುದು. ಮತ್ತೊಂದನ್ನು ದ್ವಿತೀಯವೆಂದೇ ಕರೆಯುವ ಪದ್ಧತಿ. ಸಂಯುಕ್ತ ರಾಜ್ಯದಲ್ಲಿ ದ್ವಿತೀಯ ಸಭೆಯಾದ ಶ್ರೀಮಂತ ಸಭೆಯು ಈ ರೀತಿ ವಂಶಪಾರಂಪರ್ಯವಾಗಿ ನಡೆಯತಕ್ಕುದಾಗಿ ಅಧಿಕಾರಬಲವಿಲ್ಲದೆ ಅನೇಕವೇಳೆ ಅಪಹಾಸ್ಯಕ್ಕೇ ಗುರಿಯಾಗಿದೆ.

ಪಾರ್ಲಿಮೆಂಟಿನಲ್ಲಿ ಕಾಮನ್ಸ್ ಸಭೆಗೇ ಶಾಸಕ ಕ್ಷೇತ್ರದಲ್ಲಿ ಸರ್ವಾಧಿಕಾರವಿರುವುದು. ಪ್ರತಿನಿಧಿಗಳಿಂದ ಕೂಡಿದ ಆ ಸಭೆಯ ಮುಖ್ಯಸ್ಥರು ಕಾರ್ಯಾಂಗವನ್ನು ನಡೆಸುವ ಕ್ಯಾಬಿನೆಟ್ ಪದ್ಧತಿಯನ್ನು ಆಗಲೇ ಕಂಡದ್ದಾಯಿತು. ಕಾರ್ಯಾಂಗವನ್ನು ಅಥವಾ ಅಧಿಕಾರಿ ವರ್ಗದವರನ್ನು ತಮ್ಮ ಅಧೀನರಾಗಿ ಮಾಡಿಕೊಂಡು ಅವರಿಗೆ ಆಜ್ಞೆಗಳನ್ನು ಸಾರುವವರೇ ಶಾಸಕ ಸಭೆಯಲ್ಲಿಯೂ ಮುಂದಾಳುಗಳಾಗಿರತಕ್ಕ ಆ ಪದ್ಧತಿಯು ಮೊದಲು ತೋರಿಕೊಂಡದ್ದು ಇಂಗ್ಲಂಡಿನಲ್ಲಿಯೇ. ಇದೇ ಕ್ರಮವನ್ನೇ ಇತರ ರಾಷ್ಟ್ರಗಳೂ ಅನುಕರಿಸಿವೆ. ಅವುಗಳಲ್ಲಿ ಫರಾನ್ಸಿನ ಕ್ರಮವನ್ನೂ ಸಂಯುಕ್ತ ಸಂಸ್ಥಾನಗಳೆಂಬ ವಿಶಾಲ ರಾಷ್ಟ್ರದ ಕ್ರಮವನ್ನೂ ನಾವು ಸ್ಥೂಲವಾಗಿ ಕಾಣಬೇಕು.

ಫ್ರಾನ್ಸ್ ರಾಷ್ಟ್ರ

**ಫ್ರಾನ್ಸ್ ದೇಶವು** ಇಂಗ್ಲಂಡಿಗಿಂತ ದೊಡ್ಡದು. ಫರಾನ್ಸಿನ ಜನರ ಸಂಖ್ಯೆ ನಾಲ್ಕು ಕೋಟಿಗಿಂತ ಸ್ವಲ್ಪ ಹೆಚ್ಚು; ಫ್ರಾನ್ಸ್ ದೇಶವು ನಮ್ಮ ಬಂಗಾಳ ಪ್ರದೇಶವಿರುವಷ್ಟೆಂದು ಭಾವಿಸಬಹುದು. ರಾಷ್ಟ್ರಸಂಯೋಜನೆಯಲ್ಲಿ ನಡೆಯಬಹುದಾದ ಪ್ರಯೋಗಗಳು ಆ ದೇಶದಲ್ಲಿ ನಡೆದಂತೆ ಯಾವ ದೇಶದಲ್ಲಿಯೂ ನಡೆಯಲಿಲ್ಲ. ರಾಷ್ಟ್ರವಿಪ್ಲವಗಳು ಆ ದೇಶದ ಇತಿಹಾಸದಲ್ಲಿ

ವಿಶೇಷ. ಫರಾನ್ಸಿನ ಜನರು ಸಂಯುಕ್ತರಾಜ್ಯದ ಪಾರ್ಲಿಮೆಂಟರಿ ಪದ್ಧತಿಯನ್ನೂ ಅಮೆರಿಕದ ಸಂಯುಕ್ತ ಸಂಸ್ಥಾನಗಳ ಕ್ರಮವನ್ನೂ ಮೆಚ್ಚಿ ತಮ್ಮಲ್ಲಿ ರಾಜರೇ ಇಲ್ಲದಂತೆ ಮಾಡಿಕೊಂಡರು. ಪೂರ್ವದಲ್ಲಿದ್ದ ಶ್ರೀಮಂತರ ವರ್ಗವೆಂಬುದನ್ನೇ ನಾಶಪಡಿಸಿದರು. ಫ್ರಾನ್ಸಿನಲ್ಲಿ ಶ್ರೀಮಂತರಿಗೊಪ್ಪುವ ಬಿರುದಾವಳಿಗಳನ್ನು ಕೆಲವರು ವಹಿಸಿದ್ದರೂ ಅದು ಕೇವಲ ಮರ್ಯಾದೆಗೆ ಮಾತ್ರ. ಅದು ವರ್ಗವನ್ನಾಗಲಿ ಅಧಿಕಾರವನ್ನಾಗಲಿ ಸೂಚಿಸತಕ್ಕವಲ್ಲ. ಹೀಗೆ ರಾಜತ್ವವನ್ನು ನಿಲ್ಲಿಸಿದ ದೇಶದಲ್ಲಿ ಸಂಯುಕ್ತ ರಾಜ್ಯದ ಕ್ರಮವು ನಡೆಯುವುದು ಹೇಗೆ?

ಶಾಸಕಾಂಗ

ಫ್ರಾನ್ಸಿನಲ್ಲಿ ಪಾರ್ಲಿಮೆಂಟೆಂಬುದು ಎರಡು ಸಭೆಗಳಾಗಿ ಪ್ಯಾರಿಸ್ ನಗರದಲ್ಲಿ ನೆರೆಯುತ್ತದೆ. "ಚೇಂಬರ್ ಆಫ್ ಡೆಪ್ಯುಟೀಸ್" (Chamber of Deputies) ಅಥವಾ ನಿಯೋಗಿಗಳ ಸಭೆಯೆಂಬುದು ಮೊದಲಿನದು; ಸೆನೆಟ್ (Senate) ಎಂಬುದು ಎರಡನೆಯದು. ಎರಡು ಸಭೆಗಳಲ್ಲಿಯೂ ಸಭಿಕರಾಗತಕ್ಕವರು ವರಣ ಸಿದ್ಧರಾಗಿಯೇ ಸದಸ್ಯರಾಗುವರು. ವರಣ ಕ್ರಮದಲ್ಲಿ ಮಾತ್ರ ಭೇದವುಂಟು. ಫ್ರಾನ್ಸಿನ ಜನಸ್ತೋಮದಲ್ಲಿ ಸಂಖ್ಯಾನು ಸಾರವಾಗಿ ಒಟ್ಟು 597 ನಿಯೋಗಿಗಳು 3 ವರ್ಷಗಳಿಗೊಮ್ಮೆ ವರಣ ಸಿದ್ಧರಾಗಿ ಬಂದು ಕೂಡುತ್ತಾರೆ. ಇಲ್ಲಿಯ ಕಾರ್ಯಕಲಾಪಗಳೆಲ್ಲ ಕಾಮನ್ಸ್ ಸಭೆಯಲ್ಲಿ ನಡೆದಂತೆಯೇ ನಡೆಯುತ್ತವೆ. ಪಾರ್ಟಿಗಳು ಮಾತ್ರ ಅನೇಕವಾಗಿರುತ್ತವೆ. ಸೆನೆಟ್ ಎಂಬ ಸಭೆಯಲ್ಲಿ 314 ಸದಸ್ಯರಿರುತ್ತಾರೆ; ಅವರಲ್ಲಿ ಮೂರರಲ್ಲೊಂದು ಪಾಲು ಮಾತ್ರ ಮೂರು ವರ್ಷ ಗಳಿಗೊಮ್ಮೆ ಬದಲಾಗಬಹುದು. ಸೆನೆಟ್ ಸಭೆಗೆಂದು ಸಾರ್ವತ್ರಿಕ ವರಣಗಳು ನಡೆದಾಗ ಸುಮಾರು ನೂರು ಮಂದಿ ಮಾತ್ರ ವರಣ ಸಿದ್ಧರಾಗಿ ಬರುವರು. ಉಳಿದ ಇನ್ನೂರು ಮಂದಿ ಹಳಬರೇ ಇರಬೇಕು. ಈ ರೀತಿ ಏರ್ಪಡಿಸುವುದರ ಉದ್ದೇಶ ರಾಷ್ಟ್ರ ಕಾರ್ಯನಿರ್ವಾಹದಲ್ಲಿ ಏಕ ರೀತಿಯು ತಕ್ಕಷ್ಟು ನೆಲೆಸಿರಬೇಕೆಂಬುದು. ಸೆನೆಟ್ ಮತ್ತು ಚೇಂಬರ್ ಆಫ್ ಡೆಪ್ಯುಟೀಸ್ ಎಂಬುವು ಒಟ್ಟುಗೂಡಿ ಶಾಸಕ ಕರ್ತವ್ಯವನ್ನು ನೆರವೇರಿಸುತ್ತವೆ.

ರಾಜನಿಲ್ಲದೆ ಇರುವುದರಿಂದ ರಾಜನ ಸ್ಥಾನದಲ್ಲಿ ಫರಾನ್ಸೀ ಜನರು ಸರ್ವಾಧ್ಯಕ್ಷ (President) ನೆಂಬ ಹೆಸರಿನಿಂದ ರಾಷ್ಟ್ರಾಧಿಪತಿಯನ್ನು ಏಳು ವರುಷಗಳಿಗೊಮ್ಮೆ ಒಂದು ರೀತಿಯ ವರಣ ವಿಧಾನದಿಂದ ಗೊತ್ತು ಮಾಡಿಕೊಳ್ಳುತ್ತಾರೆ. ಪಾರ್ಲಿಮೆಂಟಿನ ಸಭೆಗಳೆರಡೂ ಏಕಕಾಲದಲ್ಲಿ ಏಕ ಸ್ಥಲದಲ್ಲಿ ಒಟ್ಟಾಗಿ ಕೂಡಿ ತಮ್ಮಲ್ಲಿಯೇ ಯೋಗ್ಯನೆನಿಸಿದವನನ್ನು ಆ ಸ್ಥಾನಕ್ಕೆ ವರಿಸುತ್ತಾರೆ. ಪ್ರೆಸಿಡೆಂಟ್ ಅಥವಾ ಸರ್ವಾಧ್ಯಕ್ಷನಾದಾತನು ರಾಜಮರ್‍ಯಾದೆಯಿಂದಲೇ ಇರುತ್ತಾನೆ; ಸಿಂಹಾಸನ ಕಿರೀಟಗಳಿಲ್ಲದಿದ್ದರೂ ಬಿರುದುಬಿಲ್ಲೆಗಳನ್ನು ಹಂಚುತ್ತ ರಾಯಭಾರಿಗಳ ಸನ್ಮಾನವನ್ನು ನಡೆಸುತ್ತ ರಾಷ್ಟ್ರಮೂರ್ತಿಯಾಗಿರುತ್ತಾನೆ. ಅಧಿಕಾರಬಲದಲ್ಲಿ ಮಾತ್ರ ಸಂಯುಕ್ತ ರಾಜ್ಯದ ರಾಜನಿಗಿಂತ ಸ್ವಲ್ಪ ಹೆಚ್ಚಿನ ಬಲವನ್ನು ಪಡೆದು ಇರುತ್ತಾನೆ.

ಸರ್ವಾಧ್ಯಕ್ಷ

ಅಧಿಕಾರಯುಕ್ತರಾಗಿ ಕಾರ್‍ಯಾಂಗಕ್ಕೆ ಆಜ್ಞೆಗಳನ್ನು ಕೊಡುತ್ತಲೂ ಶಾಸಕಾಂಗವನ್ನು ನಡೆಸುತ್ತಲೂ ಇರುವುದು ಕ್ಯಾಬಿನೆಟ್ ಎಂಬ ಮಂತ್ರಿಮಂಡಲಿಯವರೇ. ಅವರಿಗೆ ಪ್ರೀಮಿಯರ್ (Premier) ಎಂಬಾತನೇ ನಾಯಕನಾದವನು. ಮಂತ್ರಿಮಂಡಲಿಯವರು ಪಾರ್ಲಿಮೆಂಟಿನ ಬಲಾಬಲ ಗಳನ್ನನುಸರಿಸಿಯೇ ಕಾರ್ಯನಿರತರಾಗಿರುತ್ತಾರೆ.

ಮಂತ್ರಿಮಂಡಲಿ

**ಅಮೆರಿಕದ ಸಂಯುಕ್ತ ಸಂಸ್ಥಾನಗಳೆಂಬ** ರಾಷ್ಟ್ರದ ಪರಿಯು ಕೌತುಕವಾದುದು. 48 ಸಂಸ್ಥಾನಗಳು ಒಟ್ಟುಗೂಡಿ ಆ ರಾಷ್ಟ್ರರೂಪವನ್ನು ಪಡೆದಿರುತ್ತವೆ. ವೈಶಾಲ್ಯದಲ್ಲಿ ನಮ್ಮ ದೇಶದ ಸುಮಾರು ಎರಡರಷ್ಟಿದೆ; ಜನ ಬಲದಲ್ಲಿ ಮಾತ್ರ 11 ಕೋಟಿಯುಳ್ಳದ್ದು. ಮೊದಲು ಇಂಗ್ಲಂಡಿನ ನೆಲೆಯಾಗಿಯೇ ಇದ್ದು, 13 ಪ್ರದೇಶಗಳಾಗಿದ್ದು, ಇಂಗ್ಲಂಡಿನೊಡನೆ ಯುದ್ಧಮಾಡಿ ಸ್ವಾತಂತ್ರ್ಯವನ್ನು ಸಂಪಾದಿಸಿಕೊಂಡು 13 ಸಂಸ್ಥಾನಗಳೂ ಏಕರಾಷ್ಟ್ರವಾಗಿ ಏರ್ಪಟ್ಟಿತು. ಕಾಲಕ್ರಮದಲ್ಲಿ ಹಬ್ಬಿಕೊಂಡು ಈಗ 48 ಸಂಸ್ಥಾನಗಳಾಗಿ ಉತ್ತರ ಅಮೆರಿಕಾ ಖಂಡದ ಮಧ್ಯಭಾಗವನ್ನೆಲ್ಲ ಆಕ್ರಮಿಸಿ ಸಾಗರದಿಂದ ಸಾಗರದವರೆಗೆ ವಿಸ್ತಾರವಾಗಿದೆ.

ಅಮೆರಿಕ

ಸಾಮಾನ್ಯ ಮಾತಿನಲ್ಲಿ ಈ ನಲವತ್ತೆಂಟು ರಾಷ್ಟ್ರಗಳ ವ್ಯೂಹವನ್ನು **ಅಮೆರಿಕ** ಎಂದು ಕರೆಯುವುದುಂಟು.

ಸಂಸ್ಥಾನ

48 ಸಂಸ್ಥಾನ (State)ಗಳಲ್ಲಿ ಪ್ರತಿ ಸಂಸ್ಥಾನಕ್ಕೂ ಶಾಸಕಾಂಗ ಕಾರ್ಯಾಂಗ, ನ್ಯಾಯಾಂಗಗಳುಳ್ಳ ರಾಷ್ಟ್ರಸಂಸ್ಥೆಯುಂಟು. ಶಾಸಕಾಂಗವು ಎರಡು ಸಭೆಗಳಾಗಿಯೇ ಏರ್ಪಟ್ಟು "ಹೌಸ್ ಆಫ್ ರಿಪ್ರಸೆಂಟಟಿವ್ಸ್" (House of Representatives) ಮತ್ತು ಸೆನೆಟ್ (Senate) ಎಂಬ ಹೆಸರುಗಳನ್ನು ಪಡೆದಿವೆ. ಫ್ರಾನ್ಸಿನಲ್ಲಿದ್ದಂತೆಯೇ ಈ ಸಭೆಗಳು ವರ್ತಿಸುತ್ತವೆ. ಸಂಸ್ಥಾನಾಧಿಪತಿಯಾದವನು ಇಲ್ಲಿ ಗವರ್ನರ್ "Governor" ಅಥವಾ ಭೋಗಪತಿಯೆನಿಸುತ್ತಾನೆ. ಆತನು ಕಾಂಗ್ರೆಸ್ (Congress) ಎಂಬ ಹೆಸರನ್ನು ಒಟ್ಟಾಗಿ ಪಡೆದ ಎರಡು ಶಾಸಕ ಸಭೆಗಳ ಬಲಾಬಲಗಳನ್ನನುಸರಿಸಿ ಮಂತ್ರಿವರ್ಗದವರನ್ನು ನಿಯಮಿಸುತ್ತಾನೆ. ನಲವತ್ತೆಂಟು ಸಂಸ್ಥಾನಗಳಲ್ಲಿಯೂ ಈ ತೆರನಾಗಿಯೇ ಇರುತ್ತದೆ. ಇವುಗಳಿಗೆ ಸಂಸ್ಥಾನಗಳ ಸರ್ಕಾರಗಳೆಂದೋ ಸಂಸ್ಥಾನಿಕ ರಾಷ್ಟ್ರಗಳೆಂದೋ ಹೆಸರು ಸಲ್ಲುತ್ತದೆ.

ವ್ಯೂಹ ರಾಷ್ಟ್ರ

48 ಸಂಸ್ಥಾನಗಳೂ ಒಟ್ಟಾಗಿ ಕೂಡಿ ಒಂದೇ ರಾಷ್ಟ್ರವಾಗಿವೆ. ಅದಕ್ಕೇ ಯುನೈಟೆಡ್ ಸ್ಟೇಟ್ಸ್ (United States) ಅಥವಾ ಸಂಯುಕ್ತ ಸಂಸ್ಥಾನಗಳೆಂದು ಹೆಸರು. ಸಂಯುಕ್ತವಾಗಿರುವ ಆಡಳಿತಕ್ಕೆ ಫೆಡರಲ್ ಗವರ್ನ್‌ಮೆಂಟ್ (Federal Government) ಅಥವಾ ಸಂಯುಕ್ತರಾಷ್ಟ್ರ ಭಾರವೆಂದು ಹೇಳಬಹುದು. 48 ಸಂಸ್ಥಾನಗಳಿಗೂ ಅನ್ವಯಿಸುವ ವಿಷಯಗಳು ಬೇಕಾದಷ್ಟಿರುತ್ತವೆ. ರಾಷ್ಟ್ರರಕ್ಷಣೆಯ ಅಂಗವಾದ ಸೈನ್ಯ ಪೋಷಣೆ, ಪರದೇಶಗಳೊಡನೆ ಸಂಧಿ ವಿಗ್ರಹ, ಹೊರದೇಶದ ವ್ಯಾಪಾರ, ವಾಹಕ ಸೌಕರ್ಯಗಳು, ನಾಣ್ಯದ ಶಿಸ್ತು ಮುಂತಾದವು ಒಟ್ಟು ರಾಷ್ಟ್ರಕ್ಕೇ ಸಂಬಂಧಿಸಿದ ಆಡಳಿತದ ಭಾಗಗಳು. ಅಂತಹ ಭಾಗಗಳಿಗೆ ಫೆಡರಲ್ ಭಾಗಗಳೆಂದು ಅಥವಾ ಸಂಯುಕ್ತ ರಾಷ್ಟ್ರಭಾರದ ಅಂಶಗಳೆಂದು ಹೇಳಬೇಕು. ಫೆಡರಲ್ ಆಡಳಿತವು ಸಂಸ್ಥಾನಗಳ ಆಡಳಿತಕ್ಕೆ ಮೇಲ್ಪಟ್ಟದ್ದು; ಸಂಸ್ಥಾನಗಳ

ನಿರ್ವಾಹಕರು ಫೆಡರಲ್ ನಿರ್ವಾಹಕರಿಗೆ ಈ ವಿಷಯಗಳಲ್ಲಿ ಅಧೀನ ರಾಗಿಯೇ ಇರಬೇಕು. ಫೆಡರಲ್ ಸರ್ಕಾರವು **ವಾಷಿಂಗ್ಟನ್** ಪಟ್ಟಣದಲ್ಲಿ ನಡೆಯುವುದು. ಅದರಲ್ಲಿ ಶಾಸಕಾಂಗಕ್ಕೆ **ಕಾಂಗ್ರೆಸ್** ಎಂದು ಹೆಸರು; ಪ್ರತಿನಿಧಿಸಭೆ (House of Representatives) ಮತ್ತು "ಸೆನೆಟ್" ಎಂಬ ಎರಡು ಸಭೆಗಳೂ ಸೇರಿ ಆ ಹೆಸರನ್ನು ಪಡೆಯುತ್ತವೆ. ಪ್ರತಿನಿಧಿಗಳ ಸಭೆಯಲ್ಲಿ 435 ಸದಸ್ಯರು ಸುಮಾರು ಎರಡು ಲಕ್ಷ ಜನಕ್ಕೊಬ್ಬರಂತೆ ರಾಷ್ಟ್ರದ ಎಲ್ಲ ಭಾಗಗಳಿಂದಲೂ ವೃತರಾಗಿ ಬಂದು ನೆರೆದಿರುತ್ತಾರೆ. ಸೆನೆಟ್ ಎಂಬುದರಲ್ಲಿ ಸಂಸ್ಥಾನಕ್ಕೊಬ್ಬರಂತೆ 96 ಸಭಿಕರಿರುತ್ತಾರೆ. ಪ್ರತಿನಿಧಿಗಳು ಎರಡು ವರ್ಷಗಳಿಗೊಮ್ಮೆ ವರಣಕ್ಕೊಳಗಾಗು ತ್ತಾರೆ; ಸೆನೆಟ್ ಸದಸ್ಯರು ಆರು ವರ್ಷಗಳಿಗೊಮ್ಮೆ ವರಣ ಪಡೆಯು ತ್ತಾರೆ.

ಸರ್ವಾಧ್ಯಕ್ಷ ವರಣ

ಫೆಡರಲ್ ಕಾರ್ಯಾಂಗಕ್ಕೆ ಅಧಿಪತಿಯಾದವನೇ ಪ್ರೆಸಿಡೆಂಟ್ ಅಥವಾ ಸರ್ವಾಧ್ಯಕ್ಷ. ಈತನ ವರಣದಲ್ಲಿ ವಿಶೇಷವಾದ ಕ್ರಮವುಂಟು. ಸಂಸ್ಥಾನಗಳ ಆಡಳಿತಗಳಾಗಲಿ ಫೆಡರಲ್ ಶಾಸಕ ಸಭೆಗಳಾಗಲಿ ಈ ವರಣದಲ್ಲಿ ಪ್ರವೇಶಿಸುವುದಕ್ಕಾಗುವುದಿಲ್ಲ. ಪ್ರತಿ ಸಂಸ್ಥಾನವೂ ಸರ್ವಾಧ್ಯಕ್ಷನ ವರಣ ಕ್ಕಾಗಿಯೇ ಬೇರೊಂದು ಸಭೆಯನ್ನು ವರಣ ಮೂಲಕವೇ ಸಿದ್ಧ ಗೊಳಿಸುವುದು. ಈ ರೀತಿಯಲ್ಲಿ ನಲವತ್ತೆಂಟು ಸಭೆಗಳು ಪ್ರತ್ಯೇಕವಾಗಿ ಹುಟ್ಟಿಕೊಂಡು ಸರ್ವಾಧ್ಯಕ್ಷನನ್ನು ವರಿಸಲು ತೊಡಗುತ್ತವೆ; ವರಣವಾದ ಕೂಡಲೆ ಆ ಸಭೆಗಳು ಮುಕ್ತಾಯವೇ ಆಗುತ್ತವೆ. ಇದನ್ನು ಜನರಿಂದಲೇ ಪ್ರತ್ಯಕ್ಷವಾಗಿ ನಡೆಯುವ ವರಣವೆನ್ನಬೇಕು; ಫ್ರಾನ್ಸಿನ ಸರ್ವಾಧ್ಯಕ್ಷ ನನ್ನು ಶಾಸಕ ಸಭೆಗಳು ವರಣ ಮೂಲಕ ನಿಯಮಿಸುವಂತೆ ನಡೆಯುವುದು ಪರೋಕ್ಷವೆನಿಸಿದ ಕ್ರಮ. ಫ್ರಾನ್ಸಿನಲ್ಲಿ ಸರ್ವಾಧ್ಯಕ್ಷನು ಶಾಸಕ ಸಭೆ ಗಳಿಂದ ನಿಯಮಿತನಾಗಿ ಅವುಗಳಿಗೆ ವಿಧೇಯನಾಗಿರುತ್ತಾನೆ. ಸಂಯುಕ್ತ ಸಂಸ್ಥಾನಗಳ ಸರ್ವಾಧ್ಯಕ್ಷನು ಶಾಸಕ ಸಭೆಗಳ ಸಂಬಂಧವೇ ಇಲ್ಲದಂತೆ ಜನರಿಂದ ವರಣಪಡೆಯುತ್ತಾನೆ. ಆದ್ದರಿಂದ ಶಾಸಕ ಸಭೆಗಳಿಗೆ ಕಟ್ಟುಬಿದ್ದಿರತಕ್ಕ ಅವಶ್ಯವಿಲ್ಲ.

ಸರ್ವಾಧ್ಯಕ್ಷನು ಫೆಡರಲ್ ರಾಷ್ಟ್ರಕ್ಕೆ ಅಧಿಪತಿಯಾದವನು. ಕಾರ್ಯಾಂಗವೆಲ್ಲವೂ ಆತನ ಅಧೀನವಾಗಿಯೇ ನಡೆಯುವುದು. ಸರ್ವಾಧ್ಯಕ್ಷನಾಗತಕ್ಕವನು 35 ವರ್ಷಗಳನ್ನು ದಾಟಿರುವುದಲ್ಲದೆ ದೇಶೀಯನಾಗಿರಬೇಕು. ನಾಲ್ಕು ವರ್ಷಕಾಲ ಸರ್ವಾಧ್ಯಕ್ಷನ ಅಧಿಕಾರವು ನಡೆಯುವುದು; ನಾಲ್ಕು ವರ್ಷಗಳು ಕಳೆದರೆ ಹೊಸದಾಗಿ ಸರ್ವಾಧ್ಯಕ್ಷ ವರಣವು ದೇಶೋವಿಶಾಲವಾಗಿ ನಡೆಯಬೇಕು. ಈತನ ಅಧಿಕಾರವು ವಿಶೇಷವಾಗಿಯೇ ಇದೆ. ಸಂಯುಕ್ತ ರಾಜ್ಯದ ಪ್ರಭುವಿಗಾಗಲಿ ಫ್ರಾನ್ಸಿನ ಸರ್ವಾಧ್ಯಕ್ಷನಿಗಾಗಲಿ ಅಷ್ಟು ಅಧಿಕಾರವಿರುವುದಿಲ್ಲ. ಶಾಸಕ ಸಭೆಗಳಿಗೆ ಈತನು ಸಂದೇಶಗಳನ್ನು ಹೇಳಿಕಳುಹಿಸಿ ತನ್ನ ಇಷ್ಟವನ್ನು ಮೊದಲೇ ತಿಳಿಸಬಹುದು. ಶಾಸಕ ಸಭೆಗಳ ತೀರ್ಮಾನವನ್ನು ಅಡ್ಡಿಮಾಡಲೂ ಬಹುದು. ಸಂಯುಕ್ತ ರಾಜ್ಯದಲ್ಲಾಗಲಿ ಫ್ರಾನ್ಸಿನಲ್ಲಾಗಲಿ ಶಾಸಕ ಸಭೆಗಳನ್ನು ಪಾರಾಗಿ ಬಂದ ಮಸೂದೆಯನ್ನು ರಾಜನೂ ಸರ್ವಾಧ್ಯಕ್ಷನೂ ಅಂಗೀಕರಿಸಲೇ ಬೇಕು. ಅಮೆರಿಕದ ಸರ್ವಾಧ್ಯಕ್ಷನು ಒಪ್ಪಿಗೆಯನ್ನು ಕೊಡುವುದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಇದೇ ನಿಷೇಧಾಧಿಕಾರ (Veto)ವೆಂಬುದು. ಸರ್ವಾಧ್ಯಕ್ಷನು ನಿಷೇಧಮಾಡಿದ ಅಂಶವು ಮೂಲೆಗೇ ಬೀಳುವುದು. ಶಾಸಕ ಸಭೆಗಳು ಆ ಅಂಶವನ್ನೇ ಮತ್ತೆ ಹಿಡಿದು ಹತ್ತಾಣೆ ಎಂಟು ಕಾಸು ಅಥವಾ ⅔ ಪಾಲಾದ ಬಹುಮತದಿಂದ ಸಾಧಿಸಿದ ಪಕ್ಷದಲ್ಲಿ ಸರ್ವಾಧ್ಯಕ್ಷನು ಅದಕ್ಕೆ ಆಕ್ಷೇಪಮಾಡಿದರೂ ಅದು ಶಾಸನವಾಗುತ್ತದೆ.

ಸರ್ವಾಧ್ಯಕ್ಷನ ಅಧಿಕಾರಬಲ

ಕಾರ್ಯಾಂಗದಲ್ಲಿ ಕ್ಯಾಬಿನೆಟ್ ಅಥವಾ ಮಂತ್ರಿಮಂಡಲಿಯೆಂಬುದಿರುವುದು. ಅದರಲ್ಲಿರುವವರಿಗೆ ಕಾರ್ಯದರ್ಶಿಗಳೆಂಬ ಹೆಸರೇ ಸಲ್ಲುತ್ತದೆ. ಅವರನ್ನು ಸರ್ವಾಧ್ಯಕ್ಷನೇ ಸೆನೆಟ್ ಸಭೆಯ ಅನುಮತಿಯನ್ನು ಪಡೆದು ನಿಯೋಗಿಸುತ್ತಾನೆ. ಮಂತ್ರಿಸ್ಥಾನದಲ್ಲಿರುವವರು ಸರ್ವಾಧ್ಯಕ್ಷನಿಗೆ ವಶವರ್ತಿಗಳಾಗಿರುತ್ತಾರೆ; ಸರ್ವಾಧ್ಯಕ್ಷನು ಮಂತ್ರಿಮಂಡಲಿಯ ವಶದಲ್ಲಿ ವರ್ತಿಸುವುದಿಲ್ಲ. ಈ ರೀತಿಯಲ್ಲಿ ಹೆಚ್ಚು ತಡೆಗಳಿಲ್ಲದ ಅಧಿಕಾರವನ್ನು ಪಡೆದ ಸರ್ವಾಧ್ಯಕ್ಷನು ಒಟ್ಟು ರಾಷ್ಟ್ರಕ್ಕೆ ಸಮಸ್ತ ಸೈನ್ಯಾಧಿಪತಿ

ಮಂತ್ರಿಮಂಡಲಿ

ಯಾಗಿಯೂ ರಾಷ್ಟ್ರ ಪ್ರಮುಖನಾಗಿ ಅನ್ಯದೇಶಗಳೊಡನೆ ಸಂಧಿ ವಿಗ್ರಹಗಳನ್ನು ತಾನೇ ನಡೆಸತಕ್ಕವನಾಗಿಯೂ ಇರುವನು; ಯುದ್ಧ ಪ್ರಾರಂಭವನ್ನು ಮಾತ್ರ ಕಾಂಗ್ರೆಸ್ಸಿನವರು ಅನುಮೋದಿಸಿದ ಹೊರತು ಮಾಡಲಾಗುವುದಿಲ್ಲ. ಇದಲ್ಲದೆ ಸಂಸ್ಥಾನಗಳ ಪರಸ್ಪರ ಸಂಬಂಧಗಳಲ್ಲಿ ಸರ್ವಾಧ್ಯಕ್ಷನಿಗೆ ಮೇಲಿನ ಅಧಿಕಾರವಿರುತ್ತದೆ. ಒಟ್ಟು ರಾಷ್ಟ್ರದ ಮೇಲ್ವಿಚಾರಣೆಯೂ ಆತನಿಗೇ ಸೇರಿರುತ್ತದೆಯೆಂದು ಹೇಳಬಹುದು.

ನ್ಯಾಯಾಂಗ

ಫ್ರಾನ್ಸ್ ಮತ್ತು ಅಮೆರಿಕಾ ರಾಷ್ಟ್ರಗಳೆರಡೂ ರಾಜರಹಿತವಾದ ರಾಷ್ಟ್ರಗಳು. ಎರಡು ದೇಶಗಳಲ್ಲಿಯೂ ನ್ಯಾಯಾಧಿಕಾರಿಗಳನ್ನು ಸರ್ವಾಧ್ಯಕ್ಷನೇ ಗೊತ್ತುಮಾಡಿದಾಗ್ಯೂ ನಿಷ್ಪಕ್ಷಪಾತವಾಗಿ ನ್ಯಾಯವು ನೆಲೆಸುವಂತೆ ನ್ಯಾಯಾಧಿಕಾರಿಗಳಿಗೆ ಸ್ವಾತಂತ್ರ್ಯವು ಸ್ಥಾಪಿತವಾಗಿದೆ. ಅಮೆರಿಕದಲ್ಲಿ ಸಂಸ್ಥಾನಗಳಲ್ಲಿರುವ ನ್ಯಾಯಸ್ಥಾನಗಳಲ್ಲದೆ ಅವುಗಳಿಗೆ ಮೇಲ್ಪಟ್ಟ ಸುಪ್ರೀಂ ಕೋರ್ಟ್ ಎಂಬ ಶ್ರೇಷ್ಠತಮ ನ್ಯಾಯಸ್ಥಾನವು ಬೇರೆ ಇದೆ. ಫೆಡರಲ್ ವಿಷಯಗಳಿಗೆ ಸಂಬಂಧಪಟ್ಟ ವ್ಯವಹಾರಗಳೂ, ಸಂಸ್ಥಾನಗಳಲ್ಲಿ ಪರಸ್ಪರವಾಗಿ ನಡೆಯುವ ವ್ಯವಹಾರಗಳೂ ಫೆಡರಲ್ ನ್ಯಾಯಸ್ಥಾನದ ಅಧಿಕಾರಕ್ಕೆ ಒಳಗಾಗಿರುತ್ತವೆ. ಎರಡು ರಾಷ್ಟ್ರಗಳಲ್ಲಿಯೂ ಪಾರ್ಟಿಗಳುಂಟು; ಫ್ರಾನ್ಸಿನಲ್ಲಿ ಅನೇಕವಾಗಿ ಕಕ್ಷಿಗಳಿರುವುದು ಆ ದೇಶದಲ್ಲಿ ವಿಶೇಷ.

ಸಂಕೃಷ್ಟ, ವಿಕೃಷ್ಟ ರೀತಿಗಳು

ಅಮೆರಿಕದಲ್ಲಿ ಫೆಡರಲ್ ಮತ್ತು ಸಂಸ್ಥಾನಿಕ ವಿಭಾಗಗಳು ಏಕರಾಷ್ಟ್ರರೂಪ ನಿರ್ವಹಣದಲ್ಲಿಯೇ ಸೇರಿರುವ ಅಂಶವನ್ನು ಗಮನಿಸಬೇಕು. ವಿಶಾಲವಾದ ರಾಷ್ಟ್ರದಲ್ಲಿ ಅಂತಹ ವಿಭಾಗವು ಅವಶ್ಯವಾಗಿರುತ್ತದೆ. ಕೆನಡ, ಆಸ್ಟ್ರೇಲಿಯ ಮುಂತಾದ ವಿಶಾಲಕ್ಷೇತ್ರಗಳಲ್ಲಿರುವ ರೀತಿಯೂ ಫೆಡರಲ್ ರೀತಿಯೆಂದೇ ಹೆಸರಾಗಿರುತ್ತದೆ. ಅಮೆರಿಕದಲ್ಲಿ ಒಟ್ಟು ರಾಷ್ಟ್ರದ ಅಧಿಕಾರವು ಫೆಡರಲ್ ವಿಭಾಗದಲ್ಲಿರುವುದು; ಫೆಡರಲ್ ಕಾರ್ಯನಿರ್ವಾಹಕರು ಸಂಸ್ಥಾನಗಳನ್ನು ಶಿಕ್ಷೆಗೆ ಗುರಿಮಾಡಬಹುದು. ಆಸ್ಟ್ರೇಲಿಯದಲ್ಲಿ (ಸಂಸ್ಥಾನಗಳಿಗೆ ಸಮಾನವಾದ) ಪ್ರದೇಶಗಳು ಸ್ವತಂತ್ರವಾಗಿಯೇ ಇರುತ್ತವೆ; ಫೆಡರಲ್ ಆಡಳಿತಕ್ಕೆ ಪ್ರಾದೇಶಿಕ ರಾಷ್ಟ್ರಗಳು ಒಪ್ಪಿಸಿದಷ್ಟು

ಮಾತ್ರ ಅಧಿಕಾರವಿರುತ್ತದೆ. ಅಮೆರಿಕದಲ್ಲಿ ಇದಕ್ಕೆ ವಿರುದ್ಧ; ಫೆಡರಲ್ ಸರ್ಕಾರಕ್ಕೆ ಹೆಚ್ಚು ಅಧಿಕಾರವಿದೆ. ಪ್ರಾದೇಶಿಕ ಸರ್ಕಾರಗಳಿಗೂ ಫೆಡರಲ್ ಸರ್ಕಾರಕ್ಕೂ ಅಧಿಕಾರ ವಿಭಾಗವು ನಡೆದಾಗ ಅಧಿಕಾರವು ಒಂದೇ ಕಡೆಯಲ್ಲಿ ಆಕೃಷ್ಟವಾಗಿರಬಹುದು; ಅಥವಾ ವಿಕೀರ್ಣವಾಗಿರಬಹುದು. ಅದನ್ನು ಸಂಕೃಷ್ಟ ಅಥವಾ ಏಕೀಭೂತ (Unitary) ಮತ್ತು ವಿಕೃಷ್ಟ ಅಥವಾ ವಿಕೀರ್ಣ (Federal) ಪದ್ಧತಿಗಳೆಂದು ಕರೆಯಬಹುದು. ಈ ಮಾತುಗಳು ಸಾಪೇಕ್ಷಕವಾದುವು.

ಅಮೆರಿಕದಲ್ಲಿ ಒಟ್ಟು ಎಷ್ಟು ಆಡಳಿತಗಳಿರಬಹುದೋ ಕಾಣಬೇಕು.

ರಾಷ್ಟ್ರ ವಿಭಾಗ

ನಗರಗಳ ಆಡಳಿತವುಂಟು, ಜಿಲ್ಲೆಗಳ ಆಡಳಿತವುಂಟು; ಜಿಲ್ಲೆಗಳನ್ನೊಳಗೊಂಡ ಸಂಸ್ಥಾನದ ಆಡಳಿತವುಂಟು; ಸಂಸ್ಥಾನಗಳನ್ನೊಳಗೊಂಡ ಫೆಡರಲ್ ಆಡಳಿತವುಂಟು. ವಿಶಾಲವಾದ ದೇಶಗಳಲ್ಲಿ ಇಂತಹ ಫೆಡರಲ್ ಪದ್ಧತಿಯೇ ಬಹುವಾಗಿ ನೆಲೆಸಿರುತ್ತದೆ. ಭರತವರ್ಷದಲ್ಲಿಯೂ ಸರ್ವ ರಾಷ್ಟ್ರಕ್ಕೆ, ಪ್ರದೇಶ ಸಂಸ್ಥಾನಗಳಿಗೆ, ಜಿಲ್ಲೆಗಳಿಗೆ ನಗರಗಳಿಗೆ ಮೂರು ದೊಡ್ಡ ದೊಡ್ಡ ವಿಭಾಗಗಳಾಗಬಹುದು. ಅಮೆರಿಕದಲ್ಲಿ ಜನಸ್ವಾಮ್ಯವೇ ಮೂಲತತ್ತ್ವವಾಗಿರುವುದಲ್ಲದೆ ರಾಷ್ಟ್ರ ರಚನೆಯು ಪತ್ರಗಳಲ್ಲಿ ಲಿಖಿತವಾಗಿ ಪ್ರಮಾಣರೂಪದಲ್ಲಿದೆ; ಫ್ರಾನ್ಸಿನಲ್ಲಿಯೂ ಹಾಗೆಯೇ. ಆ ಪತ್ರಗಳೇ ರಾಷ್ಟ್ರ ಸ್ವರೂಪ ನಿರ್ದೇಶಕ್ಕೆ ಆಧಾರಭೂತವಾದವುಗಳು.

ರಾಷ್ಟ್ರದ ಅಧಿಕಾರವನ್ನು ಕ್ಷೇತ್ರವನ್ನನುಸರಿಸಿ ವಿಭಾಗ ಮಾಡಿಕೊಳ್ಳುವುದೂ ಉಂಟು, ವಿಷಯವನ್ನನುಸರಿಸಿ ವಿಭಾಗ ಮಾಡಿಕೊಳ್ಳುವುದೂ ಉಂಟು. ನಗರ ನಿರ್ವಾಹ, ಜಿಲ್ಲಾ ನಿರ್ವಾಹ, ಪ್ರದೇಶ ನಿರ್ವಾಹವೆಂಬಲ್ಲಿ ಕ್ಷೇತ್ರ ವಿಭಾಗವು ಕಾಣುವುದು. ಸಂಧಿ ವಿಗ್ರಹ, ಕೋಶಾಧಿಕಾರಿ, ಶಿಕ್ಷಣ ಮಂತ್ರಿ ಎಂದಾಗಲೋ ರೆವಿನ್ಯೂ ಶಾಖೆ, ವ್ಯವಸಾಯಶಾಖೆ ಎಂದಾಗಲೋ ರಾಷ್ಟ್ರಭಾರದ ವಿಷಯ ವಿಭಜನೆಯು ಸೂಚನೆಯಾಗುತ್ತದೆ. ಆಚರಣೆಯಲ್ಲಿ ಎರಡು ವಿಧಗಳೂ ಒಟ್ಟಿಗೆ ಸೇರಿರುತ್ತವೆ.

ಇನ್ನು ಮುಂದೆ ನಮ್ಮ ದೇಶದ ರಾಷ್ಟ್ರನಿರ್ವಾಹವು ಯಾವ ರೀತಿಯಲ್ಲಿ ನಡೆಯುವುದೋ ನೋಡತಕ್ಕದ್ದು.

*

## 2. ಭಾರತೀಯ ರಾಷ್ಟ್ರಬಂಧ

**1. ಭಾರತೀಯ ಕಾರ್ಯದರ್ಶಿ. 2. ವೈಸ್‌ರಾಯಿ ಸರ್ಕಾರ. 3. ಪ್ರಾದೇಶಿಕ ಸರ್ಕಾರಗಳು. 4. ದೇಶೀಯ ಸಂಸ್ಥಾನಗಳು. 5. ರಾಷ್ಟ್ರರೂಪ ಸುಧಾರಣೆ.**

ಭರತವರ್ಷವು ಬ್ರಿಟಿಷ್ ಸಮುದಾಯಬಂಧದಲ್ಲಿ ಸಾಮ್ರಾಜ್ಯವೆನಿಸುವ ಅಂಶವನ್ನು ಹಿಂದೆಯೇ ಕಂಡೆವು. ಅದರ ಪರಿಣಾಮವಾಗಿ ಭರತವರ್ಷದ ರಾಷ್ಟ್ರಭಾರವು ಸಂಯುಕ್ತ ರಾಜ್ಯದ ರಾಷ್ಟ್ರ ಮುಖ್ಯರ ಅಧೀನವಾಗಿ ನಡೆಯುತ್ತದೆ. ಭರತವರ್ಷದ ರಾಷ್ಟ್ರವ್ಯವಸ್ಥೆಯ ವಿವರವನ್ನು ಸಂಯುಕ್ತ ರಾಜ್ಯದಲ್ಲಿ ಭಾರತೀಯ ಕಾರ್ಯದರ್ಶಿಯೆಂಬ ಮಂತ್ರಿಯ ನಿರ್ವಾಹ ವಿವರದಿಂದ ಪ್ರಾರಂಭಿಸಬೇಕು. ಆದ್ದರಿಂದ ನಾವು ಭಾರತೀಯ ಕಾರ್ಯದರ್ಶಿಯ ಅಧಿಕಾರ ಕರ್ತವ್ಯಗಳನ್ನು ಮೊದಲು ಕಂಡು ತರುವಾಯ ವೈಸ್‌ರಾಯಿಯ, ಭೋಗಪತಿಗಳ ಮತ್ತು ಸಂಸ್ಥಾನಗಳ ವಿಭಾಗಗಳನ್ನು ಕ್ರಮವಾಗಿ ಕಾಣುವ.

### ಭಾರತೀಯ ಕಾರ್ಯದರ್ಶಿ

1919ನೇ ವಿಧಿ

ಸಿಪಾಹಿ ದಂಗೆಯೆಂಬುದು ಮುಗಿದ ತರುವಾಯ ಈಸ್ಟಿಂಡಿಯ ಕಂಪೆನಿಯು ರದ್ದಾಯಿತು. 1858ರಿಂದ ಭರತವರ್ಷದ ರಾಷ್ಟ್ರನಿರ್ವಾಹವನ್ನು ಸಂಯುಕ್ತ ರಾಜ್ಯದ ನಿರ್ವಾಹಕರೇ ವಹಿಸಿದರು. ಆ ಕಾಲದಿಂದ ಕಾರ್ಯದರ್ಶಿಯೆಂಬ ಉದ್ಯೋಗವು ನಡೆದುಬಂದಿದೆ. ಕ್ಯಾಬಿನೆಟ್ಟಿನ ಮಂತ್ರಿಗಳಲ್ಲೊಬ್ಬಾತನೇ ಭಾರತೀಯ ರಾಷ್ಟ್ರಭಾರವನ್ನು ಹೊತ್ತು ಹಿಂದೆ ಕಂಪೆನಿಯ ಡೈರೆಕ್ಟರರೂ ಪ್ರೊಪ್ರೈಟರುಗಳೂ ಬೋರ್ಡ್ ಆಫ್ ಕಂಟ್ರೋಲ್ ಎಂಬುದೂ ನೆರವೇರಿಸುತ್ತಿದ್ದ ಕಾರ್ಯಭಾರವನ್ನು ತಾನೇ ವಹಿಸಿದನು. 1858ರಿಂದ ಪಾರ್ಲಿಮೆಂಟಿನ ಯಜಮಾನ್ಯವು ಪ್ರತ್ಯಕ್ಷವಾಗಿ ನಡೆಯುವುದಾಯಿತು. ಏಕೆಂದರೆ, ತನ್ನ ಕೆಲಸ ಕಾರ್ಯಗಳಿಗೆ ಕಾರ್ಯದರ್ಶಿಯು ಪಾರ್ಲಿಮೆಂಟಿಗೇ ಉತ್ತರವಾದಿ; ಮಾಡುವುದು ಬಿಡುವುದು ಪಾರ್ಲಿಮೆಂಟಿನ ಇಷ್ಟಕ್ಕೆ ಅನುಸಾರವಾಗಿ; ತಪ್ಪೋ ಒಪ್ಪೋ ನಿರ್ಣಯಿಸ

ತಕ್ಕವರು ಪಾರ್ಲಿಮೆಂಟಿನವರೇ. 1858ರ ಹಿಂದೆ ಪಾರ್ಲಿಮೆಂಟಿನವರು ಕಂಪೆನಿಯ ಆಡಳಿತದಲ್ಲಿ ಆಗಾಗ್ಗೆ ವಿಚಾರಣೆಯನ್ನು ನಡೆಸಿ ತಿದ್ದುಪಾಡು ಗಳನ್ನು ನಡೆಸಿ ಸನ್ನದನ್ನು ಕೊಡುತ್ತಿದ್ದು ಪರೋಕ್ಷವಾದ ಅಧಿಕಾರವನ್ನು ವಹಿಸಿದ್ದರು. 1858ರಲ್ಲಿ ಕಾರ್ಯದರ್ಶಿಯೆಂಬ ಸಚಿವನು ಸಿದ್ಧನಾದ ಮೇಲೆ ಭಾರತವರ್ಷದ ಸ್ವಾಮ್ಯವನ್ನು ಪಾರ್ಲಿಮೆಂಟೇ ವಹಿಸಿದಹಾಗೆ ಆಯಿತು. ಅಂದಿನಿಂದ ಕಾರ್ಯದರ್ಶಿಯೆಂಬಾತನೇ ಭಾರತೀಯ ರಾಷ್ಟ್ರ ಭಾರದಲ್ಲಿ ಸರ್ವಾಧಿಕಾರಿ. 1919ರಲ್ಲಿ ನಡೆದ ಭಾರತೀಯ ರಾಷ್ಟ್ರ ನಿರ್ವಾಹದ ವಿಧಿ(Government of India Act)ಗೆ ಅನುಸಾರವಾಗಿ ಆತನ ಅಧಿಕಾರವೂ ಕರ್ತವ್ಯವೂ ನಿಷ್ಕೃಷ್ಟವಾಗಿ ಈಗ ನಡೆಯುತ್ತಲಿದೆ.

ಕಾರ್ಯದರ್ಶಿಯ ಸ್ಥಾನ

1919ರಲ್ಲಿ ನಡೆದ ಮಾರ್ಪಾಟುಗಳು ಎರಡೇ. ಕಾರ್ಯದರ್ಶಿಯ ವೇತನವನ್ನು ಇದುವರೆಗೂ ಭಾರತೀಯ ರಾಷ್ಟ್ರ ಕೋಶದಿಂದಲೇ ಒದಗಿಸಬೇಕಾಗಿತ್ತು. ಅಂದಿನಿಂದ ಸಂಯುಕ್ತರಾಜ್ಯದ ಹುಟ್ಟುವಳಿಯಿಂದಲೇ ಒದಗ ಬೇಕೆಂದು ನಿಶ್ಚಯವಾಯಿತು. ಮತ್ತು ಆತನಿಗೆ ಸಹಾಯಾರ್ಥವಾಗಿ ಹೈಕಮಿಷನರ್ ಎಂಬ ಹೊಸ ಹುದ್ದೆಯೊಂದು ನಿರ್ಮಿತವಾಯಿತು. ಭಾರತ ವರ್ಷದ ಸರ್ಕಾರದ ನಿಯೋಗದಂತೆ ನೆರವೇರಿಸಬೇಕಾದ ಕರ್ತವ್ಯಗಳನ್ನು ಹೈಕಮಿಷನರ್ ಎಂಬಾತನು ಪಾಲಿಸುತ್ತಿರಬೇಕೆಂದು ಗೊತ್ತಾಯಿತು. ಆ ಕರ್ತವ್ಯಗಳಲ್ಲಿ ಭಾರತವರ್ಷದ ಸರ್ಕಾರದವರಿಗೆ ಬೇಕಾದ ಸಾಮಾನು ಸಾಮಗ್ರಿಯನ್ನು ವ್ಯಾಪಾರ ಮಾಡುವುದು, ಅಧಿಕಾರ ನಿವೃತ್ತರಾಗಿ ಇಂಗ್ಲಂಡಿನಲ್ಲಿ ವಾಸವಾಗಿರುವವರಿಗೆ ವಿಶ್ರಾಂತಿ ವೇತನಗಳನ್ನು ಸಲ್ಲಿಸು ವುದು, ವ್ಯಾಸಂಗಕ್ಕಾಗಿ ಇಂಗ್ಲಂಡಿನಲ್ಲಿರುವ ಭಾರತೀಯ ವಿದ್ಯಾರ್ಥಿಗಳ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿರುವುದು ಮುಖ್ಯವಾದವುಗಳು. ಕೇವಲ ರಾಜಕೀಯವೆನ್ನಬಹುದಾದ ಕರ್ತವ್ಯಗಳೆಲ್ಲವೂ ಕಾರ್ಯದರ್ಶಿಯ ಪಾಲಿಗೆ ಉಳಿದವು. ಭರತವರ್ಷ ಸಂಬಂಧವಾದ ಸರ್ವ ವಿಷಯಗಳಲ್ಲಿಯೂ ಕಾರ್ಯದರ್ಶಿಯು ಸಂಯುಕ್ತ ರಾಜ್ಯದ ಪ್ರಭುವಿಗೆ ಮಂತ್ರಿಯೆನಿಸಿ, ಭರತವರ್ಷದಲ್ಲಿರುವ ಎಲ್ಲ ಸರ್ಕಾರಗಳನ್ನೂ ತನ್ನ ಅಧೀನದಲ್ಲಿಟ್ಟುಕೊಂಡು ನಡೆಸುವವನಾಗಿದ್ದಾನೆ. ವೈಸ್‌ರಾಯ್, ಗವರ್ನರ್, ಸಂಸ್ಥಾನಾಧಿ

ಪತಿಗಳು ಎಲ್ಲರೂ ಆತನ ಅಧೀನರಾಗಿಯೇ ಇರುತ್ತಾರೆ. ಆತನು ಪಾರ್ಲಿಮೆಂಟಿಗೆ ಎಲ್ಲ ಆಡಳಿತದ ವಿಷಯಗಳಲ್ಲಿಯೂ ಉತ್ತರವಾದಿಯೆಂಬಂಶವು ಮುಖ್ಯವಾದುದು.

ಆಡಳಿತದ ಮೇಲ್ವಿಚಾರಣೆಯ ಸಮಸ್ತಾಧಿಕಾರವೂ ಕಾರ್ಯದರ್ಶಿಯ ಹಸ್ತಗತವಾಗಿದೆಯೆಂಬುದರ ವಿವರವನ್ನು ತಿಳಿಯಲು ಆತನ ಅಧಿಕಾರಕ್ಷೇತ್ರವನ್ನು (1) ಆಳ್ವಿಕೆಯ ಭಾಗ, (2) ಆಯ ವ್ಯಯದ ಭಾಗ, (3) ಶಾಸಕ ಭಾಗಗಳೆಂದು ಮೂರಾಗಿ ವಿಭಾಗಿಸಿಕೊಂಡು ಕಾಣಬೇಕು.

ಸರ್ವಾಧಿಕಾರ

ವೈಸ್‌ರಾಯಿ, ವೈಸ್‌ರಾಯಿಯ ಸಭೆಯ ಸದಸ್ಯರು, ಗವರ್ನರುಗಳು, ಗವರ್ನರುಗಳ ಸಭೆಯ ಸದಸ್ಯರುಗಳು, ಲೆಫ್ಟಿನೆಂಟ್ ಗವರ್ನರುಗಳು, ಹುದ್ದೆಗಳನ್ನೂ ಹುದ್ದೇದಾರರನ್ನೂ ನಿಯಮಿಸುವ ಸಭೆಗಳು (Public Services Commission), ಆಡಿಟರ್ ಜನರಲ್, ಹೈಕೋರ್ಟುಗಳ ನ್ಯಾಯಾಧಿಪತಿಗಳು ಮತ್ತು ಅಡ್ವೊಕೇಟ್ ಜನರಲ್, ಮತ್ತು ಕಲ್ಕತ್ತ, ಬೊಂಬಾಯಿ, ಮದರಾಸುಗಳ ಬಿಷಪ್ಪುಗಳು—ಇಷ್ಟು ಮಂದಿ ಭಾರಿ ಹುದ್ದೇದಾರರನ್ನು ಹುದ್ದೆಗಳಲ್ಲಿ ನಿಯಮಿಸುವಾತನು ಕಾರ್ಯದರ್ಶಿಯೇ. ಈ ಹುದ್ದೆಗಳಲ್ಲಿ ಯಾವುದನ್ನು ಸಂಪಾದಿಸಿಕೊಳ್ಳಬೇಕಾದರೂ ಕಾರ್ಯದರ್ಶಿಯು ಒಪ್ಪಿ ಕೊಟ್ಟರೆ ಉಂಟು, ಇಲ್ಲದಿದ್ದರೆ ಇಲ್ಲ. ಅಂದರೆ ಇವರೆಲ್ಲರಿಗೂ ಕಾರ್ಯದರ್ಶಿಯೇ ಯಜಮಾನ. ಆದ್ದರಿಂದ ಆಡಳಿತದಲ್ಲಿ ಸಾಮಾನ್ಯವಾದ ಅನೇಕ ವಿಷಯಗಳಲ್ಲಿಯೂ ಅಸಾಮಾನ್ಯವಾದ ವಿಷಯಗಳಲ್ಲಿಯೂ ಆತನ ಅಭಿಮತವನ್ನು ತಿಳಿದುಕೊಳ್ಳದೆ ಪ್ರವರ್ತಿಸಲಾಗುವುದಿಲ್ಲ. ಅನೇಕ ಅಂಶಗಳನ್ನು ಆತನಿಗೆ ತಿಳಿಯಪಡಿಸಿ ಆತನ ಆಜ್ಞಾನುಸಾರವಾಗಿಯೇ ನಡೆಸಬೇಕೆಂಬ ನಿಬಂಧನೆಯುಂಟು ; ಇನ್ನೂ ಅನೇಕಾಂಶಗಳನ್ನು ನಡೆಸುವಾಗ ಪೂರ್ವಭಾವಿಯಾಗಿ ಆತನ ಅಭಿಮತವನ್ನು ಕೇಳಿ ಅದನ್ನು ಅನುಸರಿಸುವುದು ವಾಡಿಕೆ ಅಥವಾ ಪದ್ಧತಿ. ಗವರ್ನರ್ ಆಗಲಿ, ವೈಸ್‌ರಾಯಿಯೇ ಆಗಲಿ ಮುಖ್ಯವೆನಿಸಿದ ವಿಷಯಗಳಲ್ಲಿ ಕಾರ್ಯದರ್ಶಿಯ ಅಭಿಮತವನ್ನು ವಿರೋಧಿಸಿ ನಡೆಯಲು ಆಸ್ಪದವಿಲ್ಲ. ಭರತವರ್ಷದಲ್ಲಿ ಅಧಿಕಾರಿಗಳೆನಿಸಿದವರೆಲ್ಲರೂ ಕಾರ್ಯದರ್ಶಿಗೆ ವಿಧೇಯರಾಗಿರಬೇಕು ; ಎಲ್ಲರೂ ಆತನ ಆಜ್ಞಾನುವರ್ತಿಗಳಾಗಿಯೇ

ಇರಬೇಕು. ಆಯ ವ್ಯಯದ ಕ್ಷೇತ್ರದಲ್ಲಿಯೂ ಕಾರ್ಯದರ್ಶಿಯನ್ನು ಕೇಳದೆ ಕೆಲಸವು ನಡೆಯುವುದಿಲ್ಲ; ಮುಖ್ಯವಾದ ಅಂಶಗಳಲ್ಲಿ ಆತನ ಆಜ್ಞೆಯನ್ನು ಪಡೆದೇತೀರಬೇಕು. ಸಾಮಾನ್ಯವೆನ್ನಬಹುದಾದ ಅಂಶಗಳಲ್ಲಿಯೂ ಆತನನ್ನು ಕೇಳಿ ಆತನ ಇಷ್ಟವನ್ನು ತಿಳಿದು ಅದಕ್ಕನುಗುಣವಾಗಿ ಇತ್ಯರ್ಥ ಮಾಡುವುದು ಸಂಪ್ರದಾಯ. ಶಾಸನ ನಿರ್ಮಾಣ ವಿಷಯದಲ್ಲಿಯೂ ಹೀಗೆಯೇ. ದೇಶದಲ್ಲಿ ನಿಯಮಿತರಾದ ಅಧಿಕಾರಿ ವರ್ಗದವರು ಆತನನ್ನನುಸರಿಸಿಯೇ ಶಾಸನಗಳನ್ನು ರಚಿಸುವುದಲ್ಲದೆ ಶಾಸಕ ಸಭೆಗಳಲ್ಲಿಯೂ ವರ್ತಿಸುವರು. ನ್ಯಾಯಾಧಿಕಾರಿಗಳನ್ನೂ ಕಾರ್ಯದರ್ಶಿಯೇ ದೊರೆಯ ಹೆಸರಿನಲ್ಲಿ ಗೊತ್ತುಮಾಡುವನು.

ಕ್ಯಾಬಿನೆಟ್ ಮುಖ

ಹೀಗಿರುವುದರಿಂದ ಕಾರ್ಯದರ್ಶಿಯ ಅಧಿಕಾರಕ್ಕೆ ಮೇರೆಯೇ ಇಲ್ಲವೆಂದು ಹೇಳಿದರೂ ಹೇಳಬಹುದು. ಪಾರ್ಲಿಮೆಂಟಿನವರಿಗೆ ಉತ್ತರವಾದಿಯಾಗಿರತಕ್ಕದ್ದೇ ಆತನ ಅಧಿಕಾರದ ಎಲ್ಲೆ. ಎಲ್ಲಿಯವರೆಗೆ ಪಾರ್ಲಿಮೆಂಟಿನ ಬೆಂಬಲವನ್ನು ಪಡೆದಿರುತ್ತಾನೆಯೋ ಅಲ್ಲಿಯವರೆಗೆ ಕಾರ್ಯದರ್ಶಿಯು ಸರ್ವತಂತ್ರಸ್ವತಂತ್ರನಂತೆಯೇ ಇರುವನು. ಮುಖ್ಯಾಂಶಗಳನ್ನು ನಿರ್ಧರಿಸುವುದರಲ್ಲಿ ಆತನು ಸಹೋದ್ಯೋಗಿಗಳಾದ ಇತರ ಮಂತ್ರಿಗಳ ಅಭಿಪ್ರಾಯವನ್ನು ತಿಳಿದು ಅವರ ಬೆಂಬಲವನ್ನು ಪಡೆದೇ ಇರುವನು. ಕಾರ್ಯದರ್ಶಿಯೆಂದರೆ ಕ್ಯಾಬಿನೆಟ್ಟಿನ ಭಾರತೀಯ ದಿಕ್ಕಿನ ಮುಖವೆಂಬುದನ್ನು ಮರೆಯಬಾರದು.

ಕಾರ್ಯದರ್ಶಿಯ ಕಾರ್ಯಾಲಯವು ಲಂಡನ್ನಿನಲ್ಲಿದೆ. ಆತನು ಲಂಡನ್ನಿನಲ್ಲಿಯೇ ಇರತಕ್ಕವನು. ಭರತವರ್ಷಕ್ಕೆ ಬರುವುದು ಅಪರೂಪ. ಇಂಡಿಯ ಆಫೀಸೆಂಬುದು ಆತನ ಕಾರ್ಯಾಲಯಕ್ಕೆ ರೂಢಿಯಾದ ಹೆಸರು. **ವೈಟ್‌ಹಾಲ್** ಮತ್ತು **ಇಂಡಿಯ ಹೌಸ್** ಎಂಬ ಎರಡು ಕಟ್ಟಡಗಳಲ್ಲಿ ಕಾರ್ಯದರ್ಶಿ, ಕಮಿಷನರ್ ಇಬ್ಬರೂ ತಮ್ಮ ಕಾರ್ಯಕಲಾಪಗಳನ್ನು ನಡೆಸುತ್ತಾರೆ. ಕಮಿಷನರ್ ಪದವಿಯಲ್ಲಿ ಭಾರತೀಯನೇ ಇರುತ್ತಾನೆ; ಆತನ ಕೆಲಸವು ನಿಯೋಗಿತನದ ಕೆಲಸವೇ ಆಗಿರುತ್ತದೆ.

ಇಂಡಿಯ ಕೌನ್ಸಿಲ್

ಕಾರ್ಯದರ್ಶಿಯ ಸಹಾಯಕ್ಕೆ ಮಂತ್ರಾಲೋಚಕವಾದ ಸಭೆಯೊಂದಿದೆ. ಆ ಸಭೆಗೇ ಇಂಡಿಯ ಕೌನ್ಸಿಲ್ ಎಂದು ಹೆಸರು. ಆ ಸಭೆಯಲ್ಲಿ 8 ರಿಂದ 12ರ ವರೆಗೂ ಸದಸ್ಯರಿರುತ್ತಾರೆ. ಅವರಲ್ಲಿ ಮೂವರು ಭಾರತೀಯರೇ ಆಗಿರುತ್ತಾರೆ; ಉಳಿದವರನ್ನು ಗೊತ್ತುಮಾಡುವ ಸಂದರ್ಭದಲ್ಲಿ ಭಾರತವರ್ಷದ ಅನುಭವಪಡೆದವರನ್ನೇ ಆರಿಸತಕ್ಕುದೆಂಬ ನಿಯಮವಿದೆ. ಸದಸ್ಯರು 5 ವರ್ಷಕಾಲ ಸದಸ್ಯತ್ವವನ್ನು ಅನುಭವಿಸುತ್ತಾರೆ. ಸಾಧಾರಣವಾಗಿ ಭರತವರ್ಷದಲ್ಲಿ ಅಧಿಕಾರನಿರತರಾಗಿದ್ದು ನಿವೃತ್ತರಾದವರೇ ಸಭಿಕರಾಗಿರುತ್ತಾರೆ. ಈ ಮಂತ್ರಾಲೋಚಕ ಸಭೆಗೆ ಕಾರ್ಯದರ್ಶಿಯು ಬದ್ಧನಲ್ಲ; ಸಭಿಕರು ಆತನಿಂದಲೇ ನಿಯಮಿತರಾದವರು, ಆತನಾದರೋ ಪಾರ್ಲಿಮೆಂಟಿಗೆ ಬದ್ಧನಾದವನು. ಆದ್ದರಿಂದ ಬಯಸಿದ ಸಹಾಯವನ್ನು ಸಭಿಕರು ಮಾಡಬಲ್ಲವರೇ ವಿನಾ ಆತನನ್ನು ಬಲವಂತಗೊಳಿಸುವ ಅಧಿಕಾರವನ್ನು ಪಡೆದವರಲ್ಲ. ಕೆಲವು ವಿಷಯಗಳು ಸಭಿಕರಿಗೆ ತಿಳಿಯದೆಯೇ ತೀರ್ಮಾನವಾಗುವುದೂ ಉಂಟು; ಅನೇಕ ವಿಷಯಗಳು ಸಭಿಕರ ಅಭಿಪ್ರಾಯಕ್ಕೆ ವಿರುದ್ಧವಾದ ರೀತಿಯಲ್ಲಿ ಇತ್ಯರ್ಥವಾಗಲೂ ಬಹುದು.

ಇತರ ಅಧಿಕಾರ

ಭರತವರ್ಷದಲ್ಲಿ ನಡೆಯುವ ಎಲ್ಲ ಸರ್ಕಾರಗಳ ಮೇಲ್ವಿಚಾರಣೆಯನ್ನು ನಡೆಸುವ ಅಧಿಕಾರವನ್ನಲ್ಲದೆ ಕಾರ್ಯದರ್ಶಿಯು ಇತರ ವಿಷಯಗಳಲ್ಲಿಯೂ ಅಧಿಕಾರಪಟ್ಟವನ್ನು ಪಡೆದವನು. ಯುದ್ಧವನ್ನಾರಂಭಿಸುವುದೂ ನಿಲ್ಲಿಸುವುದೂ ಆತನ ಕಯ್ಯಲ್ಲಿಯೇ ಇರತಕ್ಕದ್ದು. ಡುಮಿನಿಯನ್ನುಗಳೊಡನೆ ಅಥವಾ ಸಾಮ್ರಾಜ್ಯದ ಇತರ ಭಾಗಗಳೊಡನೆ ಭಾರತೀಯ ಸಂಬಂಧಗಳೇನಿದ್ದರೂ ಆತನ ಮೂಲಕವೇ ನಡೆಯತಕ್ಕದ್ದು. ಅನ್ಯದೇಶಗಳೊಡನೆ ಸಂಧಿವಿಗ್ರಹಗಳ ಸಂಧಾನವೆಂಬುದು ಭರತವರ್ಷಕ್ಕೆ ಬೇರೆಯಾಗಿಲ್ಲದೆ ಸಂಯುಕ್ತ ರಾಜ್ಯದ ನೀತಿಯಲ್ಲಿ ಭಾಗಿಯಾಗಿರುತ್ತದೆಯಾದುದರಿಂದ ಕಾರ್ಯದರ್ಶಿಯೇ ಅನ್ಯದೇಶಗಳೊಡನೆ ನಡೆಯುವ ಸಂಬಂಧವ್ಯವಹಾರಗಳಲ್ಲಿ ನಾಯಕನಾದವನು. ಸಾಮ್ರಾಜ್ಯ ಸಮ್ಮೇಳನಗಳು ನಡೆದ ಸಂದರ್ಭಗಳಲ್ಲಿಯೂ ಇತರ ಅಂತರ ರಾಷ್ಟ್ರೀಯ ಸಮ್ಮೇಳನಗಳು

ನಡೆಯುವ ಕಾಲಗಳಲ್ಲಿಯೂ ಭರತವರ್ಷದ ಪರವಾಗಿ ಕಾರ್ಯದರ್ಶಿಯೇ ಕೆಲಸ ಕಾರ್ಯಗಳನ್ನು ನಡೆಸತಕ್ಕವನು. ಅಂತಹ ಸಮ್ಮೇಳನಗಳಲ್ಲಿಯೂ "ಲೀಗ್ ಆಫ್ ನೇಷನ್ಸ್" ಎಂಬ ರಾಷ್ಟ್ರ ಪರಿಷತ್ ಸಂಬಂಧವಾದ ಸಮ್ಮೇಳನಗಳಲ್ಲಿಯೂ ಆತನು ನಿಯಮಿಸಿದಂತೆ ಭಾರತೀಯರು ಪ್ರತಿನಿಧಿಗಳಾಗಿ ವರ್ತಿಸುತ್ತಾರೆ.

ಸ್ವದೇಶದ ಹೊರಗಿರತಕ್ಕ ಭಾರತೀಯರ ಯೋಗಕ್ಷೇಮಗಳ ವಿಚಾರಣೆಯನ್ನು ನಡೆಸಲು ಕಾರ್ಯದರ್ಶಿಯೇ ಸಮರ್ಥನಾದಾತನು. ಬ್ರಿಟಿಷ್ ಸಮುದಾಯದ ಭಾಗಗಳಲ್ಲಿ ನೆಲೆಸಿರುವ ಭಾರತೀಯರ ಸ್ಥಿತಿಗತಿಗಳಲ್ಲಿ ಅನೇಕ ತೊಡಕುಗಳು ಇರುತ್ತವೆ. ಅವುಗಳನ್ನು ಬಿಡಿಸಬೇಕಾದರೆ ಆ ಕ್ಷೇತ್ರಗಳ ಸರ್ಕಾರಗಳೊಡನೆ ವ್ಯವಹಾರ ನಡೆಸಬೇಕು; ಅದನ್ನು ಕಾರ್ಯದರ್ಶಿಯೇ ಸಮರ್ಪಕವಾಗಿ ನಡೆಸಬಲ್ಲವನು. ಈ ಕರ್ತವ್ಯವನ್ನು ನಡೆಸುವುದರಲ್ಲಿ ಕಾರ್ಯದರ್ಶಿಯು ಸರ್ವಶಕ್ತನಾಗಿರುವುದಿಲ್ಲ; ಹೊರಗಿರುವ ಭಾರತೀಯರ ವಿವರವನ್ನು ಸಂಕ್ಷೇಪವಾಗಿ ತಿಳಿಯುವುದು ಅವಶ್ಯಕ.

**ಹೊರಗಿನ ಭಾರತೀಯರು**

1833ರಲ್ಲಿ ಬ್ರಿಟಿಷರು ಗುಲಾಮತನವನ್ನು ನಿಷೇಧಮಾಡತಕ್ಕದ್ದೆಂದು ನಿಶ್ಚಯಮಾಡಿದರು. ಗುಲಾಮರ ವ್ಯಾಪಾರವೆಂಬುದು ಬ್ರಿಟಿಷರ ಕ್ಷೇತ್ರಗಳಲ್ಲಿ ನಿಂತುಹೋದುದು ಮಾತ್ರವೇ ಅಲ್ಲದೆ ಎಲ್ಲೆಲ್ಲಿ ಗುಲಾಮರನ್ನು ಕಟ್ಟಿಕೊಂಡಿದ್ದರೋ ಅಲ್ಲೆಲ್ಲ ಅವರಿಗೆ ಸ್ವಾತಂತ್ರ್ಯವನ್ನು ಕೊಟ್ಟುಬಿಡಬೇಕಾಯಿತು. ಕಾಲೊನಿಗಳಲ್ಲಿ ನೆಲೆಯಾಗಿದ್ದ ಬ್ರಿಟಿಷರಿಗೆ ಸುಲಭವಾಗಿ ಕೂಲಿಯವರು ದೊರಕದೆಹೋಯಿತು. ಆಗ ಅಲ್ಲಿಯ ಸರ್ಕಾರಗಳು ಭಾರತೀಯ ಕೆಲಸಗಾರರಾದರೆ ಸುಲಭವಾಗುವುದೆಂದು ಯೋಚಿಸಿ ಭರತವರ್ಷದಲ್ಲಿದ್ದ ಬ್ರಿಟಿಷ್ ಸರ್ಕಾರದವರ ಸಹಾಯವನ್ನು ಕೇಳಿದರು. ಆ ಕಾಲದ ಸರ್ಕಾರದವರು ಅನುಮತಿಯನ್ನು ಕೊಟ್ಟರು. ಅದರ ಪರಿಣಾಮವಾಗಿ, ನಿರುದ್ಯೋಗಿಗಳಾಗಿದ್ದವರನ್ನೂ ಮೇಲ್ಮೆಯನ್ನು ಪಡೆಯಲಾಸೆಯುಳ್ಳವರನ್ನೂ ಕಾಲೊನಿಗಳ ಪರವಾಗಿ ಬಂದ ನಿಯೋಗಿಗಳು ಒಡಂಬಡಿಸಿ ಕರಾರುಗಳನ್ನು ಬರೆಸಿಕೊಂಡು ತಂಡ ತಂಡವಾಗಿ ಕಾಲೊನಿಗಳಿಗೆ ಒಯ್ದರು.

ಈ ರೀತಿಯಲ್ಲಿ ಟ್ರಿನಿಡಾಡ್, ಜಮೈಕ, ಮಾರಿಷಸ್, ದಕ್ಷಿಣ ಆಫ್ರಿಕ, ಫೀಜೀ ದ್ವೀಪಗಳು ಮುಂತಾದ ದೂರಕ್ಷೇತ್ರಗಳಿಗೆ ಭಾರತೀಯರು ಹೊರಟರು. ಅಲ್ಲಿಗೆ ತಲಪಿದ ಕೆಲಕಾಲದಲ್ಲಿಯೇ ತಾವು ಗುಲಾಮರಂತೆಯೇ ಸರಿಯೆಂದು ಅವರಿಗೆ ತೋರಿತು. ಕಾಲೊನಿಗಳಲ್ಲಿ ನೆಲೆಸಿದ್ದ ಬಿಳಿಯರು ಅವರು ಪ್ರಬಲರಾಗದಂತೆ ಸರ್ವ ವಿಧಗಳಲ್ಲಿಯೂ ಅಡ್ಡಿಮಾಡಿದರು. ಇಲ್ಲಿ ವರ್ಣಭೇದವೇ ಮೂಲಕಾರಣ.

**ಸಂಧಾನ ಚಾತುರ್ಯ**

ಬ್ರಿಟಿಷ್ ಸಾಮ್ರಾಜ್ಯದಲ್ಲಿ ಪ್ರಜೆಗಳೆನಿಸಿರುವುದರಿಂದ ಭಾರತೀಯರು ಬ್ರಿಟಿಷ್ ಸಾಮ್ರಾಜ್ಯದ ಎಲ್ಲ ಭಾಗಗಳಲ್ಲಿಯೂ ಇತರ ಬ್ರಿಟಿಷ್ ಪ್ರಜೆಗಳ ಪದವಿ ಗೌರವಗಳನ್ನೂ ಅಧಿಕಾರವನ್ನೂ ಪಡೆದಿರಬೇಕೆಂಬುದು ನ್ಯಾಯ. ಡುಮಿನಿಯನ್ನುಗಳು ಅಲ್ಪ ಜನಸಂಖ್ಯೆಯನ್ನೂ ವಿಸ್ತಾರ ಕ್ಷೇತ್ರವನ್ನೂ ಪಡೆದ ವಿಭಾಗಗಳು; ಸಾಧಾರಣವಾಗಿ ಡುಮಿನಿಯನ್ನುಗಳೆಲ್ಲವೂ ಭಾರತೀಯರಿಗೆ ನೆಲೆಸಲು ಆಸ್ಪದವಿಲ್ಲದಂತೆಯೇ ಸೆರವೇರಿಸಿವೆ. ಕಾಲೊನಿಗಳಲ್ಲಂತೂ ಭಾರತೀಯರು ಹಿಂಸೆಗೇ ಸಿಕ್ಕಿರುತ್ತಾರೆ. ಡುಮಿನಿಯನ್ನುಗಳು ಸ್ವತಂತ್ರವಾದವು; ಕಾಲೊನಿಗಳು ಕಾಲೊನಿಗಳ ಕಾರ್ಯದರ್ಶಿಯ ಅಧೀನವಾಗಿರತಕ್ಕವು. ಭಾರತೀಯ ಕಾರ್ಯದರ್ಶಿಯು ದೇಶಾಂತರವಾಸಿಗಳಾದ ಭಾರತೀಯರ ಮೇಲ್ಮೆಯನ್ನು ಸಾಧಿಸಲು ಡುಮಿನಿಯನ್ ಕಾರ್ಯದರ್ಶಿಯ ಮೂಲಕ ಡುಮಿನಿಯನ್ನುಗಳ ಸರ್ಕಾರಗಳೊಡನೆಯೂ, ಕಾಲೊನಿಗಳ ಕಾರ್ಯದರ್ಶಿಯೊಡನೆಯೂ ಚಮತ್ಕಾರದಿಂದ ವರ್ತಿಸಬೇಕೇ ವಿನಾ ಅಧಿಕಾರಬಲವನ್ನು ತೋರಲಾಗುವುದಿಲ್ಲ. ಬ್ರಿಟಿಷ್ ಸಾಮ್ರಾಜ್ಯದ ಹೊರಗಡೆ ಇತರ ದೇಶಗಳಲ್ಲಿ ಭಾರತೀಯರು ಪಡೆಯುವ ಗೌರವ ವಿಷಯದಲ್ಲಿಯೂ ಆ ದೇಶಗಳ ಸರ್ಕಾರಗಳೊಡನೆ ವ್ಯವಹರಿಸಬೇಕಾದರೆ ಕಾರ್ಯದರ್ಶಿಯೇ ವ್ಯವಹಾರವನ್ನು ನಡೆಸಬೇಕು.

ಸಂಯುಕ್ತರಾಜ್ಯದಲ್ಲಿ ಕಾರ್ಯದರ್ಶಿ ಮತ್ತು ಆತನ ಸಭಿಕರಲ್ಲದೆ ಭಾರತೀಯ ಅಧಿಕಾರಿಗಳೆಂಬುವವರು ಗಣ್ಯರಾದವರು ಯಾರೂ ಇಲ್ಲ. ದೇಶದ ಹೊರಗಡೆ ಇರುವ ಅಧಿಕಾರಿಗಳಲ್ಲಿ ಇವರು ಮುಖ್ಯರು ಮಾತ್ರ

ವಲ್ಲದೆ ಅತಿ ಶ್ರೇಷ್ಠವಾದ ಸ್ಥಾನದಲ್ಲಿರತಕ್ಕವರು. ಇವರಲ್ಲದೆ ಭಾರತೀಯ ಸರ್ಕಾರದ ಅಧಿಕಾರಿಗಳಾಗಿ ದೇಶದ ಹೊರಗಡೆ ಇರುವವರು ಅತ್ಯಲ್ಪರು; ಅವರಲ್ಲಿ ದಕ್ಷಿಣ ಆಫ್ರಿಕದಲ್ಲಿ ಅಲ್ಲಿಯ ಭಾರತೀಯ ನಿವಾಸಿಗಳ ಸ್ಥಿತಿ ಗತಿಗಳನ್ನು ವಿಚಾರಿಸುತ್ತ ಅಲ್ಲಿಯ ಯೂನಿಯನ್ ಸರ್ಕಾರದೊಂದಿಗೆ ಭಾರತೀಯರ ಪರವಾಗಿ ವ್ಯವಹಾರ ನಡೆಸುತ್ತಲಿರುವ ಏಜಂಟೆಂಬಾತ ನೊಬ್ಬನೇ ಗಣ್ಯನು.

## ಸೆಂಟ್ರಲ್ ಅಥವಾ ವೈಸ್‌ರಾಯಿ ಸರ್ಕಾರ

**ವೈಸ್‌ರಾಯಿಯ ಅಧಿಕಾರಗೌರವ**

ಪಾರ್ಸೀಸ್ಥಾನದ ಎಲ್ಲೆಯಿಂದ ಸಯಾಂ ದೇಶದ ಎಲ್ಲೆಯವರೆಗೂ ಮತ್ತು ಸೇತುವಿಂದ ಹಿಮಾಚಲದವರೆಗೂ ಇರುವ ವಿಶಾಲವಾದ ಕ್ಷೇತ್ರಕ್ಕೆ ಅಧಿಪತಿ ಯಾದಾತನು "ವೈಸ್‌ರಾಯ್ ಮತ್ತು ಗವರ್ನರ್ ಜನರಲ್" ಎಂಬ ಹೆಸರುಗಳನ್ನು ಧರಿಸಿರುತ್ತಾನೆ. ಮುಘಲಾ ಬಾದಷಾಹಿಯ ತರುವಾಯ ಈತನೇ ಮಯೂರ ಸಿಂಹಾಸನಾಧಿ ಪತಿಯೆಂಬ ಮಾತು ಎರಡು ವಿಧವಾಗಿ ತಪ್ಪಾದರೂ ಒಂದು ನಿಜಾಂಶವನ್ನು ಸೂಚಿಸತಕ್ಕದ್ದು. ಇಷ್ಟು ವಿಸ್ತಾರ ಕ್ಷೇತ್ರಕ್ಕೆ ಅಧಿಪತಿಗಳೆನಿಸಿದವರು ಜಗತ್ತಿನಲ್ಲಿ ವಿರಳ. ಬ್ರಿಟಿಷ್ ಸಾಮ್ರಾಜ್ಯವೆಂಬ ಅತಿವಿಸ್ತಾರವಾದ ಸಂಸ್ಥೆಗೇ ಈತನು ಭೂಷಣಪ್ರಾಯನಾದಾತನು. ಕೆನಡ, ಆಸ್ಟ್ರೇಲಿಯ, ಸೌತ್ ಆಫ್ರಿಕಗಳೆಂಬವು ವಿಸ್ತಾರಕ್ಷೇತ್ರಗಳಾದರೂ ಅವುಗಳ ಗವರ್ನರ್ ಜನರಲ್ಲರು ಅಥವಾ ಭೋಗಾಧಿಪತಿಗಳು ಭಾರತೀಯ ಭೋಗಾಧಿಪತಿಯ ವೈಭವ ಅಟ್ಟಹಾಸಗಳನ್ನಾಗಲಿ ಅಧಿಕಾರವನ್ನಾಗಲಿ ಪಡೆದಿಲ್ಲ. ಭರತವರ್ಷದ ವೈಸ್‌ರಾಯಿಯ ಪದವಿಗೆ ಸಮನಾದ ಪದವಿಯನ್ನು ನಾವು ನೋಡ ಬೇಕಾದರೆ ಹಿಂದಿನಕಾಲದಲ್ಲಿ ಕಳೆದುಹೋದ ರೋಮಕ ಚಕ್ರವರ್ತಿ ಗಳನ್ನೋ ರಷ್ಯಾದ ಜಾರರನ್ನೋ ಅಮೆರಿಕದ ಸರ್ವಾಧ್ಯಕ್ಷನನ್ನೋ ಸ್ಮರಿಸಬೇಕು. ಅಲ್ಲಿಗೂ ಹೋಲಿಕೆಯು ಪೂರ್ತಿಯಲ್ಲ. ಏಕೆಂದರೆ ವೈಸ್ರಾಯಿಯು 35 ಕೋಟಿ ಸಂಖ್ಯಾಕ ಜನರನ್ನು ಅಥವಾ ಮಾನವ ರಾಶಿಯ ಆರರಲ್ಲೊಂದು ಸಮೂಹವನ್ನು ಆಳತಕ್ಕವನು.

ಪ್ರಧಾನ ಶ್ರೀಮಂತ

"ವೈಸ್‌ರಾಯ್" ಎನಿಸಿದಾತನು ಭರತವರ್ಷಕ್ಕೆ ಸಮ್ರಾಟನಾದ ಇಂಗ್ಲಂಡಿನ ದೊರೆಯ ಪ್ರತಿನಿಧಿ ಮಾತ್ರವೇ ಅಲ್ಲ; ಸಂಯುಕ್ತರಾಜ್ಯದ "ಪಾರ್ಲಿಮೆಂಟ್" ಮತ್ತು "ಕ್ಯಾಬಿನೆಟ್" ಎಂಬವುಗಳ ನಿಯೋಗಿಯೂ ಆಗಿ ಸಂಯುಕ್ತರಾಜ್ಯದ ಪ್ರತಿನಿಧಿಯೂ ಆಗಿರುತ್ತಾನೆ. 'ಗವರ್ನರ್ ಜನರಲ್' ಎಂದರೆ ಗವರ್ನರುಗಳಲ್ಲಿ ಶ್ರೇಷ್ಠನೂ ಅಗ್ರಗಣ್ಯನೂ ಎನಿಸಿದಾತನು ಆತನೇ. ಈ ಪದವಿಗೆ ಯೋಗ್ಯನೆನಿಸಬೇಕಾದರೆ ಕಾರ್ಯದಕ್ಷತೆ ಮಾತ್ರವಲ್ಲದೆ ಶ್ರೇಷ್ಠ ಜನ್ಮವೂ ಆವಶ್ಯಕ. ಆದುದರಿಂದ ಆ ಪದವಿಗೆ ಸಂಯುಕ್ತರಾಜ್ಯದ ಶ್ರೀಮಂತವರ್ಗದವರಲ್ಲೊಬ್ಬಾತನನ್ನೇ ಆರಿಸುತ್ತಾರೆ. ಕ್ಯಾಬಿನೆಟ್ ಮಂತ್ರಿಗಳೇ ಆರಿಸತಕ್ಕವರು; ನಿಯೋಗಮಾಡುವಾಗ ಮಾತ್ರ ದೊರೆಯ ಹೆಸರಿನಲ್ಲಿ ನಡೆಯುತ್ತದೆ. ನಿಯುಕ್ತನಾದಾತನು 5 ವರ್ಷಗಳ ಕಾಲ ಅಧಿಕಾರವನ್ನು ಅನುಭವಿಸುವ ಸಂಪ್ರದಾಯ ನೆಲೆಗೊಂಡಿದೆ. ವೈಸ್‌ರಾಯ್ ಎಂಬಾತನು ಈ ರೀತಿಯಲ್ಲಿ ಸಮುಸ್ತಾಧಿಪತಿಯಾಗಿಯೇ ಇದ್ದು ರಾಜ ಪುರುಷರಿಗೆ ಸಲ್ಲುವ ಗೌರವ ಮರ್ಯಾದೆಗಳನ್ನು ಪಡೆಯುತ್ತ ಸಿಮ್ಲ ಮತ್ತು ಡಿಲ್ಲಿ ಎಂಬೆರಡು ರಾಜಧಾನಿಗಳಲ್ಲಿ ವೈಭವದಿಂದ ಇರುವನು. ಭರತವರ್ಷದಲ್ಲೆಲ್ಲ ಆತನಿಗೇ ಮೊದಲಿನ ಮರ್ಯಾದೆ ಸಲ್ಲುವುದು. ಒಂದಾಗಲೂ ಹೋದಾಗಲೂ ಆತನ ಮರ್ಯಾದಾರ್ಥವಾಗಿ 35 ಗುಂಡುಗಳನ್ನು ಹಾರಿಸುವುದುಂಟು.

ವಾರನ್ ಹೇಸ್ಟಿಂಗ್ಸನೆಂಬಾತನು ಗವರ್ನರ್ ಜನರಲ್ಲರಲ್ಲಿ ಮೊದಲನೆಯವನಾಗಿದ್ದನು; ವೈಸ್‌ರಾಯಿಗಳಲ್ಲಿ ಲಾರ್ಡ್ ಕ್ಯಾನಿಂಗೆಂಬಾತನು ಮೊದಲನೆಯವನಾಗಿದ್ದನು. 1858ರಿಂದ ಅಥವಾ ಲಾರ್ಡ್ ಕ್ಯಾನಿಂಗ್ ಕಾಲದಿಂದ ವೈಸ್‌ರಾಯ್ ಮತ್ತು ಗವರ್ನರ್ ಜನರಲ್ ಪದವಿಗಳೆರಡೂ ಏಕೀಭೂತವಾದವು. ಅಂದಿನಿಂದಲೂ ವೈಸ್‌ರಾಯಿಯು ಸಹಾಯಕ ಸಭೆಯೊಂದನ್ನು ಪಡೆದಿದ್ದೇ ರಾಷ್ಟ್ರಭಾರವನ್ನು ನಡೆಸುತ್ತಿದ್ದರೂ ಶಾಸಕ ಸಭೆಯೆಂಬುದು ಪ್ರತ್ಯೇಕವಾಗಿರಲಿಲ್ಲ. ಶಾಸಕಸಭೆಯು ರೂಪಗೊಂಡ ವಿವರವು ಇತಿಹಾಸಕ್ಕೆ ಸೇರಿದ್ದು. ಈಗ ನಡೆಯುತ್ತಲಿರುವ ಶಾಸಕಾಂಗ ಕಾರ್ಯಾಂಗಗಳು 1919ನೆ ಇಸವಿಯ ಭಾರತೀಯ ರಾಷ್ಟ್ರರಚನೆಯ ವಿಧಿಗೆ ಅನುಸಾರವಾಗಿ ನಡೆಯುತ್ತಿವೆ.

ಮೊದಲು ಸೆಂಟ್ರಲ್ ಸರ್ಕಾರವೆಂದೂ ಅಖಿಲ ಭಾರತೀಯ ಸರ್ಕಾರ ವೆಂದೂ ಹೆಸರಾಗಿರುವ ವೈಸ್‌ರಾಯಿ ಸರ್ಕಾರದ ಅಧಿಕಾರ ಕ್ಷೇತ್ರವನ್ನು ನಾವು ಎಂಗಡಿಸಿಕೊಳ್ಳ ಬೇಕು. ಅಮೆರಿಕದ ರಾಷ್ಟ್ರವಿವರದಲ್ಲಿ ಕಂಡ ಫೆಡರಲ್ ಸರ್ಕಾರಕ್ಕೆ ಇರುವ ಕರ್ತವ್ಯವನ್ನೇ ಸರಿ ಸುಮಾರಾಗಿ ಸೆಂಟ್ರಲ್ ಸರ್ಕಾರದ ಕರ್ತವ್ಯವು ಹೋಲುತ್ತದೆ. ಭರತವರ್ಷದ ಎಲ್ಲ ಭಾಗಗಳಿಗೂ ಸಂಬಂಧಿಸಿದ ಆಡಳಿತದ ವಿಷಯಗಳೆಲ್ಲವೂ ಸೆಂಟ್ರಲ್ ಸರ್ಕಾರದ ಕರ್ತವ್ಯ ಕ್ಷೇತ್ರವೆನಿಸಿ "ಸೆಂಟ್ರಲ್ ಸಬ್ಜೆಕ್ಟ್ಸ್" (Central Subjects) ಎನಿಸುತ್ತವೆ. ಸೈನ್ಯ ಪೋಷಣೆ ಮತ್ತು ವಿನ್ಯಾಸವು ಸೆಂಟ್ರಲ್ ಆಗಿದ್ದೇ ತೀರಬೇಕು. ವಾಯುವ್ಯ ಸರಹದ್ದಿನಲ್ಲಿಯೇ ಹೆಚ್ಚಾದ ಸೈನ್ಯವಿರ ತಕ್ಕದ್ದು ಅತ್ಯವಶ್ಯವಾದುದು; ಆ ಪ್ರದೇಶದವರು ಮಾತ್ರವೇ ಅದನ್ನು ವಹಿಸಬೇಕೆನ್ನುವುದು ಕಾಲಿನಲ್ಲಿ ಮುಳ್ಳು ಚುಚ್ಚಿದರೆ 'ಕಾಲೇ ತೆಗೆದುಹಾಕಲಿ, ನನಗೇನು?" ಎಂದು ಕೈಹೇಳಿದಂತೆ ಆಗುವುದು. "ಆ ದೂರಪ್ರದೇಶದಲ್ಲಿ ಸೈನ್ಯವಿಡುವುದಕ್ಕೂ ನಮಗೂ ಏನು ಸಂಬಂಧ?" ಎನ್ನುತ್ತ ಮದರಾಸಿ ನವರು ತಟಸ್ಥರಾದರೆ ಈಸೋಪನು ಬರೆದಿಟ್ಟ ಹೊಟ್ಟೆಯ ಕಥೆಯಂತೆಯೇ ಆಗುವುದು. ಭಾರತೀಯ ರಾಷ್ಟ್ರವೆಲ್ಲವೂ ಏಕದೇಹ; ದೇಹದ ಸರ್ವಾಂಗಗಳ ಶುದ್ಧಿಯನ್ನೂ ಪೋಷಣೆಯನ್ನೂ ಮನಸ್ಸು ಮಾಡಿದಂತೆಯೇ ಸೆಂಟ್ರಲ್ ಸರ್ಕಾರವು ದೇಶವೆಲ್ಲಕ್ಕೂ ಸಂಬಂಧಪಟ್ಟ ರಾಷ್ಟ್ರಕರ್ತವ್ಯಗಳನ್ನು ನೆರವೇರಿಸಬೇಕು. ವಾಯುವ್ಯ ಸರಹದ್ದಿನಲ್ಲಿ ಸೈನ್ಯ ಸನ್ನಾಹವು ಹೇಗಿರ ಬೇಕೋ ಈಶಾನ್ಯದಲ್ಲಿ ಹೇಗಿರಬೇಕೋ ಸೆಂಟ್ರಲ್ ಸರ್ಕಾರವೇ ನಿಶ್ಚ ಯಿಸಲು ಯೋಗ್ಯತೆಯುಳ್ಳದು. ಒಂದೊಂದು ಪ್ರದೇಶದಲ್ಲಿ ಒಂದೊಂದು ಬಗೆಯ ನಾಣ್ಯವು ರೂಢಿಯಾಗಿದ್ದಲ್ಲಿ ಪರಸ್ಪರವಾಗಿ ವ್ಯಾಪಾರಮಾಡುವಾಗ ಎಷ್ಟು ತೊಂದರೆಯಾಗುವುದು! ಎಲ್ಲೆಡೆಗಳಲ್ಲಿಯೂ ಒಂದೇ ನಾಣ್ಯವು ಬಳಕೆ ಯಲ್ಲಿರುವಂತೆ ಏರ್ಪಡಿಸುವುದಕ್ಕೆ ಸೆಂಟ್ರಲ್ ಸರ್ಕಾರವೇ ತಕ್ಕದ್ದು. ಅಥವಾ ಹೊರದೇಶಗಳೊಡನೆ ವ್ಯಾಪಾರ ನಡೆಯುವ ಸಂಗತಿಯನ್ನು ವಿಚಾರಿಸೋಣ. ಜಪಾನೀಯರು ಬೆಂಕಿಪೆಟ್ಟಿಗೆಗಳನ್ನೋ ಕಾಗದದ ಗೊಂಬೆ ಗಳನ್ನೋ ರಾಶಿರಾಶಿಯಾಗಿ ಒಡ್ಡಿಮಾರುವುದನ್ನು ನಿಲ್ಲಿಸಲು ಬೊಂಬಾಯಿ

ಅಖಿಲ ಭಾರತ ಆಡಳಿತ ಕ್ಷೇತ್ರ

ಯವರೋ ಬಂಗಾಳದವರೋ ಇಷ್ಟಪಟ್ಟು ಆಮದು ಸುಂಕವನ್ನು ಎತ್ತಿದರೆ ಆಗುವುದೇನು? ಜಪಾನೀಯರು ಮದರಾಸಿನಲ್ಲಿ ರಾಶಿರಾಶಿಯಾಗಿ ಅವುಗಳನ್ನೊಡ್ಡಿ ಮದರಾಸಿನಿಂದ ಬಂಗಾಳವನ್ನೂ ಬೊಂಬಾಯಿಯನ್ನೂ ಪ್ರವೇಶಿಸುವಂತೆ ಯತ್ನಿಸುವರು. ಆಗ ಮದರಾಸಿನ ಸರ್ಕಾರದವರಿಗೂ ಬಂಗಾಳದ ಸರ್ಕಾರದವರಿಗೂ ವಿಷಮಸ್ಥಿತಿಯೇ ಒದಗುವುದು. ಆಮದು ಸುಂಕವನ್ನೋ ರಫ್ತಿನ ಸುಂಕವನ್ನೋ ಎತ್ತಬೇಕಾದರೆ ದೇಶದ ಎಲ್ಲ ಬಂದರುಗಳಲ್ಲಿಯೂ ಎತ್ತಬೇಕು. ಪ್ರಾದೇಶಿಕ ಸರ್ಕಾರಗಳಿಗೆ ವೈಷಮ್ಯ ತೋರದಂತೆ ಮೇಲ್ವಿಚಾರಣೆ ನಡೆಸುತ್ತಲಿರಬೇಕು. ಇಂತಹ ಕರ್ತವ್ಯಗಳನ್ನು ಅಥವಾ ಅಖಿಲ ಭಾರತ ಕರ್ತವ್ಯಗಳನ್ನು ಅಖಿಲ ಭಾರತ ಸರ್ಕಾರವೇ ಪರಿಪಾಲಿಸಬೇಕು.

**ಶಾಖೆಗಳು**

1919ನೆ ಇಸವಿಯ ವಿಧಿಯಲ್ಲಿ ಆಡಳಿತದ ವಿಷಯಗಳನ್ನು ಎರಡು ಭಾಗವಾಗಿ ಮಾಡಿದೆ. ಆ ವಿಭಾಗದಲ್ಲಿ ಸೆಂಟ್ರಲ್ ವಿಷಯಗಳು ಅಥವಾ ಅಖಿಲ ಭಾರತ ರಾಷ್ಟ್ರದ ಕರ್ತವ್ಯಗಳು ಕ್ರೋಡೀಕೃತವಾಗಿವೆ. ಅವುಗಳಲ್ಲಿ ಮುಖ್ಯವಾದವು ಮಾತ್ರ ಇವು:—

(1) ರಕ್ಷಣೆ ಅಂದರೆ ಭೂಸೈನ್ಯ, ಜಲಸೈನ್ಯ, ಆಕಾಶ ಸೈನ್ಯಗಳ ಆಡಳಿತ.

(2) ಅನ್ಯದೇಶ ಸಂಬಂಧ ವ್ಯವಹಾರಗಳು.

(3) ದೇಶೀಯ ಸಂಸ್ಥಾನಗಳ ಮೇಲ್ವಿಚಾರಣೆ.

(4) ಸಂಚಾರ ಸೌಕರ್ಯಗಳು ಅಂದರೆ ರೈಲು, ಕಾಲುವೆ ಮತ್ತು ಆಕಾಶಮಾರ್ಗ ಸಾಧನೆಗಳು.

(5) ನೌಕಾಶ್ರಯಗಳು, ಹಡಗುಗಳ ಸಂಚಾರ, ದೀಪಗೃಹ, ಸಮುದ್ರಯಾನ ಸಂಬಂಧವಾದ ಆಡಳಿತ.

(6) ಟಪಾಲ್, ತಂತಿ, ಟೆಲಿಫೋನ್ ಮತ್ತು ವೈರ್ಲೆಸ್ ಶಾಖೆಗಳು.

(7) ಸುಂಕದ ಶಿಸ್ತು.

(8) ನಾಣ್ಯದ ಶಿಸ್ತು, ಟಂಕಸಾಲೆ ಮುಂತಾದವು.

(9) ರಾಷ್ಟ್ರೀಯ ಋಣದ ವ್ಯವಹಾರ.

(10) ಸಿವಿಲ್ ಲಾ ಅಥವಾ ಮಮತ್ವ ಸಂಬಂಧವಾದ ನ್ಯಾಯವಿಧಿ.

(11) ವ್ಯಾಪಾರ, ಲೇವಾದೇವಿ, ಬ್ಯಾಂಕುಗಳು, ಇನ್‌ಷ್ಯೂರೆನ್ಸ್ (ವಿಮೆ).

(12) ರಾಷ್ಟ್ರಗ್ರಸ್ತವೆನಿಸಿದ (State Monopolies) ವ್ಯಾಪಾರ— ಅಫೀಂ, ಉಪ್ಪು, ಪೆಟ್ರೋಲಿಯಂ, ಮದ್ದಿನ ವಸ್ತುಗಳು.

(13) ಉದ್ಯೋಗ ವೃದ್ಧಿ.

(14) ಉಗ್ರಾಣ ಮತ್ತು ಲೇಖನ ಸಾಮಗ್ರಿಗಳ ವ್ಯಾಪಾರ.

(15) ಶಾಸ್ತ್ರೀಯ ಪರೀಕ್ಷಾ ಶೋಧನೆಗಳು:—ಭೂಶೋಧನೆ, ಸಸ್ಯ ರಾಶಿ ಪರೀಕ್ಷೆ, ಪ್ರಾಣಿವರ್ಗ ಪರೀಕ್ಷೆ, ಪ್ರಾಕ್ತನ ಪರೀಕ್ಷೆ, ಭೂಮಿಯ ಸರ್ವೆ, ಜನಗಣಿತಿ, ಅಂತರಿಕ್ಷ ಪರೀಕ್ಷೆ, ಮುಂತಾದವು.

(16) ದೇಶಾಂತರ ಗಮನ ಮತ್ತು ವಿದೇಶೀಯರ ಪ್ರವೇಶ.

(17) ಬಿರುದು ಮರ್ಯಾದೆಗಳು.

(18) ಕ್ಷೇತ್ರ ವಿಭಾಗ, ಇತ್ಯಾದಿ.

ಇವುಗಳೆಲ್ಲವೂ ವಿಸ್ತಾರವಾದ ಕಾರ್ಯರಾಶಿಯನ್ನೇ ಸೂಚಿಸುತ್ತವೆ.

ನಿರ್ವಾಹಕ ಸಭೆ

ಎಲ್ಲವೂ ವೈಸ್‌ರಾಯಿಯ ಸರ್ಕಾರದ ಕರ್ತವ್ಯಗಳಾಗಿವೆ. ವೈಸ್‌ರಾಯಿಯೊಬ್ಬಾತನೇ ಇವೆಲ್ಲವುಗಳ ಮೇಲ್ವಿಚಾರಣೆಯನ್ನು ನಡೆಸಲು ಅಸಾಧ್ಯ. ಆದಕಾರಣದಿಂದ ಆತನ ಸಹಾಯಕ್ಕಾಗಿ ಎಕ್ಸಿಕ್ಯೂಟಿವ್ ಕೌನ್ಸಿಲ್ ಅಥವಾ ಕಾರಕ ಸಭೆಯೆಂಬುದುಂಟು. ಅದನ್ನೇ ವೈಸ್ರಾಯಿಯ ಕಾರ್ಯಕಾರಿ ಮಂಡಲಿ ಅಥವಾ ಮಂತ್ರಿಕೂಟವೆಂದೂ ಕರೆಯಬಹುದು. ಸಂಕ್ಷೇಪವಾಗಿ ವೈಸ್‌ರಾಯಿ ಸಭೆಯೆಂದೂ ಕರೆಯಬಹುದು. ಉತ್ಪ್ರೇಕ್ಷೆಮಾಡಿ ಅಖಿಲ ಭಾರತಕ್ಕೆ "ಕ್ಯಾಬಿನೆಟ್" ಎಂಬುದೂ ಉಂಟು. ಆದರೆ ಕ್ಯಾಬಿನೆಟ್ಟಿಗೂ ಇದಕ್ಕೂ ಹೋಲಿಕೆಯೇ ಇಲ್ಲ.

## ವೈಸ್‌ರಾಯಿಯ ಕೌನ್ಸಿಲ್

ಸಾಧಾರಣವಾಗಿ 6 ಸಭಿಕರು ಈ ಕೌನ್ಸಿಲ್ಲಿನಲ್ಲಿರುತ್ತಾರೆ. ಅವರಲ್ಲಿ ಪ್ರತಿಯೊಬ್ಬರಿಗೂ ಪತ್ರಪೇಟಿಕಾ ಅಥವಾ ಪತ್ರ

ಪತ್ರಪೇಟಿಕಾ

ಪೆಟ್ಟಿಗೆ (Portfolio) ಎಂಬುದುಂಟು; ಆ ಶಬ್ದಕ್ಕೆ ವಿಶೇಷವಾದ ಅರ್ಥವೇ ಉಂಟು. ಸರ್ಕಾರದಲ್ಲಿ ಅನೇಕಾನೇಕ ಶಾಖೆಗಳ ಮೇಲ್ವಿಚಾರಣೆಯ ಭಾರವನ್ನು ವಹಿಸಿದ ಇವರು ತಂತಮ್ಮ ಯೋಗ್ಯತಾನುಸಾರವಾಗಿ ಆ ಶಾಖೆಗಳನ್ನು ಗುಂಪು ಗುಂಪು ಗಳಾಗಿ ರಚಿಸಿಕೊಳ್ಳುವರು. ಒಬ್ಬೊಬ್ಬ ಸಭಿಕನೂ ನಾಲ್ಕಾರು ಶಾಖೆಗಳ ಅಧಿಕಾರವನ್ನು ಮಾಡತಕ್ಕವನು; ನಾಲ್ಕಾರು ಶಾಖೆಗಳ ಕಾಗದ ಪತ್ರ ಗಳೂ ಆತನಲ್ಲಿಗೆ ಬರುತ್ತವೆಯಾದ್ದರಿಂದ ಆತನ ಪತ್ರಪೆಟ್ಟಿಗೆಯೆಂದರೆ ಆತನ ಅಧಿಕಾರಕ್ಕೊಳಗಾಗಿರುವ ಶಾಖೆಗಳೆಂದು ಸೂಚಿತವಾಗುತ್ತದೆ. 1919ನೆ ವಿಧಿಗೆ ಅನುಸಾರವಾಗಿ ಈ ಸಭಿಕರಲ್ಲಿ ಮೂವರಾದರೂ ಭರತವರ್ಷದಲ್ಲಿ ಹತ್ತುವರ್ಷಗಳ ಅನುಭವವನ್ನು ಪಡೆದಿರತಕ್ಕವರಾಗಿರಬೇಕು; ಒಬ್ಬಾತನು ನ್ಯಾಯಶಾಸ್ತ್ರ ವಿಧಾನಗಳನ್ನು ಚನ್ನಾಗಿ ಬಲ್ಲವನಾಗಿರಬೇಕು; ಮತ್ತು ಮೂವರು ದೇಶೀಯರಾಗಿರಬೇಕು. ಸಮಸ್ತ ಸೈನ್ಯಾಧಿಪತಿಯಾದಾತನು ಸಭಿಕನಾಗಿಯೇ ಇರಬೇಕೆಂಬ ವಿಧಿಯಿಲ್ಲ; ಆದರೂ ಆತನೂ ಸಭಿಕರಲ್ಲಿ ಒಬ್ಬನಾಗಿ ಇರುತ್ತಾನೆ. ಸಭಿಕರ ಸ್ಥಾನಗಳಿಗೆ

ರಚನೆ

ಯೋಗ್ಯರಾದವರನ್ನು ನಿಯಾಮಕವಮಾಡುವಾತನು ಇಂಗ್ಲಂಡಿನಲ್ಲಿರುವ ಭಾರತೀಯ ಕಾರ್ಯದರ್ಶಿ. ಆತನ ಅಧೀನರಾಗಿಯೂ ಆಜ್ಞಾಧಾರಕರಾಗಿಯೂ ಇದ್ದು ಸಭಿಕರು ವರ್ತಿಸಬೇಕು. ಸಭಿಕರು ಆ ಕಾರ್ಯದರ್ಶಿಗೆ ಉತ್ತರವಾದಿಗಳೇ ವಿನಾ ಭಾರತೀಯ ಶಾಸಕ ಸಭೆಗಳಿಗೆ ಉತ್ತರವಾದಿಗಳಲ್ಲವೆಂಬ ಒಂದು ಅಂಶ ದಿಂದಲೇ ಕ್ಯಾಬಿನೆಟ್ಟಿಗೂ ಈ ಸಭೆಗೂ ಇರುವ ವ್ಯತ್ಯಾಸವನ್ನು ಕಾಣಬಹುದು.

ಈ ಸಭೆಯು ದಿಲ್ಲಿಯಲ್ಲಿಯೋ ಸಿಮ್ಲದಲ್ಲಿಯೋ ಹೆಚ್ಚುವೇಳೆ ನೆರೆದಾಗ್ಯೂ ರಾಷ್ಟ್ರದಲ್ಲಿ ಎಲ್ಲಿ ಬೇಕಾದರೂ ನೆರೆಯಬಹುದು. ವೈಸ್‌ರಾಯಿ ಇಷ್ಟಪಟ್ಟು ಕರೆಸಿದಂತೆ ಸಭಿಕರು ನೆರೆಯುತ್ತಾರೆ. ಇವರಿಗೆ ಸಿಬ್ಬಂದಿಗಳೂ

ಉಂಟು; ಆದರೆ ರಾಯಸ ಪರಿವಾರವೇ ಬೇರೆ. ರಾಯಸದ ಕಾರ್ಯಾಲಯಗಳು (Secretarial) ಮುಖ್ಯವಾಗಿ ದಿಲ್ಲಿಯಲ್ಲಿಯೇ ಇವೆ. ಅಲ್ಲಿಯೇ ಮುಖ್ಯ ಶಾಖೆಗಳ ಶ್ರೇಷ್ಠ ಕಾರ್ಯಾಲಯಗಳು ಇರುವುವು. ಅವುಗಳಲ್ಲಿ ಪ್ರತಿ ಶಾಖೆಗೂ ಮುಖ್ಯಸ್ಥನಾದಾತನಿಗೆ ಸೆಕ್ರೆಟರಿ ಅಥವಾ ಕಾರ್ಯದರ್ಶಿಯೆಂದು ಹೆಸರು. ಪ್ರಧಾನ ಕಾರ್ಯದರ್ಶಿಗಳೂ ಮುಖ್ಯ ಕಾರ್ಯದರ್ಶಿಗಳೂ ಅಲ್ಲದೆ ಜಂಟಿ ಕಾರ್ಯದರ್ಶಿಗಳೂ ಸಹಾಯಕ ಕಾರ್ಯದರ್ಶಿಗಳೂ ಯಥೋಚಿತವಾಗಿರುತ್ತಾರೆ. ಈ ಕಾರ್ಯದರ್ಶಿಗಳು ಹೆಸರಿಗೆ ಕಾರಕ ಸಭೆಯ ಸಭಿಕರಿಗೆ ಅಧೀನರಾದಾಗ್ಯೂ ಅವಶ್ಯವೆಂದು ತೋರಿದಾಗ ವೈಸ್‌ರಾಯಿಯ ಬಳಿಗೇ ನೇರವಾಗಿ ಹೊರಟು ಆಜ್ಞೆಗಳನ್ನು ಪಡೆದು ಬರಬಹುದು. ವೈಸ್‌ರಾಯಿಗಿರುವಷ್ಟು ಅಧಿಕಾರವು ಯಾವ ಸಭಿಕನಿಗೂ ಇರುವುದಿಲ್ಲ. ಯಾವುದಾದರೂ ವಿಚಾರದಲ್ಲಿ ವೈಸ್‌ರಾಯಿಯ ತೀರ್ಪು ಸೂಕ್ತವಲ್ಲವೆಂದು ತೋರಿ ಇಬ್ಬರು ಸಭಿಕರು ಒಟ್ಟುಗೂಡಿ ಆಕ್ಷೇಪವನ್ನೆತ್ತಿದ ಪಕ್ಷದಲ್ಲಿ ವಿಷಯವನ್ನು ಇಂಗ್ಲಂಡಿನಲ್ಲಿರುವ ಕಾರ್ಯದರ್ಶಿಗೆ ತಿಳಿಯಪಡಿಸಿ ಆತನ ಆಜ್ಞೆಯಂತೆ ನಡೆಸಬೇಕೆಂಬ ನಿಯಮವುಂಟು. ಎಲ್ಲ ವಿಷಯಗಳಲ್ಲಿಯೂ ಸಭೆಯ ಕಾರ್ಯನಿರ್ವಾಹವು ಕಾರ್ಯದರ್ಶಿಯ ನಿಶ್ಚಯಕ್ಕನುಸಾರವಾಗಿಯೇ ನಡೆಯಬೇಕಾಗಿರುತ್ತದೆ.

ಶಾಖಾಧ್ಯಕ್ಷರು

ಈ ರೀತಿಯಲ್ಲಿ ವೈಸ್‌ರಾಯಿಯಾದಾತನು ಕಾರ್ಯದರ್ಶಿಯ ಆಜ್ಞಾಧಾರಕನಾಗಿ ನಿಯೋಗಿ ಮಾತ್ರನಂತೆ ಕಂಡು ಬಂದಾಗ್ಯೂ ಆತನಿಗೆ ವಿಶೇಷವಾದ ಅಧಿಕಾರವೇ ಇರುವುದು. ಅನೇಕ ಮುಖ್ಯ ಉದ್ಯೋಗಸ್ಥರನ್ನು ಆತನೇ ನಿಯಾಮಕ ಮಾಡುತ್ತಾನೆ. ಆಯವ್ಯಯದ ನೀತಿಯಲ್ಲಿ ಆತನ ಅನುಮತಿಯಿಲ್ಲದೆ ನಡೆಯುವುದಿಲ್ಲ. ಕೆಲವು ಮಸೂದೆಗಳನ್ನು ಶಾಸಕ ಸಭೆಯವರ ಒಪ್ಪಿಗೆಯಿಲ್ಲದಿದ್ದಾಗ್ಯೂ ತಾನೇ ತನ್ನ ಸ್ವಂತ ಅಧಿಕಾರ ಬಲದಿಂದ ಅವುಗಳು ಅವಶ್ಯವೆಂದು ನಿರ್ಧರಿಸಿ ಅವುಗಳನ್ನು ನಿಬಂಧನೆಗಳನ್ನಾಗಿ ಆಚರಣೆಯಲ್ಲಿ ತರಬಹುದು. ಮಸೂದೆಗಳನ್ನು ನಿಷೇಧಿಸುವ ಅಧಿಕಾರವೂ ಆತನಿಗುಂಟು. ಇಷ್ಟು ಅಲ್ಲದೆ ತಾನಾಗಿಯೇ ಆರ್ಡಿನೆನ್ಸ್

ವಿಸ್ತಾರ ಅಧಿಕಾರ

ಎಂಬ ಹೆಸರುಳ್ಳ ನಿಬಂಧನೆಗಳನ್ನು ರಚಿಸಿ ಜಾರಿಮಾಡಿಸಬಹುದು; ಅಂತಹ ಆರ್ಡಿನೆನ್ಸ್‌ಗಳಿಗೆ ಆರುತಿಂಗಳು ಕಾಲ ಜಾರಿಯಲ್ಲಿರುವ ಚೈತನ್ಯ ವುಂಟು. ಈ ರೀತಿಯಲ್ಲಿ ವೈಸ್‌ರಾಯಿಗೆ ಶಾಸಕ ಕ್ಷೇತ್ರದಲ್ಲಿಯೂ ಕಾರ್ಯ ಕ್ಷೇತ್ರದಲ್ಲಿಯೂ ಯಥೇಷ್ಟವಾದ ಅಧಿಕಾರ ಬಲವೇ ಇರುವುದು.

ವೈಸ್‌ರಾಯಿ ಮತ್ತು ಶಾಖಾಧ್ಯಕ್ಷರ ತರುವಾಯ ಅಧಿಕಾರಿವರ್ಗ ದವರಲ್ಲಿ ಮುಖ್ಯರಾದವರ ಗುಂಪಿಗೆ **ಇಂಡಿಯನ್ ಸಿವಿಲ್ ಸರ್ವಿಸ್** ಎಂಬ ಹೆಸರುಂಟು. ಮಿಲಿಟರಿ ಅಥವಾ ಯುದ್ಧ ಸಂಬಂಧವಾದವುಗಳಲ್ಲದ ಕರ್ತವ್ಯಗಳನ್ನು ನಿರ್ವಾಹಮಾಡುವ ಅಧಿಕಾರಿಗಳನ್ನು ಸಿವಿಲ್ ಅಧಿಕಾರಿ ಗಳೆನ್ನುವುದು ವಾಡಿಕೆ. ಬ್ರಿಟಿಷರು ದೇಶದ ಆಡಳಿತವನ್ನು ಕೈಕೊಂಡ ಕಾಲದಲ್ಲಿ ಮೊದಲು ರೆವಿನ್ಯೂ ಮತ್ತು ದಂಡಾಧಿಕಾರಗಳಿಗೂ, ತರುವಾಯ ಯಂತ್ರಯೋಜನೆ, ಬೊಕ್ಕಸದ ಲೆಕ್ಕ, ಚಿಕಿತ್ಸಾ ಮುಂತಾದ ಅಧಿಕಾರ ಗಳಿಗೂ ಬ್ರಿಟಿಷ್ ತರುಣರನ್ನೇ ಗೊತ್ತುಮಾಡುತ್ತಿದ್ದರು. ಇತ್ತೀಚೆಗೆ ಈ ಅಧಿಕಾರಿಗಳ ಗುಂಪಿನಲ್ಲಿ ದೇಶೀಯರಿಗೂ ಹಲಕೆಲವು ಸ್ಥಾನಗಳನ್ನು ಕೊಡತಕ್ಕ ನ್ಯಾಯವನ್ನು ಅವಲಂಬಿಸಿದ್ದಾರೆ. ಆ ಉದ್ಯೋಗಗಳನ್ನು ನಿರ್ವಹಿಸಲು ಹೆಚ್ಚಿನ ದಕ್ಷತೆಯು ಅವಶ್ಯಕ; ಆದುದರಿಂದ ಉಮೇದುವಾರ ರಾದವರನ್ನು ಪರೀಕ್ಷೆಮಾಡಿಸಿ, ಉತ್ತಮ ಸ್ಥಾನಗಳನ್ನು ಸಾಧಿಸಿದವರನ್ನು ಮಾತ್ರವೇ ಉದ್ಯೋಗಸ್ಥರನ್ನಾಗಿ ನಿಯಮಿಸುತ್ತಾರೆ. ಬಹುಕಾಲದ ವರೆಗೂ ಆ ಪರೀಕ್ಷೆಯು ಇಂಗ್ಲಂಡಿನಲ್ಲಿಯೇ ನಡೆಯುತ್ತಿದ್ದಿತಾದುದರಿಂದ ಭಾರತೀಯರಿಗೆ ಅವಕಾಶವಿಲ್ಲದೆಯೇ ಇತ್ತು. ಈಚೆಗೆ ಆ ಪರೀಕ್ಷೆಯು ಇಂಗ್ಲಂಡಿನಲ್ಲಿಯೂ ಈ ದೇಶದಲ್ಲಿಯೂ ಏಕಕಾಲದಲ್ಲಿ ನಡೆಯುವುದು. 'ಇಂಡಿಯನ್ ಸಿವಿಲ್ ಸರ್ವಿಸ್' ಎಂಬ ಈ ವರ್ಗದಲ್ಲಿ ಅನೇಕ ಭೇದಗಳುಂಟು; ಅವುಗಳಲ್ಲಿ ಅಖಿಲ ಭಾರತೀಯ ಮತ್ತು ಪ್ರಾದೇಶಿಕ ಎಂಬುದನ್ನು ನೆನಪಿ ನಲ್ಲಿಡಬೇಕು. ಬೇರೆ ಬೇರೆ ಶಾಖೆಯಲ್ಲಿ ವಿಶೇಷವಾದ ಶಿಕ್ಷಣವು ಅವಶ್ಯ ವಾದುದರಿಂದ ಶಾಖೆ ಶಾಖೆಗೂ ಪ್ರತ್ಯೇಕ ವರ್ಗವುಂಟು.

1924ರಲ್ಲಿ ಲೀ ಸಮಿತಿ (Lee Commission) ಎಂಬ ಒಂದು ವಿಚಾರಣೆಯ ಸಮಿತಿಯವರು ಉದ್ಯೋಗಸ್ಥರ ಸಂಬಳಸಾರಿಗೆಗಳನ್ನೂ, ಒಟ್ಟು ಸಮೂಹದಲ್ಲಿ ಭಾರತೀಯರು ಎಷ್ಟು ಪಾಲಿನವರಾಗಿರಬೇಕೆಂಬು

ದನ್ನೂ ಸೂಚಿಸಿದರು. ಭಾರತೀಯರಾದವರು ಎಷ್ಟು ಹುದ್ದೆಗಳನ್ನು ಪಡೆಯತಕ್ಕದ್ದೆಂಬ ವಿಚಾರದಲ್ಲಿ ಆ ಸಮಿತಿಯವರು ಈ ರೀತಿ ನಿಷ್ಕರ್ಷೆ ಮಾಡಿದರು :—

| | | | |
|---|---|---|---|
| ಸಿವಿಲ್ ಸರ್ವಿಸ್ | ಸೇಕಡ 40 | ಭಾಗ | ಭಾರತೀಯರು. |
| | ,, 40 | ,, | ಹೊಸದಾಗಿ ನಿಯುಕ್ತರಾಗತಕ್ಕ ಐರೋಪ್ಯರು. |
| | ,, 20 | ,, | ಪ್ರಾದೇಶಿಕ ವರ್ಗದಿಂದ ಏರತಕ್ಕವರು. |
| ಪೋಲೀಸ್ ಸರ್ವಿಸ್ | ,, 50 | ,, | ಐರೋಪ್ಯರು. |
| | ,, 50 | ,, | ಭಾರತೀಯರು. |
| ನೀರಾವರಿ ಯಂತ್ರ ಯೋಜಕರು | ,, 40 | ,, | ಐರೋಪ್ಯರು. |
| | ,, 60 | ,, | ಭಾರತೀಯರು. |

ಪೊಲಿಟಿಕಲ್ ಅಥವಾ ರಾಜಕೀಯ ಅಧಿಕಾರ, ಸುಂಕದ ಅಧಿಕಾರ, ತಂತಿ ಮತ್ತು ವೈರ್ಲೆಸ್ ಅಧಿಕಾರ ಮುಂತಾದವುಗಳಲ್ಲಿ ಸೇಕಡ 25 ಪಾಲು ಭಾರತೀಯರಿಗೆ ಆಗತಕ್ಕದ್ದು.

ಈ ರೀತಿಯಲ್ಲಿ ಭಾರತೀಯರಿಗೆ ನಿರ್ದಿಷ್ಟವಾದ ಪಾಲು ಈಗಲೇ ಪ್ರಾಪ್ತವಾಗಿಲ್ಲ; ಉತ್ತರೋತ್ತರ ಪ್ರಾಪ್ತವಾಗತಕ್ಕದ್ದು.

ಭಾರತೀಯ ಸರ್ಕಾರದ ಹುದ್ದೆದಾರರು ಅಥವಾ ಕಾರ್ಯಾಂಗದ ಅಧಿಕಾರಿಗಳು ಎಂದರೆ ಈ ಅಧಿಕಾರ ಸಮೂಹವೇ. ಸಾಮಾನ್ಯವಾಗಿ ಆ ಅಧಿಕಾರ ವರ್ಗವನ್ನು ಆಡಳಿತದ ಬೆನ್ನುಮೂಳೆಯೆಂದು ಕರೆಯುವುದುಂಟು. ಆಡಳಿತವನ್ನು ಅವರೇ ನಡೆಸತಕ್ಕವರಾದುದರಿಂದ ಆಡಳಿತವು ನೌಕರ್ ಷಾಹಿಯೆಂತಲೂ ಹೆಸರಾಗಿದೆ.

## ಅಖಿಲ ಭಾರತ ಶಾಸಕಾಂಗ

ಸೆಂಟ್ರಲ್ ಅಥವಾ ಅಖಿಲ ಭಾರತ ಶಾಸಕಾಂಗವು **ಕೌನ್ಸಿಲ್ ಅಫ್ ಸ್ಟೇಟ್** ಮತ್ತು **ಲೆಜಿಸ್ಲೆಟಿವ್ ಅಸೆಂಬ್ಲಿ**ಯೆಂಬ ಎರಡು ಸಭೆಗಳ

ನ್ನುಳ್ಳದು. 1919ಕ್ಕೆ ಪೂರ್ವದಲ್ಲಿ ಒಂದೇ ಸಭೆಯಿದ್ದಿತು. ಆ ವರ್ಷದಲ್ಲಿ ನಡೆದ ಭಾರತೀಯ ರಾಷ್ಟ್ರವಿಧಿಗೆ (Govt. of India Act) ಅನುಸಾರವಾಗಿ ಈ ಎರಡು ಸಭೆಗಳೂ ರೂಪಗೊಂಡವು.

ಪರಸ್ಪರ ಭೇದ

ದ್ವಿತೀಯ ಸಭೆಯೆನಿಸಿದ ಕೌನ್ಸಿಲ್ ಆಫ್ ಸ್ಟೇಟ್ ಎಂಬ ಸಭೆಯಲ್ಲಿ ಒಟ್ಟು 60 ಸದಸ್ಯರಿರುತ್ತಾರೆ. ಅವರಲ್ಲಿ 34 ಸದಸ್ಯರು ಬೇರೆ ಬೇರೆ ವಿಭಾಗಗಳಲ್ಲಿ ವರಣಪಡೆದು ಪ್ರತಿನಿಧಿಗಳಾಗಿರತಕ್ಕವರು; ಉಳಿದ 26 ಸದಸ್ಯರೂ ಸರ್ಕಾರದವರಿಂದ ನಿಯಮಿತರಾದವರು, ಅವರಲ್ಲಿ 20 ಸದಸ್ಯರು ಅಧಿಕಾರಸ್ಥರೇ. ಈ ಸಭೆಗೆ ಸಭಾಪತಿ (President) ಅಥವಾ ಅಧ್ಯಕ್ಷನಾದಾತನು ವೈಸ್‌ರಾಯಿಯಿಂದ ನಿಯಮಿತನು; ವರಣಸಿದ್ಧನಲ್ಲ. ಈ ಸಭೆಯು ಒಂದು ಸಲ ರಚಿತವಾದ ತರುವಾಯ 5 ವರ್ಷ ಕಾಲ ನಡೆಯಬಲ್ಲದು; ಅಸೆಂಬ್ಲಿಯಾದರೆ 3 ವರ್ಷ ಕಾಲ ಮಾತ್ರವೇ. ಈ ಸಭೆಯ ಸಭಿಕರು ತಮ್ಮ ಹೆಸರುಗಳಿಗೆ ಹಿಂದೆ ಆನರಬಲ್ (Hon'ble) ಎಂಬುದನ್ನು ಹಚ್ಚಿಕೊಳ್ಳಬಹುದು.

ಲೆಜಿಸ್ಲೆಟಿವ್ ಅಸೆಂಬ್ಲಿಯ ಸದಸ್ಯರು ಎಂ.ಎಲ್.ಎ. (M. L. A.) ಎಂಬ ಅಕ್ಷರಗಳನ್ನು ತಮ್ಮ ಹೆಸರುಗಳ ಕೊನೆಯಲ್ಲಿ ಇಟ್ಟುಕೊಳ್ಳಬಹುದು. ಅಸೆಂಬ್ಲಿಯಲ್ಲಿ 144 ಸದಸ್ಯರಿರುತ್ತಾರೆ. ಅವರಲ್ಲಿ 104 ಸದಸ್ಯರು ವರಣಸಿದ್ಧರಾಗಿ ಪ್ರತಿನಿಧಿಗಳೆನಿಸಿದವರು; ಉಳಿದ 40 ಸದಸ್ಯರೂ ವೈಸ್‌ರಾಯಿಂದ ನಿಯಮಿತರಾದವರು; ಅವರಲ್ಲಿ 26 ಅಧಿಕಾರಸ್ಥರೂ, 14 ಖಾಸಗಿ ಪೌರರೂ ಇರುತ್ತಾರೆ. ಅಸೆಂಬ್ಲಿಯ ಸಭಾಪತಿಯನ್ನು ಸದಸ್ಯರೇ ತಮ್ಮಲ್ಲಿ ವರಿಸಿಕೊಳ್ಳುವರು; ವರಣವನ್ನು ವೈಸ್‌ರಾಯಿಯು ಅನುಮೋದಿಸಿದೊಡನೆಯೇ ವೃತನಾದ ಸಭಾಪತಿಯು ತನ್ನ ಕೆಲಸಕ್ಕೆ ತೊಡಗುತ್ತಾನೆ.

ದಿಲ್ಲಿಯಲ್ಲಿಯೇ ಈ ಶಾಸಕ ಸಭೆಗಳು ಸೇರಿಯುವುವು. ವೈಸ್ರಾಯಿಯು ಯಾವ ಸಭೆಯಲ್ಲಿಯೂ ಸದಸ್ಯನಾಗಿರುವುದಿಲ್ಲ; ಅಧ್ಯಕ್ಷತೆಯನ್ನೂ ವಹಿಸುವುದಿಲ್ಲ. ಸಭೆಗಳನ್ನು ಕರೆಸುವುದೂ ನಿಲ್ಲಿಸುವುದೂ ಆತನಿಗೇ ಸೇರಿದ್ದು; ಯಾವ ಸಭೆಗಾದರೂ ಕೂಡಲು ಅಥವಾ ಎರಡು ಸಭೆಗಳನ್ನೂ ಒಟ್ಟಾಗಿ

ನೆರೆಯಿಸಿ ಸೂಕ್ತತೋರಿದಂತೆ ಭಾಷಣಮಾಡಿ, ಅವರ ಮುಂದಿನ ಕರ್ತವ್ಯವನ್ನು ಆಗಾಗ್ಗೆ ಆತನು ತೋರಿಕೊಡುತ್ತಾನೆ. ಸಭೆಯ ಜೀವಿತವನ್ನು ಹೆಚ್ಚಿಸುವ ಅಧಿಕಾರವೂ ಆತನಿಗುಂಟು; ಅಧಿವೇಶನಗಳನ್ನು ನಿಲ್ಲಿಸುವುದಲ್ಲದೆ ಸಭೆಯನ್ನು ಮುಕ್ತಾಯಪಡಿಸುವ ಅಧಿಕಾರವೂ ಆತನಲ್ಲಿಯೇ ಇರುತ್ತದೆ.

ವರಣ

ಎರಡು ಸಭೆಗಳಲ್ಲಿಯೂ ಬಹುಭಾಗದವರು ವರಣಸಿದ್ಧರಾಗಿಯೇ ಇರುವರು. ಅಖಿಲ ಭಾರತದ ರಾಷ್ಟ್ರಭಾರದ ಶಾಸನ ರಚನೆಯಲ್ಲಿ ವಿಶಾಲವಾದ ದೃಷ್ಟಿಯೂ ಹೆಚ್ಚಿನ ಯೋಗ್ಯತೆಯೂ ಬೇಕು; ಆದುದರಿಂದ ವರಣಾರ್ಥಿಗಳಿಗೂ ವರಣದಾತರಿಗೂ ಲಕ್ಷಣಗಳು ವಿಶಿಷ್ಟವಾಗಿಯೇ ಇರತಕ್ಕದ್ದು ಅವಶ್ಯ. ವರಣಕಾರ್ಯದಲ್ಲಿ ಅನೇಕ ಪ್ರದೇಶಗಳನ್ನೊಳಗೊಂಡ ಬ್ರಿಟಿಷ್ ವಿಭಾಗವೆಲ್ಲವೂ ವರಣಕ್ಷೇತ್ರ; ಆ ಕ್ಷೇತ್ರವು ವರಣ ವಿಭಜನೆಗೆ ಗುರಿಯಾಗಿ ಸಾಮಾನ್ಯ ಕ್ಷೇತ್ರಗಳೆಂಬುವು ಏರ್ಪಟ್ಟಿವೆ. **ಸಾಮಾನ್ಯ ಕ್ಷೇತ್ರಗಳಲ್ಲದೆ ವಿಶಿಷ್ಟ ಕ್ಷೇತ್ರಗಳೆಂಬವೂ** ಉಂಟು. ಜಮೀನ್ದಾರರು, ಯುರೋಪ್ಯರು, ಮತ್ತು ವ್ಯಾಪಾರ ಸಂಘಗಳು ವಿಶಿಷ್ಟ ಕ್ಷೇತ್ರಗಳು; ಆ ಕ್ಷೇತ್ರಗಳಲ್ಲಿ ಅಥವಾ ಸಂಘಗಳಲ್ಲಿ ಸದಸ್ಯರಾಗಿರತಕ್ಕವರು ಮಾತ್ರವೇ ವರಣದಲ್ಲಿ ಛಂದಾಧಿಕಾರವುಳ್ಳವರು. ಆ ವಿಶಿಷ್ಟ ಕ್ಷೇತ್ರಗಳಲ್ಲಿ ವರಣ ಹೊಂದಿ ಸದಸ್ಯರಾಗತಕ್ಕವರು ವಿಶಿಷ್ಟಕ್ಷೇತ್ರ ಪ್ರತಿನಿಧಿಗಳು. ಇವರನ್ನು ಬಿಟ್ಟು ಉಳಿದ ವರಣಸಿದ್ಧ ಸದಸ್ಯರೆಲ್ಲರೂ ಸಾಮಾನ್ಯಜನರ ಕ್ಷೇತ್ರಗಳಿಂದಲೇ ವರಣವನ್ನು ಪಡೆಯಬೇಕು. ಆ ಸಾಮಾನ್ಯ ಕ್ಷೇತ್ರಗಳಲ್ಲಿ ನೆಲೆಸಿರುವ ಪೌರರೆಲ್ಲರಿಗೂ ವರಣಾಧಿಕಾರ ಅಥವಾ ಛಂದಾಧಿಕಾರವಿಲ್ಲ. ವಯಸ್ಕರಲ್ಲದವರು, ಮತಿವಿಕಲರು, ಅಪರಾಧದ ಶಿಕ್ಷೆಗೊಳಗಾದವರು ಅಲ್ಲದೆ ಗೊತ್ತಾದ ಆಸ್ತಿಯಿಲ್ಲದವರೂ ಆ ಅಧಿಕಾರಕ್ಕೆ ಅನರ್ಹರೆನಿಸಿದ್ದಾರೆ. ಸಾಮಾನ್ಯ ಕ್ಷೇತ್ರಗಳೆಂಬುವೂ ಕೂಡ ಕೋಮುಗಳಿಗನುಸಾರವಾಗಿ ಪುನಃ ವಿಭಜನೆಯಾಗಿರುತ್ತದೆ. ಕೋಮುವಾರು ವಿಭಜನೆಯ ತತ್ವಕ್ಕೆ ಬಲವಾದ ಆಕ್ಷೇಪವುಂಟು. ವರಣಕ್ಷೇತ್ರ ವಿಭಾಗವನ್ನು ಈ ರೀತಿಯಲ್ಲಿ ಕಾಣಬಹುದು :—




ಈ ವಿಭಜನೆಯ ನಿಯಮವು ಸರ್ವಸಮರ್ಪಕವಾಗಿದೆಯೆಂದು ಹೇಳಲಾಗುವುದಿಲ್ಲ. ಆಸ್ತಿಯಿರತಕ್ಕದ್ದು ಅವಶ್ಯವೆನಿಸಿರುವುದರಿಂದ ಅನೇಕರಿಗೆ ಛಂದಾಧಿಕಾರವೆಂಬುದಿರುವುದಿಲ್ಲ; ವರಣಕಾರ್ಯದಲ್ಲಿ ಅವರಿಗೆ ಸಂಬಂಧವೇ ಇಲ್ಲ. ಮುಸಲ್ಮಾನರನ್ನೂ ಇತರರನ್ನೂ ಪ್ರತ್ಯೇಕ ಮಾಡಿರುವುದನ್ನೇ ಕೋಮುವಾರು ವಿಭಾಗವೆಂದು ಹೇಳತಕ್ಕುದು. ರಾಷ್ಟ್ರಕಾರ್ಯದಲ್ಲಿ ಮುಸಲ್ಮಾನರ ಹಿತವು ಬೇರೆ, ಅನ್ಯರ ಹಿತವು ಬೇರೆಯೆಂಬ ದೃಷ್ಟಿಭೇದವು ಈ ವಿಭಜನೆಯಿಂದ ದೃಢಪಡುವುದಲ್ಲದೆ ವರಣ ಕೋಲಾಹಲಗಳಲ್ಲಿ ಕೋಮುಗಳು ಪ್ರತ್ಯೇಕವಾಗಿಯೇ ವರ್ತಿಸಬೇಕಾಗಿರುತ್ತದೆ.

**ಪ್ರದೇಶಗಳ ಪ್ರಾತಿನಿಧ್ಯ**

ಇನ್ನು ಪ್ರಾದೇಶಿಕ ವಿಭಜನೆಯನ್ನು ಕಾಣಬಹುದು. ಬ್ರಿಟಿಷ್ ಇಂಡಿಯ ಎಂಬ ವಿಭಾಗದಲ್ಲಿ 15 ಪ್ರದೇಶಗಳುಂಟು. ಅವುಗಳಲ್ಲಿ ಒಂಬತ್ತು ಪ್ರದೇಶಗಳೇ ಪ್ರಬಲ ಸ್ಥಾನವನ್ನು ಪಡೆದವುಗಳು. ಅವುಗಳ ಪ್ರಾಬಲ್ಯವನ್ನನುಸರಿಸಿ ಸದಸ್ಯರ ಸಂಖ್ಯಾನಿರ್ದೇಶವು ಈ ರೀತಿಯಲ್ಲಿ ಗೊತ್ತಾಗಿದೆ:—

| ಪ್ರದೇಶ | ಅಸೆಂಬ್ಲಿಗೆ | ಕೌನ್ಸಿಲ್ ಆಫ್ ಸ್ಟೇಟಿಗೆ |
|---|---|---|
| ಮದರಾಸು .. .. | 16 | 5 |
| ಬೊಂಬಾಯಿ .. .. | 16 | 6 |
| ಬಂಗಾಳ .. .. | 17 | 6 |
| ಸಂಯುಕ್ತಪ್ರಾಂತ (ಆಗ್ರಾ, ಅಯೋಧ್ಯಾ) | 16 | 5 |
| ಪಂಜಾಬ್ .. .. | 12 | 4 |
| ಬಿಹಾರ್ ಮತ್ತು ಒರಿಸ್ಸ .. | 12 | 3 |
| ಮಧ್ಯಪ್ರಾಂತ .. .. | 6 | 2 |
| ಅಸ್ಸಾಂ .. .. | 4 | 1 |
| ಬರ್ಮಾ .. .. | 4 | 2 |
| ದಿಲ್ಲಿ .. .. | 1 | .. |
| | 104 | 34 |

**ಯೋಗ್ಯತೆ**

ದಿಲ್ಲಿಯೆಂಬುದು ಪ್ರದೇಶಗಳಲ್ಲಿ ಗಣ್ಯವಲ್ಲವಾದರೂ ವಿಶಿಷ್ಟ ವೆನಿಸಿದ ಕ್ಷೇತ್ರ. ದಿಲ್ಲಿಯನ್ನು ಬಿಟ್ಟು ಉಳಿದ ಪ್ರದೇಶಗಳಲ್ಲಿ ಪ್ರಾದೇಶಿಕ ಶಾಸಕ ಸಭೆಗಳು ಅಥವಾ ಲೆಜಿಸ್ಲೆಟಿವ್ ಕೌನ್ಸಿಲ್ಲುಗಳೆಂಬುವುಂಟು. ಆದ್ದರಿಂದ ಪ್ರತಿ ಪ್ರದೇಶದಲ್ಲಿಯೂ ಅಲ್ಲಿಯ ಶಾಸಕ ಸಭೆಗೂ, ದಿಲ್ಲಿಯಲ್ಲಿ ನಡೆಯುವ ಎರಡು ಸಭೆಗಳಿಗೂ ವರಣಗಳು ನಡೆಯತಕ್ಕದ್ದು. ಪ್ರಾದೇಶಿಕ ಸಭೆಯನ್ನಾಗಲಿ ದಿಲ್ಲಿಯ ಅಸೆಂಬ್ಲಿಯನ್ನಾಗಲಿ ಸದಸ್ಯನಾಗಿ ಪ್ರವೇಶಿಸಲು ಆಸೆಪಡುವ ವರಣಾರ್ಥಿಯ ಯೋಗ್ಯತೆಯು ಒಂದೇ ಅಂತಸ್ತಿನದು. ಕೌನ್ಸಿಲ್ ಆಫ್ ಸ್ಟೇಟಿಗೆ ಮಾತ್ರ ಹೆಚ್ಚಿನ ಆಸ್ತಿಪಾಸ್ತಿಗಳನ್ನು ಪಡೆದಾತನೇ ಸದಸ್ಯನಾಗಲು ಯೋಗ್ಯನು; ಆಸ್ತಿಪಾಸ್ತಿಗಳಿಲ್ಲದಿದ್ದರೆ ರಾಷ್ಟ್ರಸೇವಾ ಕಾರ್ಯದಲ್ಲಿ ಯಶಸ್ವಿಯಾಗಿಯಾದರೂ ಇರಬೇಕು.

ಅಖಿಲ ಭಾರತ ಶಾಸಕ ಸಭೆಗಳ ಕಾರ್ಯಕಲಾಪಗಳು ಪ್ರಾದೇಶಿಕ ಶಾಸಕ ಸಭೆಗಳ ಕಾರ್ಯಕಲಾಪಗಳಂತೆಯೇ ಪ್ರಶ್ನೋತ್ತರ ಭಾಗ, ಶಾಸನ

ರಚನಾ ಭಾಗ, ಆಯವ್ಯಯ ಭಾಗ ಮತ್ತು ಮಂತ್ರಾಲೋಚಕ ಭಾಗಗಳನ್ನು ಉಳ್ಳುವಾಗಿರುತ್ತವೆ. ಮಂತ್ರಾಲೋಚನೆಯಲ್ಲಿಯೂ ಶಾಸನ ರಚನೆಯಲ್ಲಿಯೂ ಕೆಲವೇಳೆ ಕಾಲವಿಳಂಬವಾಗಬಾರದೆಂದು ತೋರುವುದು; ಅಂತಹ ಸಂದರ್ಭಗಳಲ್ಲಿ ವಿಚಾರ ನಡೆಸಲು ಅರ್ಹರೆಂದು ತೋರಿದವರನ್ನು ಎರಡು ಸಭೆಗಳಲ್ಲಿಯೂ ಆರಿಸಿ ಜಾಯಿಂಟ್ ಕಮಿಟಿಯೆಂಬುದನ್ನು ರಚಿಸಿ ಕರ್ತವ್ಯವನ್ನು ಕ್ಷಿಪ್ರತೆಯಿಂದ ನಡೆಸುವರು.

**ಕರ್ತವ್ಯ ಭಾಗ**

**ನಿಷಿದ್ಧ ಭಾಗ**

ಈ ಶಾಸಕ ಸಭೆಗಳ ಅಧಿಕಾರಕ್ಕೆ ಪ್ರಬಲವಾದ ಮಿತಿಗಳೇ ವಿಧಿತವಾಗಿವೆ. (1) ರಾಷ್ಟ್ರ ಋಣಕ್ಕೋ ರಾಷ್ಟ್ರೋತ್ಪತ್ತಿಗೋ ಸಂಬಂಧಿಸಿದವುಗಳಾಗಿಯೂ, (2) ಬ್ರಿಟಿಷ್ ಪ್ರಜಾಸಮೂಹದ ಯಾವ ಕೋಮಿನ ಮತಾಚಾರ ಸಂಪ್ರದಾಯಗಳಿಗಾಗಲಿ ಸಂಬಂಧಿಸಿದವುಗಳಾಗಿಯೂ, (3) ಸೈನ್ಯ ಬಲಗಳ ಸ್ಥಿತಿಗತಿಗಳಿಗೆ ಸಂಬಂಧಿಸಿದವುಗಳಾಗಿಯೂ, (4) ಅನ್ಯರಾಷ್ಟ್ರಗಳೊಡನೆಯೂ ದೇಶೀಯ ಸಂಸ್ಥಾನಗಳೊಡನೆಯೂ ವೈಸ್‌ರಾಯಿಯು ನಡೆಸುವ ಸಂಬಂಧ ವ್ಯವಹಾರಗಳಿಗೆ ಸಂಬಂಧಿಸಿದವುಗಳಾಗಿಯೂ, (5) ಪ್ರದೇಶಗಳಿಗೆ ಸೇರತಕ್ಕವೆಂದು ಗೊತ್ತಾದ ವಿಷಯಗಳಿಗೆ ಸಂಬಂಧಿಸಿದವುಗಳಾಗಿಯೂ, (6) ಪ್ರದೇಶಗಳ ಶಾಸಕ ಸಭೆಗಳು ಮಾಡಿದ ನಿರ್ಣಯ ಅಥವಾ ನಿಬಂಧನೆಗಳಿಗೆ ಸಂಬಂಧಿಸಿದವುಗಳಾಗಿಯೂ, (7) ವೈಸ್‌ರಾಯಿಯು ತನ್ನ ಸ್ವಂತ ಅಧಿಕಾರಬಲದಿಂದ ರಚಿಸಿದ ಆರ್ಡಿನೆನ್ಸ್ ಅಥವಾ ನಿಯಮನಿಬಂಧನೆಗಳಿಗೆ ಸಂಬಂಧಿಸಿದವುಗಳಾಗಿಯೂ ಇರತಕ್ಕ ವಿಚಾರಗಳನ್ನೆತ್ತಬೇಕಾದರೆ ಮುಂಚಿತವಾಗಿ ವೈಸ್‌ರಾಯಿಯ ಅನುಮತಿಯನ್ನು ಪಡೆದೇತೀರಬೇಕೆಂದು ವಿಧಿಯಿದೆ.

**ಆಯವ್ಯಯ**

ಸೆಂಟ್ರಲ್ ಬಡ್ಜೆಟ್ ಎಂಬುದನ್ನು ಅಥವಾ ಅಖಿಲ ಭಾರತದ ಆಯವ್ಯಯಗಳ ಅಂದಾಜನ್ನು ಅಸೆಂಬ್ಲಿಯಲ್ಲಿ ಫೈನಾನ್ಸ್ ಮೆಂಬರ್, ಅಥವಾ ವೈಸ್ರಾಯಿ ಸಭೆಯಲ್ಲಿ ಆಯವ್ಯಯಕ್ಕಾಗಿಯೇ ನಿಯಮಿತನಾದ ಸದಸ್ಯನು, ತಿಳಿಯಪಡಿಸಿ ಚರ್ಚೆಗಿಡುತ್ತಾನೆ. ಕೌನ್ಸಿಲ್ ಆಫ್ ಸ್ಟೇಟಿನಲ್ಲಿ ಫೈನಾನ್ಸ್

ಯಲ್ ಸೆಕ್ರೆಟರಿ ಎಂಬ ಆಯವ್ಯಯ ಶಾಖೆಯ ಮುಖ್ಯಾಧಿಕಾರಿಯು ಆ ಕೆಲಸವನ್ನು ಮಾಡುತ್ತಾನೆ. ಎರಡು ದಿನಗಳು ಸಾಮಾನ್ಯವಾದ ಅಥವಾ ಸ್ಥೂಲವಾದ ವಿಚಾರಗಳ ಚರ್ಚೆಯಲ್ಲಿಯೇ ಕಳೆಯುತ್ತವೆ. ಒಂದು ವಾರವು ಕಳೆದ ತರುವಾಯ ಆಡಳಿತದ ಪರವಾಗಿ ಫೈನಾನ್ಸ್ ಬಿಲ್ ಎಂಬ ಮುಂದಿನ ವರ್ಷದ ಆಯವ್ಯಯ ವಿಧಾನಗಳನ್ನು ವಿವರಿಸುವ ಮುಸೂದೆಯನ್ನು ಆ ಇಬ್ಬರು ಅಧಿಕಾರಸ್ಥರೇ ಮೊದಲಿಡುವರು. ಈ ಮುಸೂದೆಯಲ್ಲಿಯೇ ಹೊಸ ತೆರಿಗೆಗಳನ್ನೆತ್ತುವ ಅಥವಾ ಇರುವ ತೆರಿಗೆಯನ್ನು ಹೆಚ್ಚಿಸುವ ಅಥವಾ ವರ್ಜಿಸುವ ಸೂಚನೆಗಳಿರುತ್ತವೆ. ಈ ಮುಸೂದೆಯನ್ನು ಸಭಿಕರು ಚರ್ಚಿಸುವ ಕರ್ತವ್ಯದಲ್ಲಿಯೂ ಪ್ರಬಲವಾದ ಮೇರೆಗಳು ವಿಧಾಯಕ ವಾಗಿವೆ. ಈ ಕೆಳಗೆ ಕಾಣುವ ವೆಚ್ಚದ ಅಂಶಗಳಲ್ಲಿ ಬೇಕು ಬೇಡವೆಂದು ಅಧಿಕಾರಯುಕ್ತವಾಗಿ ನಿಷ್ಕರ್ಷೆಮಾಡುವುದು ಸಭಿಕರಿಗೆ ಸಾಧ್ಯವಿಲ್ಲ. ವಿಧಿಯಲ್ಲಿ ಈ ಅಂಶಗಳ ವಿಚಾರದಲ್ಲಿ ಸಭಿಕರಿಗೆ ಛಂದಾಧಿಕಾರವಿರತಕ್ಕ ದ್ದಲ್ಲವೆಂದು ನಿರ್ಣೀತವಾಗಿದೆ:.

(1) ಬಡ್ಡಿಯ ಹಣ, ಸಾಲದ ಸಂಬಂಧವಾಗಿ ನಡೆಸುವ ವೆಚ್ಚ.

(2) ವಿಧಿ ನಿಶ್ಚಿತವಾದ ವೆಚ್ಚ.

(3) ಭಾರತೀಯ ಕಾರ್ಯದರ್ಶಿಯಿಂದ ನಿಯಮಿತರಾದ ಅಧಿಕಾರ ವರ್ಗದವರ ಪ್ರವೃತ್ತಿ ನಿವೃತ್ತಿಕಾಲಗಳ ವೇತನಗಳು.

(4) ಚೀಫ್ ಕಮಿಷನರ್ ಮತ್ತು ಜುಡಿಷಿಯಲ್ ಕಮಿಷನರು ಗಳೆಂಬ ಅಧಿಕಾರಿಗಳ ಸಂಬಳ ಸಾರಿಗೆಗಳು.

(5) ಸಭಾಯುಕ್ತ ವೈಸ್‌ರಾಯಿಯಿಂದ ಚರ್ಚುಗಳ ಸಂಬಂಧ ವಾದುದೆಂದೋ, ರಾಜಕೀಯವೆಂದೋ, ರಕ್ಷಣೆಗೆ ಸಂಬಂಧಿಸಿದ್ದೆಂದೋ ನಿಶ್ಚಿತವಾದ ವೆಚ್ಚ.

ಈ ರೀತಿಯಲ್ಲಿ ಕೋಶಾಧಿಕಾರವು ಶಾಸಕ ಸಭೆಗಳಿಗೆ ಪೂರ್ತಿಯಾಗಿಲ್ಲ.

ನಿದರ್ಶನ

ಸೆಂಟ್ರಲ್ ಬಡ್ಜೆಟ್ ಎಂಬುದು ಬಹುಮುಖ್ಯವಾದುದು; ಅದರಿಂದಲೇ ಅಖಿಲ ಭಾರತದ ಆಯವ್ಯಯಗಳ ರೀತಿಯು ನಮಗೆ ತಿಳಿಯುವುದು. ಪ್ರಾದೇಶಿಕವಲ್ಲವೆಂದು ವಿಧಿ ನಿರ್ಣೀತವಾಗಿರುವ ತೆರಿಗೆ ಸುಂಕಗಳಿಂದಲೇ ಆಯವು ಹುಟ್ಟುವುದು. ಉದಾಹರಣೆಗಾಗಿ 1925–26ನೇ ವರ್ಷದ ಲೆಕ್ಕ

ಪತ್ರಗಳಿಂದ ಸಿದ್ಧಪಡಿಸಿದ ಈ ಪಟ್ಟಿಯನ್ನು ಕಂಡರೆ ಅಖಿಲ ಭಾರತ ಸರ್ಕಾರದ ಆಯವ್ಯಯದ ವಿವರವು ಸ್ಥೂಲವಾಗಿ ತಿಳಿಯುವುದು :—

| ಆದಾಯ | | | ವ್ಯಯ | | |
|---|---|---|---|---|---|
| ಸುಂಕ | .. | 41,34,65,000 | ಪ್ರತ್ಯಕ್ಷವಾದುದು | .. | 5,22,05,000 |
| ವರಮಾನದ ತೆರಿಗೆ | .. | 17,99,41,000 | ರೈಲ್ವಾರಿ | .. | 25,60,99,000 |
| ಉಪ್ಪಿನಿಂದ | .. | 6,82,40,000 | ನೀರಾವರಿ | .. | 13,75,000 |
| ಅಫೀಂ | .. | 3,78,92,000 | ತಂತಿ ಟಪಾಲು | .. | 76,99,000 |
| ಇತರ | .. | 2,34,00.000 | ಬಡ್ಡಿ | .. | 16,15,89,000 |
| ರೈಲ್ವಾರಿ | .. | 26,82,92,000 | ಸರ್ಕಾರದ ವೆಚ್ಚ | .. | 9,94,32,000 |
| ನೀರಾವರಿ | .. | 10,91,000 | ಟಂಕಸಾಲೆ | .. | 1,03,09,000 |
| ಟಪಾಲು ತಂತಿ | .. | 1,22,29,000 | ಸೈನ್ಯ ಶಾಖೆಗಳು | .. | 71,00,59,000 |
| ಬಡ್ಡಿ | .. | 1,15,70,000 | ಇತರ | .. | 5,20,56,000 |
| ನಾಣ್ಯ, ಟಂಕಸಾಲೆ | .. | 3,62,03,000 | ಸಿವಿಲ್ ನಿರ್ಮಾಣ | .. | 1,34,82,000 |
| ಸೈನ್ಯ ಶಾಖೆಗಳಲ್ಲಿ | .. | 5,73,79,000 | | | |
| ಪ್ರಾದೇಶಿಕ ಕಾಣಿಕೆ (ಇದು ಈಚೆಗೆ ಇಲ್ಲ) | .. | 9,22,94,000 | | | |
| ಇತರ ಅಂಶಗಳನ್ನು ಸೇರಿಸಿ | | | | | |
| | ಒಟ್ಟು | 1,36,43,05,000 | | ಒಟ್ಟು | 1,36,43,05,000 |

ಒಟ್ಟು ಅಖಿಲ ಭಾರತ ರಾಷ್ಟ್ರದ ಆಯವ್ಯಯವು 130 ಕೋಟಿ ರೂಪಾಯಿಗಳೆಂದು ಸಾಮಾನ್ಯವಾಗಿ ಭಾವಿಸಬಹುದು. ಭರತವರ್ಷದ ಒಟ್ಟು ಹುಟ್ಟುವಳಿಯನ್ನು ಕಾಣಬೇಕಾದರೆ ಇದಕ್ಕೆ ಪ್ರಾದೇಶಿಕ ಹುಟ್ಟುವಳಿಗಳನ್ನೂ ಸಂಸ್ಥಾನಗಳ ಹುಟ್ಟುವಳಿಗಳನ್ನೂ ಸೇರಿಸಬೇಕು.

ಆಕ್ಷೇಪ

ಕೇಂದ್ರ ಸರ್ಕಾರದ ವೆಚ್ಚದಲ್ಲಿ ಎರಡು ಅಂಶಗಳು ವಿಶೇಷಗಳೆನಿಸಿ ವಿಶೇಷವಾದ ಆಕ್ಷೇಪಣೆಗೇ ಪಾತ್ರವಾಗಿವೆ. ಇಂಗ್ಲೆಂಡಿನಲ್ಲಿ ನಡೆಯುವ ವೆಚ್ಚವೊಂದು (Home Charges) ಸರಿಸುಮಾರಾಗಿ 50 ಕೋಟಿ ರೂಪಾಯಿಗಳವರೆಗೂ ನಡೆಯುವ ಭಾಗವೂ, ಸೈನ್ಯ ಭಾಗಗಳ ಪೋಷಣೆಗಾಗಿ

ಸುಮಾರು 55 ಕೋಟಿ ರೂಪಾಯಿಗಳ ವೆಚ್ಚದ ಭಾಗವೂ ಆಕ್ಷೇಪ ಕ್ಕೊಳಗಾಗಿವೆ. ಈ ಭಾಗಗಳ ವಿವರದೊಂದಿಗೆ ಅಖಿಲ ಭಾರತ ರಾಷ್ಟ್ರದ ಋಣವೆಂಬುದರ ವಿವರವನ್ನೂ ಜೋಡಿಸುವಲ್ಲಿ ಪಡೆಯು ತಕ್ಕದ್ದು.

## ನರೇಂದ್ರ ಮಂಡಲಿ

ಮಾಂಟ್ಫರ್ಡ್ ಸುಧಾರಣೆಗಳು ತೋರಿಕೊಂಡ ಕಾಲದಲ್ಲಿಯೇ ನರೇಂದ್ರ ಮಂಡಲಿಯೆಂಬುದೂ ರೂಪಗೊಂಡಿತು. 1921ರಲ್ಲಿ ಆರಂಭವಾದ ಈ ಮಂಡಲಿಯಲ್ಲಿ ದೇಶೀಯ ಸಂಸ್ಥಾನಾಧಿಪತಿಗಳು ಸಭೆ ಸೇರಿ ತಮಗೆ ಸಾಮಾನ್ಯವಾದ ವಿಚಾರಗಳನ್ನು ಚರ್ಚೆಮಾಡುತ್ತಾರೆ. ದಿಲ್ಲಿಯಲ್ಲಿಯೇ ಈ ಸಭೆಯು ಸೇರುವುದು. ಇದರಲ್ಲಿ ಸೇರಿರುವ ಸಂಸ್ಥಾನಾಧಿಪತಿಗಳು ತಮ್ಮಲ್ಲಿಯೇ ಒಬ್ಬರನ್ನು ಸಭಾಪತಿಯನ್ನಾಗಿ ವರಿಸಿಕೊಳ್ಳುತ್ತಾರೆ. ಈ ಸಭೆಯು ಶಾಸಕಾಂಗಕ್ಕೆ ಸೇರಿದುದಲ್ಲ. ಸಂಸ್ಥಾನಾಧಿಪತಿಗಳ ಸಾಮಾನ್ಯ ಹಿತವನ್ನೂ ಇಷ್ಟವನ್ನೂ ತೋರ್ಪಡಿಸತಕ್ಕ ಸಂಸ್ಥೆ ಮಾತ್ರ. ಈ ಸಂಸ್ಥೆಯಲ್ಲಿ ಕೆಲವು ದೊಡ್ಡ ಸಂಸ್ಥಾನಗಳ ಅಧಿಪತಿಗಳು ಸೇರಿಯೇ ಇಲ್ಲ.

**ಪೊಲಿಟಿಕಲ್ ರಾಖೆ**

ಅಸೆಂಬ್ಲಿ, ಕೌನ್ಸಿಲ್ ಆಫ್ ಸ್ಟೇಟ್ ಎಂಬ ಶಾಸಕ ಸಭೆಗಳು ಬ್ರಿಟಿಷ್ ವಿಭಾಗಕ್ಕೆ ಸಂಬಂಧಪಟ್ಟವುಗಳೇ ವಿನಾ ದೇಶೀಯ ವಿಭಾಗಕ್ಕೆ ಸಂಬಂಧಪಟ್ಟವುಗಳಲ್ಲ. ದೇಶೀಯ ಸಂಸ್ಥಾನಗಳ ಮೇಲ್ವಿಚಾರಣೆಯು ವೈಸ್‌ರಾಯಿಗೆ ಸೇರಿದ್ದು. ಆ ವಿಷಯವನ್ನು ಆತನೇ ಸ್ವಂತವಾಗಿ ನೋಡುತ್ತಿರುತ್ತಾನೆ. ರಾಯಸ ಪರಿವಾರ (Secretariat)ದಲ್ಲಿ ರಾಜಕೀಯ (Political) ಎಂಬ ಶಾಖೆಯ ಮೂಲಕವೇ ಸಂಸ್ಥಾನಗಳೊಂದಿಗೆ ಸಂಬಂಧ ವ್ಯವಹಾರಗಳು ನಡೆಯುತ್ತವೆ. ಸಂಸ್ಥಾನಾಧಿಪತಿಗಳ ಪರಸ್ಪರ ಗೌರವ ನಿಷ್ಕರ್ಷೆಯನ್ನೂ, ಕರಾರು ಸನ್ನದುಗಳ ಬದಲಾವಣೆಗಳನ್ನೂ ವೈಸ್‌ರಾಯಿಯೇ ನಡೆಸು ತ್ತಾನೆ.

ಸಂಸ್ಥಾನಗಳ ಆಡಳಿತದ ವಿವರವನ್ನು ನಾವು ಕಾಣುವ ಮೊದಲು ಬ್ರಿಟಿಷ್ ವಿಭಾಗದಲ್ಲಿಯೇ ಇರುವ ಪ್ರದೇಶಗಳ ಆಡಳಿತ ಕ್ರಮವನ್ನು ಕಾಣಬೇಕು.

## ಪ್ರಾದೇಶಿಕ ಸರ್ಕಾರಗಳು

**ಪ್ರದೇಶ ವಿಭಾಗ**

ದೇಶದ ವಿಸ್ತೀರ್ಣದಲ್ಲಿ [illegible] ಪಾಲಾಗಿ ಜನಸಂಖ್ಯೆಯ [illegible] ಪಾಲನ್ನು ಪಡೆದಿರುವ ಬ್ರಿಟಿಷ್ ವಿಭಾಗಕ್ಕೂ ದೇಶೀಯ ವಿಭಾಗಕ್ಕೂ ಇರುವ ಮೇರೆಯು ಯದ್ವಾತದ್ವಾ ಇದೆ. ಮೇರೆಯು ನಿಷ್ಕರ್ಷೆಯಾಗಿರುವ ರೀತಿಯಲ್ಲಿ ಯಾವ ತತ್ವವೂ ನೆಲೆಸಿಲ್ಲ. ಅದೇ ರೀತಿಯಲ್ಲಿಯೇ ಬ್ರಿಟಿಷ್ ಕ್ಷೇತ್ರವು ಪ್ರದೇಶಗಳಾಗಿ ವಿಭಜನೆಯಾಗಿದೆ. ಮುಘಲ್ ಬಾದಷಾಹಿಯಲ್ಲಿದ್ದ ಸುಭೆಗಳೆಂಬ ವಿಭಾಗಗಳ ರಚನೆಯಲ್ಲಿ ಭಾಷೆಯನ್ನೋ ಪೂರ್ವಪದ್ಧತಿಯನ್ನೋ ಅನುಸರಿಸಿತ್ತು; ಆ ವಿಭಾಗ ರಚನೆಯೇ ಮೇಲಾಗಿತ್ತೆಂದು ಹೇಳಬಹುದು. ಇದನ್ನು ಗಮನಿಸಿಯೇ ರಾಷ್ಟ್ರಸುಧಾರಕರು ದೇಶವನ್ನು ಭಾಷಾನುಸಾರವಾಗಿ 21 ಪ್ರದೇಶಗಳಾಗಿ ವಿಭಾಗಿಸತಕ್ಕದೆಂದು ವಾದಿಸುತ್ತಾರೆ. ಬ್ರಿಟಿಷ್ ವಿಭಾಗಗಳು ಸಂದರ್ಭೋಚಿತವಾಗಿ ವಿಸ್ತಾರಗೊಂಡವು; ಪರಿಣಾಮವಾಗಿ ಈಗಿನ ವಿಭಾಗಗಳು ಏರ್ಪಟ್ಟಿವೆ. ಈ ಅಂಶವನ್ನು ನೆನಪಿನಲ್ಲಿಟ್ಟುಕೊಂಡು ಬ್ರಿಟಿಷ್ ಪ್ರದೇಶಗಳ ವಿಭಜನಾ ರೀತಿಯನ್ನು ನಾವು ಕಾಣಬೇಕು.

**ಹಿರಿಯವು ಕಿರಿಯವು**

ಬ್ರಿಟಿಷ್ ವಿಭಾಗವೆಂಬುದರಲ್ಲಿ ಒಟ್ಟು 15 ಪ್ರದೇಶಗಳಿವೆ. ಅವುಗಳಲ್ಲಿ 10 ಪ್ರದೇಶಗಳು ಮೇಜರ್ ಅಥವಾ ಹಿರಿಯ ಪ್ರದೇಶಗಳೆಂದೆನಿಸಿವೆ; ಉಳಿದವು ಮೈನರ್ ಅಥವಾ ಕಿರಿಯವು. ಪಂಜಾಬ್, ಆಗ್ರಾ ಮತ್ತು ಅಯೋಧ್ಯೆಗಳು ಸೇರಿರುವ ಸಂಯುಕ್ತಪ್ರಾಂತ, ಬಿಹಾರ ಮತ್ತು ಒರಿಸ್ಸ, ಬಂಗಾಳ, ಅಸ್ಸಾಂ, ಬೊಂಬಾಯಿ, ಮಧ್ಯಪ್ರಾಂತ, ಮದರಾಸು ಮತ್ತು ಬರ್ಮಾ ಎಂಬ ಒಂಬತ್ತು ವಿಭಾಗಗಳು ಮಾಂಟ್ಫರ್ಡ್ ಸುಧಾರಣೆಗಳಲ್ಲಿ ಹಿರಿಯ ತರಗತಿಗೆ ಸೇರಿದವುಗಳು; ವಾಯುವ್ಯ ಸರಹದ್ದಿನ ಪ್ರದೇಶವೆನ್ನುವುದು ಇತ್ತೀಚೆಗೆ ಮಾತ್ರ ಆ ತರಗತಿಗೆ ಸೇರಿತು. ಈ ಹಿರಿಯ

ಪ್ರದೇಶವೊಂದೊಂದರಲ್ಲಿಯೂ ಭೋಗಪತಿ ಅಥವಾ ಗವರ್ನರ್ ಎಂಬಾತನು ರಾಷ್ಟ್ರಾಧಿಪತಿಯಾಗಿರುತ್ತಾನೆ. ಅಜ್ಮೀರ್–ಮೆರ್ವಾರ, ಅಂಡಮಾನ್, ನಿಕೊಬಾರ್ ದ್ವೀಪಗಳು, ಬಲೂಚಿಸ್ತಾನ, ಕೊಡಗು, ದಿಲ್ಲಿಗಳು ಕಿರಿಯ ತರಗತಿಗೆ ಸೇರಿದ ಅಥವಾ ವೈಸರಾಯ್ ಆಳಿಸಿದ ಪ್ರದೇಶಗಳು. ಒಟ್ಟಿನಲ್ಲಿ ಬ್ರಿಟಿಷ್ ಪ್ರದೇಶಗಳೆಂಬುವುಗಳೆಲ್ಲವೂ 10,96,171 ಚದರಮೈಲಿಗಳನ್ನುಂಟಾಗಿ 267 ಜಿಲ್ಲೆಗಳಾಗಿವೆ. ಹಿರಿಯ ಪ್ರದೇಶಗಳೆಂಬವು ಮಾತ್ರವೇ 257 ಜಿಲ್ಲೆಗಳನ್ನು ಪಡೆದಿರುತ್ತವೆ.

**ತಾರತಮ್ಯ**

ಹಿರಿಯ ಪ್ರದೇಶಗಳೆನ್ನತಕ್ಕವು ವಿಸ್ತಾರದಲ್ಲಿಯಾಗಲಿ, ಐಶ್ವರ್ಯದಲ್ಲಿಯಾಗಲಿ, ಪ್ರಾಬಲ್ಯದಲ್ಲಿಯಾಗಲಿ ಸರಿಸಮಾನವಾದವುಗಳಲ್ಲ. ಒವರ್ಮಾ ಪ್ರದೇಶದಲ್ಲಿ 2 ಲಕ್ಷ ಚದರಮೈಲಿಗಳಿಗಿಂತ ಹೆಚ್ಚು ಭೂಮಿಯುಂಟು, 41 ಜಿಲ್ಲೆಗಳುಂಟು, 146 ಲಕ್ಷ ಜನಸಂಖ್ಯೆಯುಂಟು. ಸಂಯುಕ್ತ ಪ್ರಾಂತವೆಂಬುದರಲ್ಲಿ 1,06,248 ಚದರಮೈಲಿಗಳೂ, 48 ಜಿಲ್ಲೆಗಳೂ ಇದ್ದು 484 ಲಕ್ಷ ಜನರು ನಿವಾಸಿಗಳಾಗಿದ್ದಾರೆ. ಅಸ್ಸಾಂ ಪ್ರದೇಶದಲ್ಲಿ 55,014 ಚದರ ಮೈಲಿಗಳೂ, 12 ಜಿಲ್ಲೆಗಳೂ, 86 ಲಕ್ಷ ಜನಬಲವೂ ಉಂಟು. ರಾಷ್ಟ್ರದ ಉತ್ಪತ್ತಿ ರೀತಿಯಲ್ಲಿ ನೋಡಿದಾಗ್ಗೆ ಬೊಂಬಾಯಿಗೆ 14 ಕೋಟಿ, ಮದರಾಸಿಗೆ 16 ಕೋಟಿ, ಬಂಗಾಳಕ್ಕೆ 10 ಕೋಟಿ, ಸಂಯುಕ್ತ ಪ್ರಾಂತಕ್ಕೆ 10 ಕೋಟಿ, ಅಸ್ಸಾಮಿಗೆ 3 ಕೋಟಿ ಕಾಣುತ್ತದೆ. ಹೀಗೆ ಭಿನ್ನಭಿನ್ನವಾಗಿದ್ದಾಗ್ಗೂ ಈ ಪ್ರದೇಶಗಳ ಆಡಳಿತ ರೀತಿಯಲ್ಲಿ ಸಾಮಾನ್ಯವಾದ ಲಕ್ಷಣಗಳೇ ಇವೆ; ಆದ್ದರಿಂದ ಪ್ರದೇಶಗಳ ಆಡಳಿತದ ರೀತಿಯನ್ನು ಏಕರೀತಿಯೆಂದೇ ಭಾವಿಸಿ, ಒಟ್ಟಿಗೇ ಅವುಗಳ ರೂಪವನ್ನು ಕಾಣಬಹುದು.

**ಭೋಗಪತಿಗಳು**

ಈ ಹತ್ತು ಹಿರಿಯ ಪ್ರದೇಶಗಳಲ್ಲಿ ಮದರಾಸ್, ಬಂಗಾಳ ಮತ್ತು ಬೊಂಬಾಯಿಗಳು ಹಳೆಯವು ಮತ್ತು ವಿಶಾಲವಾದವು. ಅವುಗಳನ್ನು ಮಾತ್ರ ಪ್ರೆಸಿಡೆನ್ಸಿಗಳೆಂದು ಕರೆಯುವುದೂ ಉಂಟು. ಆ ಮೂರು ಪ್ರದೇಶಗಳ ಭೋಗಪತಿಗಳಿಗೆ ಇತರ ಭೋಗಪತಿಗಳಿಗಿಂತ ಸ್ವಲ್ಪ ಹೆಚ್ಚಿನ ಮರ್ಯಾದೆ

ಯುಂಟು. ಆ ಮೂರು ಸ್ಥಲಗಳಿಗೆ ಇಂಗ್ಲಂಡಿನ ಶ್ರೀಮಂತ ವರ್ಗದವರನ್ನೇ ಆರಿಸಿ ನಿಯಮಿಸುತ್ತಾರೆ. ಉಳಿದ ಏಳು ಸ್ಥಾನಗಳಿಗೆ **ಇಂಡಿಯನ್ ಸಿವಿಲ್ ಸರ್ವಿಸ್** ಎಂದು ಹೆಸರಾದ ಅಧಿಕಾರಿವರ್ಗದಲ್ಲಿ ಹಿರಿಯರೆನಿಸಿದವರನ್ನು ಗೊತ್ತುಮಾಡುತ್ತಾರೆ. ಗವರ್ನರುಗಳೆಲ್ಲರನ್ನೂ ನಿಯಮಿಸುವ ಅಧಿಕಾರವು ಭಾರತೀಯ ಕಾರ್ಯದರ್ಶಿಗೇ ಸೇರಿದ್ದು; ಆತನು ಅವರನ್ನು ಸಾಧಾರಣವಾಗಿ 5 ವರ್ಷಗಳಿಗೊಮ್ಮೆ ನಿಯಮಿಸುತ್ತಾನೆ. ಗವರ್ನರುಗಳೆಲ್ಲರೂ ರಾಜಪ್ರತಿನಿಧಿಗಳಾಗಿ ವೈಭವದಿಂದಲೇ ಇರುತ್ತಾರೆ. ಸಾಧಾರಣವಾಗಿ ಎಲ್ಲ ಗವರ್ನರುಗಳಿಗೂ ಬೇಸಿಗೆಗೊಂದು ಚಳಿಗಾಲಕ್ಕೊಂದು ವಾಸಸ್ಥಲವೇರ್ಪಟ್ಟಿರುತ್ತದೆ. ಸಿಮ್ಲಾ, ನೈನಿಟಾಲ್, ಡಾರ್ಜೀಲಿಂಗ್, ಮಹಾಬಲೇಶ್ವರ, ನೀಲಗಿರಿ ಮುಂತಾದ ಸ್ಥಲಗಳು ಬೇಸಿಗೆ ಕಾಲದ ಬಿಡಾರಗಳಿಗಾಗಿಯೇ ಹೆಸರು ಪಡೆದಿವೆ.

ಕೌನ್ಸಿಲರುಗಳು
ಮಂತ್ರಿಗಳು

ಪ್ರತಿ ಭೋಗಪತಿಯೂ ಸಭಾಯುಕ್ತನಾಗಿಯೇ ರಾಷ್ಟ್ರನಿರ್ವಾಹವನ್ನು ಮಾಡುತ್ತಾನೆ. ಆತನಿಗೆ ಸಹಾಯಕರಾಗಿರತಕ್ಕವರಲ್ಲಿ ಎರಡು ವರ್ಗಗಳುಂಟು; ಒಂದು ವರ್ಗದವರಿಗೆ **ಕೌನ್ಸಿಲರು**ಗಳೆಂದೂ, ಮತ್ತೊಂದು ವರ್ಗದವರಿಗೆ **ಮಂತ್ರಿ**ಗಳೆಂದೂ ಹೆಸರು. ಕೌನ್ಸಿಲರುಗಳ ಸಂಖ್ಯೆ ಎರಡರಿಂದ ನಾಲ್ಕರವರೆಗೂ ಇರಬಹುದು. ಅವರನ್ನು ನಿಯಮಿಸುವ ಅಧಿಕಾರವು ಭಾರತೀಯ ಕಾರ್ಯದರ್ಶಿಗೇ ಇರತಕ್ಕದ್ದು; ಅವರು ನಿರ್ವಾಹಮಾಡುವುದು **ರಿಸರ್ವ್ಡ್** ಎಂಬ ಭಾಗ. ಮಂತ್ರಿಗಳೂ ಪ್ರದೇಶಕ್ಕೆ ತಕ್ಕಂತೆ 2 ರಿಂದ 4 ರ ವರೆಗಿರುತ್ತಾರೆ. ಪ್ರದೇಶದ ಶಾಸಕ ಸಭೆಯಲ್ಲಿ ಪ್ರಬಲರಾದ ಸದಸ್ಯರಲ್ಲಿ ಗವರ್ನರೇ ಆರಿಸಿ ಅವರನ್ನು ಗೊತ್ತುಪಡಿಸುತ್ತಾನೆ; ಮಂತ್ರಿಗಳೆನಿಸಿದವರು ಶಾಸಕ ಸಭೆಯಲ್ಲಿ ಪ್ರಾಬಲ್ಯ ಇರುವವರೆಗೆ ಅಧಿಕಾರನಿರತರಾಗಿದ್ದು ಪ್ರಾಬಲ್ಯ ತಗ್ಗಿದ ಕೂಡಲೆ ತಾವೇ ಅಧಿಕಾರ ನಿವೃತ್ತರಾಗಬೇಕು. ಮಂತ್ರಿಗಳ ಸ್ವಾಧೀನದಲ್ಲಿ ನಡೆಯುವುದು **ಟ್ರಾನ್ಸ್‌ಫರ್ಡ್** ಎಂಬ ಭಾಗ. ಗವರ್ನರುಗಳ ಸಭೆಯಲ್ಲಿ ಕೌನ್ಸಿಲರುಗಳೂ ಮಂತ್ರಿಗಳೂ ಇರುತ್ತಾರೆ.

ಸರ್ಕಾರವು ಎರಡು ಭಾಗಗಳಾಗಿ ವಿಭಜನೆಯಾಗಿರುವುದು ಪ್ರದೇಶಗಳ ರಾಷ್ಟ್ರರೂಪದಲ್ಲಿ ವಿಶಿಷ್ಟ ಲಕ್ಷಣ. ಒಂದು ಭಾಗಕ್ಕೆ ಏರ್ಪಟ್ಟ ಕೌನ್ಸಿಲರುಗಳೆಂಬುವರು ಭಾರತೀಯ ಕಾರ್ಯದರ್ಶಿಯಿಂದಲೇ ನಿಯಮಿತರಾಗಿ ಆತನಿಗೇ ಉತ್ತರವಾದಿಗಳಾಗಿರುತ್ತಾರೆ. ಮತ್ತೊಂದು ಭಾಗದ ಯಾಜಮಾನ್ಯವನ್ನು ವಹಿಸುವ ಮಂತ್ರಿಗಳು ಶಾಸಕ ಸಭೆಗೆ ಉತ್ತರವಾದಿಗಳಾಗಿದ್ದು ಶಾಸಕಾಂಗದಿಂದಲೇ ತಮ್ಮ ಅಧಿಕಾರವನ್ನು ಪಡೆಯುತ್ತಾರೆ. ಈ ರೀತಿಯಲ್ಲಿ ಸರ್ಕಾರದ ಅಧಿಕಾರದಲ್ಲಿ ಒಂದು ಭಾಗಕ್ಕೆ ಅಧಿಕಾರ ಮೂಲವು ಭಾರತೀಯ ಕಾರ್ಯದರ್ಶಿಯಲ್ಲಿಯೂ, ಮತ್ತೊಂದು ಭಾಗದ ಅಧಿಕಾರ ಮೂಲವು ಪ್ರದೇಶದ ಶಾಸಕ ಸಭೆಯಲ್ಲಿಯೂ ಇರುತ್ತದೆ. ಇದೇ ಪ್ರದೇಶಗಳಲ್ಲಿ ನೆಲೆಸಿರುವ ದ್ವಿಮುಖ ಸರ್ಕಾರವೆಂಬುದು. ಸರ್ಕಾರದ ವಿಭಾಗವೆಂದರೆ ಕೆಲವು ಶಾಖೆಗಳು ಮಂತ್ರಿಗಳಿಗೆ ವಶವಾಗಿಯೂ, ಮತ್ತೆ ಕೆಲವು ಶಾಖೆಗಳು ಕೌನ್ಸಿಲರುಗಳಿಗೆ ವಶವಾಗಿಯೂ ನಡೆಯತಕ್ಕದ್ದು. ಮಾಂಟ್ಫರ್ಡ್ ಸುಧಾರಣೆಗಳ ಕಾಲದಲ್ಲಿ ನಡೆದ ವ್ಯವಸ್ಥೆಯಿದು. ರಾಷ್ಟ್ರಭಾರ ನಿರ್ವಾಹದಲ್ಲಿ ಭಾರತೀಯರನ್ನು ಸೇರಿಸಿಕೊಳ್ಳಬೇಕೆಂಬ ನೀತಿಗೆ ಅನುಸಾರವಾಗಿ ಪ್ರಾದೇಶಿಕ ರಾಷ್ಟ್ರಗಳಲ್ಲಿ ಸ್ಥಳೀಯ ನಿರ್ವಾಹ, ಶಿಕ್ಷಣ, ಉದ್ಯೋಗ ಮತ್ತು ವ್ಯಾಪಾರ, ನೈರ್ಮಲ್ಯ ರಕ್ಷಣೆ, ಆರೋಗ್ಯ, ಅಬ್ಕಾರಿಗಳೆಂಬ ಶಾಖೆಗಳು ಭಾರತೀಯರ ವಶದಲ್ಲಿಯೇ ನಡೆಯತಕ್ಕದ್ದೆಂದು ತೀರ್ಮಾನವಾಯಿತು. ಈ ಶಾಖೆಗಳು ರಾಷ್ಟ್ರದ ಅಭಿವೃದ್ಧಿ ಸಾಧಕಗಳಾದರೂ ಆಡಳಿತದಲ್ಲಿ ಅನಿವಾರ್ಯ ರಾಶಿಗೆ ಸೇರಿದವುಗಳಲ್ಲ; ಒಂದುವೇಳೆ ಪ್ರಮಾದ ಸಂಭವಿಸಿದರೂ ಹೆಚ್ಚು ನಷ್ಟವಿಲ್ಲದಿರುವುದು. ಆದ್ದರಿಂದಲೇ ಈ ಶಾಖೆಗಳ ಯಾಜಮಾನ್ಯವನ್ನು ಶಾಸಕ ಸಭೆಗಳಲ್ಲಿ ಮುಖಂಡರೆನಿಸಿದವರಿಗೊಪ್ಪಿಸಿದ್ದಾಯಿತು. ರಾಷ್ಟ್ರಕ್ಕೆ ಅತಿ ಮುಖ್ಯವಾದ ರಕ್ಷಣೆ, ರೆವಿನ್ಯೂ, ಆಯವ್ಯಯ ಮುಂತಾದ ಶಾಖೆಗಳು ಹಿಂದಿನಂತೆ ಬ್ರಿಟಿಷರ ಸ್ವಾಧೀನದಲ್ಲಿಯೇ ಉಳಿದುಕೊಂಡವು, ಅಥವಾ ರಿಸರ್ವ್ ಆದವು. ಪ್ರದೇಶದ ರಾಷ್ಟ್ರದಲ್ಲಿ ಆಡಳಿತದ ವಿಭಾಗವನ್ನು ಈ ರೀತಿ ತೋರಬಹುದು :—

ದ್ವಿಮುಖ ಸರ್ಕಾರ




**ಶಾಖೆಗಳು**

ಪ್ರದೇಶಕ್ಕೆ ರಾಜಧಾನಿಯೆನಿಸಿದ ನಗರದಲ್ಲಿಯೇ ರಾಯಸ ಪರಿವಾರದವರೂ ಆಡಳಿತದ ಶಾಖೆಗಳ ಶ್ರೇಷ್ಠಾಧಿಕಾರಿಗಳೂ ಇರುತ್ತಾರೆ. ಆಯವ್ಯಯ, ರೆವಿನ್ಯೂ, ಹೋಂ, ರಾಜಕೀಯ, ಜನರಲ್, ಜುಡಿಷಿಯಲ್, ಮರಾಮತ್ ಮುಂತಾದ ಶಾಖೆಗಳಿಗೆ ಕಾರ್ಯದರ್ಶಿಗಳಿರುತ್ತಾರೆ; ಕಾರ್ಯದರ್ಶಿಗಳಲ್ಲಿ ಹಿರಿಯನಾದಾತನು ಶ್ರೇಷ್ಠ ಕಾರ್ಯದರ್ಶಿಯೆನಿಸುತ್ತಾನೆ. ಅನೇಕ ಸಂದರ್ಭಗಳಲ್ಲಿ ಕಾರ್ಯದರ್ಶಿಯೆಂಬಾತನೇ ಶಾಖೆಗೆ ಅಧ್ಯಕ್ಷನೂ ಆಗಿರುತ್ತಾನೆ. ಶಾಖೆಗಳು ಅವಶ್ಯ ಹುಟ್ಟಿದಂತೆ ತೋರಿಕೊಳ್ಳುತ್ತವೆ. ಅವಶ್ಯ ತೀರಿದ ಕೂಡಲೆ ಮಾಯವಾಗುತ್ತವೆ. ಶಾಖೆಗಳಲ್ಲಿ ಜುಡಿಷಿಯಲ್, ಪೋಲೀಸ್, ಜೈಲ್, ನೆಲಗಂದಾಯ, ನೀರಾವರಿ, ಮರಾಮತ್, ಸಮುದ್ರ ಸಂಬಂಧವುಳ್ಳದು, ಕಾಡುಗಳು, ಶಿಕ್ಷಣ, ಸ್ಟ್ಯಾಂಪು, ರೆಜಿಸ್ಟ್ರೇಷನ್, ಆರೋಗ್ಯ, ನೈರ್ಮಲ್ಯ ರಕ್ಷಣೆ, ಚಿಕಿತ್ಸಾ, ವ್ಯವಸಾಯ, ಉದ್ಯೋಗ ಮುಂತಾದವು ಇರುತ್ತವೆ. ಪ್ರತಿಯೊಂದು ಶಾಖೆಯ ಅಧಿಕಾರಿಗಳೂ ಪ್ರದೇಶದ ಎಲ್ಲೆಡೆಗಳಲ್ಲಿಯೂ ಇರುತ್ತಾರೆ; ಶ್ರೇಷ್ಠನಾದ ಅಧಿಕಾರಿ ಮಾತ್ರ ರಾಜಧಾನಿಯಲ್ಲಿರುತ್ತಾನೆ. ಶ್ರೇಷ್ಠಾಧಿಕಾರಿಯು ಆಜ್ಞೆ ಕೊಟ್ಟಂತೆ ಕೈಕೆಳಗಿನ ಅಧಿಕಾರಿಗಳು ವರ್ತಿಸುತ್ತಾರೆ. ಶ್ರೇಷ್ಠಾಧಿಕಾರಿಯು ತನಗೆ ಹೇಳಲ್ಪಟ್ಟ ಕೌನ್ಸಿಲರಿನಿಂದಲೋ ಮಂತ್ರಿಯಿಂದಲೋ, ಕಡೆಗೆ ಸಭಾಯುಕ್ತ ಭೋಗಪತಿಯಿಂದಲೋ ಆಜ್ಞೆಗಳನ್ನು ಪಡೆದು ಅವುಗಳನ್ನು ಅನುಸರಿಸುತ್ತಾನೆ.

ಸೈನ್ಯ ಭಾಗಗಳ ಅಥವಾ ಹೊರದೇಶ ವ್ಯಾಪಾರದ ಪಾರುಪತ್ಯವೇ ಪ್ರದೇಶಗಳ ರಾಷ್ಟ್ರಭಾಗದಲ್ಲಿ ಸೇರಿಲ್ಲ. ರಾಷ್ಟ್ರ ಭಾರವೆಂಬ ರಾಶಿಯ ವಿಭಜನೆಯನ್ನು ವಿಚಾರ ಮಾಡಿದಾಗಲೇ ಕ್ಷೇತ್ರಗಳನ್ನನುಸರಿಸಿಯೂ ಮಾಡಬಹುದು, ವಿಷಯವನ್ನನುಸರಿಸಿಯೂ ಮಾಡಬಹುದು ಎಂಬುದನ್ನು ನಿಶ್ಚಯ ಮಾಡಿಕೊಂಡೆವು. ಅದರಂತೆ ಸೆಂಟ್ರಲ್ ಅಥವಾ ಅಖಿಲ ಭಾರತ ರಾಷ್ಟ್ರಕ್ಕೆ ಸೇರಿದ ವಿಷಯಗಳಲ್ಲಿ ಪ್ರಾದೇಶಿಕ ಸರ್ಕಾರಗಳಿಗೆ ಪ್ರವೇಶವೇ ಇಲ್ಲ. ವೈಸ್‌ರಾಯಿ ಸರ್ಕಾರದವರು ಈ ಸೆಂಟ್ರಲ್ ವಿಷಯಗಳನ್ನು ನಿರ್ವಹಿಸುವರು. ಈ ಲಕ್ಷಣದಲ್ಲಿ ಪ್ರಾದೇಶಿಕ ರಾಷ್ಟ್ರಗಳನ್ನು ದೇಶೀಯ ಸಂಸ್ಥಾನಗಳೊಂದಿಗೆ ಹೋಲಿಸಬಹುದು. ಸೆಂಟ್ರಲ್ ವಿಷಯಗಳಲ್ಲಿ ಎರಡಕ್ಕೂ ಪ್ರವೇಶವಿರುವುದಿಲ್ಲವೆಂದೇ ಹೇಳಬಹುದು. ಆದರೆ ಪ್ರದೇಶಗಳಲ್ಲಿ 1919ನೆ ರಾಷ್ಟ್ರರಚನೆಯ ವಿಧಿಗೆ ಅನುಸಾರವಾಗಿ ನಡೆಯುತ್ತದೆ; ಸಂಸ್ಥಾನಗಳಲ್ಲಾದರೆ ಬ್ರಿಟಿಷರೊಡನೆ ನಡೆದಿರುವ ಕರಾರುಗಳ ಅನುಸಾರವಾಗಿ ನಡೆಯುತ್ತದೆ.

ಸರ್ಕಾರದ ಎಲ್ಲೆ

ಪ್ರತಿ ಪ್ರದೇಶದಲ್ಲಿಯೂ ಜನರು ಗ್ರಾಮಗಳಲ್ಲಿಯೇ ಹೆಚ್ಚಾಗಿ ನಿವಾಸಮಾಡುತ್ತಾರೆ; ನಗರಗಳು ದೇಶದಲ್ಲಿ ಹೆಚ್ಚಾಗಿಲ್ಲ. ರಾಷ್ಟ್ರನಿರ್ವಾಹ ಕಾರ್ಯಕ್ಕಾಗಿ ಗ್ರಾಮಗಳಲ್ಲಿ ಗೌಡ ಮತ್ತು ಶಾನುಭೋಗರೆಂದು ಕನ್ನಡ ನಾಡಿನಲ್ಲಿರುವಂತೆಯೇ ಇತರೆಡೆಗಳಲ್ಲಿಯೂ ಪಟೇಲ ಮತ್ತು ಕರಣಿಕ—ರೆಡ್ಡಿ ಮತ್ತು ಕರಣಂ—ಮೊದಲಿಯಾರ್ ಮತ್ತು ಕರಣಂ—ಲಂಬರ್‌ದಾರ್, ಪುಲ್ಗುಸಾರಾ ಮುಂತಾಗಿ ಹೆಸರುಗಳನ್ನು ಮಾತ್ರ ಬೇರೆ ಬೇರೆಯಾಗಿ ಉಳ್ಳ ಗ್ರಾಮಮುಖ್ಯರಿರುತ್ತಾರೆ. ಹಲಕೆಲವು ಗ್ರಾಮಗಳು ಸೇರಿ ಮೊದಲು ಹೋಬಳಿ ಅಥವಾ ಫಿರ್ಕಾ ಎಂಬ ಗುಂಪುಗಳಾಗಿ ಏರ್ಪಟ್ಟು ತರುವಾಯ ತಾಲ್ಲೂಕು ಅಥವಾ ತಹಸೀಲ್ ಎಂಬ ವಿಭಾಗವು ಸಿದ್ಧವಾಗುತ್ತದೆ. ಅನೇಕ ತಾಲ್ಲೂಕುಗಳು ಸೇರಿ ಜಿಲ್ಲೆಯಾಗಿ ಪರಿಣಮಿಸುತ್ತದೆ. ಜಿಲ್ಲೆಗೆ ಅಧಿಪತಿಯಾಗಿರುವಾತನಿಗೆ ಬ್ರಿಟಿಷ್ ವಿಭಾಗದಲ್ಲಿ ಕಲೆಕ್ಟರ್ ಎಂದು ಹೆಸರು. ದೊಡ್ಡದಾದ ಪ್ರದೇಶಗಳಲ್ಲಿ ಹಲಕೆಲವು ಜಿಲ್ಲೆಗಳನ್ನು ಜತೆಗೂಡಿಸಿ ಡಿವಿಜನ್ ಎಂಬ ವಿಭಾಗಮಾಡಿ ಅದಕ್ಕೆ ಕಮಿಷನರ್ ಎಂಬ ಅಧಿಕಾರಿಯನ್ನು

ಕ್ಷೇತ್ರ ವಿಭಾಗ

ನಿಯಮಿಸುವುದುಂಟು. ಕಲೆಕ್ಟರ್ ಕಮಿಷನರುಗಳಿಗೆ ಮೇಲ್ಪಟ್ಟವರು ಗವರ್ನರ್ ಮತ್ತು ಆತನ ಸಭಿಕರು. ಮುಖ್ಯವಾದ ಪ್ರತಿಯೊಂದು ಸರ್ಕಾರದ ಶಾಖೆಯಲ್ಲಿಯೂ ಅವಶ್ಯ ಬಿದ್ದಂತೆ ಕ್ಷೇತ್ರವಿಭಾಗ ರಚನೆಯಿರುವುದು; ರೆವಿನ್ಯೂ ಶಾಖೆಯೇ ಎಲ್ಲ ಶಾಖೆಗಳಿಗಿಂತ ಹಿರಿಯದಾದುದರಿಂದ ರೆವಿನ್ಯೂ ವಿಭಾಗಗಳೇ ಹೆಸರುವಾಸಿಯಾಗಿವೆ. ಇತರ ಶಾಖೆಗಳಲ್ಲಿ ಸೂಕ್ತವೆಂದು ತೋರಿದರೆ ಅದೇ ವಿಭಾಗಗಳನ್ನು ಇಟ್ಟುಕೊಳ್ಳಬಹುದು; ಅನನುಕೂಲವೆಂದು ತೋರಿದರೆ ಬೇರೆ ರೀತಿಯ ವಿಭಾಗಗಳನ್ನು ಮಾಡಿಕೊಳ್ಳಬಹುದು. ಈ ರೀತಿಯಲ್ಲಿ ರೆವಿನ್ಯೂ ಸಬ್‌ಡಿವಿಜನ್ ಎಂಬುದೂ ಪೋಲೀಸ್ ಸಬ್‌ಡಿವಿಜನ್ ಎಂಬುದೂ ಒಂದೇ ವಿಭಾಗವಾಗಿದ್ದರೂ ಇರಬಹುದು; ವ್ಯತ್ಯಸ್ತವಾಗಿದ್ದರೂ ಇರಬಹುದು.

ಶಾಸಕ ಸಭೆ

ಪ್ರತಿ ಪ್ರದೇಶದಲ್ಲಿಯೂ ಲೆಜಿಸ್ಲೆಟಿವ್ ಕೌನ್ಸಿಲ್ ಎಂಬ ಶಾಸಕ ಸಭೆಯುಂಟು. ಸಭಿಕರ ಒಟ್ಟು ಸಂಖ್ಯೆಯು ಪ್ರದೇಶದ ವಿಸ್ತಾರವನ್ನೂ ಜನಬಲವನ್ನೂ ಅನುಸರಿಸಿರುತ್ತದೆ. ವಿಧಿಗನುಸಾರವಾಗಿ ಪ್ರಾದೇಶಿಕ ಶಾಸಕ ಸಭೆಗಳಲ್ಲಿ ಪ್ರತಿನಿಧಿಗಳಾದವರ ಸಂಖ್ಯೆಯು ಸೇಕಡ 70 ರಷ್ಟಿರಬೇಕು. ಬೇರೆ ಬೇರೆ ಪ್ರದೇಶಗಳಲ್ಲಿರುವ ಸಂಖ್ಯೆಯನ್ನು ಈ ಪಟ್ಟಿಯಲ್ಲಿ ಕಾಣಬಹುದು :—

| ಪ್ರದೇಶ | ಸಭಿಕರ ಒಟ್ಟು ಸಂಖ್ಯೆ | ವರಣಾಸಿದ್ಧರಾದವರ ಸಂಖ್ಯೆ | ನಿಯಮಿತರಾದವರು ಅಧಿಕಾರಿ ವರ್ಗ | ನಿಯಮಿತರಾದವರು ಖಾಸಗಿ ಜನ |
|---|---|---|---|---|
| ಮದರಾಸು .. | 132 | 98 | 23 | 11 |
| ಬೊಂಬಾಯಿ .. | 114 | 86 | 16 | 12 |
| ಬಂಗಾಳ .. | 140 | 114 | 20 | 6 |
| ಸಂಯುಕ್ತ ಪ್ರಾಂತ .. | 123 | 100 | 16 | 7 |
| ಪಂಜಾಬ್ .. | 94 | 71 | 14 | 7 |
| ಬಿಹಾರ್ ಮತ್ತು ಒರಿಸ್ಸ | 103 | 76 | 18 | 9 |
| ಮಧ್ಯಪ್ರಾಂತ .. | 73 | 55 | 10 | 8 |
| ಅಸ್ಸಾಂ .. | 53 | 39 | 7 | 7 |
| ಬರ್ಮಾ .. | 103 | 80 | 14 | 9 |

ವರಣಾಧಿಕಾರ

ಪ್ರಾದೇಶಿಕ ಶಾಸಕ ಸಭೆಯು ಮೂರು ವರ್ಷಗಳಿಗೊಂದಾವರ್ತಿ ವರಣಕ್ಕೆ ಒಳಗಾಗತಕ್ಕದ್ದು. ನೆಲಗಂದಾಯದಲ್ಲಿ ಕನಿಷ್ಠಾಂಶವೆಂದು ನಿಷ್ಕೃಷ್ಟವಾದುದನ್ನೋ, ವರಮಾನದ ತೆರಿಗೆಯ ರೂಪವಾಗಿ ಕನಿಷ್ಠಾಂಶವೆಂದು ನಿಷ್ಕೃಷ್ಟವಾದುದನ್ನೋ ಅಥವಾ ಮುನಿಸಿಪಲ್ ತೆರಿಗೆಗಳಲ್ಲಿ ಕನಿಷ್ಠವೆಂದು ಗೊತ್ತಾದಷ್ಟನ್ನೋ ಕೊಡತಕ್ಕವರೆಲ್ಲರೂ ಅಲ್ಲದೆ ನಿವೃತ್ತರಾದ ಅಧಿಕಾರಿಗಳೂ ಸೈನ್ಯಾಧಿಕಾರಿಗಳೂ ಛಂದಾಧಿಕಾರವನ್ನು ಪಡೆದಿರುತ್ತಾರೆ. ವರಣಾರ್ಥಿಯಾಗಿ ನಿಲ್ಲುವಾತನಿಗೆ ಇದಕ್ಕಿಂತ ಹೆಚ್ಚಿನ ಯೋಗ್ಯತೆಯೇ ಇರಬೇಕೆಂದು ವಿಧಿತವಾಗಿದೆ.

ವರಣಕ್ಷೇತ್ರ ವಿಭಾಗಗಳ ತತ್ವವನ್ನು ಹಿಂದೆಯೇ ಕಂಡುದಾಯಿತು. ಅದೇ ತತ್ವವೇ ಪ್ರಾದೇಶಿಕ ಶಾಸಕ ಸಭೆಗಳಿಗೆ ನಡೆಯುವ ವರಣಗಳಲ್ಲಿಯೂ ತೋರಿಕೊಂಡಿದೆ. ವರಣಕ್ಷೇತ್ರಗಳನ್ನು ಈ ಪರಿಯಲ್ಲಿ ವಿಭಾಗಿಸಿಕೊಳ್ಳಬಹುದು:




ವಿಶಿಷ್ಟ ಕ್ಷೇತ್ರಗಳನ್ನು ಬಿಟ್ಟುಳಿದ ಸಾಮಾನ್ಯ ಜನರ ವರಣಕ್ಷೇತ್ರಗಳನ್ನು ಕೋಮುಗಳಿಗನುಸಾರವಾಗಿ ರಚಿಸುವ ತತ್ವವು ಆಕ್ಷೇಪಕ್ಕೂ ಸಮಾಧಾನಕ್ಕೂ ಪಾತ್ರವಾಗಿದೆ. ಕೋಮಿನವರ ಹೇಳಿಕೆಯಂತೆಯೇ

ಬಿಟ್ಟುಕೊಡುತ್ತ ಬಂದರೆ ಎಲ್ಲ ಕೋಮಿನವರೂ ಪ್ರೋತ್ಸಾಹಪಡೆದು ಅದೇ ರೀತಿಯಾಗಿ ತಮ್ಮ ಇಷ್ಟಗಳನ್ನು ಬಲವಂತಪಡಿಸುವರೆಂದೂ, ಜನರಲ್ಲಿ ಪ್ರತ್ಯೇಕವಾದ ಗುಂಪುಗಳು ಏರ್ಪಡುವುವೆಂದೂ, ರಾಷ್ಟ್ರೀಯ ಐಕ್ಯತೆಗೆ ಅಡ್ಡಿಯಾಗುವುದೆಂದೂ, ಸಭೆಯ ಗೌರವಕ್ಕೆ ಹಾನಿಯನ್ನು ತಂದೊಡ್ಡಬಹುದೆಂದೂ ಕೆಲವರು ಆಕ್ಷೇಪಿಸುವರು. ಬೇರೆ ಕೆಲವರು ಆ ತತ್ವದ ಅನುಸರಣೆಯಿಂದಲೇ ಕೋಮಿಗೆ ಯೋಗ್ಯವಾದ ರಕ್ಷಣೆಯೂ ಪ್ರಾತಿನಿಧ್ಯವೂ ದೊರಕುವುದಲ್ಲದೆ ಕೋಮಿನಲ್ಲಿ ಐಕ್ಯತೆಯು ಬೇರೂರಿ ಶಿಕ್ಷಣ ಕಾರ್ಯವು ಸುಲಭವಾಗುವುದೆಂದು ಸಮಾಧಾನ ಹೇಳುತ್ತಿರುವರು.

**ಕೋಮುವಾರು ತತ್ವ**

ಕೋಮುಗಳನ್ನನುಸರಿಸಿ ವಿಭಾಗಮಾಡಿರುವ ಅಂಶವಲ್ಲದೆ ಆಕ್ಷೇಪಣೀಯವೆನಿಸಿದ ಮತ್ತೊಂದು ಅಂಶವೂ ವರಣವಿಧಾನದಲ್ಲುಂಟು. ಛಂದಾಧಿಕಾರವು ಬಹುಭಾಗದ ಜನರಿಗೆ ಇಲ್ಲವೇ ಇಲ್ಲ. ನಿದರ್ಶನಕ್ಕೆ ಬೊಂಬಾಯಿ ಪ್ರದೇಶದಲ್ಲಿರುವ 2½ ಕೋಟಿಗಳಿಗೆ ಮೇಲ್ಪಟ್ಟ ಜನರಲ್ಲಿ 8 ಲಕ್ಷ ಜನರಿಗೆ ಮಾತ್ರ ಛಂದಾಧಿಕಾರವು ಪ್ರಾಪ್ತವಾಯಿತು.

ಪ್ರಾದೇಶಿಕ ಶಾಸಕ ಸಭೆಗಳೂ ವರ್ಷಕ್ಕೆರಡು ಬಾರಿ ಸೇರಬೇಕು; ಆದರೆ ದೀರ್ಘಕಾಲ ನಡೆಯಬೇಕು. ಅವುಗಳ ಕರ್ತವ್ಯಾಧಿಕಾರಗಳನ್ನು ಈ ರೀತಿಯಲ್ಲಿ ಸಂಕ್ಷೇಪವಾಗಿ ಕಾಣಬಹುದು :—

**ಶಾಸಕ ಸಭೆಗಳ ಅಧಿಕಾರ**

1. **ಪ್ರಶ್ನೋತ್ತರ ಭಾಗ.**—ಸಮಾಚಾರವನ್ನು ತಿಳಿಯುವುದಕ್ಕಾಗಿ ಸದಸ್ಯರು ಪ್ರಶ್ನೆಗಳನ್ನು ಕೇಳಬಹುದು; ಆದರೆ ಅನ್ಯದೇಶಗಳೊಡನೆ ನಡೆಯುವ ವ್ಯವಹಾರ ಸಂಬಂಧಗಳು, ದೇಶೀಯ ಸಂಸ್ಥಾನಗಳೊಡನೆ ನಡೆಯುವ ಸಂಬಂಧಗಳು, ನ್ಯಾಯಸ್ಥಾನದಲ್ಲಿ ವಿಚಾರಣೆಗೊಳಗಾದ ವಿಷಯಗಳು ನಿಷಿದ್ಧ.

2. **ಸಮಾಲೋಚಕ ಭಾಗ.**—ಸಭೆಯಲ್ಲಿ ನಿಶ್ಚಯಗಳನ್ನು ಗೊತ್ತುಮಾಡಿ ಅವುಗಳನ್ನು ಕಾರ್ಯಾಂಗದವರಿಗೆ ಸೂಚನೆಗಳಂತೆ ಕಳುಹಿಸಬಹುದು. ಈ ಸಂದರ್ಭದಲ್ಲಿಯೇ ಸಭೆಯ ಕರ್ತವ್ಯವನ್ನು ಅಡ್ಜರ್ನ್

ಮಾಡಿ ಅಥವಾ ತಾತ್ಕಾಲಿಕವಾಗಿ ತೆಗೆದಿಟ್ಟು ಮುಖ್ಯವಾದುದೂ ಆತುರವಾದುದೂ ಎನಿಸಿದ ವಿಷಯವನ್ನು ಚರ್ಚೆಗೆ ಇಡಬಹುದು.

3. **ಶಾಸಕ ಭಾಗ.**—ಶಾಸನ ರಚನೆಯೇ ಸಭೆಯ ಮುಖ್ಯ ಕರ್ತವ್ಯ. ಆವಶ್ಯವೆನಿಸಿದ ಶಾಸನಗಳನ್ನು ಯೋಚಿಸಿ ಮುಸೂದೆಗಳ ರೂಪದಲ್ಲಿ ಅಧಿಕಾರಸ್ಥ ವರ್ಗದವರೇ ಸಭೆಯ ಮುಂದಿಡುವರು. ಖಾಸಗಿ ಸಭಿಕರಿಗೂ ಮುಸೂದೆಗಳನ್ನು ಹುಟ್ಟಿಸುವ ಅವಕಾಶವುಂಟು. ಮುಸೂದೆಗಳು ಮೂರು ಹಂತಗಳನ್ನೂ ದಾಟಿದ ತರುವಾಯ ಭೋಗಪತಿಯ ಅನುಮತಿಯನ್ನು ಪಡೆದು ಕಾನೂನುಗಳಾಗಿ ಆಚರಣೆಯಲ್ಲಿ ಬರತಕ್ಕವು.

4. **ಆಯ ವ್ಯಯ ಭಾಗ.**— ಪ್ರತಿ ವರ್ಷಾರಂಭದಲ್ಲಿಯೂ (ಆಯ ವ್ಯಯದ ವರ್ಷವೆನ್ನುವುದು 31ನೆ ಮಾರ್ಚಿಯಿಂದ 31ನೆ ಮಾರ್ಚಿಯವರೆಗೆ) ಆಯ ವ್ಯಯದ ಕೌನ್ಸಿಲರ್ 'ಬಜೆಟ್' ಎಂಬುದನ್ನು ಸಿದ್ಧಗೊಳಿಸಿ ಶಾಸಕ ಸಭೆಯಲ್ಲಿ ಒಪ್ಪಬೇಕು. ಸಭೆಯಲ್ಲಿ ಮೊದಲು ಸ್ಥೂಲ ರೀತಿಯ ವಿಚಾರವು ನಡೆಯುವುದು; ಎದ್ದ ಆಕ್ಷೇಪಣೆಗಳಿಗೆ ಕೌನ್ಸಿಲರ್ ಸಮಾಧಾನಗಳನ್ನು ಹೇಳುವನು. ತರುವಾಯ ಸರ್ಕಾರದ ಶಾಖೆಗಳಲ್ಲಿ ಒಂದೊಂದನ್ನು ಬೇರೆ ಬೇರೆಯಾಗಿ ಎಂಗಡಿಸಿ, ಪ್ರತಿಯೊಂದಕ್ಕೂ ಸಲ್ಲಬೇಕಾದ ಹಣದ ಮೊಬಲಗನ್ನು ಒಂದೊಂದಾಗಿ ಬೇಕೆಂದು ಕೇಳುವನು. ಪ್ರತಿಯೊಂದನ್ನೂ ಛಂದೋಬಲದಂತೆ ನಿಷ್ಕರ್ಷೆಮಾಡಬೇಕು. ಸಭಿಕರು ಈ ವಿಷಯದಲ್ಲಿ ಛಂದಾಧಿಕಾರವನ್ನು ತೋರಿ, ಕೊಡುವುದೋ ಬಿಡುವುದೋ ನಿಷ್ಕರ್ಷೆ ಮಾಡುವ ಅಧಿಕಾರವನ್ನು ಪಡೆದಾಗ್ಯೂ ಯಾವ ಶಾಖೆಯ ವೆಚ್ಚವನ್ನಾಗಲಿ ಹೆಚ್ಚಿಸುವ ಅಧಿಕಾರವನ್ನು ಪಡೆದಿಲ್ಲ; ಮತ್ತು ಹಣವನ್ನು ಬೇರೆ ಪ್ರಯೋಜನಕ್ಕಾಗಿ ವೆಚ್ಚಮಾಡಿಸುವ ಅಧಿಕಾರವನ್ನು ಹೊಂದಿಲ್ಲ. ಯಾವುದಾದರೂ ಒಂದು ವೆಚ್ಚವನ್ನು ಕಡಿಮೆಮಾಡುವಂತೆಯೋ ಬಿಟ್ಟೇ ಬಿಡುವಂತೆಯೋ ಸೂಚನೆಯನ್ನು ಪ್ರಾರಂಭಿಸಿ ಛಂದೋಬಲ ನಿಷ್ಕರ್ಷೆಯನ್ನು ಮಾಡಿಸಬಹುದು.

ಈ ರೀತಿಯಲ್ಲಿ ಪ್ರಾದೇಶಿಕ ಶಾಸಕ ಸಭೆಗಳಿಗೆ ಇತರ ಶಾಸಕ ಸಭೆಗಳಿಗಿರಬಹುದಾದ ವ್ಯವಹಾರವೆಲ್ಲವೂ ಇರುತ್ತದೆ; ಅಧಿಕಾರವು ಮಾತ್ರ

ಮಿತವಾಗಿದೆ. ಕಾಮನ್ಸ್ ಸಭೆಗೆ ಹೋಲಿಸಿ ನೋಡಿದಲ್ಲಿ ಎಲ್ಲರೂ ವರಣಾಸಿದ್ಧರಾಗಿಲ್ಲದಿರುವುದೂ, ಹಣದ ಆಯವ್ಯಯದಲ್ಲಿ ಸರ್ವಾಧಿಕಾರವನ್ನು ಪಡೆಯದೆ ಇರುವುದೂ, ಅಧಿಕಾರಿ ವರ್ಗದವರನ್ನು ಅಥವಾ ಕಾರ್ಯಾಂಗವನ್ನು ಅಧೀನದಲ್ಲಿ ಪಡೆಯದೆ ಇರುವುದೂ ವ್ಯಕ್ತವಾಗುತ್ತವೆ. ಕಾರ್ಯಾಂಗದವರು ಶಾಸಕ ಸಭೆಯಿಲ್ಲದೆಯೇ ಕಾರ್ಯನಿರ್ವಾಹ ಮಾಡಬಲ್ಲವರಾಗಿದ್ದಾರೆ. ಶಾಸಕ ಸಭೆಯವರು ಒಪ್ಪದೆ ತೊಡೆದು ಹಾಕಿದ ನೆಚ್ಚವನ್ನು ಭೋಗಪತಿಯಾದಾತನು ತನ್ನ ಸ್ವಂತ ಅಧಿಕಾರದಿಂದ, ತನ್ನಾಜ್ಞೆಯಿಂದ, ನಡೆಸಬಲ್ಲವನು; ಬಿದ್ದುಹೋದ ಮಸೂದೆಗಳನ್ನು ಅವಶ್ಯವೆಂದು ನಿರ್ಧರಿಸಿ ಅವುಗಳನ್ನು ಕಾನೂನುಗಳಂತೆ ನೆರವೇರಿಸಬಲ್ಲವನು. ಶಾಸಕ ಸಭೆಯಲ್ಲಿ ದೋಷಯುಕ್ತವೆಂದು ನಿರ್ಧರವಾಗಿದ್ದರೂ ಆಚರಣೆಯಲ್ಲಿ ತರಬಲ್ಲ ಅಧಿಕಾರವೂ, ಶಾಸಕ ಸಭೆಗೆ ಇಷ್ಟವೆನಿಸಿದ ವಿಚಾರವನ್ನು ಮಧ್ಯಮಾರ್ಗದಲ್ಲಿಯೇ ಅಡ್ಡಿಮಾಡುವ ಅಧಿಕಾರವೂ ಆತನಿಗಿರುವಂತೆ ವಿಸ್ತಾರವಾದ ನಿಬಂಧನೆಗಳಿವೆ.

ಕಾರ್ಯಾಂಗದ ಹೆಚ್ಚಿನ ಅಧಿಕಾರ

ಒಟ್ಟಿನಲ್ಲಿ ಸಭಾಯುಕ್ತ ಭೋಗಪತಿಯು ಅಧಿಕಾರಕ್ಕೆ ತಡೆಯೇ ಇಲ್ಲ; ವೈಸ್‌ರಾಯಿ ಅಧಿಕಾರಕ್ಕೂ ಭಾರತೀಯ ಕಾರ್ಯದರ್ಶಿಗೂ ಒಳಗಾಗಿದ್ದು ಪಾರ್ಲಿಮೆಂಟಿಗೆ ಉತ್ತರವಾದಿಯಾಗಿರತಕ್ಕುದೇ ಆತನ ಅಧಿಕಾರಕ್ಕೆ ಎಲ್ಲೆಗಳು. ವರಣಸಿದ್ಧರಾದ ಸಭಿಕರೇ ಬಹು ಸಂಖ್ಯಾಕರಾಗಿದ್ದಾಗ್ಯೂ ಶಾಸಕ ಸಭೆಗಳು ಅಧಿಕಾರಯುಕ್ತವಾದ ಶಾಸಕ ಸಭೆಗಳಲ್ಲ; ಶಿಕ್ಷಣವನ್ನೊದಗಿಸತಕ್ಕ ಕ್ಷೇತ್ರಗಳು. ರಾಷ್ಟ್ರಭಾರದ ಅಂಶಗಳ ವಿಚಾರಣೆಯನ್ನೂ ವಿಮರ್ಶೆಯನ್ನೂ ಪ್ರತಿನಿಧಿಗಳು ಮಾಡುತ್ತಲಿದ್ದಾಗ ಅವರ ಸೂಚನೆಗಳ ಮಹಿಮೆಯು ಸರ್ಕಾರದಲ್ಲಿ ಪರೋಕ್ಷವಾಗಿ ಕಾಣಿಸಿಕೊಳ್ಳಬಹುದು. ದ್ವಿಮುಖ ಸರ್ಕಾರವೆಂಬುದು ಪ್ರಾರಂಭವಾಗಿ ರಾಷ್ಟ್ರವರ್ಧಕ ಶಾಖೆಗಳೆಂಬವು ಪ್ರತಿನಿಧಿ ಪ್ರಮುಖರಾದ ಮಂತ್ರಿಗಳ ಅಧೀನದಲ್ಲಿಯೇ ನಡೆಯತಕ್ಕವೆಂದು ತಿಳಿದಾಗ ರಾಷ್ಟ್ರದ ಅಭಿವೃದ್ಧಿಯು ನಾನಾ ಮುಖವಾಗಿ ಸಿದ್ಧಿಸುವುದೆಂಬ ಭರವಸೆಯೂ ಉತ್ಸಾಹವೂ ತೋರಿತ್ತು.

ಅನುಭವ

ಅನುಭವದಲ್ಲಿ ಮಂತ್ರಿಗಳು ಏನು ಕೆಲಸವನ್ನು ತೊಡಗಬಯಸಿದರೂ ಅದಕ್ಕೆ ತಕ್ಕ ಹಣದ ಅಧಿಕಾರವಿಲ್ಲದೆ ವ್ಯಸ್ತರಾಗಬೇಕಾಯಿತು. ರಿಸರ್ವ್ಡ ಶಾಖೆಗಳ ವೆಚ್ಚವು ಮುಗಿದ ತರುವಾಯವೇ ಇವರ ಶಾಖೆಗಳಿಗೆ ಹಣ ವೊದಗಬೇಕೆಂಬ ನಿಯಮವಿರುವುದರಿಂದ ಹಣವಿಲ್ಲದೆ ಕೆಲಸವನ್ನು ನಡೆಸಬೇಕಾಗಿ ಬಂತು. ಅಲ್ಲದೆ ಕೈಕೆಳಗಿನವರೆಂದೆನಿಸಿದ ಅಧಿಕಾರಿವರ್ಗದವರು ವಾಸ್ತವವಾಗಿ ತಮ್ಮ ಅಧೀನರಾದವರೂ ಅಲ್ಲ. ಈ ಕಾರಣದಿಂದ ಕೆಲವು ಸಂದರ್ಭಗಳಲ್ಲಿ ಮಂತ್ರಿಗಳಾಗುವುದು ವ್ಯರ್ಥವೆಂದು ಮುಷ್ಕರವೇ ಪ್ರಾರಂಭವಾಯಿತು; ಆಗ ಭೋಗಪತಿಯು ಶಾಸಕ ಸಭೆಯೇ ಇಲ್ಲದೆ ರಾಷ್ಟ್ರಭಾರವನ್ನು ನಿರ್ವಹಿಸಿದನು.

**ಭೋಗಪತಿಗೆ ಎಲ್ಲೆ**

ಗವರ್ನರುಗಳ ಅಧಿಕಾರವು ವಿಪುಲವೆಂದು ತೋರುವುದರಿಂದ ಅವರು ಸರ್ವಸ್ವತಂತ್ರರೆಂದು ಭಾವಿಸಬಾರದು. ಶಾಸಕ ಸಭೆಗಳ ಅಧಿಕಾರವು ಅವರ ಅಧಿಕಾರಕ್ಕೆ ಅಡ್ಡಿಯೇನೋ ಅಲ್ಲ; ಆದರೂ ಗವರ್ನರುಗಳ ಅಧಿಕಾರಕ್ಕೆ ಉಚಿತವೂ ಬಲವೂ ಆದ ಎಲ್ಲೆಯು ವಿಧಿತವಾಗಿದೆ. ಗವರ್ನರುಗಳಂತೆಯೇ ವೈಸ್‌ರಾಯಿಯೂ ಕೂಡ ಭಾರತೀಯ ಕಾರ್ಯದರ್ಶಿಯಿಂದ ನಿಯಮಿತನಾದರೂ ಎಲ್ಲ ಗವರ್ನರುಗಳಿಗೂ ಒಡೆಯನಂತೆ ವೈಸ್ರಾಯಿ ಇರುವನು. ಅಖಿಲ ಭಾರತ ವಿಷಯಗಳೆಂಬುವು ಗವರ್ನರುಗಳ ಅಧಿಕಾರಕ್ಕೆ ಹೊರಗಿರುವುವೇ ಅಲ್ಲದೆ ಪ್ರಾದೇಶಿಕ ರಾಷ್ಟ್ರನಿರ್ವಾಹದಲ್ಲಿಯೂ ಗೊತ್ತಾದ ಕೆಲವು ವಿಷಯಗಳಲ್ಲಿ ಗವರ್ನರುಗಳು ವೈಸ್ರಾಯಿಯ ಅನುಮತಿಯನ್ನು ಮುಂದಾಗಿ ಪಡೆಯದೆ ಕಾರ್ಯವನ್ನು ನಡೆಸಲಾರರು. ವೈಸ್ರಾಯಿಯು ತನ್ನ ಶಾಸನ ನಿರ್ಮಾಣಾಧಿಕಾರವನ್ನು ಪ್ರಯೋಗಿಸಿ ಪ್ರದೇಶಗಳಲ್ಲಿಯೂ ಜಾರಿಯಾಗತಕ್ಕ ನಿಬಂಧನೆಗಳನ್ನು ರಚಿಸಬಲ್ಲನು. ಮತ್ತು ಗವರ್ನರುಗಳು ಹೊರುವ ಕಾರ್ಯಕ್ಷೇತ್ರದಲ್ಲಿ ತಾನಾಗಿ ಪ್ರವೇಶಮಾಡಿ ತನ್ನ ನಿಶ್ಚಯದಂತೆಯೇ ನಡೆಸತಕ್ಕದ್ದೆಂದು ನಿರ್ಬಂಧಪಡಿಸಬಲ್ಲನು.

ಪ್ರದೇಶಗಳ ಹುಟ್ಟುವಳಿಯು ಸಾಧಾರಣವಾಗಿ ನೆಲಗಂದಾಯ, ಅಬ್ಕಾರಿ, ಸ್ಟಾಂಪು, ಕಾಡು, ರೆಜಿಸ್ಟ್ರೇಷನ್ ಮುಂತಾದ ವಿಧಾನಗಳಿಂದ

ಸಿದ್ಧವಾಗುತ್ತದೆ. ಸೆಂಟ್ರಲ್ ಎಂದು ನಿಷ್ಕರ್ಷೆಯಾದ ತೆರಿಗೆಗಳಲ್ಲದ ವಿಧಾನಗಳೆಲ್ಲವೂ ಪ್ರದೇಶಗಳಿಗೆ ಸೇರತಕ್ಕವೇ.

ಆಯ ವ್ಯಯ

ಪ್ರದೇಶಗಳಲ್ಲಿ ರಾಷ್ಟ್ರೋತ್ಪತ್ತಿಯು ಎಷ್ಟೆಷ್ಟೆಂದು ಈ ಕೆಳಗೆ ಕಾಣಬಹುದು:—

| | | | | |
|---|---|---|---|---|
| ಬೊಂಬಾಯಿ | .. | .. | 2,532 | ಲಕ್ಷ ರೂಪಾಯಿಗಳು |
| ಮದರಾಸು | .. | .. | 2,122 | ,, |
| ಬಂಗಾಳ | .. | .. | 1,245 | ,, |
| ಸಂಯುಕ್ತ ಪ್ರಾಂತ | .. | .. | 1,528 | ,, |
| ಪಂಜಾಬ್ | .. | .. | 1,579 | ,, |
| ಬರ್ಮಾ | .. | .. | 1,250 | ,, |
| ಬಿಹಾರ್ ಮತ್ತು ಒರಿಸ್ಸಾ | | .. | 778 | ,, |
| ಮಧ್ಯಪ್ರಾಂತ | .. | .. | 902 | ,, |
| ಅಸ್ಸಾಂ | .. | .. | 327 | ,, |
| | ಒಟ್ಟು | .. | 12,263 | ಲಕ್ಷಗಳು (1927—28) |

ಕಿರಿಯ ಪ್ರದೇಶಗಳು

ಮೈನರ್ ಪ್ರಾವಿನ್ಸ್ ಅಥವಾ ಕಿರಿಯ ಪ್ರದೇಶಗಳೆಂಬವು ಮುಖ್ಯವಾಗಿ ಏಳು. ಅವುಗಳಲ್ಲಿ ಛೀಫ್ ಕಮಿಷನರ್ ಎಂಬುವವರೇ ಭೋಗಪತಿಗಳ ಸ್ಥಾನದಲ್ಲಿದ್ದು ವೈಸ್‌ರಾಯಿಯ ಆಜ್ಞಾಧಾರಕರಾಗಿ ಕಾರ್ಯವನ್ನು ನಡೆಸುತ್ತಾರೆ. ಅವರಿಗೆ ತಕ್ಕಂತೆ ಸಹಾಯಕ ಸಭೆಗಳೂ ಇರುತ್ತವೆ. ವಾಯುವ್ಯ ಸರಹದ್ದಿನ ಪ್ರಾಂತವೆಂಬುದು 1931ರ ವರೆಗೂ ಕಿರಿಯದಾಗಿಯೇ ಇದ್ದಿತು; ಈಗ ಅದು ಹಿರಿಯ ವರ್ಗದಲ್ಲಿ ಸೇರಿತು. ಕೊಡಗು ಎಂಬ ಪ್ರಾಂತದಲ್ಲಿ ಶಾಸಕ ಸಭೆಯು ಆರಂಭವಾಗಿದೆ. ಉಳಿದ ಕಿರಿಯ ಪ್ರದೇಶಗಳಲ್ಲಿ ಶಾಸಕ ಸಭೆಗಳಿರುವುದಿಲ್ಲ; ಕಾರ್ಯಕಾರೀ ಸಭೆಯೇ ಶಾಸನ ಕರ್ತವ್ಯವನ್ನೂ ನಿರ್ವಹಿಸುತ್ತದೆ.

ಸಿಂಧು ಪ್ರಾಂತವು ಪ್ರತ್ಯೇಕವಾಗಿರಬೇಕೆಂದೂ ಬರ್ಮಾ ಪ್ರದೇಶವು ಭರತವರ್ಷದ ಹೊರಗೇ ಇರತಕ್ಕುದೆಂದೂ ಸನ್ನಾಹಗಳು ನಡೆಯುತ್ತಲಿವೆ.

## ನ್ಯಾಯಾಂಗ

ಅಖಿಲ ಭಾರತ ಸರ್ಕಾರದ ಅಂಗವಾಗಿ ನ್ಯಾಯಸ್ಥಾನವೆಂಬುದಿಲ್ಲ. ಪ್ರದೇಶಗಳಲ್ಲಿರುವ ನ್ಯಾಯಸ್ಥಾನಗಳೇ ನ್ಯಾಯಾಂಗವೆನಿಸತಕ್ಕವು. ದೊಡ್ಡ ದೊಡ್ಡ ಪ್ರದೇಶಗಳಲ್ಲಿ ಹೈಕೋರ್ಟುಗಳೆಂಬ ಶ್ರೇಷ್ಠ ನ್ಯಾಯಸ್ಥಾನಗಳುಂಟು. ಬೊಂಬಾಯಿ, ಮದರಾಸು, ಕಲ್ಕತ್ತ, ಅಲಹಾಬಾದ್, ಲಖನೌ, ಲಾಹೋರ್, ರಂಗೂನ್, ಪಾಟ್ನ ನಗರಗಳಲ್ಲಿರುವ ಹೈಕೋರ್ಟುಗಳು ನ್ಯಾಯ ತೀರ್ಮಾನದಲ್ಲಿ ಸರ್ವಜ್ಯೇಷ್ಠಗಳೆನಿಸಿವೆ. ಅವುಗಳಲ್ಲಿ ಅಧ್ಯಕ್ಷನಾದಾತನು ಛೀಫ್ ಜಸ್ಟಿಸ್ ಎಂಬಾತನು; ಇತರರು ಹೈಕೋರ್ಟು ಜಡ್ಜಿಗಳು. ಹೈಕೋರ್ಟುಗಳಲ್ಲಿ ಅಧ್ಯಕ್ಷನಲ್ಲದೆ ಇಪ್ಪತ್ತರವರೆಗೂ ಇತರ ನ್ಯಾಯಾಧೀಶರಿರಬಹುದು. ಸಿವಿಲ್ ಮತ್ತು ಕ್ರಿಮಿನಲ್ ಮೊಖದ್ದಮೆಗಳೆರಡರಲ್ಲಿಯೂ ಅವರಿಗೇ ಅಧಿಕಾರಪಟ್ಟವಿರುವುದು. ರೆವಿನ್ಯೂ ಮೊಖದ್ದಮೆಗಳು ಮಾತ್ರ ರೆವಿನ್ಯೂ ಅಧಿಕಾರಿಗಳ ವಿಚಾರಣೆಗೇ ಸೇರಿರುತ್ತವೆ.

ಹೈಕೋರ್ಟುಗಳು

ಹೈಕೋರ್ಟುಗಳ ಕೆಳಗೆ ಜಿಲ್ಲಾ ಮತ್ತು ಸೆಷನ್ಸ್ ಜಡ್ಜಿಗಳೆಂಬುವವರು ಪ್ರದೇಶಕ್ಕೆ ತಕ್ಕಂತೆ ಇರುತ್ತಾರೆ. ಉದಾಹರಣೆಗೆ, ಮದರಾಸ್ ಪ್ರದೇಶದಲ್ಲಿ ಜಿಲ್ಲಾ ಮತ್ತು ಸೆಷನ್ಸ್ ಜಡ್ಜಿಗಳು 25 ಮಂದಿ ಇರುವುದಲ್ಲದೆ ಕೆಲಸವು ಹೆಚ್ಚಾಗಿರುವೆಡೆಗಳಲ್ಲಿ ಅಡಿಷನಲ್ ಮತ್ತು ಅಸಿಸ್ಟೆಂಟ್ ಸೆಷನ್ಸ್ ಜಡ್ಜಿಗಳೆಂಬುವವರೂ ಇರುತ್ತಾರೆ. ಸೆಷನ್ಸ್ ಜಡ್ಜಿಗಳೆಂದರೆ ಬೇರೆ ಬೇರೆಡೆಗಳಲ್ಲಿ ಸಂಚಾರಮಾಡುತ್ತ ನ್ಯಾಯಸ್ಥಾನವನ್ನು ನಡೆಸತಕ್ಕವರು. ಇವರ ತರುವಾಯ ಸಾಹಸ ವಿಭಾಗಕ್ಕೆ ಮಾತ್ರವೇ ಜಿಲ್ಲಾ ಮ್ಯಾಜಿಸ್ಟ್ರೇಟು, ಸಬಾರ್ಡಿನೇಟ್ ಮ್ಯಾಜಿಸ್ಟ್ರೇಟು ಮತ್ತು ಆನರರಿ (ಗೌರವಕ್ಕೆ ಕೆಲಸ ಮಾಡುವ) ಮ್ಯಾಜಿಸ್ಟ್ರೇಟುಗಳು ಇರುತ್ತಾರೆ. ಸಿವಿಲ್ ವಿಭಾಗಕ್ಕೆ

ನ್ಯಾಯಾಧಿಕಾರಿಗಳು

ಜಿಲ್ಲಾ ಜಡ್ಜಿಗಳು, ಸಬಾರ್ಡಿನೇಟ್ ಜಡ್ಜಿಗಳು, ಮುನಸೀಫರು ಇರುತ್ತಾರೆ. ಮದರಾಸಾ, ಬೊಂಬಾಯಿ, ಕಲ್ಕತ್ತಗಳಂತಹ ದೊಡ್ಡ ನಗರಗಳಲ್ಲಿ ಚಿಲ್ಲರೆ ಫಿರ್ಯಾದುಗಳಿಗಾಗಿಯೇ ಇರುವ ನ್ಯಾಯಸ್ಥಾನಗಳೂ ಇರುತ್ತವೆ. ಈ ಸ್ಥಾನಗಳ ವರ್ಗಗಳನ್ನು ಈ ರೀತಿಯಲ್ಲಿ ಭಾವಿಸಿಕೊಳ್ಳಬಹುದು :—




ನ್ಯಾಯವಿಧಿ

ಕ್ರಿಮಿನಲ್ ವಿಧಿಯು ಸರ್ವತ್ರ ಏಕರೀತಿಯಾಗಿಯೇ ಇದ್ದು ಪೀನಲ್ ಕೋಡ್ ಮತ್ತು ಕ್ರಿಮಿನಲ್ ಪ್ರೊಸೀಜರ್ ಎಂಬ ಗ್ರಂಥಗಳಿಗನುಸಾರವಾಗಿರುತ್ತದೆ. ಸಿವಿಲ್ ವಿಭಾಗದಲ್ಲಿ ನ್ಯಾಯವು ಏಕರೀತಿಯಾಗಿಯೇ ಇರುತ್ತದೆ; ಕೆಲವು ಆಚಾರಗಳಲ್ಲಿ ಬೇರೆ ಬೇರೆ ಮತಸ್ಥರಲ್ಲಿ ಬೇರೆ ಬೇರೆಯಾಗಿದ್ದು ಅವರವರ ನ್ಯಾಯಶಾಸ್ತ್ರಗಳನ್ನನುಸರಿಸಿರುತ್ತದೆ. ಕ್ರಿಮಿನಲ್ ನ್ಯಾಯತೀರ್ಮಾನ ವಿಚಾರದಲ್ಲಿ ಎರಡು ಅಂಶಗಳು ಆಕ್ಷೇಪಕ್ಕೊಳಗಾಗಿವೆ: ಬಿಳಿಯರಿಗೆ ಸಲ್ಲುವ ವಿಶೇಷ ಮರ್ಯಾದೆ ಮತ್ತು ರಾಷ್ಟ್ರದ್ರೋಹವನ್ನು ಕುರಿತ ನಿಬಂಧನೆಗಳು. ಕ್ರಿಮಿನಲ್ ವ್ಯವಹಾರದಲ್ಲಿ ಬಿಳಿಯ ಜಾತಿಯ ಅಪಾದಿತನಾದರೆ ತನ್ನ ಜಾತಿಯವರು ಕೆಲವರು ಜೂರಿ ಅಥವಾ ಪಂಚಾಯತರಲ್ಲಿ ಇರಬೇಕೆಂದು ಒತ್ತಾಯ ಪಡಿಸಬಹುದು.

ರಾಜಪ್ರತಿನಿಧಿಯೆನಿಸಿದ ಗವರ್ನರಿಗೆ ಕನಿಕರ ತೋರುವ ಅಧಿಕಾರವುಂಟು. ದಂಡನೆಗೊಳಗಾದ ಅಪರಾಧಿಯು ಶಿಕ್ಷೆಯನ್ನು ತಗ್ಗಿಸಬೇಕೆಂದು ಆತನನ್ನು ಬೇಡಿಕೊಳ್ಳಬಹುದು. ಆತನಿಗೆ ಕನಿಕರ ತೋರುವುದು

ಉಚಿತವೆಂದು ಕಂಡಲ್ಲಿ ವಿಧಿತವಾದ ಶಿಕ್ಷೆಯನ್ನು ಸ್ವಲ್ಪ ಮಾತ್ರ ಕಡಿಮೆ ಮಾಡಬಲ್ಲನು.

ಹೈಕೋರ್ಟುಗಳಿಗಿಂತ ಶ್ರೇಷ್ಠವಾದ ಕೋರ್ಟುಗಳು ಯಾವುವೂ ದೇಶದಲ್ಲಿ ಇಲ್ಲ. ಹೈಕೋರ್ಟುಗಳ ತೀರ್ಪಿನಿಂದ ಅತೃಪ್ತಿಪಟ್ಟವರು ತಮ್ಮ ವಿಚಾರವನ್ನು ಲಂಡನ್ನಿನಲ್ಲಿರುವ ಪ್ರೀವಿ ಕೌನ್ಸಿಲ್ಲಿನ ಜುಡಿಷಿಯಲ್ ಕಮಿಟಿಯೆಂಬ ನ್ಯಾಯಸ್ಥಾನಕ್ಕೆ ಒಯ್ಯಬಹುದು. ಅಲ್ಲಿ ನಡೆಯುವುದೇ ಕಡೆಯ ತೀರ್ಪು.

ಕಾರ್ಯಾಂಗದ ಮೇಲ್ಪಟ್ಟ ಅಧಿಕಾರ

ಹೈಕೋರ್ಟುಗಳ ನ್ಯಾಯಾಧೀಶರನ್ನು ಭಾರತೀಯ ಕಾರ್ಯದರ್ಶಿಯು ನೇಮಕಮಾಡುತ್ತಾನೆ. ಇತರ ನ್ಯಾಯಾಧಿಕಾರಿಗಳನ್ನು ಸಭಾಯುಕ್ತ ಭೋಗಪತಿಯು ನಿಯಮಿಸುತ್ತಾನೆ. ನಿಯಮಿತರಾದವರನ್ನು ದಂಡಿಸುವ ಅಥವಾ ಕೆಲಸದಿಂದ ತಪ್ಪಿಸುವ ಅಧಿಕಾರವು ಕಾರ್ಯದರ್ಶಿಗೂ ಗವರ್ನರುಗಳಿಗೂ ಇದ್ದೇ ಇರುತ್ತದೆ. ಇಂಗ್ಲೆಂಡಿನಲ್ಲಿರುವ ನಿಯಮವು ಇಲ್ಲಿ ರೂಪಗೊಂಡಿಲ್ಲ. ಆದ್ದರಿಂದ ಇತರ ದೇಶಗಳಲ್ಲಿದ್ದಂತೆ ಇಲ್ಲಿಯ ನ್ಯಾಯಸ್ಥಾನಗಳು ಸ್ವತಂತ್ರವಾಗಿವೆಯೆಂದು ಹೇಳಲಾಗುವುದಿಲ್ಲ.

## ದೇಶೀಯ ಸಂಸ್ಥಾನಗಳು

ಕಾರತಮ್ಯ

ಭಾರತೀಯ ಕಾರ್ಯದರ್ಶಿಗೂ ವೈಸ್‌ರಾಯಿಗೂ ಅಧೀನವಾದ ದೇಶೀಯ ವಿಭಾಗದಲ್ಲಿ ಸುಮಾರು 600 ಸಂಸ್ಥಾನಗಳಿವೆ. ಈ ಸಂಸ್ಥಾನಗಳ ಅಧಿಪತಿಗಳೆಲ್ಲರೂ ಭಾರತೀಯರು. ಈ ಸಂಸ್ಥಾನಗಳು ಸಮನಾಗಿಲ್ಲವೇ ಇಲ್ಲ; ನೈಜಾಮ ಸಂಸ್ಥಾನದ ವಾರ್ಷಿಕೋತ್ಪತ್ತಿ 7 ಕೋಟಿ ರೂಪಾಯಿಗಳನ್ನು ಮೀರಿರುವುದು; ಇತರ ಯಾವ ಸಂಸ್ಥಾನಕ್ಕೂ ಅಷ್ಟು ರಾಜಸ್ವವಿಲ್ಲ. ಇನ್ನೂ ಅನೇಕ ಸಂಸ್ಥಾನಗಳಲ್ಲಿ ಒಂದು ಕೋಟಿ ಉತ್ಪತ್ತಿಯೂ ಇಲ್ಲ; ಸಂಸ್ಥಾನಗಳೆಂದು ಹೆಸರಾದ ಕೆಲವುಗಳಲ್ಲಿ ವರಮಾನವು ಸಾವಿರ ಗಟ್ಟಲೆಯಾಗಿಯೂ ಇರುವುದಿಲ್ಲ. ಮಹಾರಾಜ ಅಥವಾ ನವಾಬ್ ಮುಂತಾದ ಬಿರುದುಗಳನ್ನು ಪಡೆದವರೆಲ್ಲರೂ ಸಂಸ್ಥಾನಾಧಿಪತಿಗಳೂ

F

ಅಲ್ಲ; ಕೆಲವರಿಗೆ ಕಾರಣಾಂತರದಿಂದ ಬಿರುದು ಮಾತ್ರ ಉಂಟು. ಸಂಸ್ಥಾನಗಳಲ್ಲಿ ಪ್ರತಿಯೊಂದಕ್ಕೂ ಸ್ವಾರಸ್ಯ ತುಂಬಿದ ಇತಿಹಾಸವುಂಟು. ಸಂಸ್ಥಾನಾಧಿಪತಿಗಳೆಲ್ಲರೂ ಪೂರ್ವ ರಾಜವಂಶೀಯರು; ಅವರೆಲ್ಲರೂ ಬ್ರಿಟಿಷರೊಂದಿಗೆ ಒಪ್ಪಂದಗಳನ್ನೂ ಕರಾರುಗಳನ್ನೂ ನಡೆಸಿ ಅವುಗಳನ್ನನುಸರಿಸಿಕೊಂಡೇ ವರ್ತಿಸುತ್ತ ಬಂದವರು.

**ಬ್ರಿಟಿಷ್ ಅಧಿಕಾರಿಗಳು**

ಸಂಸ್ಥಾನಗಳಲ್ಲಿ ದೊಡ್ಡವಾಗಿ ಕಾಣತಕ್ಕವು ಹೈದರಾಬಾದ್, ಮೈಸೂರು, ಕಾಶ್ಮೀರ ಮತ್ತು ಜಮ್ಮು, ಬರೋಡ, ತಿರುವಾಂಕೋಡು, ಸಿಕ್ಕಿಂ, ಭೂತಾನ ಮುಂತಾದವುಗಳು. ನೇಪಾಲದೇಶವು ಕೆಲ ವಿಷಯಗಳಲ್ಲಿ ಬ್ರಿಟಿಷರ ಆಶ್ರಯವನ್ನೇ ಅವಲಂಬಿಸಿದ್ದಾಗ್ಗೂ ಆಶ್ರಿತ ವರ್ಗದಲ್ಲಿ ಸೇರಿದುದಲ್ಲ; ಸ್ವತಂತ್ರ ರಾಷ್ಟ್ರವೆಂದು ಗಣ್ಯವಾಗಿ ಮಿತ್ರವರ್ಗದಲ್ಲಿ ಸೇರಿದೆ. ಆಶ್ರಿತ ವರ್ಗದಲ್ಲಿ ಸೇರಿದ ಇತರ ಸಂಸ್ಥಾನಗಳು ನೂರಾರಿವೆ. ದೊಡ್ಡ ದೊಡ್ಡ ಸಂಸ್ಥಾನಗಳಲ್ಲಿ ರೆಸಿಡೆಂಟ್ ಎಂಬ ಬ್ರಿಟಿಷ್ ಅಧಿಕಾರಿಯಿದ್ದು ಕರಾರಿನಂತೆ ನಡೆದುಕೊಳ್ಳಲು ಸಹಾಯಕನಾಗಿರುತ್ತಾನೆ. ಚಿಕ್ಕ ಚಿಕ್ಕ ಸಂಸ್ಥಾನಗಳು ವಿಶೇಷವಾಗಿರುವ ಕ್ಷೇತ್ರಗಳಲ್ಲಿ ಅನೇಕ ಸಂಸ್ಥಾನಗಳಿಗಾಗಿ ಏಜಂಟ್ ಎಂಬ ಬ್ರಿಟಿಷ್ ಅಧಿಕಾರಿಯಿರುತ್ತಾನೆ; ಉದಾ: ಬಲೂಚಿಸ್ಥಾನದ ಏಜನ್ಸಿ, ರಾಜಪುತ್ರಸ್ಥಾನದ ಏಜನ್ಸಿ, ಮಧ್ಯ ಇಂಡಿಯ ಏಜನ್ಸಿ, ಪಶ್ಚಿಮ ಇಂಡಿಯ ಏಜನ್ಸಿ, ಇತ್ಯಾದಿ. ಉಳಿದ ಸಂಸ್ಥಾನಗಳು ಯಾವ ಬ್ರಿಟಿಷ್ ಪ್ರದೇಶದಲ್ಲಿರುತ್ತವೆಯೋ ಆ ಪ್ರದೇಶದ ಗವರ್ನರಿನ ಮೇಲ್ವಿಚಾರಣೆಯಲ್ಲಿರುತ್ತವೆ.

**ಮೈಸೂರು**

ಕನ್ನಡ ನಾಡಿಗೆ ಭೂಷಣಪ್ರಾಯವಾಗಿರುವ ಮೈಸೂರು ಸಂಸ್ಥಾನವು ಸಂಸ್ಥಾನಗಳಲ್ಲೆಲ್ಲ ಮಾದರಿಯೆನಿಸಿದೆ. ಇತರ ಸಂಸ್ಥಾನಗಳಿಗೂ ಮೈಸೂರಿಗೂ ಎಷ್ಟೋ ಭೇದಗಳುಂಟು. ರಾಷ್ಟ್ರಪದ್ಧತಿಗಳನ್ನೇ ನೋಡಬಿಚ್ಛಿಸುವ ನಾವು ಮೈಸೂರಿನ ವ್ಯವಸ್ಥೆಯನ್ನೇ ವಿವರವಾಗಿ ಕಾಣಲುಳ್ಳವರು. ಸಂಸ್ಥಾನಗಳ ಸ್ಥಿತಿಗತಿಗಳು ಹೇಗಿರುತ್ತವೆಂಬುದನ್ನು ಆ ವಿವರದಿಂದಲೇ ಭಾವಿಸಿಕೊಳ್ಳಬಹುದು.

ಸ್ಥೂಲ ವಿವರ

29,483 ಚದರ ಮೈಲಿಗಳಷ್ಟು ವಿಸ್ತಾರವಾಗಿ 65,57,302 ಜನಸಂಖ್ಯೆಯುಳ್ಳ ಮೈಸೂರು ಸಂಸ್ಥಾನವು ವಿಸ್ತೀರ್ಣ ರೀತಿಯಲ್ಲಿ ಸಂಸ್ಥಾನಗಳಲ್ಲಿ ಮೂರನೆಯದಾಗಿಯೂ, ಜನಸಂಖ್ಯೆಯ ರೀತಿಯಲ್ಲಿ ಎರಡನೆಯದಾಗಿಯೂ ಇದೆ. ಮಲೆನಾಡು, ಬಯಲುನಾಡುಗಳೆಂಬ ವಿಭಾಗಗಳು ಪ್ರಕೃತಿಸಿದ್ಧವಾಗಿಯೇ ಇದ್ದು, ಆಡಳಿತಕ್ಕಾಗಿ ಸಂಸ್ಥಾನವು 8 ಜಿಲ್ಲೆಗಳಾಗಿಯೂ 60 ತಾಲ್ಲೂಕುಗಳಾಗಿಯೂ ವಿಭಾಗವಾಗಿದೆ. ಆಳುವ ಪ್ರಭುಗಳಾದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹಾದುರರವರ ರಾಜಧಾನಿ ಮೈಸೂರು; ಆಡಳಿತಕ್ಕೆ ಕೇಂದ್ರ ಬೆಂಗಳೂರು. ಆಡಳಿತಕ್ಕೆ ಶ್ರೀಮನ್ಮಹಾರಾಜರ ಆಡಳಿತವೆಂದೇ ರೂಢಿಯಾದ ಹೆಸರು.

ಚರಿತ್ರೆ

ಚರಿತ್ರೆಯಲ್ಲಿ ಮೈಸೂರು ಸಂಸ್ಥಾನವು ವಿಶೇಷವಾದುದು. 1799ರಲ್ಲಿ ಟಿಪ್ಪು ಸುಲ್ತಾನನು ಮಡಿದಮೇಲೆ ಜಯಶಾಲಿಗಳಾದ ಬ್ರಿಟಿಷರು ಸಂಸ್ಥಾನದ ಮೇರೆಗಳನ್ನು ಗೊತ್ತುಮಾಡಿ ಹಿಂದೆ ಆಳುತ್ತಲಿದ್ದ ಒಡೆಯರ ವಂಶವನ್ನೇ ಪ್ರಭುತ್ವದಲ್ಲಿ ಸ್ಥಾಪಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರು ಪಟ್ಟಭದ್ರರಾಗಿ ಮೂವತ್ತು ವರ್ಷಗಳ ಕಾಲ ರಾಜ್ಯಭಾರವನ್ನು ನಡೆಸಿದ ವೇಳೆಯಲ್ಲಿ, ಅಂದರೆ 1831ರಲ್ಲಿ, ಕಾರಣಾಂತರಗಳಿಂದ ಬ್ರಿಟಿಷರು ಮಹಾರಾಜರ ಅಧಿಕಾರವನ್ನು ನಿಲ್ಲಿಸಿ ತಾವೇ ಆಡಳಿತವನ್ನು ಹೊತ್ತರು. 1831ರಿಂದ 1881ರ ವರೆಗೆ ಬ್ರಿಟಿಷರ ಆಳ್ವಿಕೆಯೇ 50 ವರ್ಷಕಾಲ ನಡೆಯಿತು. 1881ರಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ರಾಜ್ಯವನ್ನು ಪುನಃ ಒಪ್ಪಿಸಿದರು. 1894ರಲ್ಲಿ ಚಾಮರಾಜೇಂದ್ರ ಒಡೆಯರು ಕಾಲಾಧೀನರಾಗಲು ಅವರ ಪುತ್ರರಲ್ಲಿ ಜ್ಯೇಷ್ಠರೂ ಈಗಿನ ಪ್ರಭುಗಳೂ ಆದ ಶ್ರೀಮನ್ಮಹಾರಾಜರವರಿಗೆ ರಾಜ್ಯ ಲಭಿಸಿತು. 1902ರಲ್ಲಿ ಪ್ರಾಪ್ತವಯಸ್ಕರಾಗಲು ಶ್ರೀಮನ್ಮಹಾರಾಜರಿಗೆ ರಾಷ್ಟ್ರಾಧಿಕಾರವೂ ಒದಗಿತು. ಈ ಸಂಗತಿಗಳಲ್ಲಿ 50 ವರ್ಷಕಾಲ ಬ್ರಿಟಿಷರ ಆಳ್ವಿಕೆಯು ಪ್ರತ್ಯಕ್ಷವಾಗಿ ನಡೆದ ಅಂಶವನ್ನು ಜ್ಞಾಪಕದಲ್ಲಿಟ್ಟುಕೊಂಡಿರಬೇಕು. ಇತರ ಸಂಸ್ಥಾನಗಳಿಗೂ ಮೈಸೂರಿಗೂ ಆ ಅಂಶದಲ್ಲಿ ಭೇದವುಂಟು.

ಮೈಸೂರಿನಲ್ಲಿ ಸರ್ಕಾರದ ಪ್ರತಿ ಉದ್ಯೋಗಸ್ಥನೂ ಶ್ರೀಮನ್ಮಹಾರಾಜರ ಹೆಸರಿನಲ್ಲಿ ಕೆಲಸವನ್ನು ನಡೆಸುತ್ತ ಶ್ರೀಮನ್ಮಹಾರಾಜರ ಆಜ್ಞಾಧಾರಕನಾಗಿರುತ್ತಾನೆ.

ಶ್ರೀಮನ್ಮಹಾರಾಜರ ಶ್ರೀಸ್ವಾಧಿಕಾರ

ಶ್ರೀಮನ್ಮಹಾರಾಜರೇ ಎಲ್ಲ ಅಧಿಕಾರಸ್ಥರನ್ನೂ ನಿಯೋಗಿಸತಕ್ಕವರು, ಪ್ರೋತ್ಸಾಹಿಸತಕ್ಕವರು ಮತ್ತು ಶಿಕ್ಷಿಸತಕ್ಕವರು. ಶ್ರೀಮನ್ಮಹಾರಾಜರು ಕೊಡಿಸಿದಷ್ಟು ಅಧಿಕಾರವೇ ಅಧಿಕಾರಸ್ಥರಿಗಿರುವುದು; ಆದ್ದರಿಂದ ಅಧಿಕಾರದ ಮೂಲವು ಶ್ರೀಮನ್ಮಹಾರಾಜರಲ್ಲಿಯೇ ಇರುತ್ತದೆ. ಅಧಿಕಾರಸ್ಥರೆಲ್ಲರೂ ಶ್ರೀಮನ್ಮಹಾರಾಜರ ಆಜ್ಞಾಧಾರಕರಾಗಿರುವುದರಿಂದ ಮಹಾಸ್ವಾಮಿಯವರೇ ಕಾರ್ಯಾಂಗಕ್ಕೆ ಅಧ್ಯಕ್ಷರು. ಅವರೇ ನ್ಯಾಯಮೂರ್ತಿಗಳು; ಏಕಂದರೆ ಶ್ರೀಮನ್ಮಹಾರಾಜರಿಂದ ನಿಯುಕ್ತರಾದ ನ್ಯಾಯಾಧಿಕಾರಿಗಳು ಶ್ರೀಮನ್ಮಹಾರಾಜರ ಪ್ರತಿನಿಧಿಗಳಂತೆಯೇ ಕಾರ್ಯನಿರತರಾಗಿರುತ್ತ ಶ್ರೀಮನ್ಮಹಾರಾಜರವರ ಅಪ್ಪಣೆಯನ್ನು ಶಿರಸಾವಹಿಸತಕ್ಕವರಾಗಿರುತ್ತಾರೆ. ಕ್ರಿಮಿನಲ್ ಮೊಕದ್ದಮೆಗಳಲ್ಲಿ ಕನಿಕರವನ್ನು ತೋರುವ ರಾಜಲಕ್ಷಣವು ಶ್ರೀಮನ್ಮಹಾರಾಜರಲ್ಲಿಯೇ ಶೋಭಿಸುತ್ತದೆ. ಶಾಸನ ರಚನೆಯಲ್ಲಿಯೂ ಕೂಡ ಶ್ರೀಮನ್ಮಹಾರಾಜರೇ ಶ್ರೇಷ್ಠವಾದ ಅಧಿಕಾರವುಳ್ಳವರು. ಮಹಾಸ್ವಾಮಿಯವರ ಅನುಮತಿಯಿಲ್ಲದೆ ಕಾನೂನಾಗಲಿ ನಿಬಂಧನೆಯಾಗಲಿ ಸಿದ್ಧವಾಗಲಾರದಲ್ಲದೆ, ಮಹಾರಾಜರೇ ಸ್ವಂತವಾಗಿ ನಿಬಂಧನೆಗಳನ್ನು ರಚಿಸಬಲ್ಲವರು. ಈ ರೀತಿಯಲ್ಲಿ ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗಗಳು ಮೂರಕ್ಕೂ ಒಡೆಯರೆನಿಸಿದ ಶ್ರೀಮನ್ಮಹಾರಾಜರು ಸರ್ವಾಧಿಕಾರಕ್ಕೂ ಮೂಲಸ್ಥಾನವಾಗಿಯೂ ಶಿಖರವಾಗಿಯೂ ಇರುತ್ತಾರೆ.

ಗೌರವ ಸ್ಥಾನ

ಇಷ್ಟೇ ಅಲ್ಲ; ಶ್ರೀಮನ್ಮಹಾರಾಜರೇ ಸಂಸ್ಥಾನದ ಎಲ್ಲ ಗೌರವಕ್ಕೂ ಮೂಲಸ್ಥಾನ. ಬಿರುದುಗಳೂ ಸನ್ನದುಗಳೂ ಮಹಾಸ್ವಾಮಿಯವರಿಂದಲೇ ದತ್ತವಾಗತಕ್ಕದ್ದು. ಮಹಾಸ್ವಾಮಿಯವರೇ ರಾಷ್ಟ್ರಮೂರ್ತಿ, ರಾಷ್ಟ್ರದ ವೈಭವವನ್ನು ತೋರುತ್ತ ರಾಷ್ಟ್ರಕ್ಕೆ ಭೂಷಣಪ್ರಾಯ

ಕಾದವರು; ಭವ್ಯವಾದ ಅರಮನೆಗಳಲ್ಲಿರುವುದಲ್ಲದೆ ಸಿಂಹಾಸನದಲ್ಲಿ ಕುಳಿತು ಆಸ್ಥಾನವನ್ನು ನಡೆಸಿ ಪ್ರಜೆಗಳನ್ನು ರಂಜಿಸುತ್ತಾರೆ. ಸರ್ಕಾರದ ಅಧಿಕಾರಸ್ಥರೆಲ್ಲರಿಗೂ ಒಡೆಯರಾಗಿ ಕಾರ್ಯಾಂಗಕ್ಕೆ ಅಧ್ಯಕ್ಷರಾಗಿದ್ದಾಗ್ಯೂ ಶ್ರೀಮನ್ಮಹಾರಾಜರು ಪ್ರಜಾರಾಶಿಗೂ ಸ್ವಾಮಿಗಳು; ಆದ್ದರಿಂದ ಕೇವಲ ಸರ್ಕಾರವೆಂಬುದಕ್ಕೆ ಮಾತ್ರವಲ್ಲದೆ ಒಟ್ಟು ರಾಷ್ಟ್ರಕ್ಕೇ ಅವರು ಸ್ವಾಮಿಗಳು. ಒಂದುಕಡೆ ಸರ್ಕಾರವನ್ನೂ, ಮತ್ತೊಂದು ಕಡೆ ಪ್ರಜೆಗಳನ್ನೂ ಆಳುವ ಮಹಾಸ್ವಾಮಿಯವರು ಬ್ರಿಟಿಷರೊಂದಿಗೆ ನಡೆದಿರುವ ಕರಾರಿಗೆ ಅನುಸಾರವಾಗಿ ರಾಜ್ಯಭಾರವನ್ನು ನಡೆಸುತ್ತಾರೆ. 1913ನೆಯ ಇಸವಿಯಲ್ಲಿ ನಡೆದ ಕರಾರೇ ರೂಢಿಯಲ್ಲಿರುವುದು; ಎರಡು ಅಂಶಗಳಲ್ಲಿ ಮಾತ್ರ ಈಚೆಗೆ ಬದಲಾವಣೆಗಳು ನಡೆದಿವೆ.

**ಕರಾರು**

ಕರಾರಿನ ಅಂಶಗಳು ಬಲು ಮುಖ್ಯವಾದುವು. ಮೈಸೂರಿನ ಕರಾರನ್ನೇ ದೇಶೀಯ ಸಂಸ್ಥಾನಗಳೊಡನೆ ಬ್ರಿಟಿಷರು ನಡೆಸಿರುವ ಕರಾರುಗಳ ಲಕ್ಷಣಗಳನ್ನು ಬಹುಮಟ್ಟಿಗೆ ಸೂಚಿಸತಕ್ಕ ಕರಾರೆಂಬುದಾಗಿ ಭಾವಿಸಬಹುದು. ಕರಾರಿನ ಅಂಶಗಳನ್ನು ನಾವು ಈ ರೀತಿಯಲ್ಲಿ ಜ್ಞಾಪಕದಲ್ಲಿಡಬಹುದು :—

1. **ಪಟ್ಟ.**—ಒಡೆಯರ ವಂಶಸ್ಥರು ಯಾರಾದರಾಗಲಿ ಪಟ್ಟಕ್ಕೆ ಬಾಧ್ಯರಾಗಿದ್ದು ಪಟ್ಟವನ್ನು ಪಡೆಯುವ ಮೊದಲು ವೈಸ್‌ರಾಯಿಯ ಒಪ್ಪಿಗೆಯನ್ನು ಪೂರ್ವಭಾವಿಯಾಗಿಯೇ ಪಡೆಯಬೇಕು.

2. **ಅನ್ಯರಾಷ್ಟ್ರ ಸಂಬಂಧ.**—(1) ವೈಸ್‌ರಾಯಿಯ ಅನುಮತಿಯಿಲ್ಲದೆ ಯಾವ ಇತರ ಸಂಸ್ಥಾನಗಳೊಡನೆಯಾಗಲಿ, ಇತರ ದೇಶ ವಿದೇಶಗಳೊಡನೆಯಾಗಲಿ ಸಂಬಂಧ ವ್ಯವಹಾರಗಳನ್ನು ನಡೆಸತಕ್ಕುದಲ್ಲ; (2) ಭಾರತೀಯರಲ್ಲದವರನ್ನು ಅಧಿಕಾರದಲ್ಲಿ ನಿಯೋಗಿಸಬೇಕಾದಲ್ಲಿ ವೈಸ್‌ರಾಯಿಯ ಅನುಮತಿಯನ್ನು ಪಡೆಯಲೇ ಬೇಕು.

3. **ಸೈನ್ಯ ಸಂಬಂಧ.**—

(1) ಸಂಸ್ಥಾನದಲ್ಲಿ ಬ್ರಿಟಿಷ್ ಸೈನ್ಯವೊಂದು ನಿಬಿರಸ್ಥವಾಗಿರತಕ್ಕುದು. ಅವರ ಪಡೆವೀಡಿಗೆ ಬೇಕಾದ ಭೂಕ್ಷೇತ್ರವನ್ನು

ಇಷ್ಟಪಟ್ಟಂತೆ ಉಚಿತವಾಗಿ ಬಿಟ್ಟುಕೊಡುವುದಲ್ಲದೆ ಆ ಸ್ಥಳದಲ್ಲಿ ಬೇಕಾದ ಅನುಕೂಲಗಳನ್ನೂ ಉಚಿತವಾಗಿಯೇ ಒದಗಿಸತಕ್ಕುದು. ಈ ಸೈನ್ಯದ ವೆಚ್ಚಕ್ಕಾಗಿ ಬ್ರಿಟಿಷ್ ಸರ್ಕಾರದವರಿಗೆ ವರ್ಷಕ್ಕೆ 24 ½ ಲಕ್ಷ ರೂಪಾಯಿಗಳು ಎರಡು ಕಂತುಗಳಾಗಿ ಸಲ್ಲತಕ್ಕದ್ದು.

(2) ವೈಸ್‌ರಾಯಿ ನಿರ್ಣಯಿಸಿದಂತೆ ಮಹಾರಾಜರು ತಾವೇ ಸ್ವಂತವಾದ ದಳವನ್ನು ಪೋಷಿಸಿಕೊಂಡಿರಬಹುದು; ಆ ದಳವು ಸಮಯದಲ್ಲಿ ಬ್ರಿಟಿಷರಿಗೆ ನೆರವಾಗತಕ್ಕುದು.

(3) ದುರ್ಗಗಳೂ ಕೋಟೆಗಳೂ ಮುಂತಾದುವು ಹೊಸದಾಗಿ ನಿರ್ಮಾಣವಾಗತಕ್ಕುದಲ್ಲ; ಹಳೆಯವಾಗಿದ್ದರೆ ಅವುಗಳ ಜೀರ್ಣೋದ್ಧಾರವು ನಡೆಯತಕ್ಕುದಲ್ಲ.

(4) ಯುದ್ಧದ ಸಾಮಗ್ರಿಯನ್ನು ಸಂಸ್ಥಾನದಲ್ಲಿ ಸಿದ್ಧಗೊಳಿಸಲೂ ಕೂಡದು, ಹೊರಗಿನಿಂದ ತರಿಸಿಕೊಳ್ಳಲೂ ಕೂಡದು.

4. **ಅಖಿಲ ಭಾರತ ಸಂಬಂಧ.**— (1) ಉಪ್ಪು, ಅಫೀಮು, ನಾಣ್ಯ, ಟಪಾಲು, ತಂತಿ ಎಂಬ ಶಾಖೆಗಳಲ್ಲಿ ಅಧಿಕಾರವೂ ಆಡಳಿತವೂ ಎಲ್ಲವೂ ಬ್ರಿಟಿಷರಿಗೇ ಸೇರಿರತಕ್ಕದ್ದು; (2) ಬ್ರಿಟಿಷರು ರೈಲ್ವೆ ದಾರಿಯನ್ನೋ ತಂತಿಯ ಮಾರ್ಗವನ್ನೋ ನಿರ್ಮಿಸಲಿಷ್ಟಪಟ್ಟ ಸಂದರ್ಭಗಳಲ್ಲಿ ಬೇಕಾಗಬಹುದಾದ ಭೂಮಿಯನ್ನೂ ಆ ಭೂಮಿಯ ಒಡೆತನವನ್ನೂ ಬ್ರಿಟಿಷರಿಗೆ ಉಚಿತವಾಗಿ ಬಿಟ್ಟುಕೊಡತಕ್ಕುದು.

5. **ಬಿಳಿಯರ ಸಂಬಂಧ.**—ಸಂಸ್ಥಾನದಲ್ಲಿ ವಾಸಿಸುವ ಬಿಳಿಯ ಜಾತಿಯ ಜನರ ಮೇಲೆ ಮಹಾರಾಜರಿಗೆ ವೈಸ್‌ರಾಯಿಂದ ಕಾಲಾನುಕಾಲಕ್ಕೆ ಎಷ್ಟು ಮಾತ್ರ ಅಧಿಕಾರವು ದತ್ತವಾಗಿರುತ್ತದೆಯೋ ಅಷ್ಟೇ ಅಧಿಕಾರವಿರತಕ್ಕುದು.

6. **ಆಡಳಿತ ಸಂಬಂಧ.**— (1) ಆಡಳಿತದ ರೀತಿಯಲ್ಲಿ ವೈಸ್‌ರಾಯಿಯ ಅನುಮತಿಯನ್ನು ಪಡೆಯದೆ ಮುಖ್ಯವಾದ ಬದಲಾವಣೆ ಯಾವುದನ್ನೂ ನಡೆಸಲಾಗದು. (2) ಆಸ್ತಿಪಾಸ್ತಿಗಳೂ ಕಂದಾಯ

ನಿಷ್ಕರ್ಷೆಯೂ 1881ರಲ್ಲಿ ಬ್ರಿಟಿಷರು ಸಂಸ್ಥಾನವನ್ನೊಪ್ಪಿಸಿದ ಸಂದರ್ಭದಲ್ಲಿದ್ದಹಾಗೆಯೇ ಇರಬೇಕು; ವ್ಯತ್ಯಾಸವು ನಡೆದರೆ ನ್ಯಾಯಸ್ಥಾನದ ತೀರ್ಪಿನಂತೆಯೋ ವೈಸ್‌ರಾಯಿಯ ಇಷ್ಟದಂತೆಯೋ ನಡೆಯತಕ್ಕದ್ದು.

7. **ಶ್ರೇಷ್ಠಾಧಿಕಾರ ಸಂಬಂಧ.**— ಸಾಮಾನ್ಯವಾಗಿ ಬ್ರಿಟಿಷರು ಸಂಸ್ಥಾನದ ಆಡಳಿತದಲ್ಲಿ ಪ್ರವೇಶಿಸುವುದಿಲ್ಲ; ಆದರೆ ವೈಸ್‌ರಾಯಿಗೆ ಯುಕ್ತವೆಂದು ಕಂಡುಬಂದಾಗ ಎಂತಹ ಬದಲಾವಣೆಯನ್ನಾದರೂ ಆತನು ನಡೆಸಬಹುದು.

ಕರಾರಿನ ವಿವರದಲ್ಲಿ ವೈಸ್‌ರಾಯಿಯೆಂದಾಗ ಸಭಾಯುಕ್ತ ವೈಸ್‌ರಾಯಿಯೆಂದೇ ಬಹುತರವಾಗಿ ತಿಳಿಯಬೇಕು. ವೈಸ್‌ರಾಯಿಯ ನಿಯೋಗಿಯಾಗಿ ರೆಸಿಡೆಂಟ್ ಎಂಬ ಅಧಿಕಾರಿಯು ಸಂಸ್ಥಾನದಲ್ಲಿದ್ದುಕೊಂಡು ಪತ್ರವ್ಯವಹಾರವನ್ನು ಸಂಸ್ಥಾನದ ಸರ್ಕಾರದೊಡನೆ ನಡೆಸುತ್ತ ಉತ್ಸವ ಸಮಯಗಳಲ್ಲಿ ಬ್ರಿಟಿಷರ ಪರವಾದ ಪ್ರತಿನಿಧಿಯಾಗಿರುತ್ತಾನೆ.

**ವಿಶಿಷ್ಟ ಕ್ರಮ**

ಈ ರೀತಿಯಲ್ಲಿ ಸಂಸ್ಥಾನಕ್ಕೆ ಸೈನ್ಯ ಪೋಷಣೆ, ಅನ್ಯದೇಶ ಸಂಬಂಧ ವ್ಯವಹಾರ, ನಾಣ್ಯದ ಶಿಸ್ತು, ಸುಂಕ, ಉಪ್ಪು, ಅಫೀಮು, ಮದ್ಯ, ಟಪಾಲು, ತಂತಿ ಮುಂತಾದ ಅಂಗಗಳಲ್ಲಿ ಕರ್ತವ್ಯವಾಗಲಿ ಅಧಿಕಾರವಾಗಲಿ ಸ್ವತಂತ್ರವಾಗಿ ಇರುವುದಿಲ್ಲ. ಉಳಿದ ಭಾಗದಲ್ಲಿಯೂ ನಿಷ್ಕೃಷ್ಟವಾದ ಎಲ್ಲೆಗಳಿವೆ. ಸಾಧಾರಣವಾಗಿ ಎಲ್ಲ ಸಂಸ್ಥಾನಗಳಲ್ಲಿಯೂ ಹೀಗೆಯೇ ಇರುತ್ತದೆ; ಕೆಲವಂಶಗಳಲ್ಲಿ ಮಾತ್ರ ಭೇದಗಳುಂಟು, ಉದಾ: ನೈಜಾಮರಿಗೆ ನಾಣ್ಯದ ಅಧಿಕಾರವುಂಟು. ಒಟ್ಟಿನಲ್ಲಿ ಸಂಸ್ಥಾನಗಳಲ್ಲಿ ಹಿರಿಯವೆನಿಸಿದವುಗಳಲ್ಲಿ ಒಂದೇ ಬಗೆಯ ಲಕ್ಷಣಗಳನ್ನುಳ್ಳ ರಾಷ್ಟ್ರಭಾರವಿದೆಯೆಂದು ಭಾವಿಸಬಹುದು. ರಾಷ್ಟ್ರಭಾರ ನಿರ್ವಹದಲ್ಲಿ ಮೈಸೂರು ಸಂಸ್ಥಾನದಲ್ಲಿ ವಿಶಿಷ್ಟವೆನಿಸಿದ ಆಚಾರ ಸಂಪ್ರದಾಯಗಳು ನೆಲೆಸಿವೆ. 1881ರಲ್ಲಿ ಸಂಸ್ಥಾನವನ್ನೊಪ್ಪಿಸಿದಾಗ ದಿವಾನ್ ರಂಗಾಚಾರ್ಲು ಎಂಬ ಪ್ರಸಿದ್ಧ ರಾಷ್ಟ್ರಕರ್ತನಿಂದ ಪ್ರೇರಿತನಾಗಿ ಸರ್ ಜೇಮ್ಸ್ ಗೋರ್ಡನ್ ಎಂಬ ಬ್ರಿಟಿಷ್ ಅಧಿಕಾರಿಯು ಪತ್ರವ್ಯವಹಾರ ನಡೆಸಿ ಆ ಪದ್ಧತಿಗಳು ನೆಲೆಸುವಂತೆ ಏರ್ಪಡಿಸಿದನು. ಅವುಗಳಲ್ಲಿ ಮುಖ್ಯವಾದುವು:—

(1) ಸಂಸ್ಥಾನದ ಹುಟ್ಟುವಳಿಯಲ್ಲಿ ರಾಜಭಾಗವೆಷ್ಟೆಂದು ನಿಷ್ಕೃಷ್ಟವಾಗಿರತಕ್ಕದ್ದು;

(2) ರಾಜಭಾಗವು ಕಳೆದುಳಿದ ರಾಷ್ಟ್ರಾದಾಯವು ರಾಷ್ಟ್ರಕ್ಕಾಗಿಯೇ ಬಡ್ಜೆಟ್ ಕ್ರಮವನ್ನೂ, ಲೆಕ್ಕ ಪತ್ರಗಳ ಕ್ರಮವನ್ನೂ ಅನುಸರಿಸಿ ಉಪಯುಕ್ತವಾಗತಕ್ಕದ್ದು;

(3) ರೂಢಿಯಾದ ಕಾನೂನು ಕಟ್ಟಳೆಗಳೂ ಅಧಿಕಾರ ಸಂಪ್ರದಾಯಗಳೂ ಕ್ರಮವಾಗಿ ರೂಪಗೊಂಡ ಶಾಸಕಾಂಗದಿಂದಲೇ ಬ್ರಿಟಿಷರಿಗೊಪ್ಪಿಗೆಯಾದ ನೀತಿಗೆ ಅನುಸಾರವಾಗಿ ವ್ಯತ್ಯಸ್ತವಾಗತಕ್ಕದ್ದು;

(4) ನ್ಯಾಯಸ್ಥಾನಗಳು ಯೋಗ್ಯವಾದ ರೀತಿಯಲ್ಲಿರತಕ್ಕದ್ದು; ಬ್ರಿಟಿಷ್ ವಿಭಾಗದಲ್ಲಿ ಎಷ್ಟು ಮಾತ್ರ ಕಾರ್ಯಾಂಗದವರು ನ್ಯಾಯಕ್ಷೇತ್ರದಲ್ಲಿ ಪ್ರವೇಶಮಾಡಬಹುದೋ ಅಷ್ಟೇ ಪ್ರವೇಶಾಧಿಕಾರವು ಸಂಸ್ಥಾನದ ಕಾರ್ಯಾಂಗಕ್ಕೂ ಇರತಕ್ಕದ್ದು;

(5) ವಿಧಿಗನುಸಾರವಾದ ಕ್ರಮವನ್ನು ಅವಲಂಬಿಸಿ ಆಡಳಿತವನ್ನು ನಡೆಸತಕ್ಕದ್ದು. ಶ್ರೀ ಚಾಮರಾಜೇಂದ್ರ ಒಡೆಯರು ಪಟ್ಟಾಭಿಷಿಕ್ತರಾದಾಗ ಪ್ರಕಟನೆಯನ್ನು ದಯಪಾಲಿಸಿದ ವೇಳೆಯಲ್ಲಿ ಇವುಗಳನ್ನಲ್ಲದೆ ಬೇರೊಂದು ವ್ಯವಸ್ಥೆಯನ್ನು ಮೊದಲುಮಾಡಿದರು. ಏನೆಂದರೆ, ಮಹಾರಾಜರಿಗೆ ಸಹಾಯಕವಾಗಿರುವ ಮಂತ್ರಾಲೋಚನ ಸಭೆ. ಆ ಸಭೆಯಲ್ಲಿ ದಿವಾನರೂ ಇತರ ಸಚಿವರೂ ಇರುತ್ತಾರೆ.

**ಸಾಂಕುಶ**

ಸಂಸ್ಥಾನದ ಆಡಳಿತವನ್ನು ಸಾಂಕುಶ ರಾಜತ್ವವೆನ್ನಬಹುದು; ಸಾಂಕುಶವೆಂದರೆ ಸಂಯುಕ್ತ ರಾಜ್ಯದಲ್ಲಿರುವ ರೀತಿಯಲ್ಲಿ ಸಾಂಕುಶವಾದುದಲ್ಲ. ಸಂಯುಕ್ತ ರಾಜ್ಯದಲ್ಲಿ ರಾಜನಿಗೆ ಜನರು ಕೊಡಿಸಿದಷ್ಟು ಅಧಿಕಾರವಿರುವುದು; ಮೈಸೂರು ಸಂಸ್ಥಾನದಲ್ಲಿ ಜನರಿಗೆ ರಾಜನು ಕೊಡಿಸಿದಷ್ಟು ಅಧಿಕಾರವಿರುವುದು. ಸಾಂಕುಶವೆಂಬ ಲಕ್ಷಣವು ಬೇರೆಡೆಯಲ್ಲಿ

ಕಾಣುವುದು. ಶ್ರೇಷ್ಠ ಸ್ಥಾನದಲ್ಲಿಯೇ ಬ್ರಿಟಿಷರಿರುವುದರಿಂದ ಬ್ರಿಟಿಷರು ಕೊಡಿಸಿದಷ್ಟು ಅಧಿಕಾರವು ಸಂಸ್ಥಾನಾಧಿಪತಿಗಳಿಗೆ ಇರುವುದು.

### ಕಾರ್ಯಾಂಗ

ಶಾಖೆಗಳು

ಸರ್ಕಾರದ ಕಾರ್ಯಕ್ಷೇತ್ರವು ಸಂಸ್ಥಾನದಷ್ಟೇ ವಿಶಾಲವಾದುದು. ಸಂಸ್ಥಾನದ ಹೊರಗಡೆ ಸಂಸ್ಥಾನದ ಅಧಿಕಾರಿಗಳು ಕೆಲವರಿದ್ದಾಗ್ಯೂ ಅವರ ಅಧಿಕಾರವೂ ಕರ್ತವ್ಯವೂ ಸಂಸ್ಥಾನದಲ್ಲಿಯೇ ಸಿಷ್ಕರ್ಷೆಯಾಗುವುದು. ಸರ್ಕಾರದ ಕೆಲಸಕಾರ್ಯಗಳನ್ನು ಸರ್ಕಾರದ ಶಾಖೆಗಳಲ್ಲಿ ಕಾಣಬಹುದು. ರೆವಿನ್ಯೂ, ಸರ್ವೇ ಮತ್ತು ಸೆಟ್ಲ್‌ಮೆಂಟ್, ಕಾಡು, ಆಬ್ಕಾರಿ, ಸ್ಟಾಂಪು, ರೆಜಿಸ್ಟ್ರೇಷನ್, ಅರಮನೆ, ಲೆಕ್ಕ, ಜುಡಿಷಿಯಲ್, ಜೈಲು, ಪೋಲೀಸ್, ವಿಶ್ವವಿದ್ಯಾನಿಲಯ, ಶಿಕ್ಷಣ, ಚಿಕಿತ್ಸಾ, ಆರೋಗ್ಯ, ವ್ಯವಸಾಯ, ಗಣಿಗಳು, ಭೂಶೋಧನೆ, ಉದ್ಯೋಗ ವ್ಯಾಪಾರ, ಭದ್ರಾವತಿ ಕಾರ್ಖಾನೆ, ಮರಾಮತ್, ರೈಲ್ವಾರಿ, ವಿದ್ಯುಚ್ಛಕ್ತಿ, ಸೈನ್ಯ ಮುಂತಾಗಿ ಕಾಣುವ ನಾನಾ ಕಾರ್ಯಶಾಖೆಗಳು ಸರ್ಕಾರದವರ ವರದಿಗಳಲ್ಲಿಯೇ ರಕ್ಷಣೆ, ಉತ್ಪತ್ತಿ, ನೈತಿಕ ಮತ್ತು ಆರ್ಥಿಕ ಅಭಿವೃದ್ಧಿಯೆಂಬ ವರ್ಗಗಳಲ್ಲಿ ರಾಶೀಕೃತವಾಗಿರುತ್ತವೆ. ಯಾವುದಾದರೂ ಒಂದು ವರ್ಷದ ವರದಿಯನ್ನು ನೋಡಿದಲ್ಲಿ ಅದರಲ್ಲಿ ಜನರಲ್ ಮತ್ತು ಪೊಲಿಟಿಕಲ್, ಭೂಮಿಯ ಆಡಳಿತ, ರಕ್ಷಣೆ, ಉತ್ಪತ್ತಿ ಮತ್ತು ವೃಷ್ಟಿ, ರೆವಿನ್ಯೂ ಮತ್ತು ಆಯುವ್ಯಯ, ಜನಗಣಿತಿ ಮತ್ತು ಆರೋಗ್ಯಸಾಧನೆ, ಜನಶಿಕ್ಷಣ, ಮುಂತಾದ ವಿಭಾಗಗಳು ಕಾಣುತ್ತವೆ. ಈ ವಿಭಾಗವು ಕಾರ್ಯವಿಭಾಗ, ಕ್ಷೇತ್ರವಿಭಾಗವಲ್ಲ.

ಕ್ಷೇತ್ರ ವಿಭಾಗ

ಕ್ಷೇತ್ರ ವಿಭಾಗದಲ್ಲಿ ಎಂಟು ಜಿಲ್ಲೆಗಳುಂಟು. ಆಕಾಶವಿಮಾನದಲ್ಲಿ ಏರಿ ಮೇಲಿನಿಂದ ಕಂಡುದಾದರೆ ದೇಶದಲ್ಲಿ ಅಲ್ಲಲ್ಲಿ ಪಟ್ಟಣಗಳೂ, ಗ್ರಾಮಗಳೂ, ಕಾಡುಗಳೂ ಕಾಣುತ್ತವೆ. ಜಿಲ್ಲೆಯಲ್ಲಿ ಪಟ್ಟಣಗಳೂ ಗ್ರಾಮಗಳೂ ಉಂಟು. ಗ್ರಾಮಗಳು ಹೋಬಳಿ, ತಾಲ್ಲೂಕು, ಸಬ್‌ಡಿವಿಜನ್ ಮತ್ತು ಜಿಲ್ಲೆಯೆಂಬ ವಿಭಾಗಗಳಾಗಿ ಏರ್ಪಡುತ್ತವೆ. ಜಿಲ್ಲೆಯೆಂಬುದು ಗ್ರಾಮ

ಸಮೂಹವೆಂದೇ ಭಾವಿಸಬೇಕು. ಇವು ಸಾಮಾನ್ಯವಾಗಿ ವ್ಯವಹಾರದಲ್ಲಿರುವ ವಿಭಾಗಗಳ ಹೆಸರುಗಳು; ರೆವಿನ್ಯೂ ಶಾಖೆಯಲ್ಲಿಯೇ ಹುಟ್ಟಿಕೊಂಡ ಹೆಸರುಗಳು. ಇತರ ಶಾಖೆಗಳು ತಮ್ಮ ಕೆಲಸಕ್ಕೆ ತಕ್ಕಂತೆ ಕ್ಷೇತ್ರ ವಿಭಾಗಗಳನ್ನು ರಚಿಸಿಕೊಂಡಿರುತ್ತವೆ.

**ಅಧಿಕಾರಿಗಳು**

ಗ್ರಾಮಗಳಲ್ಲಿ ಹನ್ನೆರಡು ಆಯಗಾರರ ಸಂಪ್ರದಾಯದಲ್ಲಿ ಉಳಿದುಕೊಂಡವರಾದ ಪಟೇಲ ಶ್ಯಾನುಭೋಗರು ಮುಖ್ಯಸ್ಥರು. ಅವರು ಸರ್ಕಾರದ ಅಧಿಕಾರವನ್ನು ಹೊರುವವರಾಗಿರುತ್ತಾರೆ; ಸರ್ಕಾರದ ಅಧಿಕಾರಿಗಳಿಗೆ ವಶವರ್ತಿಗಳಾಗಿರುತ್ತಾರೆ. ಅನೇಕ ಗ್ರಾಮಗಳು ಸೇರಿದ ತಾಲ್ಲೂಕಿಗೆ ಮುಖ್ಯಸ್ಥಾನವಾದ ಚಿಕ್ಕ ಪಟ್ಟಣದಲ್ಲಿ ಅಮಲ್ದಾರ್, ಪೋಲೀಸ್ ಇನ್‌ಸ್ಪೆಕ್ಟರ್, ಸಬ್‌ರೆಜಿಸ್ಟ್ರಾರ್, ಸ್ಯಾನಿಟರಿ ಇನ್‌ಸ್ಪೆಕ್ಟರ್, ಸಬ್ ಅಸಿಸ್ಟೆಂಟ್ ಸರ್ಜನ್ ಮುಂತಾದ ಉದ್ಯೋಗಸ್ಥರಿರುತ್ತಾರೆ. ಜಿಲ್ಲೆಗೆ ಅಧ್ಯಕ್ಷನಾಗಿ ಡೆಪ್ಯುಟಿ ಕಮಿಷನರ್ ಎಂಬ ಅಧಿಕಾರಿಯು ಅನೇಕ ಸಹಾಯಾಧಿಕಾರಿಗಳೊಡನೆ ಇರುತ್ತಾನೆ. ಆತನೇ ಜಿಲ್ಲಾ ಮ್ಯಾಜಿಸ್ಟ್ರೇಟು. ಜಿಲ್ಲೆಯಲ್ಲಿ ಕಾರ್ಯನಿರತರಾದ ಉದ್ಯೋಗಸ್ಥರೆಲ್ಲರೂ ತಂತಮ್ಮ ಶಾಖೆಯಲ್ಲಿ ಮೇಲ್ಪಟ್ಟ ಅಧಿಕಾರಿಗಳಿಗೆ ಅಧೀನರಾದಾಗ್ಯೂ ಜಿಲ್ಲಾಧಿಪತಿಯೆನಿಸಿದ ಡೆಪ್ಯುಟಿ ಕಮಿಷನರನ್ನು ಅನುಸರಿಸಿಕೊಂಡಿರುತ್ತಾರೆ. ರೆವಿನ್ಯೂ ಮತ್ತು ಮ್ಯಾಜಿಸ್ಟೀರಿಯಲ್ ಎಂಬ ಅಧಿಕಾರ ಕ್ಷೇತ್ರಗಳ ಕಾರ್ಯವು ಬಲು ಮುಖ್ಯವಾದುದರಿಂದ ಸಂಸ್ಥಾನದಲ್ಲಿ ಸಿವಿಲ್ ಸರ್ವಿಸ್ ಎಂಬ ಅಧಿಕಾರವರ್ಗವುಂಟು. ಇಂಡಿಯನ್ ಸಿವಿಲ್ ಸರ್ವಿಸ್ ಎಂಬುದರಂತೆಯೇ ಮೈಸೂರು ಸಿವಿಲ್ ಸರ್ವಿಸ್ ಎಂಬುದೂ ಯೋಗ್ಯರಾದವರನ್ನು ಅಧಿಕಾರ ಪದವಿಗಳಿಗೆ ಗೊತ್ತುಮಾಡುವ ಸಾಧನವಾಗಿದೆ.

**ಅಧಿಕಾರ ಕೇಂದ್ರ**

ಕಾರ್ಯಾಂಗದ ಕೇಂದ್ರ ಸ್ಥಾನವು ಇರುವುದು ಬೆಂಗಳೂರಿನಲ್ಲಿ. ಸಾಮಾನ್ಯವಾಗಿ ಅಠಾರಾ ಕಚೇರಿಯೆಂದು ಹೆಸರಾದ ಸ್ಥಳದಲ್ಲಿಯೇ ಎಲ್ಲ ಶಾಖೆಗಳ ಶ್ರೇಷ್ಠಾಧಿಕಾರಿಗಳ ಕಾರ್ಯಾಲಯಗಳೂ ಇರುತ್ತವೆ. ಎಲ್ಲಕ್ಕೂ ಮಧ್ಯಸ್ಥವಾದುದೂ ಮೇಲ್ಪಟ್ಟುದೂ ಆದುದು ರಾಯಸ ಪರಿವಾರ ಅಥವಾ

ಸೆಕ್ರೆಟೇರಿಯಟ್ ಎಂಬುದು. ಅಲ್ಲಿ ಕಾರ್ಯದರ್ಶಿಗಳೆಂಬುವವರು ಅನೇಕ ರಾಗಿರುತ್ತಾರೆ. ಉದಾ: ಆಯುವ್ಯಯ ಕಾರ್ಯದರ್ಶಿ, ನ್ಯಾಯಸಂಬಂಧ ಕಾರ್ಯದರ್ಶಿ, ಮರಾಮತ್ ಕಾರ್ಯದರ್ಶಿ, ಅಭಿವೃದ್ಧಿ ಕಾರ್ಯದರ್ಶಿ, ಇತ್ಯಾದಿ. ಅವರಲ್ಲಿ ಮುಖ್ಯನಾದಾತನು ಛೀಫ್ ಸೆಕ್ರೆಟರಿ ಅಥವಾ ಶ್ರೇಷ್ಠ ಕಾರ್ಯದರ್ಶಿಯೆಂಬಾತನು. ಸರ್ಕಾರದ ಆಜ್ಞೆಗಳನ್ನು ಪ್ರಕಟಿಸು ವಾತನು ಆತನೇ. ಪ್ರಜೆಗಳು ಸರ್ಕಾರಕ್ಕೆ ಬಿನ್ನಹ ಮಾಡಿಕೊಳ್ಳುವಾಗ ಆತನ ಹೆಸರಿಗೆ ಬರೆಯಬೇಕು. ಈ ರೀತಿಯಲ್ಲಿ ಆತನೇ ಸರ್ಕಾರದ ಮುಖ ದಂತೆ ಇದ್ದರೂ ಆತನು ಸ್ವಂತವಾಗಿ ಆಜ್ಞೆಗಳನ್ನು ಹೊರಡಿಸುವುದಿಲ್ಲ, ಸರ್ಕಾರದ ಆಜ್ಞೆಗಳನ್ನು ಹೊರಡಿಸುತ್ತಾನೆ. ಸರ್ಕಾರವೆಂದರೆ ಯಾವುದು? ಕಾರ್ಯದರ್ಶಿಗಳಿಗೆ ಇತ್ಯರ್ಥಗಳನ್ನು ಮಾಡಿಕೊಡುವ ಅಧಿಕಾರ ಕೇಂದ್ರ. ಅದೇ ಮಂತ್ರಾಲೋಚಕ ಸಭೆಯೆಂದು ಹೆಸರಾದ ಕೌನ್ಸಿಲ್ ಎಂಬುದು. ಸುಲಭ ರೀತಿಯಲ್ಲಿ ಅದನ್ನು ನಾವು ಮಂತ್ರಿವರ್ಗ ಅಥವಾ ಮಂತ್ರಿ ಮಂಡಲಿ ಎಂದು ಕರೆಯಬಹುದು.

**ಮಂತ್ರಿ ಸಭೆ**

1881ರಲ್ಲಿ ಈ ಮಂತ್ರಿ ಮಂಡಲಿಯೆಂಬುದು ರೂಪವೆತ್ತಿತು. ದಿವಾನ್ ಎಂಬ ಪ್ರಧಾನ ಮಂತ್ರಿಯೂ ಇತರ ಸಚಿವರೂ ಸೇರಿ ಮಂಡಲಿಯು ಸಿದ್ಧವಾಯಿತು. ಅಂದಿನಿಂದ ನಡೆದುಬಂದಿರುವ ಈ ಮಂತ್ರಿಸಭೆಗೆ ದಿವಾನ್ ಎಂಬಾತನೇ ಅಧ್ಯಕ್ಷ. ಉಳಿದ ಇಬ್ಬರು ಮೂವರು ಸಚಿವರು ಸಭಿಕರು (Members); ಅವರನ್ನು ಪ್ರಥಮ ಸಭಿಕ, ದ್ವಿತೀಯ ಸಭಿಕ ಮುಂತಾಗಿ ಕರೆಯುವುದುಂಟು. ಈ ಸಚಿವ ಸಭಿಕರು ಸರ್ಕಾರದ ಶಾಖೆ ಗಳನ್ನು ಅನುಕೂಲ ತೋರಿದಂತೆ ತಂತಮ್ಮ ಪತ್ರಪೇಟಿಕೆಗಳಲ್ಲಿ ಸೇರಿಸಿ ಕೊಳ್ಳುವರು. ತನ್ನ ಪತ್ರಪೇಟಿಕೆಯಲ್ಲಿ ಸೇರಿದ ಶಾಖೆಗಳ ಮೇಲ್ವಿಚಾರಣೆ ಯನ್ನು ನಡೆಸುತ್ತ ಸಚಿವನಾದವನು ಅನೇಕ ಕೆಲಸಗಳನ್ನು ತಾನೇ ಆರಂಭಿಸಿ ನಡೆಸಬಹುದಲ್ಲದೆ ಆ ಶಾಖೆಗಳ ಸಂಬಂಧವಾದ ಎಲ್ಲ ವಿಷಯಗಳಲ್ಲಿಯೂ ಇತ್ಯರ್ಥ ಮಾಡತಕ್ಕವನು. ಸ್ವಂತ ಅಧಿಕಾರದಿಂದಲೇ ಇತ್ಯರ್ಥ ಮಾಡ ಲಾಗದ ವಿಷಯಗಳ ಪಟ್ಟಿಯುಂಟು; ಅಂತಹವುಗಳನ್ನು ಸಭೆಯಲ್ಲಿ ಚರ್ಚೆ ಗೊಡ್ಡಿ ಸಭಾ ನಿರ್ಣಯವು ಹೇಗಾಗುವುದೋ ಅದರಂತೆ ಇತ್ಯರ್ಥಮಾಡಿ

ಆಜ್ಞೆಗಳನ್ನು ಹೊರಡಿಸುವವನು. ಸಭೆಯು ವಾರಕ್ಕೊಮ್ಮೆಯಾದರೂ ಸೇರುತ್ತದೆ; ಸಚಿವರು ವಾದ ವಿವಾದಗಳನ್ನು ನಡೆಸುತ್ತಾರೆ, ಶ್ರೇಷ್ಠ ಕಾರ್ಯದರ್ಶಿಯು ಬಳಿಯಲ್ಲಿಯೇ ಇದ್ದು ಬೇಕಾದ ವಿವರವನ್ನೊದಗಿಸುತ್ತಲೂ, ಸಭೆಯ ಕಾರ್ಯಕಲಾಪದ ವರದಿಯನ್ನು ಸಿದ್ಧಗೊಳಿಸುತ್ತಲೂ ಇರುತ್ತಾನೆ. ಸಭೆಯ ವರದಿಯು ಮಹಾರಾಜರಿಗೆ ಸಭೆಯ ಅಭಿಪ್ರಾಯ ಸಹಿತವಾಗಿ ತಲುಪಿದ ಕೂಡಲೆ ಮಹಾಸ್ವಾಮಿಯವರು ಅವುಗಳನ್ನು ಪರಾಂಬರಿಸಿ ಆಜ್ಞೆಯನ್ನು ದಯಪಾಲಿಸುತ್ತಾರೆ. ಮಹಾಸ್ವಾಮಿಯವರು ನಿಶ್ಚಯಮಾಡಿದಂತೆಯೇ ವಿಷಯದ ಇತ್ಯರ್ಥವಾಗಿ ನಿರ್ವಾಹವಾಗುತ್ತದೆ. ಮಹಾಸ್ವಾಮಿಯವರನ್ನು ಒಲವಂತಪಡಿಸುವ ಅಧಿಕಾರಬಲವು ಸಭೆಗಿರುವುದಿಲ್ಲ.

**ಹೋಲಿಕೆ**

ಸಭೆಯಲ್ಲಿ ಸಭಿಕರಾದವರು ಸಮಾನರೆನಿಸಿಲ್ಲ. ದಿವಾನರಿಗೆ ಹೆಚ್ಚಿನ ಅಧಿಕಾರವುಂಟು. ಈ ಸಭೆಯನ್ನು ಸಂಯುಕ್ತ ರಾಜ್ಯದ ಮಂತ್ರಿಮಂಡಲಿಯೊಂದಿಗೆ ಹೋಲಿಸಿ ನೋಡಿದರೆ ಅನೇಕಾಂಶಗಳಲ್ಲಿ ವ್ಯತ್ಯಸ್ತವಾಗಿರುವುದು ಸ್ಪಷ್ಟವಾಗುವುದು. ಸಚಿವ ಸಭಿಕರ ಪದವಿಯು ಇಲ್ಲಿ ಮಹಾರಾಜರ ಸೇವೆಯಲ್ಲಿ ಮುಂದಾಗಿ ಪ್ರೋತ್ಸಾಹಪಡೆದವರಿಗೆ ಸಲ್ಲುವುದು; ಅಲ್ಲಿ ಪಾರ್ಲಿಮೆಂಟಿನಲ್ಲಿ ಮುಖ್ಯರಾದವರಿಗೆ ಸಲ್ಲುವುದು. ಸಚಿವ ಸಭಿಕರು ಅಲ್ಲಿ ಒಟ್ಟಾಗಿ ಒಂದು ಪಾರ್ಟಿಯವರಾಗಿದ್ದು ಸಮಾನಸ್ಕಂಧರಾಗಿ ವರ್ತಿಸಿ ಒಟ್ಟಾಗಿಯೇ ಪ್ರವೃತ್ತರೂ ನಿವೃತ್ತರೂ ಆಗುತ್ತಾರೆ; ಇಲ್ಲಿ ಅಂತಹದೊಂದೂ ಇಲ್ಲ. ಆದರೆ ಸಂಯುಕ್ತ ರಾಜ್ಯದ ಸ್ಥಿತಿಗತಿಗಳೇ ಬೇರೆ, ಸಂಸ್ಥಾನಗಳ ಸ್ಥಿತಿಗತಿಗಳೇ ಬೇರೆ. ಒಂದೆಡೆಯಲ್ಲಿ ಒಪ್ಪಿದ ರೀತಿಯೇ ಮತ್ತೊಂದೆಡೆಯಲ್ಲಿಯೂ ಒಪ್ಪುವುದೆನ್ನುವುದು ಶಾಸ್ತ್ರೀಯವಾದ ಮಾತೇ ಅಲ್ಲ.

ಸಚಿವ ಸಭೆಯು ಕಾರ್ಯಾಂಗಕ್ಕೆ ಮೇಲ್ಪಟ್ಟ ಸಂಸ್ಥೆ ಮಾತ್ರವೇ ಅಲ್ಲದೆ ರೆವಿನ್ಯೂ ಸಂಬಂಧವಾದ ವಿಚಾರಣೆಗಳಲ್ಲಿ ಶ್ರೇಷ್ಠವಾದ ನ್ಯಾಯಸ್ಥಾನವಾಗಿಯೂ ಇರುವ ಅಂಶವನ್ನು ನೆನಪಿನಲ್ಲಿಡಬೇಕು.

## ನ್ಯಾಯಾಂಗ

ಶ್ರೀಮನ್ಮಹಾರಾಜರೇ ನ್ಯಾಯಸ್ವರೂಪರೂ ನ್ಯಾಯಮೂರ್ತಿಗಳೂ ಆದವರು. ಸಂಸ್ಥಾನದಲ್ಲಿ ನೆಲೆಸುವ ನ್ಯಾಯವೆಲ್ಲಕ್ಕೂ ಆ ಕಾರಣದಿಂದ ಮಹಾರಾಜರ ನ್ಯಾಯವೆಂದೇ ಹೆಸರು. ಇದರ ಅರ್ಥವೇನೆಂದರೆ, ನ್ಯಾಯಾಧಿಕಾರಿಗಳೆಲ್ಲರೂ ಮಹಾಸ್ವಾಮಿಯವರಿಂದಲೇ ನಿಯುಕ್ತರಾಗಿ ವಿಧೇಯರಾಗಿ ಅವರ ಹೆಸರಿನಲ್ಲಿಯೇ ನ್ಯಾಯವಿಧಿಗಳನ್ನು ಸ್ಥಾಪಿಸುವವರು. ನ್ಯಾಯಾಧಿಕಾರಿಗಳು ನ್ಯಾಯ ರಚನೆಯನ್ನು ಮಾಡುವವರಲ್ಲ; ನ್ಯಾಯ ನಿಷ್ಕರ್ಷೆಯನ್ನು ಮಾಡತಕ್ಕವರು.

**ನ್ಯಾಯಾಧಿಕಾರಿಗಳು**

ನ್ಯಾಯಾಧಿಕಾರಿಗಳಲ್ಲಿ ಸಿವಿಲ್ ವಿಭಾಗದಲ್ಲಿ ಮುನಸೀಫ್, ಸಬ್-ಜಡ್ಜ್ ಮತ್ತು ಜಿಲ್ಲಾ ಜಡ್ಜಿಗಳುಂಟು; ಕ್ರಿಮಿನಲ್ ವಿಭಾಗದಲ್ಲಿ 3ನೇ, 2ನೇ, 1ನೇ, ವರ್ಗದ ಮ್ಯಾಜಿಸ್ಟ್ರೇಟರು ಮತ್ತು ಸೆಷನ್ಸ್ ಜಡ್ಜಿಗಳುಂಟು. ನ್ಯಾಯ ತೀರ್ಮಾನಕ್ಕಾಗಿ ಸಂಸ್ಥಾನವು ಮೂರು ಜಿಲ್ಲೆಗಳಾಗಿ ವಿಭಾಗವಾಗಿದೆ. ಪ್ರತಿ ಜಿಲ್ಲೆಗೂ ಮುಖ್ಯ ನ್ಯಾಯಾಧಿಕಾರಿಯಾದಾತನು ಜಿಲ್ಲಾ ಮತ್ತು ಸೆಷನ್ಸ್ ಜಡ್ಜಿಯೆಂಬಾತನು. ಇವರೆಲ್ಲರಿಗೂ ಶ್ರೇಷ್ಠವೆನಿಸಿದ ನ್ಯಾಯಸ್ಥಾನವೇ **ಹೈ ಕೋರ್ಟ್** ಎಂಬುದು. ಹೈಕೋರ್ಟಿನಲ್ಲಿ ಛೀಫ್ ಜಸ್ಟಿಸ್ ಅಥವಾ ನ್ಯಾಯಾಧ್ಯಕ್ಷನಲ್ಲದೆ ಇಬ್ಬರು ಮೂವರು ನ್ಯಾಯಾಧೀಶರಿರುತ್ತಾರೆ. ಹೈಕೋರ್ಟಿನ ತೀರ್ಪಿಗೆ ಮೇಲ್ಪಟ್ಟ ತೀರ್ಪೆಂಬುದು ಸಂಸ್ಥಾನದಲ್ಲಿಲ್ಲ. ಅಪರಾಧಿಯು ದಂಡನೆಯಲ್ಲಿ ಮಾತ್ರ ಶಿಕ್ಷೆಗೆ ಗುರಿಯಾದವನು ಮಹಾಸ್ವಾಮಿಯವರ ಕನಿಕರವನ್ನು ಬೇಡಿದಾಗ ಶಿಕ್ಷೆಯನ್ನು ಕಡಿಮೆಮಾಡುವ ಸಂಭವವುಂಟು.

ಸಣ್ಣ ಸಣ್ಣ ಅಪರಾಧಗಳ ವಿಚಾರಣೆಗಾಗಿ **ಬೆಂಚು ಕೋರ್ಟು**ಗಳೆಂಬವು ಪಟ್ಟಣಗಳಲ್ಲುಂಟು. ಬೆಂಚ್ ಎಂಬ ಶಬ್ದವು ಇಂಗ್ಲೀಷಿನಲ್ಲಿ ನ್ಯಾಯವೇದಿಕೆಗೆ ರೂಢಿಗೊಂಡುದು. ಬೆಂಚು ಕೋರ್ಟುಗಳಲ್ಲಿ ನ್ಯಾಯಾಧಿಕಾರಯುಕ್ತರಾಗಿ ಪೌರ ಮುಖ್ಯರಾದವರೇ ಇರುತ್ತಾರೆ. ಗೌರವಕ್ಕೆ ಅಥವಾ ಪುಣ್ಯಲಾಭಕ್ಕೆ ಅವರು ಕೆಲಸಮಾಡತಕ್ಕವರು.

ಸಂಪ್ರದಾಯ

ನ್ಯಾಯಾಧಿಕಾರಿಗಳೆಲ್ಲರೂ ನ್ಯಾಯಾಧ್ಯಕ್ಷನ ಆಡಳಿತದಲ್ಲಿ ಇರುವವರು. ನ್ಯಾಯಾಧ್ಯಕ್ಷನೇ ವರ್ಗಾವರ್ಗಿಗಳನ್ನೂ, ವೇತನ ಸಂಭಾವನೆಗಳನ್ನೂ, ಅಧಿಕಾರದ ಎಲ್ಲೆಯನ್ನೂ ನ್ಯಾಯಾಧಿಕಾರಿಗಳಿಗೆ ಗೊತ್ತುಮಾಡಿ ಸಲಹೆಕೊಡತಕ್ಕವನು. ಆತನ ಸಲಹೆಯನ್ನು ತಿಳಿದು ಸಚಿವ ಸಭೆಯವರು ಉದ್ಯೋಗಸ್ಥರನ್ನೂ ಅವರ ಪದವಿಗಳನ್ನೂ ನಿರ್ಣಯಮಾಡುತ್ತಾರೆ. ಈ ಪದ್ಧತಿಯು ಸಂಯುಕ್ತ ರಾಜ್ಯದಲ್ಲಿ ನಡೆಯುವ ಸಂಪ್ರದಾಯಕ್ಕೆ ವಿರುದ್ಧವಾದುದು. ಆದುದರಿಂದ ನ್ಯಾಯ ತೀರ್ಮಾನದಲ್ಲಿ ನಿರತರಾದವರು ಸಂಸ್ಥಾನದಲ್ಲಿ ಕಾರ್ಯಾಂಗದವರನ್ನು ಅನುಸರಿಸಬೇಕಾಗಿರುತ್ತದೆ. ಆದರೆ ಕಾರ್ಯಾಂಗದವರೇ ನ್ಯಾಯ ತೀರ್ಮಾನವನ್ನೂ ನಡೆಸುವ ಆಚಾರವು ಮೈಸೂರಿನಲ್ಲಿ ತಪ್ಪುತ್ತಲಿರುವ ಸಂಗತಿಯನ್ನು ನೆನಪಿನಲ್ಲಿಡಬೇಕು.

ಸಂಸ್ಥಾನದಲ್ಲಿ ಬಿಳಿಯರು ಅಪಾದಿತರಾದ ಸಂದರ್ಭಗಳಲ್ಲಿ ಅವರ ವಿಚಾರಣೆಯನ್ನು ನಡೆಸಲು **ಜಸ್ಟಿಸ್ ಆಫ್ ದಿ ಪೀಸ್** ಎಂಬ ಗೌರವ ನ್ಯಾಯಾಧಿಕಾರಿಗಳು ಬಿಳಿಯರಲ್ಲಿಯೇ ನಿಯಮಿತರಾಗಿದ್ದಾರೆ. ಕ್ರಿಮಿನಲ್ ಸಂಬಂಧವಾದ ಮೊಕದ್ದಮೆಗಳಲ್ಲಿ ಬಿಳಿಯನಾದವನು ತಾನಾಗಿ ಒಪ್ಪಿದರೆ ಸಂಸ್ಥಾನದ ನ್ಯಾಯಾಧಿಕಾರಿಗಳು ಆತನ ವಿಚಾರಣೆಯನ್ನು ನಡೆಸಬಹುದು.

ಸಂಸ್ಥಾನದ ನ್ಯಾಯ ತೀರ್ಮಾನ ವಿಧಿಯು ಬ್ರಿಟಿಷ್ ವಿಭಾಗದಲ್ಲಿದ್ದಂತೆಯೇ ಇರುತ್ತದೆ. ನ್ಯಾಯವಿಧಿಗಳನ್ನು ಸಂಸ್ಥಾನಿಕರು ಕೆಲವು ಸಂದರ್ಭಗಳಲ್ಲಿ ತಾವೇ ರಚಿಸಿಕೊಳ್ಳಬಹುದಾದರೂ ಬ್ರಿಟಿಷರು ಅನುಸರಿಸುವ ನ್ಯಾಯತತ್ವಗಳಿಗೆ ವಿರುದ್ಧವಾಗಿ ತೊಡಗಲಾರರು. ಆದ್ದರಿಂದ ನ್ಯಾಯ ತೀರ್ಮಾನ ರೀತಿನೀತಿಗಳಲ್ಲಿ ಮೈಸೂರಿನ ಕ್ರಮವು ಬ್ರಿಟಿಷ್ ವಿಭಾಗಗಳಲ್ಲಿದ್ದಂತೆಯೇ ಇರುತ್ತದೆ.

## ಶಾಸಕಾಂಗ

1881ರಲ್ಲಿ ಸಂಸ್ಥಾನವು ಪ್ರಾಪ್ತವಾದಾಗ ಶ್ರೀ ಚಾಮರಾಜೇಂದ್ರ ಒಡೆಯರವರು ದಿವಾನ್ ರಂಗಾಚಾರ್ಲು ಎಂಬ ಪ್ರಸಿದ್ಧ ಮಂತ್ರಿವರ್ಯನ ಸಲಹೆಯನ್ನು ಅನುಮೋದಿಸಿದರು. ವರ್ಷಕ್ಕೊಂದುಸಲ ಪ್ರಜಾ

**ಚರಿತ್ರೆ**

ಮುಖ್ಯರನ್ನು ನೆರೆಯಿಸಿ ಆಡಳಿತದ ಉದ್ದೇಶಗಳನ್ನೂ ವಿವರಗಳನ್ನೂ ಅವರಿಗೆ ಸ್ಥೂಲವಾಗಿ ತಿಳಿಸಿ ಅವರ ಮನಸ್ಸುಗಳನ್ನು ತಿಳಿದುಕೊಳ್ಳಲು ಉಪಯುಕ್ತವಾಗುವಂತೆ ನೆರವೇರಿಸಬೇಕೆಂದು ರಂಗಾಚಾರ್ಲುರವರು ಯೋಚಿಸಿ ಪ್ರಜಾಪ್ರತಿನಿಧಿ ಸಭೆಯೆಂಬುದನ್ನು ಸ್ಥಾಪಿಸಿದರು. 1883ರಲ್ಲಿ ಮೊದಲಾದ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆಯೇ ಇಡೀ ಭರತವರ್ಷದಲ್ಲೆಲ್ಲ ಮೊದಲಿನದು. 1907ರಲ್ಲಿ ಲೆಜಿಸ್ಲೆಟಿವ್ ಕೌನ್ಸಿಲ್ ಅಥವಾ ನ್ಯಾಯವಿಧಾಯಕ ಸಭೆಯೆಂಬುದು ಮೊದಲು ರೂಪಗೊಂಡಿತು. ಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳೆಂಬ ಈ ಎರಡು ಸಂಸ್ಥೆಗಳೂ ಕಾಲಕ್ರಮದಲ್ಲಿ ಅಭಿವೃದ್ಧಿ ಪಡೆದವು. ಮಾಂಟ್ಫರ್ಡ್ ಸುಧಾರಣೆಗಳು ಬ್ರಿಟಿಷ್ ವಿಭಾಗದಲ್ಲಿ ಆಚರಣೆಗೆ ಬಂದ ತರುವಾಯ ಮೈಸೂರಿನಲ್ಲಿಯೂ ಸುಧಾರಣೆಗಳು ತಲೆದೋರಿದವು. ಅದಕ್ಕಾಗಿ ನಿಯಮಿತವಾದ ಉಪಸಭೆಗೆ ಡಾ॥ ಬ್ರಜೇಂದ್ರನಾಥ ಸೀಲರೆಂಬ ವಿಖ್ಯಾತ ವಿದ್ವಾಂಸರು ಅಧ್ಯಕ್ಷರಾಗಿದ್ದುದರಿಂದ ಆ ಸಭೆಯ ವರದಿಗೆ ಸೀಲ್ ಕಮಿಟಿ ವರದಿಯೆಂದೇ ಹೆಸರಾಗಿದೆ. ಆ ವರದಿಯನ್ನನುಸರಿಸಿ 1923ರಲ್ಲಿ ಶ್ರೀಮನ್ಮಹಾರಾಜರು ಪ್ರಕಟನೆಮಾಡಿ ಈ ಎರಡು ಸಭೆಗಳ ರಚನೆಯಲ್ಲಿಯೂ ಅಧಿಕಾರದಲ್ಲಿಯೂ ನಡೆಯುವ ಬದಲಾವಣೆಗಳನ್ನು ಸೂಚಿಸಿ ಬೇರೆ ಬೇರೆಯಾದ ನಿಬಂಧನೆಗಳನ್ನು ದಯಪಾಲಿಸಿದರು. ಪ್ರಜಾಪ್ರತಿನಿಧಿ ಸಭೆಗೊಂದು ನಿಬಂಧನೆಯೂ, ನ್ಯಾಯವಿಧಾಯಕ ಸಭೆಗೊಂದು ನಿಬಂಧನೆಯೂ ಏರ್ಪಟ್ಟು ಅವುಗಳ ರಚನೆ ಮತ್ತು ಕಾರ್ಯಕಲಾಪಗಳಿಗೆ ಆಧಾರಭೂತವಾಗಿವೆ.

**ಪರಿಸ್ಥಿತಿ ಭೇದ**

ಈ ಎರಡು ಸಭೆಗಳಿಗೂ ಸಲ್ಲುವ ಅಧಿಕಾರ ಗೌರವಗಳು ಶ್ರೀಮನ್ಮಹಾರಾಜರಿಂದ ದತ್ತವಾದವುಗಳೆಂಬ ಅಂಶವನ್ನು ಮರೆಯಲಾಗದು. ಸುಧಾರಣೆಗಳ ದೆಸೆಯಿಂದ ಶ್ರೀಮನ್ಮಹಾರಾಜರವರ ಅಧಿಕಾರಕ್ಕೆ ಯಾವ ಲೋಪವೂ ಇಲ್ಲವೆಂಬ ಅಂಶವು ನಿಬಂಧನೆಗಳಲ್ಲಿ ಸ್ಫುಟವಾಗಿದೆ. ಇದಕ್ಕೂ ಸಂಯುಕ್ತ ರಾಜ್ಯಸ್ಥಿತಿಗೂ ದೊಡ್ಡ ವ್ಯತ್ಯಾಸವೇ ಕಾಣುತ್ತದೆ. ಆ ರಾಜ್ಯದಲ್ಲಿ ಜನರು ಬಲಿಷ್ಠರಾಗಿ ತಮ್ಮ ಅಧಿಕಾರ ಗೌರವಗಳನ್ನು

ರಾಜರಿಂದ ಸೆಳೆದುಕೊಂಡು ಅವುಗಳನ್ನು ಪತ್ರಸ್ಥವಾಗಿಯೂ ಸಂಪ್ರದಾಯ ರೂಪವಾಗಿಯೂ ಸಿದ್ಧಿಗೊಳಿಸಿಕೊಂಡರು. ದೇಶೀಯ ಸಂಸ್ಥಾನಗಳಲ್ಲಿ ಪ್ರಾತಿನಿಧ್ಯ ಸಂಬಂಧವಾದ ಸಭಾ ಸಂಪ್ರದಾಯಗಳು ಜನರಲ್ಲಿ ರೂಢಿಯಾಗಿ ಬಂದವುಗಳೇ ಅಲ್ಲ; ಆದ್ದರಿಂದ ಪ್ರಾತಿನಿಧ್ಯ ತತ್ವಗಳನ್ನು ಸ್ವಲ್ಪ ಸ್ವಲ್ಪ ವಾಗಿ ಆರಂಭಿಸಿ ಕಾಲಾನುಕ್ರಮದಲ್ಲಿ ಬಲಗೊಳ್ಳುವಂತೆ ನೆರವೇರಿಸಬೇಕಾದ ಅವಶ್ಯಕತೆಯುಂಟು. ರಾಷ್ಟ್ರಾಂಗ ಸಂಯೋಜನೆಗಳ ಭೇದಾಭೇದಗಳನ್ನು ನಾವು ಕಾಣುವ ಸಂದರ್ಭಗಳಲ್ಲಿ ಪರಿಸ್ಥಿತಿಯ ಭೇದಾಭೇದಗಳನ್ನೂ ಎಡೆಬಿಡದೆ ಗಮನಿಸಬೇಕು.

## ಪ್ರತಿನಿಧಿ ಸಭೆ

ಅಧಿವೇಶನ

ಪ್ರತಿನಿಧಿ ಸಭೆಯು ಸಾಧಾರಣವಾಗಿ ವರ್ಷಕ್ಕೆ ಎರಡುಸಲ ರಾಜಧಾನಿಯಾದ ಮೈಸೂರಿನಲ್ಲಿಯೇ ನೆರೆಯುವುದು. ಶ್ರೀಮನ್ಮಹಾರಾಜರವರ ವರ್ಧಂತಿ ಕಾಲದಲ್ಲಿ, ಅಂದರೆ ಜೂನ್ ಜುಲೈ ತಿಂಗಳುಗಳಲ್ಲಿ, ನಡೆಯುವ ಅಧಿವೇಶನಕ್ಕೆ ಬಜೆಟ್ ಸೆಷನ್ ಎಂಬುದಾಗಿಯೂ ಹೇಳುವುದುಂಟು. ನವರಾತ್ರಿ ವೇಳೆಯಲ್ಲಿ ಮತ್ತೊಂದು ಅಧಿವೇಶನವು ನಡೆಯುವುದು; ಆಗ ಸಂಸ್ಥಾನದ ದಿವಾನರು ಕಳೆದ ವರ್ಷದ ಆಡಳಿತದ ವರದಿಯನ್ನು ಸಂಕ್ಷೇಪವಾಗಿ ಸಭಿಕರಿಗೆ ತಿಳಿಯಹೇಳುವರು. ವರ್ಧಂತಿ ಸಮಯದಲ್ಲಿ ನೆರೆದಾಗ ಸಂಸ್ಥಾನದ ಆಯವ್ಯಯದ ಅಂದಾಜು ಪಟ್ಟಿಯು ಸಭಿಕರ ಮುಂದಿಡಲಾಗುವುದು. ಪ್ರತಿನಿಧಿ ಸಭೆಗೆ ದಿವಾನರೇ ಅಧ್ಯಕ್ಷರು; ಸಭೆಯನ್ನು ಕರೆಸುವುದಕ್ಕೂ ನಿಲ್ಲಿಸುವುದಕ್ಕೂ ಅವರೇ ಅಧಿಕಾರಯುಕ್ತರಾದವರು. ಸಭೆಯ ಕಾರ್ಯಕಲಾಪಗಳ ಅನುಕ್ರಮವನ್ನು ನಿರ್ಣಯಿಸಿ ವಾದವಿವಾದಗಳ ಕಾಲದಲ್ಲಿ ಸಭಾಪತಿಗಳಾಗಿ ಗೌರವವನ್ನು ರಕ್ಷಿಸಲು ದಕ್ಷರಾದವರೂ ದಿವಾನರೇ. ಪ್ರತಿನಿಧಿ ಸಭೆಯಲ್ಲಿ ಪ್ರತಿನಿಧಿಗಳ ಸಂಖ್ಯೆಯು 270ರ ವರೆಗೂ ಇರಬಹುದಾದರೂ ಸಾಮಾನ್ಯವಾಗಿ 250ರಷ್ಟಿರುತ್ತದೆ. ಸಭಿಕರೆಲ್ಲರೂ ಪೌರರೇ. ದಿವಾನರು ಅಧ್ಯಕ್ಷರಾಗಿಯೂ, ಇತರ ಸಚಿವರು ಉಪಾಧ್ಯಕ್ಷರಾಗಿಯೂ ಇರುತ್ತಾರೆ. ಇತರ ಸರ್ಕಾರೀ ಉದ್ಯೋಗಸ್ಥರು ದಿವಾನರು ನಿರ್ಣಯಿಸಿದಂತೆ ಸಭೆಯಲ್ಲಿ ಸೇರಿ ಚರ್ಚೆಯಲ್ಲಿ ಭಾಗಿಗಳಾದರೂ

ಅವರಿಗೆ ಛಂದಾಧಿಕಾರವಿರುವುದಿಲ್ಲ. ಪ್ರತಿನಿಧಿ ಸಭೆಯು ಪ್ರತಿನಿಧಿ ಸಭೆಯಾಗಿಯೇ ಇರತಕ್ಕದ್ದು. ಒಂದುಬಾರಿ ವರಣಸಿದ್ಧವಾದ ಸಭೆಯು ಮೂರು ವರ್ಷಗಳವರೆಗೂ ನಡೆಯುತ್ತದೆ; ದಿವಾನರಿಗೆ ಸೂಕ್ತ ತೋರಿದಾಗ ಒಂದು ವರ್ಷ ಹೆಚ್ಚಿಸಬಹುದಾದ ಅಧಿಕಾರವು ಅವರಿಗಿರುತ್ತದೆ.

ವರಣ ವಿವರ

250 ಪ್ರತಿನಿಧಿಗಳಲ್ಲಿ ಎಲ್ಲರೂ ವರಣಸಿದ್ಧರಾಗಿ ಬಂದಿರುವುದಿಲ್ಲ. ಆ ಸಂಖ್ಯೆಯಲ್ಲಿ ಸಾಮಾನ್ಯಗಳಾದ ವರಣಕ್ಷೇತ್ರಗಳಲ್ಲಿ ವರಣವನ್ನು ಪಡೆಯತಕ್ಕವರು 200 (ಜಿಲ್ಲೆಗಳಿಗೆ 163, ಪಟ್ಟಣಗಳಿಗೆ 37). ವಿಶಿಷ್ಟ ಕ್ಷೇತ್ರಗಳು ಎರಡು ಬಗೆಯವು. ವಿಶ್ವವಿದ್ಯಾನಿಲಯ, ವಕೀಲರ ಸಂಘ, ಯುರೋಪ್ಯ ಪ್ಲಾಂಟರುಗಳು, ದೇಶೀಯ ಪ್ಲಾಂಟರುಗಳು, ಚಿನ್ನದ ಗಣಿಗಳ ಕಂಪೆನಿ, ವ್ಯಾಪಾರ ಸಂಘ, ಇನಾಂದಾರರ ಸಂಘಗಳು ವಿಶಿಷ್ಟಕ್ಷೇತ್ರಗಳೆನಿಸಿ ತಮ್ಮ ಪರವಾಗಿ ಒಬ್ಬೊಬ್ಬ ಪ್ರತಿನಿಧಿಯನ್ನು ಕಳುಹಿಸಿಕೊಡತಕ್ಕವರು. ಈ ಸಂಸ್ಥೆಗಳಲ್ಲದೆ ಗಿರಣಿ ಕಾಮಗಾರರು, ಗಣಿಗಳ ಕಾಮಗಾರರು, ಇತರ ಕೆಲಸಗಾರರು ಪ್ರತಿನಿಧಿಗಳನ್ನು ಪಡೆಯಲರ್ಹರೆಂದು ನಿಶ್ಚಯವಾಗಿದೆ; ಆದರೆ ಅವರ ಪ್ರತಿನಿಧಿಗಳನ್ನು ಸರ್ಕಾರದವರೇ ನಿಯಮಿಸುವರು. ಈ ವಿಶಿಷ್ಟ ಪ್ರತಿನಿಧಿಗಳ ಸಂಖ್ಯೆ 15. ಅವರಲ್ಲದೆ ಅಲ್ಪಸಂಖ್ಯಾಯುತರಾಗಿರುವುದರಿಂದ ಸಾಮಾನ್ಯ ವರಣಕ್ಷೇತ್ರಗಳಲ್ಲಿ ದುರ್ಬಲ ಸ್ಥಿತಿಯಲ್ಲಿರುವವರೆಂದು ನಿರ್ಣೀತರಾದ ಕಿರಿಯ ಕೋಮುಗಳೂ ವಿಶಿಷ್ಟ ಕ್ಷೇತ್ರಗಳೆಂದು ಗೊತ್ತಾಗಿವೆ; ಅವುಗಳಿಗೆ 35 ಸ್ಥಾನಗಳುಂಟು. ಆ ಕೋಮುಗಳ ಪ್ರತಿನಿಧಿಗಳನ್ನು ಕೋಮುಗಳ ಸಂಘಗಳಲ್ಲಿ ಸದಸ್ಯರಾದವರೇ ವರಿಸಿ ಕಳುಹಿಸಬಹುದು; ಸಂಘವೂ ಸಮಾಜವೂ ಇಲ್ಲದಿರುವ ಕೋಮುಗಳ ಪ್ರತಿನಿಧಿಗಳನ್ನು ಸರ್ಕಾರದವರೇ ನಿಯಮಿಸುವರು. ಈ ರೀತಿಯಲ್ಲಿ ಒಟ್ಟು 200 ಪ್ರತಿನಿಧಿಗಳು ವರಣಸಿದ್ಧರಾಗಿರುತ್ತಾರೆಂದು ಹೇಳಬಹುದು.

ವರಣ ಯೋಗ್ಯತೆ

ಪ್ರತಿನಿಧಿ ಸಭೆಗಾಗಲಿ, ನ್ಯಾಯವಿಧಾಯಕ ಸಭೆಗಾಗಲಿ, ಸ್ಥಳೀಯ ನಿರ್ವಾಹಕ ಮಂಡಲಿಗಳಿಗಾಗಲಿ ವರಣಗಳು ನಡೆಯುವ ಕಾಲದಲ್ಲಿ ಛಂದಾಧಿಕಾರವನ್ನು ಪಡೆದಿರಲು ಮತಿವಿಕಲರೂ, ಕ್ರಿಮಿನಲ್ ನ್ಯಾಯಸ್ಥಾನದಲ್ಲಿ ದಂಡಿತರಾದವರೂ, ಪಾಪರ್ ಸ್ಥಿತಿಯನ್ನು ಪಡೆದವರೂ,

ಸರ್ಕಾರದ ಹುದ್ದೆಗಳಲ್ಲಿದ್ದು ಅವುಗಳಿಂದ ಭ್ರಷ್ಟರಾದವರೂ ಅಯೋಗ್ಯರೆನಿಸಿದ್ದಾರೆ. ಸಂಸ್ಥಾನದಲ್ಲಿ ಮನೆಮಾರುಗಳನ್ನು ಮಾಡಿಕೊಂಡು ಪ್ರಜ್ಞಾವಂತರಾದ ನಿವಾಸಿಗಳಿಗೆ ಮಾತ್ರ ಛಂದಾಧಿಕಾರವು ಸಲ್ಲತಕ್ಕದ್ದು ನ್ಯಾಯ. ಆದ್ದರಿಂದ ವರಣ ಕಾರ್ಯದಲ್ಲಿ ಪಟ್ಟಣಸ್ಥರಲ್ಲಿ ಮುನಿಸಿಪಲ್ ಅಥವಾ ನಗರ ನಿರ್ವಾಹ ಸಭೆಯ ವರಣದಲ್ಲಿ ಭಾಗಿಗಳಾಗತಕ್ಕವರೆಲ್ಲರೂ ಛಂದಾಧಿಕಾರಯುತರೆಂದು ನಿರ್ಧರವಾಗಿದೆ. ಗ್ರಾಮಸ್ಥರಲ್ಲಿ ಕನಿಷ್ಠವೆಂದು ತೀರ್ಮಾನವಾದ ಆಸ್ತಿಪಾಸ್ತಿಗಳನ್ನುಳ್ಳವರೆಲ್ಲರೂ ಛಂದಾಧಿಕಾರಕ್ಕೆ ಯೋಗ್ಯರೆನಿಸಿರುತ್ತಾರೆ. ಆಸ್ತಿಪಾಸ್ತಿಯ ಯೋಗ್ಯತೆಯೊಂದು ಕಡೆಯುಂಟು; ಶಿಕ್ಷಣ ಯೋಗ್ಯತೆಯು ಇನ್ನೊಂದು ಕಡೆಯುಂಟು. ಏಕೆಂದರೆ, ವಿಶ್ವವಿದ್ಯಾಪೀಠಗಳಲ್ಲಿ ಪರಿಣತರಾಗಿ ಬಿ.ಎ. ಎಂಬ ಪದವಿಯನ್ನು ಪಡೆದವರೆಲ್ಲರೂ ಆಸ್ತಿಪಾಸ್ತಿಗಳಿಲ್ಲದಿದ್ದಾಗ್ಯೂ ಛಂದಾಧಿಕಾರವುಳ್ಳವರೆಂದು ಗೊತ್ತಾಗಿದೆ. ಸಂಸ್ಥಾನದ ನಿವಾಸಿಗಳೆನ್ನಿಸುವವರು ಯಾರು? ಆರು ತಿಂಗಳುಕಾಲ ಒಂದು ಸ್ಥಳದಲ್ಲಿ ಮನೆಮಾಡಿಕೊಂಡು ವಾಸಮಾಡುತ್ತಿದ್ದರೆ ಸ್ವೀಕಾರ (Domicile)ಕ್ಕೆ ಸಾಕು. ಆದ್ದರಿಂದ ಕಳೆದ ಆರು ತಿಂಗಳ ಕಾಲದಿಂದ ನಿವಾಸಿಗಳಾಗಿದ್ದು ಆಸ್ತಿವಂತರೋ ವಿದ್ಯಾವಂತರೋ ಆದವರೆಲ್ಲರೂ ಪ್ರತಿನಿಧಿ ಸಭೆಯ ವರಣದಲ್ಲಿ ಛಂದಗಳನ್ನು ಕೊಡಬಲ್ಲವರು. ಛಂದಗಳನ್ನು ಕೊಡಲು ಅವಶ್ಯವೆಂದು ನಿರ್ಣಯವಾದ ಯೋಗ್ಯತೆಯೇ ವರಣಾರ್ಥಿಗೂ ಇರತಕ್ಕದ್ದು; ಛಂದಾಧಿಕಾರವಿದ್ದರೆ ವರಣಾರ್ಥಿಗಳೂ ಆಗಬಹುದು. ವರಣ ವಿಧಾನವು ಪಾಶ್ಚಾತ್ಯ ದೇಶಗಳಲ್ಲಿ ನಡೆಯುವ ಹಾಗೆಯೇ ಇರುತ್ತದೆ. ಒಟ್ಟು 25,000 ಜನರಾಶಿಗೊಬ್ಬ ಪ್ರತಿನಿಧಿಯಂತೆ ಪರಿಣಮಿಸಿದೆ.

**ಸಭೆಯ ಸ್ಥಾನ**

1923ರಲ್ಲಿ ಪ್ರಕಟವಾದ ನಿಬಂಧನೆಯಲ್ಲಿ ಪ್ರತಿನಿಧಿ ಸಭೆಯ ಅಧಿಕಾರ ಭಾಗವು ವಿಧಿತವಾಗಿದೆ. ರಾಷ್ಟ್ರದಲ್ಲಿ ಪ್ರತಿನಿಧಿ ಸಭೆಗೊಂದು ನಿಷ್ಕೃಷ್ಟವಾದ ಪದವಿಯು ಲಬ್ಧವಾಗಿ ಅದೂ ರಾಷ್ಟ್ರ ಭಾಗವೆನಿಸಿದೆ. ಪ್ರತಿನಿಧಿ ಸಭೆಯು ಶಾಸಕ ಸಭೆಯೇ ಅಲ್ಲ; ಜನರ ಅಭಿಪ್ರಾಯವನ್ನೂ ಇಷ್ಟಾನಿಷ್ಟಗಳನ್ನೂ ವ್ಯಕ್ತಪಡಿಸುವ ಸಭೆ. ಪ್ರತಿನಿಧಿ ಸಭೆಯ ಕರ್ತವ್ಯವನ್ನು ಈ ರೀತಿಯಾಗಿ ವಿಂಗಡಿಸಿಕೊಳ್ಳಬಹುದು.

1. **ಶಾಸಕ ಕ್ಷೇತ್ರ**ದಲ್ಲಿ ಸಾಧಾರಣವಾಗಿ ಮುಖ್ಯವಾದ ಶಾಸನಗಳನ್ನು ಮಸೂದೆಯ ರೂಪದಲ್ಲಿ ಸಿದ್ಧಗೊಳಿಸಿ ನ್ಯಾಯವಿಧಾಯಕ ಸಭೆಯಲ್ಲಿ ಇಡುವ ಮೊದಲು ಅವುಗಳನ್ನು ಪ್ರತಿನಿಧಿ ಸಭೆಯಲ್ಲಿ ಚರ್ಚೆಗೊಳಗಾಗಿಸಬೇಕೆಂಬ ನಿಯಮವಿದೆ. ಅಂಥವುಗಳನ್ನು ಚರ್ಚಿಸಿ ಪ್ರತಿನಿಧಿಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಬಹುದು; ಆ ಅಭಿಪ್ರಾಯವನ್ನೇ ಸರ್ಕಾರದವರು ಅನುಸರಿಸತಕ್ಕದ್ದೆಂಬ ನಿಯಮವಿಲ್ಲ. ಅಸಾಧಾರಣ ಸಮಯವೆಂದು ತೋರಿದಾಗ ಸರ್ಕಾರದವರು ಪ್ರತಿನಿಧಿ ಸಭೆಯ ಅಭಿಪ್ರಾಯವನ್ನು ತಿಳಿಯದೆಯೇ ನ್ಯಾಯವಿಧಾಯಕ ಸಭೆಯಲ್ಲಿ ಶಾಸನ ರಚನೆಯ ಕೆಲಸವನ್ನು ಆರಂಭಿಸಲು ಅವಕಾಶವುಂಟು.

2. **ಆಯವ್ಯಯ ಕ್ಷೇತ್ರ**ದಲ್ಲಿ ಪ್ರತಿನಿಧಿ ಸಭೆಯಲ್ಲಿ ಚರ್ಚೆಯಾಗದೆ ಯಾವ ಹೊಸ ತೆರಿಗೆಯನ್ನೂ ಸರ್ಕಾರದವರು ಎತ್ತಲಾಗದೆಂದು ವಿಧಿಯಿದೆ. ಹೊಸ ತೆರಿಗೆಯು ಪ್ರತಿನಿಧಿಗಳಿಗೆ ಇಷ್ಟವಿಲ್ಲದಿದ್ದ ಪಕ್ಷದಲ್ಲಿ ಸರ್ಕಾರದವರು ಅದನ್ನು ಬಿಟ್ಟುಬಿಡಬೇಕೆಂಬುದೇನೂ ಇಲ್ಲ. ಸರ್ಕಾರದವರ ಉದ್ದೇಶಗಳನ್ನು ಮುಂದಾಗಿಯೇ ತಿಳಿಯುವ ಮತ್ತು ಅವುಗಳನ್ನು ವಿಮರ್ಶೆ ಮಾಡುವ ಅಧಿಕಾರವು ಪ್ರತಿನಿಧಿ ಸಭೆಗೆ ಇರುತ್ತದೆ. ಬಜೆಟ್ ಅಧಿವೇಶನದಲ್ಲಿ ಸರ್ಕಾರದ ವರ್ತನೆಯನ್ನು ವಿಮರ್ಶೆಮಾಡಿ ನಿಶ್ಚಯ (Resolutions) ಗಳನ್ನು ರೂಪಗೊಳಿಸುವ ಸಂದರ್ಭವೊದಗುವುದು.

3. **ಆಡಳಿತದ ವಿಮರ್ಶೆ**ಯಲ್ಲಿ ನಿಶ್ಚಯಗಳನ್ನಲ್ಲದೆ ತೋರಿಕೆಗಳನ್ನೂ (Representations) ರೂಪಗೊಳಿಸಬಹುದು. ಆಡಳಿತದ ವಿಷಯಗಳಲ್ಲಿ ಯಾವುದನ್ನಾದರೂ ಎತ್ತಿ ಅವುಗಳ ವಿಚಾರದಲ್ಲಿ ತಮ್ಮ ಇಷ್ಟವನ್ನು ತೋರಿಕೆಗಳಲ್ಲಿ ತಿಳಿಸಬಹುದು. ಪ್ರಶ್ನೋತ್ತರ ಸಮಯದಲ್ಲಿಯೂ ಆಡಳಿತದ ನೀತಿ ರೀತಿಯ ವಿಮರ್ಶೆಯನ್ನು ಜಾಣತನದಿಂದ ಸೂಚಿಸಬಹುದು.

ಸಭಾಪತಿಗಳಾದ ದಿವಾನರಿಗೆ ಸಭೆಯನ್ನು ನಿರ್ವಾಹಗೊಳಿಸುವುದರಲ್ಲಿ ಯಥೇಷ್ಟವಾದ ಅಧಿಕಾರವಿದೆ. ಪ್ರಶ್ನೆಗಳನ್ನಾಗಲಿ ಸೂಚನೆಗಳನ್ನಾಗಲಿ ಸೂಕ್ತ ತೋರಿದಂತೆ ಪ್ರಾರಂಭದಲ್ಲಿಯೇ ಅಡ್ಡಿಮಾಡಬಹುದು; ಸಭೆಯ

ಕಾರ್ಯ ಭಾಗಗಳಿಗೆ ಕಾಲನಿರ್ಣಯವನ್ನು ಮಾಡುವುದೂ ಆತನಿಗೆ ಸೇರಿದುದೇ.

## ನ್ಯಾಯವಿಧಾಯಕ ಸಭೆ

ಈ ಸಭೆಯೇ ನಿಜವಾದ ಶಾಸಕ ಸಭೆ. ಇದರ ರಚನಾಕ್ರಮವೂ ಕರ್ತವ್ಯಾಧಿಕಾರಗಳೂ 1924ನೇ ವರ್ಷದಲ್ಲಿ ಪ್ರಕಟವಾದ ನಿಬಂಧನೆಗೆ ಅನುಸಾರವಾಗಿವೆ. 1907ರಲ್ಲಿ ಪ್ರಾರಂಭವಾಗಿ ಕಾಲಕ್ರಮದಲ್ಲಿ ಪುಷ್ಟಿಪಡೆದು ಈಗಿನ ರೂಪವನ್ನು ಪಡೆದಿದೆ.

ಪ್ರತಿನಿಧಿ ಸಭೆಗೆ ಭೇದ

ಪ್ರತಿನಿಧಿ ಸಭೆಯಂತೆಯೇ ಈ ಸಭೆಯೂ ಮೂರು ವರ್ಷಕ್ಕೆ ಒಂದು ಸಲ ಪರಣಕೊಳ್ಳುಗಾಗಿ ಸಾಧಾರಣವಾಗಿ ವರ್ಷಕ್ಕೆ ಎರಡು ಸಲ ಸೇರುತ್ತದೆ. ಸಾಮಾನ್ಯವಾಗಿ ಬೆಂಗಳೂರಿನಲ್ಲಿಯೇ ಈ ಸಭೆ ನೆರೆಯುವುದು. ಇದಕ್ಕೂ ದಿವಾನರೇ ಸಭಾಪತಿಗಳಾಗಿ ಸಭೆಯನ್ನು ಕರೆಸುವ ಮತ್ತು ನಿಲ್ಲಿಸುವ ಅಧಿಕಾರವನ್ನು ಪಡೆದಿರುವುದಲ್ಲದೆ ಸಭೆಯ ಅಧಿವೇಶನದಲ್ಲಿ ಕಾರ್ಯಕ್ರಮವನ್ನು ನಿರ್ಣಯಿಸುವ ಅಧಿಕಾರವನ್ನು ಪಡೆದಿರುತ್ತಾರೆ. ನ್ಯಾಯವಿಧಾಯಕ ಸಭೆಯು ವರ್ಷಕ್ಕೆ ಎರಡೇಬಾರಿ ನೆರೆಯತಕ್ಕುದಲ್ಲ; ಅವಶ್ಯ ತೋರಿದಾಗಲೆಲ್ಲ ದಿವಾನರು ಕರೆಸಬಹುದು. ಏಕೆಂದರೆ ಆಡಳಿತವನ್ನು ಪ್ರತಿನಿಧಿ ಸಭೆಯಿಲ್ಲದೆಯೇ ನೆರವೇರಿಸಬಹುದು; ನ್ಯಾಯವಿಧಾಯಕ ಸಭೆಯಿಲ್ಲದೆ ನಿರ್ವಾಹವಾಗುವುದಿಲ್ಲ. ಆ ಸಭೆಯಿಲ್ಲದೆ ಶಾಸನ ರೂಪವೇ ಸಿದ್ಧವಾಗುವುದಿಲ್ಲ. ಪ್ರತಿನಿಧಿ ಸಭೆಯಲ್ಲಿ ಅಭಿಪ್ರಾಯ ಭೇದವು ಸಭಾ ವಿಭಾಗದಿಂದಲೇ ತೋರಿಕೊಳ್ಳುವುದು; ಸಭಿಕರ ಛಂದಗಳನ್ನು ಎಣಿಕೆ ಮಾಡಿ ಸಬಲ ದುರ್ಬಲ ಪಕ್ಷಗಳ ವ್ಯತ್ಯಾಸವೆಷ್ಟೆಂದು ನಿಷ್ಕರ್ಷೆಮಾಡುವ ಅವಶ್ಯವಿಲ್ಲ. ನ್ಯಾಯವಿಧಾಯಕ ಸಭೆಯಲ್ಲಾದರೆ ಪ್ರತಿ ಸಭಿಕನೂ ಛಂದಾಧಿಕಾರವುಳ್ಳವನು; ವಿಷಯವು ಇತ್ಯರ್ಥವಾಗಲು ಛಂದ ಪ್ರದರ್ಶನವಾಗಲೇಬೇಕು, ಬಹುಪಕ್ಷದ ಸಂಖ್ಯಾ ನಿಷ್ಕರ್ಷೆಯಾಗಲೇ ಬೇಕು. ಸಾಧಾರಣವಾಗಿ ನ್ಯಾಯವಿಧಾಯಕ ಸಭೆಯಲ್ಲಿ ಭಾಷಣಗಳು ಇಂಗ್ಲೀಷಿನಲ್ಲಿ ನಡೆಯುತ್ತವೆ; ಇಂಗ್ಲೀಷಿನಲ್ಲಿಯೇ ನಡೆಯತಕ್ಕದ್ದೆಂದು

ನಿಯಮವಿಲ್ಲದಿದ್ದರೂ ಇಂಗ್ಲೀಷೇ ವಾಡಿಕೆಯಾಗಿದೆ. ಪ್ರತಿನಿಧಿ ಸಭೆಯಲ್ಲಿ ಕನ್ನಡವೇ ಭಾಷೆ.

ಜನರ ಇಷ್ಟಾನಿಷ್ಟಗಳನ್ನು ವ್ಯಕ್ತಪಡಿಸಿ ಪ್ರತಿನಿಧಿ ಸಭೆಯು ಆಡಳಿತವು ಯಾವ ನೀತಿಯನ್ನು ಅನುಸರಿಸಬಹುದೆಂದು ನಿರ್ಧರಿಸಲು ಸಹಾಯಕವಾಗಿರುತ್ತದೆ. ಸಾಮಾನ್ಯ ಜನರಿಗೂ ಸರ್ಕಾರಕ್ಕೂ ಇಂತಹ ಸಂಬಂಧವನ್ನು ಕಾಪಾಡುವುದೇ ಪ್ರತಿನಿಧಿ ಸಭೆಯ ಸ್ಥಾನ. ನ್ಯಾಯವಿಧಾಯಕ ಸಭೆಯು ಪ್ರತಿನಿಧಿ ಸಭೆಯ ತೋರಿಕೆಗಳಿಗೆ ಅನುಸಾರವಾಗಿ ಶಾಸನ ರಚನೆಯನ್ನು ನೆರವೇರಿಸುತ್ತದೆ. ನ್ಯಾಯವಿಧಾಯಕ ಸಭೆಯ ಸದಸ್ಯರು ಪ್ರತಿನಿಧಿಗಳಿಗಿಂತ ಹೆಚ್ಚಾದ ಪ್ರಜ್ಞೆಯನ್ನೂ ಅನುಭವವನ್ನೂ ಪಡೆದಿರಬೇಕು. ಪ್ರತಿನಿಧಿಯಾದಾತನು ತನ್ನನ್ನು ಕಳುಹಿಸಿಕೊಟ್ಟವರ ಅಭಿಮತವನ್ನು ಸಭೆಯಲ್ಲಿ ಭಾಷಣರೂಪದಲ್ಲಿಯೂ ಅಭಿಮತರೂಪದಲ್ಲಿಯೂ ಸ್ಪಷ್ಟಗೊಳಿಸಿದಲ್ಲಿ ಕರ್ತವ್ಯಪಾಲನೆಯಾಗುವುದು. ನ್ಯಾಯವಿಧಾಯಕ ಸಭೆಯ ಸದಸ್ಯನು ಯಥಾಯೋಗ್ಯವಾಗಿ ರಾಷ್ಟ್ರಕರ್ತನಾಗಿಯೇ (Statesman) ಇರಬೇಕು. ಆತನಿಗೆ ಸರ್ಕಾರದ ರೀತಿ ನೀತಿಗಳ ತಿಳುವಳಿಕೆಯೂ ಇರಬೇಕು, ಪ್ರಜಾಭಿಮತದ ಪರಿಜ್ಞಾನವೂ ಇರಬೇಕು. ಚರ್ಚೆಗಳೂ ನಿಷ್ಕರ್ಷೆಗಳೂ ನ್ಯಾಯವಿಧಾಯಕ ಸಭೆಯಲ್ಲಿ ದಕ್ಷತೆಯಿಂದ ಕೂಡಿರುವುದಲ್ಲದೆ ಕೂಲಂಕಷವಾಗಿ ನಡೆಯಬೇಕು. ಸಭಿಕರ ಸಂಖ್ಯೆ ಹೆಚ್ಚಾಗಿದ್ದಷ್ಟೂ ವಿಚಾರ ವಿಮರ್ಶೆಗಳು ವಿವರವಾಗಿ ನಡೆಯಲು ಆತಂಕವೇ. ಆದುದರಿಂದ ನ್ಯಾಯವಿಧಾಯಕ ಸಭೆಯಲ್ಲಿ 50 ಸದಸ್ಯರು ಮಾತ್ರ ಇರುತ್ತಾರೆ.

**ಹೆಚ್ಚಿನ ಯೋಗ್ಯತೆ**

**ರಚನೆ**

ಸಭೆಯ ರಚನೆಯಲ್ಲಿ ಅರ್ಧ ಪಾಲಿಗೆ ಕಡಿಮೆಯಿಲ್ಲದಂತೆ ಪೌರರೇ ಇರತಕ್ಕದ್ದೆಂಬ ನಿಯಮವುಂಟು. ಪೌರರ ಭಾಗದಲ್ಲಿ ಮೂರರಲ್ಲೊಂದು ಪಾಲಿಗಿಂತ ಹೆಚ್ಚಾಗಿ ಸರ್ಕಾರದವರು ನಿಯಮಿಸಕೂಡದೆಂಬ ನಿಯಮವೂ ಉಂಟು. 50 ಸದಸ್ಯರು ಈ ರೀತಿ ಸಿದ್ಧರಾಗುತ್ತಾರೆ:—

**(1) ವರಣಸಿದ್ಧರು :**

| | | | | |
|---|---|---|---|---|
| 8 ಜಿಲ್ಲೆಗಳಿಗೂ ಜಿಲ್ಲೆಗೊಬ್ಬರಂತೆ | .. | .. | | 8 |
| 2 ನಗರಗಳಿಗೆ ಒಬ್ಬೊಬ್ಬರಂತೆ | .. | .. | | 2 |
| ಪ್ರತಿನಿಧಿ ಸಭೆಯಿಂದ | .. | .. | | 8 |
| ವಿಶ್ವವಿದ್ಯಾನಿಲಯ, ವ್ಯಾಪಾರ ಸಂಘ, ಪ್ಲಾಂಟರ್ಸ್, ಕಾಮಗಾರೀ ವರ್ಗಗಳೆಂಬ ವಿಶಿಷ್ಟ ಕ್ಷೇತ್ರಗಳಿಂದ | | .. | | 4 |
| | | | | 22 |

**(2) ನಿಯಮಿತರು :**

| | | | | |
|---|---|---|---|---|
| ಅಧಿಕಾರಸ್ಥರು | .. | .. | 20 | |
| ಪೌರರು | .. | .. | 8 | |
| | | | | 28 |
| | | ಒಟ್ಟು .. | | 50 |

ನಿಯಮಿತ ಭಾಗದಲ್ಲಿ ಪೌರರನ್ನು ಆರಿಸಿಕೊಳ್ಳುವಾಗ ಸರ್ಕಾರದವರು ಹರಿಜನರು, ಉದ್ಯೋಗ ಕೈಗಾರಿಕೆಗಳು, ಶಿಶುಪಾಲನೆ, ದುರ್ಬಲ ಸಂಖ್ಯಾತ ವರ್ಗದವರನ್ನು ನೆನಪಿನಲ್ಲಿಟ್ಟುಕೊಂಡು ತಕ್ಕಂತೆ ನಿಯಮಿಸತಕ್ಕದೆಂದು ವಿಧಿಯುಂಟು. ಈ ರಚನೆಯ ಪರಿಣಾಮವಾಗಿ ವರಣಸಿದ್ಧರು ದುರ್ಬಲರಾಗಿರುತ್ತಾರೆ. ಅಭಿಪ್ರಾಯ ಭೇದವು ಪಕ್ಷವಿಪಕ್ಷಗಳಲ್ಲಿ ಸರ್ಕಾರ ಪಕ್ಷ ಮತ್ತು ಪ್ರಜಾಪಕ್ಷಗಳೆಂದು ವಿಭಾಗವಾಗಬಹುದು. ಸಭಾಪತಿಗಳು ಸಭೆಯ ಅಭಿಪ್ರಾಯ ನಿಷ್ಕರ್ಷೆಮಾಡುವಾಗಲೆಲ್ಲ ಛಂದೋ ನಿರ್ಣಯವನ್ನು ಮಾಡಬೇಕು. ಬಹುಸಂಖ್ಯೆಯ ಛಂದಗಳು ಯಾವ ಪಕ್ಷವಾಗಿ ತೋರಿಕೊಳ್ಳುತ್ತವೆಯೋ ಅದರಂತೆಯೇ ನಿಷ್ಕರ್ಷೆಯಾಗಬೇಕು. ಸಭಾಪತಿಗೆ ಸಾಧಾರಣವಾಗಿ ಛಂದಾಧಿಕಾರವಿಲ್ಲ; ಅಸಾಧಾರಣ ಸಂದರ್ಭವಾಗಿ ಎರಡು ಪಕ್ಷಗಳೂ ಸಮಾನವಾದ ಛಂದೋಬಲವನ್ನು ತೋರಿದಲ್ಲಿ ನಿಶ್ಚಯ ಕಾರಕವಾದ ಛಂದಾಧಿಕಾರವು ಸಭಾಪತಿಗೆ ಸಲ್ಲುತ್ತದೆ.

ಸಭೆಯ ಆಚಾರ ಸಂಪ್ರದಾಯಗಳು ಇತರ ಶಾಸಕ ಸಭೆಗಳಲ್ಲಿರುವಂತೆಯೇ ಹೆಚ್ಚು ಕಡಿಮೆಯಾಗಿ ಇರುತ್ತವೆ.

**ಕರ್ತವ್ಯ ಕ್ರಮ**

ಶಾಸನದ ರೂಪಸಿದ್ಧಿಯು ಮಸೂದೆಯಾಗಿಯೇ ಮೊದಲು ತೋರಿಕೊಂಡು ಮೂರು ಹಂತಗಳನ್ನೂ ಏರಬೇಕು. ಪೌರಭಾಗದ ಸದಸ್ಯರು ಮಸೂದೆಗಳನ್ನು ಹುಟ್ಟಿಸಬಹು

ದಾದರೂ ಅವರಿಗೆ ಅವಕಾಶವು ಹೆಚ್ಚಾಗಿರುವುದಿಲ್ಲ. ಆಡಳಿತವನ್ನು ಹೊತ್ತವರು ಒದಗಿಸುವ ಕೆಲಸವೇ ಹೆಚ್ಚಾಗಿದ್ದು ಕಾಲವನ್ನು ಆಕ್ರಮಿಸುತ್ತದೆ. ಚರ್ಚೆಮಾಡುವ ರೀತಿನೀತಿಗಳನ್ನು ಕ್ರಮಗೊಳಿಸಲು ಸಭಾ ನಿಯಮಗಳುಂಟು. ಮಸೂದೆಯೆಂಬುದು ಮೂರು ಹಂತಗಳನ್ನೇರಿದುದೇ ಆದರೆ ದಿವಾನರು ಅದನ್ನು ಶ್ರೀಮನ್ಮಹಾರಾಜರಿಗೆ ತಿಳಿಯಪಡಿಸುವರು. ಮಹಾಸ್ವಾಮಿಯವರು ಅದಕ್ಕೆ ಸಮ್ಮತಿಯನ್ನು ಸೂಚಿಸಿದ ತರುವಾಯ ದಿವಾನರು ಸ್ವಹಸ್ತದಿಂದ ಆ ಅಂಶವನ್ನು ಬರೆದಿಟ್ಟು ಮಸೂದೆಯು ಶಾಸನವಾಯಿತೆಂದು ತಿಳಿಸಿ ಅದನ್ನು ಶಾಸನರೂಪದಿಂದ ಗೆಜೆಟ್ಟಿನಲ್ಲಿ ಪ್ರಕಟಗೊಳಿಸುವರು. ಮೂರಾವರ್ತಿ ಪ್ರಕಟವಾದಮೇಲೆ ಸರ್ವರಿಗೂ ಅದು ವಿಧಿಯಾಗಿ ಪರಿಣಮಿಸುವುದು.

ವರಣ ಯೋಗ್ಯತೆ

ನ್ಯಾಯವಿಧಾಯಕ ಸಭೆಗೆ ನಡೆಯುವ ವರಣಗಳು ಸಂಕುಚಿತವಾದ ಕ್ಷೇತ್ರಗಳಲ್ಲಿಯೇ ನಡೆಯತಕ್ಕದ್ದಾಗಿರುತ್ತದೆ. ವರಣಸಿದ್ಧರಾದ 22 ಸಭಿಕರಲ್ಲಿ 10 ಸಭಿಕರು ಜಿಲ್ಲೆಗಳಿಂದಲೂ ನಗರಗಳಿಂದಲೂ ಪ್ರತ್ಯಕ್ಷ ರೀತಿಯಲ್ಲಿ ವರಣಪ್ರಾಪ್ತಿಯುಳ್ಳವರು. ಆ ವರಣಗಳಲ್ಲಿ ಹೆಚ್ಚಿನ ಯೋಗ್ಯತೆಯೇ ಇರಬೇಕಾದುದು ಅವಶ್ಯವಾದುದರಿಂದ ಪ್ರತಿನಿಧಿಗಳ ವರಣದಲ್ಲಿ ಎಷ್ಟು ಯೋಗ್ಯತೆಯಿರಬೇಕೋ ಅದರ ಎರಡರಷ್ಟು ವರಣಕರ್ತರಿಗೂ ನಾಲ್ಕರಷ್ಟು ವರಣಾರ್ಥಿಗಳಿಗೂ ಇರತಕ್ಕದ್ದೆಂದು ನಿಯಮವಿದೆ. 10 ಸಭಿಕರ ವರಣಕಾರ್ಯವು ಈ ಬಗೆಯಲ್ಲಿ ನೆರವೇರುವುದು. ಪ್ರತಿನಿಧಿ ಸಭೆಯಲ್ಲಿ ವರಣವನ್ನು ಹೊಂದಿ ಸಿದ್ಧರಾಗುವ 8 ಸಭಿಕರು ಎರಡುಬಾರಿ ವರಣವನ್ನು ಪಡೆಯುವುದರಿಂದ ಅವರಿಗೆ ಈ ಹೆಚ್ಚಿನ ಯೋಗ್ಯತೆ ಇರಬೇಕಾದ ಅವಶ್ಯಕತೆಯಿಲ್ಲ.

ನ್ಯಾಯವಿಧಾಯಕ ಸಭೆಯ ಕರ್ತವ್ಯಾಧಿಕಾರ ಕ್ಷೇತ್ರವನ್ನು ಈ ರೀತಿಯಲ್ಲಿ ಭೇದಿಸಿಕೊಳ್ಳಬಹುದು :—

1. **ಶಾಸಕ ಸಂಬಂಧ**—ವಿಧಿಗಳನ್ನೂ ನಿಬಂಧನೆಗಳನ್ನೂ ಸಿದ್ಧಗೊಳಿಸುವುದು ಈ ಸಭೆಯಲ್ಲಿಯೇ. ಮಸೂದೆಗಳ ರೂಪದಲ್ಲಿ ಶಾಸನಗಳೆಲ್ಲವೂ ಇಲ್ಲಿಯೇ ಮೊದಲಾಗಬೇಕು. ಯಾವ ಮಸೂದೆಯನ್ನಾಗಲಿ

ಸಭೆಯಲ್ಲಿ ಇಡುವ ಮೊದಲು ಅದಕ್ಕೆ ದಿವಾನರ ಸಮ್ಮತಿಯನ್ನು ಲಿಖಿತ ರೂಪದಲ್ಲಿ ಮೊದಲೇ ಪಡೆಯತಕ್ಕದ್ದೆಂದು ನಿಯಮವಿದೆ. ಸಭೆಯು ಶಾಸನ ರಚನಾಧಿಕಾರದಲ್ಲಿ ನಿಷಿದ್ಧವೆನಿಸಿದ ಕ್ಷೇತ್ರಗಳು ಅಥವಾ ವಿಷಯ ಗಳುಂಟು. ಅವು ಯಾವುವೆಂದರೆ:—

(i) ಸಂಸ್ಥಾನದ ರಾಜವಂಶ;

(ii) ಮಹಾರಾಜರವರು ಬ್ರಿಟಿಷರೊಡನೆಯಾಗಲಿ, ಇತರ ಸಂಸ್ಥಾನಾಧಿಪತಿಗಳೊಡನೆಯಾಗಲಿ, ಇತರ ರಾಷ್ಟ್ರ ಗಳೊಡನೆಯಾಗಲಿ ನಡೆಸಬಹುದಾದ ಸಂಬಂಧ ವ್ಯವ ಹಾರಗಳು;

(iii) ಬ್ರಿಟಿಷರೊಡನೆ ಕರಾರುಗಳಿಗೂ ಒಪ್ಪಂದಗಳಿಗೂ ವಿಷಯ ಗಳಾಗಿರುವ ಅಥವಾ ಆಗಬಹುದಾದ ವಿಚಾರಗಳು;

(iv) ನ್ಯಾಯವಿಧಾಯಕ ಸಭೆಯ ಮತ್ತು ಪ್ರಜಾಪ್ರತಿನಿಧಿ ಸಭೆಯ ರಚನೆಗೆ ಸಂಬಂಧಿಸಿದ ನಿಬಂಧನೆಗಳು;

(v) ಆಗಿಂದಾಗ್ಗೆ ಅಧಿಕಾರಕ್ಕೆ ಹೊರಗೆಂದು ಮಹಾಸ್ವಾಮಿಯವ ರಿಂದ ನಿರ್ಣೀತವಾದ ವಿಷಯಗಳು.

2. **ಆಯವ್ಯಯ ಸಂಬಂಧ.**— ಸರ್ಕಾರದವರು ಸಭಿಕರೆದುರಿಗೆ ವಾರ್ಷಿಕ ಆಯವ್ಯಯದ ಅಂದಾಜು ಲೆಕ್ಕವನ್ನು ಇಡಬೇಕು. ರಾಷ್ಟ್ರಾ ದಾಯದ ಭಾಗವಾದುದಾಗಲಿ ಬೇರೆಯಾಗಲಿ ಹಣವನ್ನು ವೆಚ್ಚಗೊಳಿಸುವ ಮೊದಲು ಸಭಿಕರ ಛಂದೋಬಲವು ಲಬ್ಧವಾಗಬೇಕು. ಆದ್ದರಿಂದ ಬಜೆಟ್ ವಿಮರ್ಶೆಯೆಂಬುದು ಮುಖ್ಯವಾದ ಕರ್ತವ್ಯವೇ ಆಗಿರುತ್ತದೆ. ಇದರ ಸಂಬಂಧವಾಗಿ ಎರಡು ಅಂಶಗಳನ್ನು ಜ್ಞಾಪಕದಲ್ಲಿಡಬೇಕು. ನಿಷಿದ್ಧವಾದ ಭಾಗವೆಂಬುದೊಂದು, ಸರ್ಕಾರದವರ ಅಧಿಕಾರಬಲವೆಂಬುದು ಇನ್ನೊಂದು. ನ್ಯಾಯವಿಧಾಯಕ ಸಭೆಯವರು ಈ ವಿಷಯಗಳನ್ನು ಚರ್ಚಿಸಲೂ ಆಗದು, ಛಂದೋನಿರ್ಣಯಮಾಡಲೂ ಆಗದು:—

(i) ಅರಮನೆಯ ವೆಚ್ಚ;

(ii) ಸೈನ್ಯದ ವೆಚ್ಚ;

(iii) ನಿವೃತ್ತರಾದ ಅಧಿಕಾರಸ್ಥರ ವಿಶ್ರಾಂತಿ ವೇತನದ ವೆಚ್ಚ;

(iv) ಕರಾರುಗಳಲ್ಲಿಯೋ ವಿಧಿಗಳಲ್ಲಿಯೋ ನಿಶ್ಚಯಿಸಿದ ವೆಚ್ಚ; ಪ್ರಾಂತಗಳಿಗೆ ಕರಾರಿನಂತೆ ಸಲ್ಲಿಸುವ ಪೊಗದಿ, ಸಾಲಪತ್ರಗಳ ಮೇಲಿನ ಬಡ್ಡಿ, ಇತ್ಯಾದಿ.

ಸರ್ಕಾರದವರು ನ್ಯಾಯವಿಧಾಯಕ ಸಭೆಯ ಜೊತೆ ದೊರೆಯ ಬದ್ಧಾಗ್ಲೂ ತಮ್ಮ ನಿಶ್ಚಯದಂತೆ ಆಯವ್ಯಯವನ್ನು ನಡೆಸುವ ಅಧಿಕಾರವನ್ನು ಪಡೆದೇ ಇದ್ದಾರೆ.

3. **ಆಡಳಿತದ ವಿಮರ್ಶಾ ಸಂಬಂಧ.**— ಯಾವ ಸಭಿಕನಾದರೂ ಸಮಾಚಾರ ಸಂಗ್ರಹಕ್ಕಾಗಿ ಪ್ರಶ್ನೆಗಳನ್ನು ಕೇಳಬಹುದು. ಪ್ರಶ್ನೋತ್ತರ ಗಳಲ್ಲಿ ವಿಮರ್ಶೆಯನ್ನು ಸೂಚಿಸಬಹುದಾದರೂ ವಿಮರ್ಶೆಗೆ ಬಜೆಟ್ ಚರ್ಚೆಯ ಕಾಲದಲ್ಲಿ ಹೆಚ್ಚಿನ ಅವಕಾಶವಿರುತ್ತದೆ. ವೆಚ್ಚದ ಅಂಶಗಳಲ್ಲಿ ನಿಷಿದ್ಧವಲ್ಲದವುಗಳ ಚರ್ಚೆಯ ಸಂದರ್ಭದಲ್ಲಿ ವೆಚ್ಚವನ್ನು ತಗ್ಗಿಸುವ ಸೂಚನೆಯನ್ನು (Cut Motion—ಕತ್ತರಿ ಪ್ರಯೋಗ) ಮೊದಲುಮಾಡಿ ಆಡಳಿತದ ವಿಮರ್ಶೆಯನ್ನು ನಡೆಸಬಹುದು. ಇದಲ್ಲದೆ ಮುಖ್ಯವೂ ಆತುರವೂ ಆಗಿರುವ ವಿಷಯವನ್ನೆತ್ತಿ ಶಿಫಾರಸು ರೂಪದ ನಿಶ್ಚಯವನ್ನು ಮಾಡಬಹುದು.

ಶಾಸಕಾಂಗದಲ್ಲಿ ಪ್ರತಿನಿಧಿಸಭೆ ನ್ಯಾಯವಿಧಾಯಕಸಭೆಗಳೆರಡೂ ಗಣ್ಯವಾಗಿದ್ದರೂ ನ್ಯಾಯವಿಧಾಯಕ ಸಭೆಯು ಮಾತ್ರವೇ ಶಾಸಕಾಂಗವೆನ್ನಿಸಲು ಯೋಗ್ಯವಾದುದು. ಪ್ರತಿನಿಧಿ ಸಭೆಗೆ ಪ್ರಜಾರಾಶಿಯ ಇಷ್ಟಾನಿಷ್ಟಗಳನ್ನು ತೋರ್ಪಡಿಸುವ ಕರ್ತವ್ಯವೇ ಮುಖ್ಯವಾದುದು; ಶಾಸಕಾಧಿಕಾರವು ಆ ಸಭೆಗೆ ಇಲ್ಲ. ಆದ್ದರಿಂದ ಅದನ್ನು **ತೋರಿಕೆಯ ಸಭೆಯೆಂದೇ** ತಿಳಿಯಬೇಕು. ನ್ಯಾಯವಿಧಾಯಕ ಸಭೆಯು ಶಾಸಕಾಂಗ

ಸರ್ಕಾರದ ಅಧಿಕಾರ

ವೆನಿಸಿ ರಾಷ್ಟ್ರಭಾರನಿರ್ವಾಹದಲ್ಲಿ ಒಂದು ಅಂಗವಾಗಿದ್ದಾಗ್ಗೂ ಇಂಗ್ಲಂಡಿನ ಅಥವಾ ಫ್ರಾನ್ಸಿನ ಪಾರ್ಲಿಮೆಂಟಿನೊಂದಿಗೆ ಸರಿದೂಗುವುದಿಲ್ಲ. ಸಂಸ್ಥಾನದಲ್ಲಿ ಸರ್ಕಾರದವರು ನ್ಯಾಯವಿಧಾಯಕ ಸಭೆಯ ಸಂಪರ್ಕವೇ ಇಲ್ಲದೆ ಆರು ತಿಂಗಳ ಚೈತನ್ಯವಿರುವ ನಿಬಂಧನೆಗಳನ್ನು ರಚಿಸಬಲ್ಲವರು; ಸಭೆಯಲ್ಲಿಯೂ ಪ್ರಬಲರು. ನ್ಯಾಯವಿಧಾಯಕ ಸಭೆಗೆ ಶಾಸಕ ಕರ್ತವ್ಯದಲ್ಲಿ ಪೂರ್ಣಾಧಿಕಾರವಿಲ್ಲ. ಆಯವ್ಯಯದಲ್ಲಿ ವಿಶೇಷವಾದ ಭಾಗವು ನಿಷಿದ್ಧವಾಗಿರುವುದಲ್ಲದೆ ಉಳಿದ ಭಾಗದ ವ್ಯವಸ್ಥೆಯಲ್ಲಿಯೂ ಸರ್ಕಾರದವರಿಗೆ ಹೆಚ್ಚಿನ ಅಧಿಕಾರವಿರುವುದರಿಂದ ರಾಷ್ಟ್ರದಾಯವ್ಯಯದ ಸ್ವಾಧೀನತೆಯಿದೆಯೆಂದು ಹೇಳಲಾಗುವುದಿಲ್ಲ. ಕಾರ್ಯಾಂಗದವರನ್ನು ಅಧೀನದಲ್ಲಿಟ್ಟುಕೊಳ್ಳುವ ಅಧಿಕಾರವೂ ಇಲ್ಲ.

**ಉದ್ದೇಶ**

ಈ ರೀತಿಯಲ್ಲಿ ನ್ಯಾಯವಿಧಾಯಕ ಸಭೆಗೆ ಪೂರ್ಣಾಧಿಕಾರವಿಲ್ಲದಿರಲು ಕಾರಣವು ಸ್ಪಷ್ಟವಾಗಿಯೇ ಇದೆ. ಸುಧಾರಣೆಗಳು ಒದಗಿದಾಗ ಅಧಿಕಾರವನ್ನು ಸಭೆಗಳಿಗೊಪ್ಪಿಸಿಬಿಡುವ ಉದ್ದೇಶವಿರಲಿಲ್ಲ. ಆಡಳಿತದ ಕೆಲಸಕಾರ್ಯಗಳಲ್ಲಿ ಪ್ರಜಾವರ್ಗದವರನ್ನು ತಕ್ಕಮಟ್ಟಿಗೆ ಸೇರಿಸಿಕೊಳ್ಳುವ ಉದ್ದೇಶವು ಮಾತ್ರವೇ ಇದ್ದಿತು. ಸರ್ಕಾರವನ್ನು ಪ್ರತಿನಿಧಿಗಳಿಗೆ ಉತ್ತರವಾದಿಯಾದುದಾಗಿ ಮಾಡುವ ಉದ್ದೇಶವೇ ಇರಲಿಲ್ಲ; ಪ್ರತಿನಿಧಿಗಳ ಇಷ್ಟಾನಿಷ್ಟಗಳನ್ನು ತಿಳಿದು ಕೂಡಿದಮಟ್ಟಿಗೂ ಅವುಗಳನ್ನು ಅನುಸರಿಸುವ ಉದ್ದೇಶ ಮಾತ್ರವೇ ಇದ್ದಿತು. ಈ ಸಭೆಗಳ ದೆಸೆಯಿಂದ ಜನರಿಗೆ ಪ್ರಾತಿನಿಧ್ಯದ ತತ್ವಗಳ ಪರಿಚಯವೂ ಅನುಭವವೂ ಒದಗಿ ತಕ್ಕ ಶಿಕ್ಷಣವು ಒಡಗೂಡುವುದೆಂಬುದರಲ್ಲಿ ಸಂದೇಹವಿಲ್ಲ.

**ಆಯ**

ಮೈಸೂರು ಸಂಸ್ಥಾನವು ಸಂಸ್ಥಾನಗಳಲ್ಲಿ ಹಿರಿದೆನಿಸಿದ್ದರೂ ಬ್ರಿಟಿಷ್ ಪ್ರದೇಶಗಳಿಗಿಂತ ಚಿಕ್ಕದು. ಸಂಸ್ಥಾನದ ಆಯವನ್ನು ಪ್ರದೇಶಗಳ ಆಯಗಳೊಂದಿಗೆ ಹೋಲಿಸಿ ದೃಷ್ಟಾಂತವಾಗಿ ನೋಡಬಹುದು :—

## ಆಯದ ಅಂದಾಜು (1926–27)

| | | |
|---|---|---|
| ನೆಲಗಂದಾಯ | .. | 1,25,03,000 |
| ಕಾಡು | .. | 33,68,000 |
| ಆಬ್ಕಾರಿ | .. | 62,50,000 |
| ವರಮಾನ ತೆರಿಗೆ, ಇತ್ಯಾದಿ | .. | 17,50,000 |
| ಸ್ಟಾಂಪು | .. | 20,25,000 |
| ರೆಜಿಸ್ಟ್ರೇಷನ್ | .. | 3,50.000 |
| ಗಣಿಗಳಿಂದ | .. | 12,33,000 |
| ಬಡ್ಡಿ | .. | 8,10,000 |
| ಶಿಕ್ಷಣ | .. | 1,97,000 |
| ವ್ಯವಸಾಯ | .. | 1,12,000 |
| ರೈಲು | .. | 18,92,000 |
| ನೀರಾವರಿ | .. | 25,41,000 |
| ಇತರಂಶಗಳೂ ಸೇರಿ ಒಟ್ಟು | .. | 3,41,70,000 |

ಎಲ್ಲ ಸಂಸ್ಥಾನಗಳಲ್ಲಿಯೂ ಇದೇ ರೀತಿಯಲ್ಲಿಯೇ ರಾಷ್ಟ್ರವ್ಯವಸ್ಥೆಯಿರುವುದಿಲ್ಲ. ಅರಮನೆಯ ವೆಚ್ಚವೆಂಬುದು ಮೈಸೂರು ಸಂಸ್ಥಾನದಲ್ಲಿ 50 ಲಕ್ಷಗಳಿಗೆ ಮೀರದಂತೆ ನಿಬಂಧನೆಯುಂಟು, ಅನೇಕ ಸಂಸ್ಥಾನಗಳಲ್ಲಿ ಹುಟ್ಟುವಳಿಯೆಲ್ಲವೂ ರಾಜಸ್ವವೆಂದು ಗಣ್ಯವಾಗುತ್ತದೆ. ಬಜ್ಜೆಟ್ ಪದ್ಧತಿಯೇ ಅನೇಕ ಸಂಸ್ಥಾನಗಳಲ್ಲಿರುವುದಿಲ್ಲ.

**ಸಂಸ್ಥಾನಗಳ ವೈಶಿಷ್ಟ್ಯ**

ಸಂಸ್ಥಾನಾಧಿಪತಿಗಳು ಬ್ರಿಟಿಷರೊಡನೆ ಕರಾರುಗಳನ್ನು ನಡೆಸಿಕೊಂಡಿರತಕ್ಕವರಾದುದರಿಂದ ಕರಾರುಗಳಲ್ಲಿ ಎಷ್ಟು ಮಾತ್ರವೋ ಅಷ್ಟೇ ಎಲ್ಲೆಯನ್ನು ತಮ್ಮ ಅಧಿಕಾರ ಕ್ಷೇತ್ರಗಳಲ್ಲಿ ಕಾಣುವವರು. ಭರತವರ್ಷದಲ್ಲಿ ಸರ್ವತ್ರ ತೋರಿಕೊಂಡಿರುವ ಪ್ರಾತಿನಿಧ್ಯ ತತ್ವಗಳ ಆಚಾರ ಸಂಪ್ರದಾಯಗಳು ಸಂಸ್ಥಾನಗಳಲ್ಲಿಯೂ ಕ್ರಮವಾಗಿ ತೋರಿಕೊಳ್ಳತಕ್ಕವು. ಬ್ರಿಟಿಷ್

ಪ್ರದೇಶಗಳಿಗೂ ಸಂಸ್ಥಾನಗಳಿಗೂ ಇರುವ ಮತ್ತೊಂದು ಭೇದವನ್ನು ಮರೆಯಲಾಗದು. ಸಂಸ್ಥಾನಗಳಲ್ಲಿಯೇ ಭಾರತೀಯವೆನ್ನಬಹುದಾದ ರೀತಿ ನೀತಿಗಳು ನೆಲೆಯಾಗಿವೆ; ದೇಶೀಯವಾದ ಆಚಾರ ಸಂಪ್ರದಾಯಗಳು ರೂಢಿಯಾಗಿವೆ. ಸಂಸ್ಥಾನಾಧಿಪತಿಗಳು ಪೂರ್ವಕಾಲದಿಂದಲೂ ಪ್ರಸಿದ್ಧಿ ಪಡೆದ ರಾಜವಂಶಜರಾಗಿ ದೇಶಕ್ಕೆ ಭೂಷಣಪ್ರಾಯರಾದವರು.

**ವ್ಯೂಹ ರಾಷ್ಟ್ರ**

ಭರತವರ್ಷ ರಾಷ್ಟ್ರವು ಮುಂದೆ ಸಂಯುಕ್ತ ಅಥವಾ ವ್ಯೂಹ ರಾಷ್ಟ್ರ (Federation)ವಾಗಿ ಪರಿಣಮಿಸುವ ಸೂಚನೆಗಳು ಅನೇಕವಾಗಿ ಉಂಟು. ವ್ಯೂಹವಾದ ಪಕ್ಷದಲ್ಲಿ ದಿಲ್ಲಿಯಲ್ಲಿ ನೆರೆಯುವ ಅಖಿಲ ಭಾರತ ಶಾಸಕ ಸಭೆಯಲ್ಲಿ ಸಂಸ್ಥಾನಗಳ ಪ್ರತಿನಿಧಿಗಳೂ ಸೇರಬೇಕಾಗುವುದು. 600 ಸಂಸ್ಥಾನಗಳಲ್ಲಿ ಈ ಪ್ರಾತಿನಿಧ್ಯವನ್ನು ನಿಷ್ಕರ್ಷಿಸುವ ಬಗೆ ಹೇಗೆ, ಶಾಸಕ ಸಭೆಯಲ್ಲಿ ಸಂಸ್ಥಾನಗಳ ಪ್ರತಿನಿಧಿಗಳ ಕರ್ತವ್ಯಾಧಿಕಾರಗಳು ಹೇಗಿರಬೇಕು, ಬ್ರಿಟಿಷರೊಡನೆ ನಡೆದಿರುವ ಕರಾರುಗಳು ಹೇಗೆ ನಡೆಯಬೇಕು, ಮೊದಲಾದ ಅಂಶಗಳು ಇನ್ನೂ ವಿಚಾರಣೆ ವಿಮರ್ಶೆಯ ಸ್ಥಿತಿಯಲ್ಲಿಯೇ ಇವೆ.

## ಸ್ಥಳೀಯ ನಿರ್ವಾಹ

**ಮೂಲ ಕಾರಣಗಳು**

ಒಂದು ಸ್ಥಳದಲ್ಲಿ ಅಥವಾ ಒಂದು ನೆರೆಯಲ್ಲಿ ವಾಸಮಾಡುವ ಜನರು ತಮ್ಮ ನೆರೆಗೆ ಸಂಬಂಧಪಟ್ಟ ಕೆಲಸಕಾರ್ಯಗಳನ್ನು ತಾವೇ ನಿರ್ವಹಿಸಿಕೊಳ್ಳತಕ್ಕದ್ದು ಅನೇಕ ಬಗೆಗಳಲ್ಲಿ ಉತ್ತಮವಾದುದು. ಗ್ರಾಮವಾಗಲಿ ಪಟ್ಟಣವಾಗಲಿ ಅಲ್ಲಿಯ ನಿವಾಸಿಗಳು ತಮಗೆ ಬೇಕಾದ ಅನುಕೂಲಗಳನ್ನು ತಾವೇ ನಿರ್ವಹಿಸಿಕೊಂಡು ಸ್ಥಳೀಯ ಸ್ವರಾಜ್ಯವನ್ನು ಪಡೆದಿರಬಹುದು. ಒಂದು ಗ್ರಾಮದಲ್ಲಿ ಹೊಸದಾಗಿ ಒಂದು ಬಾವಿಯನ್ನು ತೋಡಿಸುವುದೋ, ಒಂದು ಪಟ್ಟಣದಲ್ಲಿ ಒಂದು ಆಸ್ಪತ್ರೆಯನ್ನು ತೆರೆಯುವುದೋ ಅವಶ್ಯವಾದಾಗ ಅದಕ್ಕೆ ತಕ್ಕ ವಿಧಿಯನ್ನು ಪ್ರಾದೇಶಿಕ ಶಾಸಕ ಸಭೆಯೋ ಸಂಸ್ಥಾನದ ನ್ಯಾಯವಿಧಾಯಕ ಸಭೆಯೋ ನಿಷ್ಕರ್ಷೆಮಾಡತಕ್ಕದ್ದಾದರೆ

ಕಾಲ ವ್ಯರ್ಥವಾಗುವುದು; ಬೇರೆ ಸ್ಥಳಗಳಲ್ಲಿರುವವರಿಗೆ ಆ ಗ್ರಾಮದ ಅಥವಾ ಆ ಪಟ್ಟಣದ ಸ್ಥಿತಿಗತಿಗಳು ತಿಳಿದಿರಲಾರವು. ಅಂತಹವರು ವಿಧಿಯನ್ನು ನಿಯಮಿಸಿ ಅಧಿಕಾರಿ ವರ್ಗದವರು ಕೆಲಸವನ್ನು ಕೈಕೊಂಡರೆ ಕೆಲಸವು ನಿದಾನವಾಗಬಹುದಲ್ಲದೆ ಕಡೆಯಲ್ಲಿ ಅಸಮರ್ಪಕವಾಗಿಯೂ ಮುಗಿಯಬಹುದು. ಕಾಲವೂ ವೆಚ್ಚವೂ ವ್ಯರ್ಥವಾಗುವುದೇ ಅಲ್ಲದೆ ಕೆಲಸವೂ ತೃಪ್ತಿಕರವಾಗಿ ನಡೆಯುವ ಸಂಭವವು ಕಡಿಮೆಯಾದುದರಿಂದ ಸ್ಥಳದವರೇ ಆ ಕೆಲಸಗಳ ರೀತಿ ನೀತಿಯನ್ನು ನಿಷ್ಕರ್ಷಿಸಿಕೊಂಡು ನಿರ್ವಹಿಸಿದರೆ ವ್ಯರ್ಥವಾಗದೆ ಶೀಘ್ರವಾಗಿಯೂ ಸಮರ್ಪಕವಾಗಿಯೂ ಕೆಲಸವು ಈಡೇರುವುದು. ಸರ್ಕಾರದವರ ಕರ್ತವ್ಯವು ಜನಜೀವನದ ಸರ್ವ ಕ್ಷೇತ್ರಗಳಲ್ಲಿಯೂ ಹುಟ್ಟಿಕೊಳ್ಳುತ್ತ ಅತಿವಿಸ್ತಾರವಾಗುತ್ತಲಿರುವುದರಿಂದ ಸ್ಥಳೀಯ ನಿರ್ವಾಹ ಭಾರವನ್ನು ಸ್ಥಳೀಯರೇ ಹೊರುವುದರಿಂದ ಸರ್ಕಾರಕ್ಕೂ ಭಾರವು ಹಗುರವಾಗುವುದು. ಇಷ್ಟೇ ಅಲ್ಲದೆ ಸ್ಥಳೀಯ ನಿರ್ವಾಹದಲ್ಲಿ ಜನರಿಗೆ ಉತ್ತಮವಾದ ಶಿಕ್ಷಣವು ಒದಗುವುದು. ಜನರು ಪ್ರಾತಿನಿಧ್ಯದ ತತ್ವಗಳನ್ನಾಚರಿಸಲು ಅನುಭವವನ್ನು ಪಡೆದು ರಾಷ್ಟ್ರಭಾರ ನಿರ್ವಾಹದಲ್ಲಿ ತಮ್ಮ ಭಾಗವನ್ನು ನಡೆಸುವುದರಲ್ಲಿ ಹೆಚ್ಚು ಪ್ರಜ್ಞಾವಂತರೂ ದಕ್ಷರೂ ಆಗುವರು. ಈ ಬಗೆಗಳಲ್ಲಿ ಸ್ಥಳೀಯ ನಿರ್ವಾಹವೆನ್ನುವುದು ಜನಸ್ವಾಮ್ಯ ತತ್ವವನ್ನು ಅವಲಂಬಿಸಿದ ರಾಷ್ಟ್ರಗಳಲ್ಲಿ ಆಧಾರಭೂತವಾದುದು.

ವಿಭಾಗಗಳು

ನಮ್ಮ ದೇಶದಲ್ಲಿ ಗ್ರಾಮಗಳೂ ಉಂಟು, ಪಟ್ಟಣಗಳೂ ಉಂಟು. ಗ್ರಾಮಸ್ಥರು ಗ್ರಾಮಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ಪಂಚಾಯತ ಸಭೆಯ ಮೂಲಕ ತಾವೇ ನಿರ್ವಹಿಸುತ್ತಾರೆ. ಗ್ರಾಮಗಳಲ್ಲಿ ಚಿಕ್ಕವೆನಿಸಿದ ಕುಗ್ರಾಮಗಳೂ ಉಂಟು, ಮನೆಗಳನ್ನೂ ನಿವಾಸಿಗಳನ್ನೂ ಯೋಗ್ಯ ಸಂಖ್ಯೆಯಿಂದ ಪಡೆದ ಗ್ರಾಮಗಳೂ ಉಂಟು. ಗ್ರಾಮಗಳು ಅಕ್ಕಪಕ್ಕಗಳಲ್ಲಿಯೇ ಇರುವುದರಿಂದ ಒಂದೇ ನೆರೆಯಲ್ಲಿರುವ ಗ್ರಾಮಗಳಿಗೆಲ್ಲಕ್ಕೂ ಸಾಮಾನ್ಯವಾಗಿ ಬೇಕೆನ್ನಿಸುವ ಅನುಕೂಲಗಳುಂಟು. ಉದಾ: ರಸ್ತೆ, ಕಾಲುವೆ, ಆಸ್ಪತ್ರೆ, ಶಾಲೆ, ಇತ್ಯಾದಿ. ನೆರೆಯನ್ನು ನಿಷ್ಕರ್ಷೆಮಾಡಿ ಗ್ರಾಮ

ಗಳನ್ನು ಗುಂಪುಗೂಡಿಸಿ ತಾಲ್ಲೂಕುಗಳೆಂಬುದಾಗಿಯೂ ಜಿಲ್ಲಾ ಎಂಬುದಾಗಿಯೂ ವಿಭಾಗವಮಾಡಿಕೊಳ್ಳಬಹುದು. ತಾಲ್ಲೂಕಿನಲ್ಲಿ ಸೇರಿದ ಎಲ್ಲ ಗ್ರಾಮಗಳಿಗೆ ಒಂದು ಸಂಸ್ಥೆಯಿರಬಹುದು; ಜಿಲ್ಲೆಗೆ ಒಳಗಾದ ಎಲ್ಲ ಗ್ರಾಮಗಳಿಗೂ ಒಂದು ಸಂಸ್ಥೆಯಿರಬಹುದು. ಗ್ರಾಮಪಂಚಾಯತ ಸಭೆ, ತಾಲ್ಲೂಕು ಸಂಘ ಮತ್ತು ಜಿಲ್ಲಾ ಸಭೆಯೆಂಬವು ಗ್ರಾಮಗಳಿಗೆ ಸಂಬಂಧಪಟ್ಟ ಸಂಸ್ಥೆಗಳು. ಪಟ್ಟಣವೋ ನಗರವೋ ಆದರೆ ಅದರ ರೀತಿಯೇ ಬೇರೆ. ಗ್ರಾಮಕ್ಕಿಂತಲೂ ನಗರದಲ್ಲಿ ಜನಸಂದಣಿಯು ಹೆಚ್ಚಾಗಿರುವುದರಿಂದ ನಗರಗಳಲ್ಲಿ ಬೇಕಾಗುವ ಅನುಕೂಲಗಳೆಲ್ಲವೂ ಗ್ರಾಮಗಳಲ್ಲಿ ಬೇಕಾಗುವುದಿಲ್ಲ. ವ್ಯವಸಾಯವೇ ಪ್ರಧಾನವಾದ ಗ್ರಾಮ ವಿಭಾಗಕ್ಕೂ ಕೈಗಾರಿಕೆ ವ್ಯಾಪಾರಗಳೇ ಪ್ರಧಾನವಾದ ನಗರ ವಿಭಾಗಕ್ಕೂ ಬಹಳ ಭೇದವಿರುತ್ತದೆ. ಆದ್ದರಿಂದ ನಗರಗಳು ಜಿಲ್ಲೆಗಳಲ್ಲಿಯೇ ಇದ್ದಾಗ್ಯೂ ವಿಶಿಷ್ಟ ಭಾಗಗಳೆನಿಸಿ ನಗರ ಸಭೆಗಳೆಂಬ ಪ್ರತ್ಯೇಕವಾದ ಸಂಸ್ಥೆಗಳನ್ನೇ ಹೊಂದಿರುತ್ತವೆ.

ಅಧಿಕಾರದ ಎಲ್ಲೆ

ಗ್ರಾಮಾಂತರ ವಿಭಾಗ, ನಗರ ವಿಭಾಗಗಳೆಂಬವು ಕ್ಷೇತ್ರ ವಿಭಾಗಗಳು. ಆದ್ದರಿಂದ ಆಡಳಿತವೂ ಕ್ಷೇತ್ರಕ್ಕನುಸಾರವಾಗಿ ವಿಭಜನೆಯನ್ನು ಪಡೆದು ಸ್ಥಳೀಯ ಸಂಸ್ಥೆಗಳಿಗೆ ಆ ಕ್ಷೇತ್ರಗಳ ಸಂಬಂಧವಾದ ಆಡಳಿತವನ್ನು ಒಪ್ಪಿಸಬೇಕಾದುದು ನ್ಯಾಯ. ಆಡಳಿತವನ್ನು ಈ ರೀತಿಯಲ್ಲಿ ಒಪ್ಪಿಸುವಾಗ ಎಲ್ಲ ಆಡಳಿತವನ್ನೂ ಸರ್ಕಾರದವರು ಒಪ್ಪಿಸಲಾಗುವುದೇ? ಆಗುವುದಿಲ್ಲ. ರಾಷ್ಟ್ರವೆಲ್ಲಕ್ಕೂ ಸಂಬಂಧಿಸಿದ ಕರ್ತವ್ಯಾಧಿಕಾರಗಳನ್ನು ಸರ್ಕಾರದವರು ವಹಿಸಲೇ ಬೇಕು; ಆದ್ದರಿಂದ ಅಂತಹ ವಿಷಯಗಳ ಆಡಳಿತವನ್ನು ಒಪ್ಪಿಸಲು ಆಗುವುದಿಲ್ಲ. ಅನಿವಾರ್ಯ ಕರ್ತವ್ಯಗಳೆಂದು ನಾವು ಆಡಳಿತದಲ್ಲಿ ಯಾವ ಭಾಗವನ್ನು ಕರೆಯಬಹುದೋ ಅವುಗಳನ್ನು ಒಪ್ಪಿಸಿದರೆ ಸರ್ಕಾರವೆಂಬುದು ಇರಬೇಕಾದುದೇ ಇಲ್ಲ. ರಾಷ್ಟ್ರವೆಂಬುದು ಸಹಸ್ರಾರು ಛಿದ್ರಗಳಾಗಿ ಬಿಡುವುದು. ಆದ್ದರಿಂದ ಅಭಿವರ್ಧಕ ಕರ್ತವ್ಯಗಳೆಂದು ಯಾವುದನ್ನು ನಿಷ್ಕರ್ಷೆ ಮಾಡಬಹುದೋ ಅಷ್ಟನ್ನು ಮಾತ್ರ, ಅಂದರೆ ಯಾವ ಕರ್ತವ್ಯಗಳನ್ನು ಸ್ಥಳದವರೇ ಪಾಲಿಸಿದರೆ ರಾಷ್ಟ್ರ ವಿಚ್ಛಿತ್ತಿಯಾಗುವುದಿಲ್ಲವೋ ಅಥವಾ ಇತರ ಸ್ಥಳದವರಿಗೆ ಅನಾನುಕೂಲವೇರ್ಪಡುವುದಿಲ್ಲವೋ ಅಂತಹ

ಕರ್ತವ್ಯಗಳನ್ನು ಮಾತ್ರ ಸ್ಥಳೀಯ ಸಂಸ್ಥೆಗಳಿಗೆ ವಹಿಸಬಹುದು. ಸ್ಥಳೀಯ ಕರ್ತವ್ಯ ನಿರ್ದೇಶದಲ್ಲಿ ಕ್ಷೇತ್ರ ವಿಭಜನೆಯೂ ಬೇಕು, ವಿಷಯ ವಿಭಜನೆಯೂ ಬೇಕು.

ವೃತ್ತಾಂತ

ಎಲ್ಲ ಸಭ್ಯರಾಷ್ಟ್ರಗಳಲ್ಲಿಯೂ ಸ್ಥಳೀಯ ನಿರ್ವಾಹವು ಮುಖ್ಯವೆನಿಸಿದೆ. ವಿಸ್ತಾರವಾದ ರಾಷ್ಟ್ರದಲ್ಲಿ ಸ್ಥಳೀಯ ನಿರ್ವಾಹವು ನಡೆಯದಿದ್ದರೆ ಆಗುವುದೇ ಇಲ್ಲ. ಜನಸ್ವಾಮ್ಯವುಳ್ಳ ರಾಷ್ಟ್ರಗಳಲ್ಲಂತೂ ಸ್ಥಳೀಯ ನಿರ್ವಾಹವು ಅತಿಮುಖ್ಯವೆನಿಸಿದುದು. ಜನತೆಯ ಯೋಗ್ಯತೆಯೆಷ್ಟೆಂದು ಅವರ ಸ್ಥಳೀಯ ಕಾರ್ಯನಿರ್ವಾಹದಲ್ಲಿಯೇ ಕಾಣುವುದು. ಸ್ಥಳೀಯ ಕಾರ್ಯನಿರ್ವಾಹದಲ್ಲಿ ಇಂಗ್ಲಂಡಾಗಲಿ, ಫ್ರಾನ್ಸಾಗಲಿ, ಅಮೇರಿಕವಾಗಲಿ ಉತ್ತಮ ಸ್ಥಿತಿಯನ್ನೇ ಪಡೆದಿರುತ್ತದೆ. ಭರತವರ್ಷದಲ್ಲಿ ಹಿಂದಿನ ಕಾಲದಲ್ಲಿ ಗ್ರಾಮಸಮುದಾಯ ಸಭೆಗಳೂ, ನಗರ ಶ್ರೇಣಿಗಳೂ, ಪೂಗಗಳೂ ಸುವ್ಯವಸ್ಥಿತರೀತಿಯಲ್ಲಿದ್ದಾಗ ಆ ಕಾಲಕ್ಕೆ ತೃಪ್ತಿಕರವಾಗಿಯೇ ಇತ್ತು. ಆ ಸಂಸ್ಥೆಗಳು ಇತ್ತೀಚೆಗೆ ಅತಿದುರ್ಬಲಗಳಾಗಿಬಿಟ್ಟವು. ಸ್ಥಳೀಯ ನಿರ್ವಾಹವೆಂಬುದು ಬ್ರಿಟಿಷರ ಆಡಳಿತವು ರೂಢಿಗೊಂಡು ಭದ್ರವಾದಮೇಲೆ ನಗರಗಳಲ್ಲಿಯೇ ಮೊದಲು ಪ್ರಾರಂಭವಾಯಿತು. ಮೈಸೂರು ಸಂಸ್ಥಾನದಲ್ಲಿ ಐವತ್ತು ವರ್ಷಕಾಲ ಬ್ರಿಟಿಷರೇ ಆಡಳಿತವನ್ನು ನಡೆಸುತ್ತಿದ್ದ ಕಾಲದಲ್ಲಿ ನಗರ ಸಭೆಗಳು ರೂಪಗೊಂಡವು. 1902ರಲ್ಲಿ ಜಿಲ್ಲಾ ಸಭೆಗಳೂ ತಾಲ್ಲೂಕು ಸಭೆಗಳೂ ಆರಂಭವಾದುವು. ಆ ತರುವಾಯ ಗ್ರಾಮಾಭಿವರ್ಧಕ ಸಂಘಗಳೆಂಬವೂ ತಾಲ್ಲೂಕು ಮತ್ತು ಜಿಲ್ಲಾ ಸಮ್ಮೇಳನಗಳೂ ಹಾಗೂ ಹೀಗೂ ನಡೆದುಬಂದವು. 1923ರಲ್ಲಿ ಸಂಸ್ಥಾನದಲ್ಲಿ ರಾಜಕೀಯ ಸುಧಾರಣೆಗಳು ತೋರಿಕೊಂಡ ತರುವಾಯ ಸ್ಥಳೀಯ ನಿರ್ವಾಹ ಸಂಸ್ಥೆಗಳಿಗೂ ತಕ್ಕ ವಿಧಿನಿಬಂಧನೆಗಳು ರೂಪಗೊಂಡವು. ಈಗಣ ಸ್ಥಿತಿಯಲ್ಲಿ ಜಿಲ್ಲಾ ಸಭೆಗಳಿಗೆ 1926ನೇ ಇಸವಿಯ ನಿಬಂಧನೆಯೂ, ಗ್ರಾಮಪಂಚಾಯತ ಸಭೆಗಳಿಗೆ 1926ನೇ ವರ್ಷದ ನಿಬಂಧನೆಯೂ, ನಗರ ಸಭೆಗಳಿಗೆ 1906, 1921 ಮತ್ತು 1926ನೇ ವರ್ಷಗಳ ನಿಬಂಧನೆಗಳೂ ಆಧಾರಭೂತಗಳಾದ ವಿಧಿಗಳು.

## ಗ್ರಾಮ ಪಂಚಾಯತ ಸಭೆಗಳು

ವೃತ್ತಾಂತ

ಸಂಸ್ಥಾನದಲ್ಲಿ ಒಟ್ಟು 16,672 ಗ್ರಾಮಗಳುಂಟು. 1926ನೇ ರೆಗ್ಯುಲೇಷನ್ ಅಥವಾ ನಿಬಂಧನೆಯ ಪ್ರಕಾರ ಗ್ರಾಮಗಳ ಆಡಳಿತದಲ್ಲಿ ವಿಶೇಷ ಭಾಗವು ಗ್ರಾಮಸ್ಥರಿಗೇ ಒಪ್ಪಿಸಲಾಗಿದೆ. ಅದುವರೆಗೂ ಗ್ರಾಮಗಳ ನೈರ್ಮಲ್ಯ ಸ್ಥಿತಿಯನ್ನೂ ಶಿಕ್ಷಣವನ್ನೂ ಉತ್ತಮ ಗೊಳಿಸಲು ನಡೆದ ಪ್ರಯತ್ನಗಳು ಸಾರ್ಥಕವಾಗಲಿಲ್ಲ. ಆದ್ದರಿಂದ ಗ್ರಾಮಸ್ಥರಿಗೇ ಕಾರ್ಯವನ್ನೂ ಕಾರ್ಯದ ಆಡಳಿತವನ್ನೂ ವಹಿಸುವುದು ಮೇಲೆಸ್ನಿಸ ನಿಬಂಧನೆಯು ರಚನೆಯಾಯಿತು. 1927ರಿಂದ ಗ್ರಾಮಗಳಲ್ಲಿ ಪಂಚಾಯತ ಸಭೆಗಳು ಸ್ಥಾಪಿತವಾಗುತ್ತಲಿವೆ.

ಕರ್ತವ್ಯಗಳು

ಗ್ರಾಮಗಳ ಮೇಲ್ಮೆಯನ್ನು ಸಾಧಿಸಲು ಪಂಚಾಯತ ಸಭೆಗಳು ಅನೇಕಾನೇಕವಾಗಿ ಕೆಲಸಕಾರ್ಯಗಳನ್ನು ಕೈಕೊಳ್ಳಬಹುದು. ಅವುಗಳ ಪ್ರಯೋಜಕತೆಗೆ ಮೇರೆಯೇ ಇರುವುದಿಲ್ಲ. ನಿಬಂಧನೆಯಲ್ಲಿ ಪಂಚಾಯತ ಸಭೆಗಳ ಕರ್ತವ್ಯಗಳು ಪ್ರಥಮ, ದ್ವಿತೀಯವೆಂಬ ಎರಡು ವರ್ಗಗಳಾಗಿ ಕಾಣಿಸಿವೆ. ಪ್ರಥಮ ಕರ್ತವ್ಯಗಳೆಂಬವು ಸರ್ವ ಪ್ರಧಾನ ವಾದವುಗಳು ; ದ್ವಿತೀಯ ವರ್ಗಕ್ಕೆ ಸೇರಿದ ಕರ್ತವ್ಯಗಳು ಐಚ್ಛಿಕ ವಾದವುಗಳು. ದಾರಿ, ರಸ್ತೆ ಮುಂತಾದ ವಾಹಕ ಸೌಕರ್ಯಗಳು, ಕುಡಿಯುವ ನೀರನ್ನೊದಗಿಸುವುದು, ನೈರ್ಮಲ್ಯ, ಆರೋಗ್ಯ ಸಾಧನೆಗಳು ಆಧಾರಭೂತಗಳಾದುದರಿಂದ ಮೊದಲನೆಯ ವರ್ಗದವು. ಗ್ರಾಮಗಳಲ್ಲಿ ಬೆಳಕು, ಬಡಬಗ್ಗರ ಸಹಾಯ, ಶಿಕ್ಷಣ, ವ್ಯವಸಾಯ, ಸಹಕಾರ, ಕೈಗಾರಿಕೆ, ವ್ಯಾಪಾರ ಮುಂತಾದವು ಐಚ್ಛಿಕ ವರ್ಗದ ಕರ್ತವ್ಯಗಳು. ಗ್ರಾಮಕ್ಕೆ ಸೇರಿದ ಕಾಡಿನ ರಕ್ಷಣೆ, ಸಣ್ಣವಾದ ದೇವಾಲಯಗಳ ಮತ್ತು ಸತ್ರಗಳ ಪಾರುಪತ್ಯ, ಗ್ರಾಮ ಪಾಠಶಾಲೆಗಳ ಮೇಲ್ವಿಚಾರಣೆಗಳೂ ನಿಬಂಧನೆಯಲ್ಲಿ ಪರಿಗಣಿತವಾಗಿಲ್ಲದಿದ್ದರೂ ಪಂಚಾಯತ ಸಭೆಗಳಿಂದಲೇ ಉತ್ತಮವಾಗಿ ನಿರ್ವಹವಾಗತಕ್ಕ ಕರ್ತವ್ಯಗಳು.

**ದುರವಸ್ಥೆ**

ಪಂಚಾಯತ ಸಭೆಯು ಸಮರ್ಪಕವಾಗಿ ಕೆಲಸವನ್ನು ನಿರ್ವಹಿಸುವುದಕ್ಕೆ ಗ್ರಾಮಸ್ಥರ ಉತ್ಸಾಹ ಯೋಗ್ಯತೆಗಳೇ ಅಲ್ಲದೆ ಹಣವೂ ಇರಬೇಕು. ಮನೆ ತೆರಿಗೆ, ಅಂಗಡಿ ತೆರಿಗೆ, ಬಂಡಿ ತೆರಿಗೆಗಳಿಂದ ಹುಟ್ಟಬಹುದಾದ ಹಣವನ್ನು ಲೆಕ್ಕಮಾಡಿ ನೋಡಿದಲ್ಲಿ ಪ್ರಥಮ ಕರ್ತವ್ಯಗಳೆನಿಸಿದ ರಸ್ತೆ, ಬಾವಿ, ಚರಂಡಿ, ಬೆಳಕು, ವೈದ್ಯಗಳಿಗೇ ಸಾಕಾಗುವಷ್ಟು ದೊರಕುವ ಸಂಭವವಿಲ್ಲ. ಆದ್ದರಿಂದ ಪಂಚಾಯತ ಸಭೆಗಳಿಗೆ ಸರ್ಕಾರದವರು ಬೇರೆ ಹಣವನ್ನು ಕೊಡಿಸಿ ಕರ್ತವ್ಯವು ನೆರವೇರುವಂತೆ ಏರ್ಪಡಿಸಬೇಕು. ಈ ಒಂದು ಅಂಶದಿಂದಲೇ ಗ್ರಾಮಗಳಲ್ಲಿ ಯಾವುದೋ ದುಃಸ್ಥಿತಿಯು ನೆಲೆಸಿರುವುದೆಂದು ಸೂಚನೆಯಾಗುವುದು. ವಾಸ್ತವವಾಗಿ ಗ್ರಾಮಗಳ ದಾರಿದ್ರ್ಯವೂ ಚೈತನ್ಯಶೂನ್ಯತೆಯೂ ಭಯಾವಹವಾಗಿಯೇ ಇವೆ; ಅವುಗಳ ವಿಚಾರವನ್ನು ಪುನಃ ನಾವು ಬೇರೆಡೆಯಲ್ಲಿ ಕಾಣಬೇಕಾಗುವುದು. ಏಕೆಂದರೆ ಸೇಕಡ 89 ಪಾಲು ಜನಭಾಗವು ವಾಸಿಸುವ ಗ್ರಾಮಗಳ ಸ್ಥಿತಿಗತಿಗಳನ್ನು ತಿಳಿಯದೆ ಯಾವ ಭಾರತೀಯ ಪೌರನೂ ಕಾರ್ಯೋದ್ಯುಕ್ತನಾಗಲು ಸಾಧ್ಯವಿಲ್ಲ.

**ಪಂಚಾಯತ ಸಭೆಯ ರಚನೆ**

ಭಾರತೀಯ ಸಂಸ್ಕೃತಿ ಸಂಪತ್ತನ್ನು ಕಾಣುವಾಗ ಗ್ರಾಮಪಂಚಾಯತನವು ಎಷ್ಟು ಮುಖ್ಯವಾದ ಅಂಗವೆಂಬುದನ್ನು ತಿಳಿದುದಾಯಿತು. ಈಗ ಹೊರಟಿರುವ ಪಂಚಾಯತ ನಿಬಂಧನೆಯು ಆ ಪೂರ್ವಸ್ಥಿತಿಯನ್ನೇ ತಕ್ಕಮಟ್ಟಿಗೆ ಪುನಃ ಚೇತನಗೊಳ್ಳುವಂತೆ ಮಾಡುವ ಉದ್ದೇಶವುಳ್ಳದ್ದು. ಕುಗ್ರಾಮಗಳಲ್ಲಿ ಪಂಚಾಯತ ಸಭೆಯು ಅಷ್ಟು ಕೆಲಸವನ್ನು ಮಾಡಲಾರದು; ಆದ್ದರಿಂದ ಕುಗ್ರಾಮಗಳನ್ನು ನೆರೆಯ ದೊಡ್ಡ ಗ್ರಾಮಗಳಿಗೆ ಸೇರಿಸಿದೆ. ಜಿಲ್ಲಾಧಿಪತಿಯು ಗ್ರಾಮಗಳ ಸ್ಥಿತಿಗತಿಗಳನ್ನು ಪರಿಶೀಲಿಸಿ ಪ್ರತಿ ಗ್ರಾಮದಲ್ಲಿಯೂ 7ರಿಂದ 12ರ ವರೆಗೆ ಎಷ್ಟು ಸಭಿಕರು ಪಂಚಾಯತ ಸಭೆಗೆ ಸೇರಿರಬೇಕೆಂದು ನಿರ್ಣಯಿಸಿ, ಅವರಲ್ಲಿ ತನಗೆ ಸೂಕ್ತ ತೋರುವಂತೆ ಎಲ್ಲರನ್ನೋ ಕೆಲವರನ್ನೋ ಗ್ರಾಮಸ್ಥರಲ್ಲಿ ವರಣಿಸಿದ್ದರಾಗುವಂತೆ ನಿಷ್ಕರ್ಷೆಮಾಡತಕ್ಕದ್ದು. ಅಂತಹ ವರಣ ಕಾರ್ಯದಲ್ಲಿ

ಪ್ರಾಪ್ತ ವಯಸ್ಕರಲ್ಲದವರು, ಮತಿವಿಕಲರು, ಅಪರಾಧಿಗಳೆಂದು ನ್ಯಾಯ ಸ್ಥಾನದಲ್ಲಿ ಶಿಕ್ಷೆಗೊಳಗಾದವರು, ಪಾಪರ್ ಆದವರು, ಸರ್ಕಾರದ ಹುದ್ದೆಗಳಿಂದ ಭ್ರಷ್ಟರಾದವರು ಅಯೋಗ್ಯರೆನಿಸಿದವರು. ಗ್ರಾಮಸ್ಥರಲ್ಲಿ ಗಂಡಸರೆಲ್ಲರಿಗೂ ವರಣ ಕಾರ್ಯದಲ್ಲಿ ಛಂದಾಧಿಕಾರವುಂಟು. ಪಂಚಾಯತ ಸಭೆಗೆ ಅಧ್ಯಕ್ಷನೊಬ್ಬಾತನೂ ಕಾರ್ಯದರ್ಶಿಯೊಬ್ಬಾತನೂ ವರಣಸಿದ್ಧರಾಗಿಯೋ ಜಿಲ್ಲಾಧಿಕಾರಿಯಿಂದ ನಿಯಮಿತರಾಗಿಯೋ ಇದ್ದು ಕಾರ್ಯ ನಿರ್ವಾಹಕರಾಗಿರುತ್ತಾರೆ.

## ಜಿಲ್ಲಾ ಸಭೆ

ರಚನೆ

ಸಂಸ್ಥಾನದ ಎಂಟು ಜಿಲ್ಲೆಗಳಿಗೆ ಎಂಟು ಸಭೆಗಳಿವೆ. ಜಿಲ್ಲಾ ಸಭೆಗೆ ನಗರಗಳನ್ನೂ ಪಟ್ಟಣಗಳನ್ನೂ ಬಿಟ್ಟುಳಿದ ಜಿಲ್ಲಾ ಕ್ಷೇತ್ರವೆಲ್ಲವೂ ಅಧಿಕಾರ ಕ್ಷೇತ್ರವಾಗಿರುತ್ತದೆ. ಎರಡು ಮೂರು ಗ್ರಾಮಗಳಿಗೆ ಸಂಬಂಧಪಟ್ಟವುಗಳಾಗಿಯೋ ಒಟ್ಟು ಜಿಲ್ಲೆಗೆ ಸಂಬಂಧಪಟ್ಟವುಗಳಾಗಿಯೋ ಇರುವ ಕೆಲಸ ಕಾರ್ಯಗಳೆಲ್ಲವೂ ಜಿಲ್ಲಾ ಸಭೆಗೇ ಸೇರಿದುದು. ಜಿಲ್ಲಾ ಸಭೆಗಳಲ್ಲಿ ಜಿಲ್ಲೆಗೆ ತಕ್ಕಂತೆ ಹೆಚ್ಚುಕಡಿಮೆಯಾಗಿ 25ರಿಂದ 30ರವರೆಗೂ ಸಭಿಕರಿರುತ್ತಾರೆ. ಅವರಲ್ಲಿ ⅔ ಭಾಗದವರು ವರಣಸಿದ್ಧರಾಗಿಯೇ ಇರಬೇಕು. ಜಿಲ್ಲೆಗೆ ಮುಖ್ಯ ಪಟ್ಟಣ ಯಾವುದೋ ಅದೇ ಜಿಲ್ಲಾ ಸಭೆಗೂ ಸಾಧಾರಣವಾಗಿ ಅಧಿವೇಶನಸ್ಥಾನವಾಗಿರುವುದು; ಆದರೆ ಸಮಯ ಸಂದರ್ಭ ತೋರಿದಂತೆ ಜಿಲ್ಲೆಯಲ್ಲಿ ಯಾವ ಸ್ಥಳದಲ್ಲಿಯಾದರೂ ಸಭೆ ಸೇರಬಹುದು.

ಕರ್ತವ್ಯ

ನೈರ್ಮಲ್ಯ ರಕ್ಷಣೆ, ಆರೋಗ್ಯ ಸಾಧನೆ, ಶಿಕ್ಷಣ, ವಾಹಕ ಸೌಕರ್ಯ, ವ್ಯವಸಾಯ, ಕೈಗಾರಿಕೆ, ವ್ಯಾಪಾರ, ಕ್ಷಾಮ ನಿವಾರಣೆ, ಬಡಬಗ್ಗರ ಸಹಾಯ ಮುಂತಾದ ಕರ್ತವ್ಯಗಳನ್ನೇ ಜಿಲ್ಲಾ ಸಭೆಯವರು ತಮ್ಮ ಅಧ್ಯಕ್ಷ, ಕಾರ್ಯದರ್ಶಿ ಮೊದಲಾದ ಅಧಿಕಾರಿಗಳ ಮೂಲಕ ನಿರ್ವಹಿಸಲು ಯತ್ನಶೀಲರಾಗುವರು. ಗ್ರಾಮಗಳ ಸ್ಥಿತಿಯೇ ಜಿಲ್ಲೆಯಲ್ಲಿಯೂ ತೋರಿಕೊಳ್ಳುವುದು; ಜಿಲ್ಲಾ ಸಭೆಗಳಿಗೂ ಪ್ರಥಮ ಕರ್ತವ್ಯಗಳಾದ ರಸ್ತೆ, ದಾರಿ, ಚಿಕಿತ್ಸಾಲಯ, ಮುಂತಾದುವನ್ನು ನಿರ್ವಹಿಸುವಷ್ಟು ಮಾತ್ರ ಹಣ

ವೊದಗುತ್ತದೆ. ಹಣವಿಲ್ಲದುದರಿಂದ ಇತರ ಕರ್ತವ್ಯಗಳ ಪಾಲನೆಯು ಅಪರೂಪವಾಗಿ ನಡೆಯುವುದು.

ಜಿಲ್ಲಾ ಸಭೆಗಳಿಗೆ ವರಣಗಳು 3 ವರ್ಷಗಳಿಗೊಮ್ಮೆ ನಡೆಯುತ್ತವೆ. ವರಣದಲ್ಲಿ ಯೋಗ್ಯತಾಯೋಗ್ಯತೆಗಳ ನಿಷ್ಕರ್ಷೆಯು ಪ್ರತಿನಿಧಿ ಸಭೆಯ ವರಣದಲ್ಲಿದ್ದಂತೆಯೇ ಇರುತ್ತದೆ.

ಕೋಲಾರದ ಜಿಲ್ಲೆಯ ಭಾಗವಾಗಿದ್ದಾಗ್ಯೂ ಚಿನ್ನದ ಗಣಿಗಳ ಪ್ರದೇಶವು ವಿಶೇಷವೆನಿಸಿ ಪ್ರತ್ಯೇಕವಾದ ಸಂಸ್ಥೆಯನ್ನೇ ಪಡೆದಿದೆ.

## ನಗರ ಸಭೆಗಳು

ನಗರಗಳ ಏಳಿಗೆ

ವ್ಯವಸಾಯ ಪ್ರಧಾನವೇ ಆದುದರಿಂದ ನಮ್ಮ ದೇಶದಲ್ಲಿ ನಗರಗಳು ಕಡಿಮೆ. ಪೂರ್ವ ಕಾಲದಲ್ಲಿ ರಾಜಾಸ್ಥಾನಗಳಾಗಿಯೋ, ಪುಣ್ಯಕ್ಷೇತ್ರಗಳಾಗಿಯೋ, ವ್ಯಾಪಾರ ಕೇಂದ್ರಗಳಾಗಿಯೋ ನಗರಗಳು ತೋರಿಕೊಳ್ಳುತ್ತಿದ್ದುವು. ಈಚಿನ ಕಾಲದಲ್ಲಿ ಕೈಗಾರಿಕೆಗೂ ವ್ಯಾಪಾರಕ್ಕೂ ಆಸ್ಪದ ಕೊಡುವ ಮತ್ತು ವ್ಯಾಪಾರ ಮಾರ್ಗಗಳು ಸಂಧಿಸುವ ಸ್ಥಳಗಳಲ್ಲಿ ನಗರಗಳು ಸಿದ್ಧವಾಗುತ್ತವೆ. ರೈಲ್ವೆ ಸ್ಟೇಷನ್ ಆದರೆ ಗ್ರಾಮಗಳು ಕ್ರಮವಾಗಿ ಅಭಿವೃದ್ಧಿಗೊಳ್ಳುವುದುಂಟು; ಅದಕ್ಕೆ ವ್ಯಾಪಾರಾಭಿವೃದ್ಧಿಯೇ ಕಾರಣ. ಒಂದು ಲಕ್ಷ ಜನರು ಒಂದೇ ಸ್ಥಳದಲ್ಲಿ ವಾಸಿಸುವರಾದರೆ ಆ ಸ್ಥಳವು ನಗರವೆನ್ನಿಸುವುದು; 8,000ಕ್ಕೋ 10,000ಕ್ಕೋ ಹೆಚ್ಚಾಗಿದ್ದರೆ ಪಟ್ಟಣವೆನಿಸುವುದು. ಅದಕ್ಕೆ ಕಡಿಮೆ ಜನಸಂಖ್ಯೆಯಾದರೆ ಗ್ರಾಮವೆಂದೇ ನಿಷ್ಕರ್ಷೆಯಾಗುತ್ತದೆ. ಪಟ್ಟಣ ನಗರಗಳಲ್ಲಿ ಹೆಚ್ಚು ಜನರು ಅಕ್ಕಪಕ್ಕದಲ್ಲಿ ಜೀವಿಸುವುದರಿಂದ ಗಾಳಿ, ನೀರು, ಬೆಳಕು, ದಾರಿ, ವಾಹಕ ಸೌಕರ್ಯಗಳನ್ನು ಒದಗಿಸಿಕೊಳ್ಳುವುದೇ ಮುಖ್ಯವೆನಿಸಿ ವಿಸ್ತಾರವಾದ ಪ್ರಯತ್ನಗಳನ್ನು ಕೈಕೊಳ್ಳಬೇಕಾಗಿರುವುದು.

ವಿಪತ್ತುಗಳು

ನಗರಗಳು ಬೆಳೆಯುವುದು ಬೇಗ ಬೇಗ. ಯದ್ವಾತದ್ವಾ ಬೆಳೆದ ನಗರಗಳಲ್ಲಿ ಜನರ ಸಂದಣಿಯು ಹೆಚ್ಚುತ್ತ ಚಿತ್ರವಿಚಿತ್ರಗಳೆನಿಸುವ ವ್ಯಾಧಿಗಳೂ ಕಷ್ಟಗಳೂ ತೋರಿಕೊಳ್ಳುವುವು. ಪಾಶ್ಚಾತ್ಯರಿಗೆ ಇವುಗಳಲ್ಲಿ ಹೆಚ್ಚಾದ ಅನುಭವವುಂಟು. ಕೆಲವು ನಗರಗಳಲ್ಲಿ ಮಕ್ಕಳು ಹಸುರಾದ

ಹುಲ್ಲನ್ನೇ ಕಾಣರು; ಒಂದಾನೊಂದು ಸಲ ಲಂಡನ್ನಿನಲ್ಲಿ ಹಸುವೆಂದ ರೇನೆಂದು ಬಾಲಕರನ್ನು ಕೇಳಿದಾಗ ಚಿತ್ರವಿಚಿತ್ರವಾದ ಉತ್ತರಗಳು ಹೊರಟವು; ಆ ಬಾಲಕರು ಹಸುವನ್ನೇ ನೋಡಿರಲಿಲ್ಲ. ಇಂತಹ ಘೋರಗಳು ನಮ್ಮ ನಗರಗಳಲ್ಲಿಲ್ಲದೆ ಇರಬಹುದಾದರೂ ಬೇರೆ ಬಗೆಯಲ್ಲಿ ಇದಕ್ಕಿಂತಲೂ ಘೋರವಾದ ಸಂಗತಿಗಳುಂಟು. ನಗರಗಳ ಆಡಳಿತದಲ್ಲಿ ಭಾರತೀಯರಾದ ನಾವು ಪಾಶ್ಚಾತ್ಯರಿಂದ ಕಲಿಯತಕ್ಕ ಅಂಶಗಳು ಹೇರಳವಾಗಿವೆ.

ಆದರ್ಶ

ಐನೂರು ಮಂದಿ ಐರೋಪ್ಯ ಗೃಹಸ್ಥರು ಒಂದೆಡೆಯಲ್ಲಿ ಮನೆ ಮಾಡಿ ನೆಲೆಸಿದ ಸ್ವಲ್ಪ ಕಾಲದಲ್ಲಿಯೇ ನೈರ್ಮಲ್ಯ ರಕ್ಷಣೆಗಾಗಿ ಹಿತ್ತಿಲ ಸಂದುಗಳೂ (Conservancy lanes), ಗುಪ್ತಗಾಮಿಗಳಾದ ಚರಂಡಿಗಳೂ (Underground drains), ಪರಿಷ್ಕಾರಗೊಳಿಸಿದ ರಸ್ತೆಗಳೂ, ಸೀಬಿನ ನಲ್ಲಿಗಳೂ, ತಂತಿಯ ದೀಪಗಳೂ ಅಲ್ಲದೆ ಉದ್ಯಾನವನ, ಸಭಾಮಂದಿರ, ನಾಟಕಶಾಲೆ, ಖೇಲನ ಕ್ಷೇತ್ರಗಳು, ಟ್ರಾಮುಗಳು, ಮಕ್ಕಳ ಕ್ರೀಡಾ ಕ್ಷೇತ್ರಗಳು, ಹಾಲಿನ ಶಿಸ್ತು ಮುಂತಾದುವೂ ತೋರಿಕೊಳ್ಳುತ್ತವೆ. ಇವುಗಳ ನಿರ್ಮಾಣ ನಿರ್ವಾಹಗಳಲ್ಲಿ ಪಾಶ್ಚಾತ್ಯರು ಪ್ರವೀಣರು.

ಕರ್ತವ್ಯ

ಸಂಸ್ಥಾನದಲ್ಲಿ 2 ನಗರಗಳೂ 104 ಪಟ್ಟಣಗಳೂ ಉಂಟು. ಕೆಲವು ಚಿಕ್ಕ ಚಿಕ್ಕ ಪಟ್ಟಣಗಳಲ್ಲಿ ಮ್ಯುನಿಸಿಪಲ್ ಸಭೆಗಳಿಂಬುವುಂಟು; ಇನ್ನು ಕೆಲವೆಡೆಗಳಲ್ಲಿ ಕೆಲಕಾಲ ಮಾತ್ರ ಜನರು ಸೇರುವುದರಿಂದ ತಾತ್ಕಾಲಿಕವಾದ ನಗರ ಸಭೆಗಳೆಂಬವು ತೋರಿಕೊಳ್ಳುತ್ತವೆ. ಈ ನಗರ ಸಭೆಗಳೆಲ್ಲವೂ 1926ನೇ ರೆಗ್ಯುಲೇಷನ್ ಅಥವಾ ನಿಬಂಧನೆಗೆ ಅನುಸಾರವಾಗಿ ರಚನೆಯಾಗಿ ಕರ್ತವ್ಯ ಪಾಲನೆಯನ್ನು ಮಾಡುತ್ತವೆ. ಪ್ರಥಮ ಶ್ರೇಣಿಯ ಕರ್ತವ್ಯಗಳೆಂದೂ, ದ್ವಿತೀಯ ಶ್ರೇಣಿಯ ಕರ್ತವ್ಯಗಳೆಂದೂ ನಗರ ಸಭೆಗಳ ಕರ್ತವ್ಯರಾಶಿಯು ವಿಂಗಡ ವಾಗಿದೆ. ನಗರ ಸಭೆಗಳಿಗೆ ಉತ್ಪತ್ತಿಯು ಸುಂಕ, ಮನೆ ತೆರಿಗೆ, ನಿವೇಶನ ತೆರಿಗೆ, ವಾಹನ ತೆರಿಗೆ, ಉಪಜೀವನ (Profession) ತೆರಿಗೆ, ಅಂಗಡಿ ತೆರಿಗೆ ಗಳಿಂದಲೂ ಆಸ್ತಿಯಿಂದಲೂ ಸರ್ಕಾರದವರು ಬಗಾಗ್ಗೆ ಕೊಡಿಸಿದ ಹಣದಿಂದಲೂ ಸಿದ್ಧವಾಗುತ್ತದೆ. ಗ್ರಾಮಗಳಲ್ಲಿಯೂ ಜಿಲ್ಲೆಗಳಲ್ಲಿಯೂ

ಕಂಡ ದುರವಸ್ಥೆಯೇ ನಗರಗಳಲ್ಲಿಯೂ ನೆಲೆಸಿರುವುದು. ಪ್ರಥಮ ಶ್ರೇಣಿಯ ಕರ್ತವ್ಯಗಳನ್ನೇ ನಗರ ಸಭೆಗಳವರು ಯೋಗ್ಯವಾದ ರೀತಿಯಲ್ಲಿ ಪಾಲಿಸಲಾರದವರಾಗಿರುತ್ತಾರೆ.

ಪ್ರತಿಬಂಧಕಗಳು

1929ನೆ ವರ್ಷದಲ್ಲಿ ಒಟ್ಟು ನಗರ ಸಭೆಗಳಲ್ಲೆಲ್ಲ 1,554 ಸಭಿಕರಿದ್ದರು. ಅವರಲ್ಲಿ 738 ವರಣಸಿದ್ಧರು, 335 ನಿಯಮಿತರಾದ ಪೌರರು, ಉಳಿದವರು ನಿಯಮಿತರಾದ ಅಧಿಕಾರಸ್ಥರು. ವರಣಸಿದ್ಧರ ಪಾಲು ದೊಡ್ಡವೆನಿಸಿದ ನಗರಗಳಲ್ಲಿ $\frac{2}{3}$; ಚಿಕ್ಕವೆನಿಸಿದವುಗಳಲ್ಲಿ $\frac{1}{2}$. ಪ್ರತಿನಿಧಿ ಸಭೆಗೆ ನಡೆಯುವಂತೆಯೇ ಯೋಗ್ಯತಾಯೋಗ್ಯತೆಗಳ ನಿಷ್ಕರ್ಷೆಯುಂಟಾಗಿ ಮೂರು ವರ್ಷಗಳಿಗೊಮ್ಮೆ ನಗರ ಸಭೆಗಳ ವರಣಗಳು ನಡೆಯುತ್ತವೆ. ಒಟ್ಟಿನಲ್ಲಿ ಸ್ಥಳೀಯ ಸಭೆಗಳೆಂಬವು ತೃಪ್ತಿಕರವಾಗಿ ಕರ್ತವ್ಯಪಾಲನೆಯನ್ನು ನಡೆಸದಿರುವುದಕ್ಕೆ ನಾಲ್ಕು ಮುಖ್ಯ ಕಾರಣಗಳು ಕಾಣುತ್ತವೆ:—

(1) **ದಾರಿದ್ರ್ಯ.**—ಯಾವ ಕೆಲಸವನ್ನು ನಡೆಸುವುದಕ್ಕೂ ಹಣ ಬೇಕು. ಹಣವು ತೆರಿಗೆಗಳಿಂದ ಬರಬೇಕು. ತೆರಿಗೆಗಳ ಭಾರವು ಈಗಲೇ ಹೆಚ್ಚಾಗಿದೆ. ತೆರಿಗೆಗಳನ್ನು ಹೆಚ್ಚಿಸುವುದಾಗಲಿ ಹೊಸ ತೆರಿಗೆಗಳನ್ನೆತ್ತುವುದಾಗಲಿ ಅಚಿಂತ್ಯ. ಆದುದರಿಂದ ಸರ್ಕಾರದ ಹಣದಲ್ಲಿ ಭಿಕ್ಷೆ ಬೇಡಿ ಸ್ಥಳೀಯ ಸಭೆಗಳು ಹೆಚ್ಚು ಕೆಲಸವನ್ನು ನಡೆಸಬೇಕು. ಸರ್ಕಾರಕ್ಕೂ ಹಣದ ಮುಗ್ಗಟ್ಟು. ಆದುದರಿಂದ ಅನೇಕ ಕೆಲಸಗಳು ನಡೆಯುವುದೇ ಇಲ್ಲ.

(2) **ಸರ್ಕಾರದ ಅತ್ಯಧಿಕಾರ.**—ಪ್ರತಿಸ್ಥಳೀಯ ಸಭೆಯಲ್ಲಿಯೂ ಸರ್ಕಾರದವರಿಂದ ನಿಯಮಿತರಾದ ಸಭಿಕರೂ ಅಧಿಕಾರಸ್ಥರೂ ಉಂಟು. ಸರ್ಕಾರದ ಉದ್ಯೋಗಸ್ಥರೇ ಅನೇಕ ವೇಳೆ ಕಾರ್ಯವನ್ನು ನಿರ್ವಹಿಸತಕ್ಕವರು. ಸಭೆಗಳ ಅಧಿಕಾರವು ಅನೇಕ ರೀತಿಗಳಲ್ಲಿ ಸಂಕುಚಿತವಾಗಿರುವುದಲ್ಲದೆ ಆಗಾಗ್ಗೆ ಅಧಿಕಾರಸ್ಥರ ಪ್ರವೇಶವೂ ಕೋರಿಕೊಳ್ಳುವುದರಿಂದ ಸ್ವತಂತ್ರಕ್ಕೆ ಅಡ್ಡಿಯಾಗುವುದು.

(3) **ಜನರ ಔದಾಸೀನ್ಯ.**—ಅನೇಕ ಜನರು ತಮ್ಮ ಸ್ಥಳೀಯ ಸಭೆಯ ಕಾರ್ಯನಿರ್ವಾಹದಲ್ಲಿ ಆಸಕ್ತಿಯನ್ನೇ ವಹಿಸುವುದಿಲ್ಲ. ತಾವು

ನಿರ್ವಹಿಸಬಹುದಾದ ಕೆಲಸಕಾರ್ಯಗಳ ಸ್ಮರಣೆಯನ್ನೇ ಮಾಡುವುದಿಲ್ಲ. ಇದರಿಂದ ಸ್ಥಳೀಯ ಸಭೆಗಳಿಗೆ ಬೆಂಬಲವೂ ಪ್ರೋತ್ಸಾಹನವೂ ತಕ್ಕಷ್ಟು ದೊರಕುವುದಿಲ್ಲ.

(4) **ಕೋಮುಗಳ ಜಗಳ.**—ವರಣಗಳಲ್ಲಿ, ಚರ್ಚೆಗಳಲ್ಲಿ ಮತ್ತು ನಿಷ್ಕರ್ಷೆಗಳಲ್ಲಿ ಯೋಗ್ಯವಾದ ರೀತಿಯಲ್ಲಿ ಜನರು ಪ್ರವರ್ತಿಸದೆ ಕೋಮುಗಳಂತೆ ಪಕ್ಷ ವಿಪಕ್ಷಗಳನ್ನು ಏಂಗಡಿಸಿಕೊಂಡು ತಮ್ಮ ಪಕ್ಷದಲ್ಲಿ ಮಾತ್ರ ಭಕ್ತಿವಿಶ್ವಾಸಗಳನ್ನು ತೋರಿಸುತ್ತಾರೆ. ಇದರಿಂದ ಕೆಲಸಕಾರ್ಯಗಳು ನಿಷ್ಕಾರಣವಾದ ವಿಳಂಬಕ್ಕೆ ಗುರಿಯಾಗುವುದೇ ಅಲ್ಲದೆ ವ್ಯರ್ಥವಾದ ಪ್ರಯತ್ನಗಳೂ ಸನ್ನಾಹಗಳೂ ನಡೆದು ಜನರ ಚೈತನ್ಯವು ನಿರರ್ಥಕವಾಗಿ ವೆಚ್ಚವಾಗುವುದು. ಸರ್ವರಿಗೂ ಉಪಯುಕ್ತವೆನಿಸಿದ ಅನೇಕ ಕೆಲಸಗಳನ್ನು ಕೋಮುಗಳ ಕಿತ್ತಾಟವಾಗಬಹುದೆಂಬ ಶಂಕೆಯಿಂದ ಆರಂಭಿಸದೆಯೇ ಇರಬೇಕಾಗುವುದು. ಪ್ರಬಲ ವಿಘ್ನಕಾರಕವಾದ ಈ ಸಂಕುಚಿತ ಬುದ್ಧಿಯು ಮಾಯವಾದ ಹೊರತು ನಗರ ಸಭೆಗಳಾಗಲಿ ಗ್ರಾಮ ಸಭೆಗಳಾಗಲಿ ಜಿಲ್ಲಾ ಸಭೆಗಳಾಗಲಿ ಯೋಗ್ಯವೆನಿಸಿದ ರೀತಿಯಲ್ಲಿ ಕೃತಕೃತ್ಯತೆಯನ್ನು ಪಡೆಯಲಾರವು.

## ರಾಷ್ಟ್ರರೂಪ ಸುಧಾರಣೆ

ಆಕ್ಷೇಪಗಳು

ಇದುವರೆಗೂ ಭಾರತೀಯ ರಾಷ್ಟ್ರಸ್ವರೂಪದಲ್ಲಿ ಪಾರ್ಲಿಮೆಂಟು ಮತ್ತು ಭಾರತೀಯ ಕಾರ್ಯದರ್ಶಿಯಿಂದ ಹಿಡಿದು ಕ್ರಮವಾಗಿ ಅಖಿಲ ಭಾರತ ರಾಷ್ಟ್ರದ, ಪ್ರದೇಶಗಳ ಮತ್ತು ಸಂಸ್ಥಾನಗಳ ವಿವರವನ್ನು ಕಂಡಂತಾಯಿತು. ಈ ಪದ್ಧತಿಯು 1919ರಲ್ಲಿ ಏರ್ಪಟ್ಟ ವಿಧಿಗೆ ಅನುಸಾರವಾಗಿರತಕ್ಕದ್ದು. ಬ್ರಿಟಿಷರ ಆಡಳಿತದ ಬಗೆಯನ್ನು ಕುರಿತು ವಿಮರ್ಶೆಗಳು ಅನೇಕವಾಗಿವೆ. ಎಲ್ಲೆಡೆಗಳಲ್ಲಿಯೂ ಈ ಆಕ್ಷೇಪಗಳು ತೋರಿಕೊಂಡಿವೆ:

1. ಭಾರತೀಯ ಕಾರ್ಯದರ್ಶಿಯೆಂಬ ಸಂಯುಕ್ತರಾಜ್ಯದ ಸಚಿವನೊಬ್ಬಾತನಿಗೆ ಸಂಪೂರ್ಣ ಅಧೀನವಾಗಿ ಭಾರತೀಯ ಆಡಳಿತವು ನಡೆಯುವುದು; ಇದರಿಂದ ಆಚರಣೆಯಲ್ಲಿ ಸಂಯುಕ್ತರಾಜ್ಯದ ಮೇಲ್ಮೆಯು

ಸಾಧಿತವಾಗುವುದೇ ವಿನಾ ಭರತವರ್ಷದ ಮೇಲ್ಮೆಯು ಸಾಧಿತವಾಗುವುದಿಲ್ಲ.

2. ಆಡಳಿತದಲ್ಲಿ ಇಂಡಿಯನ್ ಸಿವಿಲ್ ಸರ್ವಿಸ್ ಎಂಬ ವ್ಯೂಹಕ್ಕೆ ಸೇರಿದ ಅಧಿಕಾರಸ್ಥರೇ ಪ್ರಬಲರಾಗಿರುವರು. ಬಹು ಕಾಲ ಭಾರತೀಯರಿಗೆ ಆ ಅಧಿಕಾರಗಳೇ ಒದಗುತ್ತಿರಲಿಲ್ಲ; ಈಗ ಒಂದು ಭಾಗವು ಸಂದಿದ್ದರೂ ಅಧಿಕಾರಸ್ಥರು ಬಹುವಾಗಿ ವಿದೇಶೀಯರಾಗಿಯೇ ಇರುತ್ತಾರೆ.

3. ಭಾರತೀಯ ಜನತೆಯ ಇಷ್ಟಕ್ಕೆ ವಿರುದ್ಧವಾಗಿಯೇ ಆಡಳಿತವು ನಡೆಯುವುದು. ಇದಕ್ಕೆ ಸೂಚಕಗಳು ಯಾವುವೆಂದರೆ:—

(i) ಕಾರ್ಯಾಂಗದಲ್ಲಿಯೂ ಶಾಸಕಾಂಗದಲ್ಲಿಯೂ ಭಾರತೀಯರಿಗೆ ಪ್ರವೇಶವೂ ಅಧಿಕಾರವೂ ತಕ್ಕಷ್ಟು ಇಲ್ಲದಿರುವುದು;

(ii) ಗ್ರಾಮಸಮುದಾಯ ಜೀವನ ಸಂಸ್ಥೆಗಳೇ ಮೊದಲ್ಗೊಂಡು ಪೂರ್ವದಿಂದಲೂ ನಡೆದುಬಂದಿದ್ದ ಜನತೆಯ ಸಂಸ್ಥೆಗಳು ಕ್ಷೀಣತೆಯನ್ನು ಪಡೆದುದು;

(iii) ಪ್ರದೇಶಗಳ ವಿಭಾಗಗಳು ಯಾವ ತತ್ತ್ವವೂ ಇಲ್ಲದೆ ನಡೆದಿರುವುದು;

(iv) ರಾಷ್ಟ್ರ ವ್ಯಯವು ಪ್ರಬಲವಾಗಿ ಏರುತ್ತಿರುವಿಕೆ: ಅದರಲ್ಲಿಯೂ ಭಾರತೀಯರಿಗೆ ಪ್ರವೇಶವೂ ಅಧಿಕಾರವೂ ಇಲ್ಲದ ಸೈನ್ಯಶಾಖೆಗಳ ವಿಪರೀತ ವೆಚ್ಚ;

(v) ಶಿಕ್ಷಣ, ನೈರ್ಮಲ್ಯ, ಸಹಕಾರ, ಮದ್ಯ ನಿಷೇಧ ಮುಂತಾದ ರಾಷ್ಟ್ರಾಭಿವರ್ಧಕ ಕರ್ತವ್ಯಗಳು ಸಮರ್ಪಕವಾಗಿ ನಡೆಯದಿರುವುದು;

(vi) ವ್ಯವಸಾಯದ ಕ್ಷಯ, ಬಡತನದ ವೃದ್ಧಿ, ಕ್ಷಾಮ, ಸಾಂಕ್ರಾಮಿಕ ವ್ಯಾಧಿ, ಮುಂತಾದ ದುರ್ಲಕ್ಷಣಗಳನ್ನು ತೋರುತ್ತಲಿರುವ ಔದ್ಯೋಗಿಕ ದಾರಿದ್ರ್ಯ;

(vii) ರಾಷ್ಟ್ರಭಕ್ತಿಪ್ರೇರಿತವಾದ ಆಂದೋಲನಗಳನ್ನು ನಿಷ್ಠುರವಾದ ರೀತಿಯಿಂದ ಅಡಗಿಸುತ್ತಿರುವುದು;

ಬ್ರಿಟಿಷರ ನೀತಿ

ಇವೇ ಮುಂತಾದ ಆಕ್ಷೇಪಗಳನ್ನು ರಾಷ್ಟ್ರಭಕ್ತರಾದ ಭಾರತೀಯರು 50 ವರ್ಷಗಳಿಂದ ಒಡ್ಡುತ್ತಲಿರುವುದಕ್ಕೆ ಪ್ರತಿಯಾಗಿ ಬ್ರಿಟಿಷರು 1917ರಲ್ಲಿ ಭರತವರ್ಷದಲ್ಲಿ ತಾವು ಆಳುತ್ತಿರುವ ಉದ್ದೇಶವು ಭಾರತೀಯರಿಗೆ ಕ್ರಮವಾಗಿ ಸ್ವಕಾರ್ಯನಿರ್ವಾಹದ ಸಾಮರ್ಥ್ಯವೊದಗುವಂತೆ ಏರ್ಪಡಿಸುವುದೇ ಆಗಿರುವುದೆಂದು ಪಾರ್ಲಿಮೆಂಟಿನಲ್ಲಿ ಪ್ರಕಟಿಸಿ, 1919ರಲ್ಲಿ ಮಾಂಟ್ಫರ್ಡ್ ಸುಧಾರಣೆಗಳನ್ನು ವಿಧಿರೂಪದಲ್ಲಿ ಸಿದ್ಧಗೊಳಿಸಿದರು. ಆ ಸುಧಾರಣೆಗಳು ಆಚರಣೆಯಲ್ಲಿ ಎಷ್ಟು ಸಮರ್ಪಕವಾಗಿ ನಡೆಯುತ್ತವೆಯೋ ಹತ್ತು ವರ್ಷಗಳ ತರುವಾಯ ಪರೀಕ್ಷೆ ಮಾಡತಕ್ಕುದೆಂಬ ನಿಶ್ಚಯವೂ ಆ ವಿಧಿಯಲ್ಲಿಯೇ ಇದ್ದಿತು. ಅದಕ್ಕನುಸಾರವಾಗಿ 1927ರಲ್ಲಿ ಸೈಮನ್ ಕಮಿಷನ್ ಎಂಬ ವಿಚಾರಕ ಮಂಡಲಿಯನ್ನು ಗೊತ್ತುಮಾಡಿ ಅವರ ವರದಿಯನ್ನು ಪಡೆದಮೇಲೆ ಮೂರು ಚಕ್ರಗೋಷ್ಠಿಗಳೆಂಬವು ನಡೆದವು. ಈ ಗೋಷ್ಠಿಗಳ ಸಮಾಲೋಚನೆಯು ಮುಗಿದ ಬಳಿಕ ಸಂಯುಕ್ತ ರಾಜ್ಯದ ಮಂತ್ರಿಮಂಡಲಿಯವರು, ಮುಂದೆ ಭಾರತೀಯ ರಾಷ್ಟ್ರವು ತಾಳಬಹುದಾದ ಸ್ವರೂಪವು ತಮ್ಮ ಅಭಿಪ್ರಾಯದಂತೆ ಹೇಗಿರತಕ್ಕುದೆಂಬುದನ್ನು ವೈಟ್ ಪೇಪರ್ (ಶ್ವೇತಪತ್ರ) ಎಂಬುದರಲ್ಲಿ ಪ್ರಕಟಗೊಳಿಸಿದರು. ಇನ್ನುಮುಂದೆ ಪಾರ್ಲಿಮೆಂಟಿನಲ್ಲಿ ಇದರ ಇತ್ಯರ್ಥ ನಡೆಯತಕ್ಕದ್ದು.

ಭವಿಷ್ಯ

ಇದುವರೆಗೂ ತೋರಿಕೊಂಡಿರುವ ಸೂಚನೆಗಳಿಂದ ಇನ್ನುಮುಂದೆ ಭರತವರ್ಷವು ರಾಷ್ಟ್ರಪ್ರಮುಖವಾಗಿ ವ್ಯವಸ್ಥೆಯಾಗುವುದೆಂದು ಹೇಳಬಹುದು. ಅಮೆರಿಕದಲ್ಲಿ ಫೆಡರಲ್ ಸರ್ಕಾರ ಮತ್ತು ಸಂಸ್ಥಾನಗಳ ಸರ್ಕಾರಗಳು ವಿಭಾಗವಾಗಿರುವಂತೆ ಭರತವರ್ಷದಲ್ಲಿಯೂ ಫೆಡರಲ್ ಸರ್ಕಾರವೆಂಬುದು ಈಗಿನ ಸೆಂಟ್ರಲ್ ಸರ್ಕಾರದ ಸ್ಥಾನದಲ್ಲಿದ್ದು ಪ್ರದೇಶಗಳೂ ಸಂಸ್ಥಾನಗಳೂ ಸಮಾನವೆನಿಸಿ ಅದರಲ್ಲಿ ಸೇರುವ ಸಂಭವವು ಸ್ಪಷ್ಟವಾಗಿ ಕಾಣುತ್ತದೆ. ಮುಂದೆ ನಡೆಯಬಹುದಾದುದನ್ನು ಭಾರತೀಯರೆಲ್ಲರೂ ಕುತೂಹಲದಿಂದ ನಿರೀಕ್ಷಿಸುತ್ತ ತಿಳಿದುಕೊಳ್ಳತಕ್ಕದ್ದು.

## III. ಪೌರನಿರ್ವಾಹ

# 1. ಪೌರ ಲಕ್ಷಣಗಳು

**ಹೊಸ ಕಾಲ, ಪ್ರಾಚೀನ ಧರ್ಮ, ದ್ವಾತ್ರಿಂಶದ್ದಾನಗಳು, ಸಪ್ತ ಸಂತಾನಗಳು, ಪಂಚಕೃತ್ಯಗಳು, ನಾನಾಮುಖ ಸೇವೆ, ಜನಸೇವೆ, ಪ್ರಾಚೀನ ಪದ್ಧತಿ, ಅಧಿಕಾರ ಪತ್ರಗಳ ಅಭಾವ, ಪೌರನೇ ರಾಷ್ಟ್ರಕರ್ತ, ಅನ್ಯೋನ್ಯತೆ, ನಡತೆ, ಪೌರಶಬ್ದ, ಪೌರಲಕ್ಷಣ, ಸ್ವತ್ವಲ್ಲ, ಮೂಲತತ್ವಗಳು, ಪೌರಗುಣ, ದೇಶಭಕ್ತಿ, ಧೈರ್ಯ ಸ್ಥೈರ್ಯಾದಿಗಳು, ದೌರ್ಬಲ್ಯ, ಪೌರ ಶಿಸ್ತು, ಪೌರಸನ್ಮಾನ, ನಿಸ್ಪೃಹತೆ, ಭಾರತೀಯ ಗುಣ.**

**ಹೊಸ ಕಾಲ**

ಬ್ರಿಟಿಷರ ಆಳ್ವಿಕೆಯ ಪರಿಣಾಮವಾಗಿ ನಮ್ಮ ದೇಶದಲ್ಲಿ ರಾಷ್ಟ್ರಭಕ್ತಿಯ ವ್ಯಾಪ್ತಿಯೂ, ಅದರೊಡನೆ ಜನಸ್ವಾಮ್ಯ ಮತ್ತು ಪ್ರಾತಿನಿಧ್ಯ ತತ್ವಗಳನ್ನನುಸರಿಸುತ್ತ ರಾಷ್ಟ್ರರಚನೆಯ ಸುಧಾರಣೆಯೂ ಸಂಭವಿಸಿದವು. ಸಮಸ್ತ ರಾಷ್ಟ್ರದ ಐಕ್ಯತೆಯು ನೆರವೇರಿ, ಪ್ರಾತಿನಿಧ್ಯ ತತ್ವದ ಆಚರಣೆಯು ಪ್ರದೇಶಗಳಲ್ಲಿಯೂ ಸಂಸ್ಥಾನಗಳಲ್ಲಿಯೂ ತೋರಿಕೊಂಡು ಕ್ರಮವಾಗಿ ವೃದ್ಧಿಯಾಗುತ್ತಲಿರುವುದು. ಪುರಾತನ ಕಾಲದಲ್ಲಿ ಅಂತಹ ರಾಷ್ಟ್ರಪದ್ಧತಿಗಳು ಭಾರತೀಯ ಗಣರಾಷ್ಟ್ರಗಳಲ್ಲಿ ರೂಪಗೊಂಡಿದ್ದಿರಬಹುದಾದರೂ ಸಾವಿರಾರು ವರ್ಷ ಕಾಲ ಆ ಪದ್ಧತಿಗಳು ಆಚರಣೆಯಲ್ಲಿಲ್ಲದೆಯೇ ಇದ್ದುದರಿಂದ ಈಗಿನ ಕಾಲದಲ್ಲಿ ಪ್ರಾತಿನಿಧ್ಯ ತತ್ವವು ಭಾರತೀಯರಿಗೆ ಹೊಸದಾಗಿಯೇ ಇದೆ. ಆ ತತ್ವಗಳನ್ನು ಅನುಸರಿಸಿಕೊಂಡು ರಾಷ್ಟ್ರವು ಏಳಿಗೆಯಾಗಬೇಕಾದರೆ ಜನ ಅಥವಾ 'ಪ್ರಕೃತಿ'ಯು ರಾಷ್ಟ್ರಭಕ್ತಿ ಪೂರಿತವಾಗಿರಬೇಕಾದುದೇ ಅಲ್ಲದೆ ತಮ್ಮ ಕರ್ತವ್ಯಾಧಿಕಾರಗಳನ್ನು ಸಮರ್ಪಕವಾಗಿ ಪಾಲಿಸಲು ತಕ್ಕ ಗುಣಗಳನ್ನು ಪಡೆದಿರಬೇಕಾದುದು ಅತ್ಯವಶ್ಯಕ. ಜನರೇ ರಾಷ್ಟ್ರದಲ್ಲಿ ಸರ್ವ ಸ್ವಾಮ್ಯವುಳ್ಳವರು ; ಸರ್ಕಾರವನ್ನು ತಮ್ಮ ಛಂದಬಲದಿಂದ ತಲೆಕೆಳಗುಮಾಡಬಲ್ಲವರು ; ಆದ್ದರಿಂದ ರಾಷ್ಟ್ರಭಾರ ನಿರ್ವಾಹದಲ್ಲಿಯೂ ರಾಷ್ಟ್ರದ ಉನ್ನತಿ ಸಾಧನೆಯಲ್ಲಿಯೂ ಜನರ ಕರ್ತವ್ಯಾಧಿಕಾರಗಳು ವಿಪುಲವಾಗಿಯೇ ಇರುತ್ತವೆ. ಆ ಕರ್ತವ್ಯಾಧಿಕಾರಗಳನ್ನು ಪಾಲಿಸಲು ತಕ್ಕ ಯೋಗ್ಯತೆಯನ್ನು ಜನರು ಪಡೆಯದೆಯೇ ಇದ್ದರೆ ಪ್ರಾತಿನಿಧ್ಯದ ರಾಷ್ಟ್ರವೆನ್ನುವುದರಿಂದ ಘೋರವಾದ ಅನರ್ಥಗಳೇ

ಸಂಭವಿಸುತ್ತವೆ. ಅಶಿಕ್ಷಿತರೂ ಅಜ್ಞರೂ ಆದ ಜನರಲ್ಲಿ ಪ್ರಾತಿನಿಧ್ಯದ ಆಚರಣೆಯಿಂದ ಅನರ್ಥಪರಂಪರೆಯೇ ಮೂಡುವುದು.

ಪ್ರಾಚೀನ ಧರ್ಮ

ಹಿಂದಿನ ಕಾಲದಲ್ಲಿ ಗ್ರಾಮಾಂತರಗಳಲ್ಲಿ ಪಂಚಾಯತ ಸಭೆಗಳೂ ನಗರಗಳಲ್ಲಿ ನಗರ ಸಭೆಗಳೂ ತಂತಮ್ಮ ಸೌಭಾಗ್ಯವನ್ನು ಸಾಧಿಸುತ್ತಲೂ, ಸರ್ಕಾರವೆಂಬುದು ಶಾಂತಿಕ್ಷೇಮಗಳನ್ನೇ ಪ್ರಧಾನ ಕರ್ತವ್ಯಗಳೆಂದು ಭಾವಿಸಿ ಅನುಕೂಲವೊದಗಿದಾಗ ವಿದ್ಯಾಭಿವೃದ್ಧಿಗೆ ಪ್ರೋತ್ಸಾಹವನ್ನೊದಗಿಸುತ್ತಲೂ ಇದ್ದಾಗ ಜನರಿಗೂ ಸರ್ಕಾರಕ್ಕೂ ಎಂತಹ ಘರ್ಷಣವೂ ತೋರಿ ಕೊಳ್ಳಲಿಲ್ಲ; ಅನ್ಯೋನ್ಯತೆಯಿಂದಲೇ ರಾಷ್ಟ್ರಭಾರ ಸರ್ವಸ್ವವೂ ನಿರ್ವಾಹವಾಗುತ್ತಿತ್ತು. ರಾಷ್ಟ್ರದ ಏಳಿಗೆಗೆ ಮುಖ್ಯವಾದ ರಾಷ್ಟ್ರವರ್ಧಕ ಕರ್ತವ್ಯಗಳ ಬಹು ಭಾಗವನ್ನು ಜನರು ತಾವೇ ನಿರ್ವಹಿಸುತ್ತಿದ್ದುದು ಆ ಬಗೆಯ ಅನ್ಯೋನ್ಯತೆಗೂ ಶಾಂತಿಸ್ಥಿತಿಗೂ ಆಧಾರವಾಗಿದ್ದಿತು. ಪ್ರತಿಯೊಬ್ಬನೂ ಒಂದು ಮನೆಯಲ್ಲಿ ಹುಟ್ಟಿ ಬೆಳೆದು ಶಾಂತಿಪ್ರೇಮ, ಔದಾರ್ಯ, ಕೃತಜ್ಞತೆ ಮತ್ತು ಪರೋಪಕಾರ ವಿಶ್ವಾಸಗಳೆಂಬ ಗುಣಗಳನ್ನು ಮನೆಯ ಶಿಕ್ಷಣದಿಂದಲೇ ಸಂಪಾದಿಸಿಕೊಂಡು ಕರ್ತವ್ಯಪರನಾಗುತ್ತಿದ್ದನು. ಪ್ರತಿಯೊಬ್ಬನೂ ಯಾವುದಾದರೊಂದು ಜಾತಿಗೆ ಸೇರಿದ್ದು ಆ ಜಾತಿಯ ಆಚಾರ ನಿಯಮಗಳನ್ನು ಅವಲಂಬಿಸಿ ಜಾತಿಗೌರವವನ್ನು ಕಾಪಾಡಿಕೊಂಡಿರುತ್ತಿದ್ದನು. ತನ್ನ ಜಾತಿಯಲ್ಲಿ ವಿಶ್ವಾಸ ಗೌರವಗಳನ್ನು ಪಡೆದಾತನೇ ಸದ್ಗೃಹಸ್ಥನೆನಿಸಿ ಆ ಕಾಲದ **ಪೌರ**ನಾಗಿದ್ದನು. ಅಂತಹ ಪೌರನು ಪ್ರಭುಭಕ್ತನಾಗಿರುವುದು ಸಹಜವಾಗಿಯೇ ಇತ್ತು; ಪ್ರಭುಭಕ್ತಿಯನ್ನಲ್ಲದೆ ಪೌರರಾದವರು ರಾಷ್ಟ್ರಭಕ್ತಿಯನ್ನೂ ತಾಳಿ, ದೇಶಕ್ಕೂ ಜನಕ್ಕೂ ಉಪಯುಕ್ತಗಳಾದ ಕೆಲಸಕಾರ್ಯಗಳನ್ನು ಶಕ್ತ್ಯನುಸಾರವಾಗಿ ಕೈಕೊಳ್ಳಬೇಕಾಗಿದ್ದಿತು. ಆ ಕಾರ್ಯಗಳಿಗೆ **ಧರ್ಮಕಾರ್ಯ**ಗಳೆಂದೂ **ಪುಣ್ಯಕಾರ್ಯ**ಗಳೆಂದೂ ಸಾಮಾನ್ಯವಾದ ಹೆಸರು; ಏಕೆಂದರೆ, ಅಂತಹ ಕಾರ್ಯಗಳ ನಿರ್ವಹದಿಂದ ಇಹಲೋಕದಲ್ಲಿ ಗೌರವ ಮಾತ್ರವಲ್ಲದೆ ಪುಣ್ಯವೂ ಲಭಿಸಿ ಪರಲೋಕ ಸಾಧನೆಗೆ ಸಹಾಯವಾಗುವುದೆಂದು ನಂಬಿಕೆಯಿದ್ದಿತು.

**ದ್ವಾತ್ರಿಂಶದ್ದಾನಗಳು**

ಬಾವಿಯನ್ನು ತೋಡಿಸಿಯೋ, ಕೆರೆಯನ್ನು ಕಟ್ಟಿಸಿಯೋ, ಅರವಟ್ಟಿಗೆಗಳನ್ನು ಇಡಿಸಿಯೋ, ಸಾಲುಮರಗಳನ್ನು ನೆಡಿಸಿಯೋ, ಸತ್ರಗಳನ್ನು ನೆಲೆಗೊಳಿಸಿಯೋ ಅಥವಾ ವಿಹಾರ ದೇವಾಲಯಗಳನ್ನು ನಿರ್ಮಿಸಿಯೋ ಪೌರನಾದಾತನು **ಧರ್ಮಾತ್ಮ** ಅಥವಾ **ಪುಣ್ಯಾತ್ಮ**ನೆನಿಸುತ್ತಿದ್ದನು. ಇಂತಹ ಜನಹಿತ ಕಾರ್ಯಗಳನ್ನು **ಧರ್ಮಕಾರ್ಯ**ಗಳೆನ್ನುತ್ತಿದ್ದರು. ದಶ ದಾನಗಳು, ಷೋಡಶ ದಾನಗಳು ಮತ್ತು ದ್ವಾತ್ರಿಂಶದ್ದಾನಗಳೆಂಬುದಾಗಿ ಆ ಧರ್ಮಕಾರ್ಯಗಳು ರೂಢಿಗೊಂಡು ಪ್ರಬಲ ಸಂಪ್ರದಾಯದ ರೂಪವನ್ನು ಪಡೆದಿದ್ದುವು. 32 ದಾನಗಳೆಂಬವುಗಳ ವಿವರವನ್ನು ನಾವು ಪರೀಕ್ಷಿಸಿದರೆ ಆ ದಾನಕಾರ್ಯಗಳೆಲ್ಲವೂ ಪೌರಕರ್ತವ್ಯಗಳಾಗಿಯೇ ಪರಿಣಮಿಸುತ್ತವೆ. ಬಡವರಿಗೆ ಮನೆ ಕಟ್ಟಿಸಿಕೊಡುವುದು, ವಿದ್ಯಾಭ್ಯಾಸದಲ್ಲಿ ಸಹಾಯಮಾಡುವುದು, ಉಪಜೀವನ (livelihood) ವನ್ನು ಕಲ್ಪಿಸಿಕೊಡುವುದು, ಸೆರೆಯಲ್ಲಿ ಸಿಕ್ಕಿದವರಿಗೆ ಅನ್ನವಸ್ತ್ರಗಳನ್ನು ಕೊಡುವುದು, ತಬ್ಬಲಿಗಳನ್ನು ಪಾಲಿಸುವುದು, ಮಕ್ಕಳಿಗೆ ಹಾಲೆರೆದು ಸಾಕುವುದು, ಹೆರಿಗೆಗೆ ಸಹಾಯಕರಾಗುವುದು, ಬಡಬಗ್ಗರ ಉತ್ತರಕ್ರಿಯೆಗಳನ್ನು ಮಾಡಿಸುವುದು, ಅನಾಥರಿಗೆ ವಸ್ತ್ರದಾನ ಮಾಡುವುದು, ರೋಗಿಗಳಿಗೆ ಔಷಧವನ್ನು ಕೊಡಿಸುವುದು, ಬಡಬಗ್ಗರ ವಸ್ತ್ರಗಳನ್ನು ಒಗೆಸಿಕೊಡುವುದು, ತಲೆಗೆ ತೈಲವನ್ನು ಕೊಡಿಸುವುದು, ಬಡಬಗ್ಗರ ಮದುವೆ ಮುಂಜಿಗಳನ್ನು ನೆರವೇರಿಸಿಕೊಡುವುದು, ನಷ್ಟಪಟ್ಟವರಿಗೆ ಸಹಾಯಮಾಡುವುದು, ಪಶುಗಳ ಆರೈಕೆ, ಮೋರಿಯನ್ನು ಉಚಿತವಾಗಿ ಕೊಡುವುದು ಮುಂತಾದವು ಭರತವರ್ಷದ ಜನಜೀವನದಲ್ಲಿ ಅತ್ಯವಶ್ಯಕವಾಗಿ ತೋರಿಕೊಳ್ಳತಕ್ಕವು.

**ಸಪ್ತಸಂತಾನಗಳು**

32 ದಾನಗಳಲ್ಲಿ ಇವುಗಳಲ್ಲದೆ ಗೋದಾನ, ಭೂದಾನ, ಸುವರ್ಣದಾನಗಳೆಂಬವೂ ಜಲಾಶಯ ದೇವಮಂದಿರ ನಿರ್ಮಾಣಗಳೂ ಎಣಿಕೆಯಾಗುತ್ತವೆ. ಈ ಧರ್ಮಕಾರ್ಯಗಳಲ್ಲಿ ವಿಶ್ವಾಸವು ಎಷ್ಟು ಮಾತ್ರ ಇದ್ದಿತೆಂಬುದನ್ನು **ಸಪ್ತಸಂತಾನ**ಗಳೆಂಬ ಸಂಪ್ರದಾಯದಿಂದ ತಿಳಿಯಬಹುದು. ತಟಾಕ, ಧನನಿಕ್ಷೇಪ, ಬ್ರಹ್ಮಸ್ಥಾಪನೆ, ದೇವಾಲಯ ಪ್ರತಿಷ್ಠೆ, ವನ ಪ್ರತಿಷ್ಠೆ, ಸದ್ಗ್ರಂಥ ರಚನೆಗಳು ಪುತ್ರಸಂತಾನಕ್ಕೆ ಸಮಾನವಾದವುಗಳೆಂದು ಗಣ್ಯವಾದವು.

ದಾನಧರ್ಮ ಪದ್ಧತಿಯೆಂಬುದು ಭಾರತೀಯ ಜನಶಿಕ್ಷಣದಲ್ಲಿ ಪವಿತ್ರವೆನಿಸಿ ಎಷ್ಟು ವ್ಯಾಪ್ತಿಯನ್ನು ಪಡೆದಿದ್ದಿತೆಂಬುದು ಸುಲಭವಾಗಿ ಗೋಚರವಾಗುತ್ತದೆ. ದೇಶದಲ್ಲೆಲ್ಲಿಯೂ ಪ್ರಚುರಿತವಾದ ಸಂಸ್ಕೃತ ಭಾಷೆಯ ವಾಕ್ಯಗಳಲ್ಲದೆ ದೇಶಭಾಷೆಗಳ ಸಾಹಿತ್ಯದಲ್ಲಿಯೂ ನಾಣ್ಣುಡಿಗಳಲ್ಲಿಯೂ ಈ ಧರ್ಮಕಾರ್ಯ ವಿವರವನ್ನು ಯಥೇಷ್ಟವಾಗಿ ಕಾಣಬಹುದು. ಕನ್ನಡ ದೇಶದಲ್ಲಿ ಕನ್ನಡ ನುಡಿಯಲ್ಲಿ ಎಷ್ಟೋ ಉಂಟು. ದೃಷ್ಟಾಂತಕ್ಕೆ ಈ ಪದ್ಯವನ್ನು ಕಾಣಬಹುದು:

**ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ಮಾಡು, ಸೆ**
**ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು, ಮಿತ್ರರ್ಗಿಂಬುಕೆಯ್ಯಿ, ನಂಬಿದ।**
**ರ್ಗೆರವಟ್ಟಾಗಿರು, ಶಿಷ್ಟರಂ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾ**
**ಮೆರೆದಲ್ಲಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥**

ಪಂಚ ಪಿತೃಗಳು

ಜನಶಿಕ್ಷಣ ಭಾಗದಲ್ಲಿ ಧರ್ಮಕಾರ್ಯಾಸಕ್ತಿಯನ್ನು ಉಂಟುಮಾಡಿದ ಭಾಗವನ್ನಲ್ಲದೆ ಮತ್ತೊಂದು ಭಾಗವನ್ನೂ ಕಾಣಬೇಕು. ದಾನವೆಂಬುದು ಕೊಡತಕ್ಕವನಿಗೂ ತೆಗೆದುಕೊಳ್ಳತಕ್ಕವನಿಗೂ ಇಬ್ಬರಿಗೂ ಪವಿತ್ರವಾದುದರಿಂದ ಉಪಕೃತನಾದವನ ಕೃತಜ್ಞತೆಯೂ ಪವಿತ್ರವಾದ ರೂಪವನ್ನೇ ತಾಳಿತ್ತು. ಕೃತಜ್ಞತೆಯ ಅಂತಸ್ತನ್ನು **ಪಂಚ ಪಿತೃಗಳೆಂಬ** ಸಂಪ್ರದಾಯದಲ್ಲಿ ಕಾಣಬಹುದು. ಶಿಕ್ಷಣ ಪಡೆಯುವುದರಲ್ಲಿ, ವಿವಾಹಿತನಾಗಿ ಗೃಹಸ್ಥನಾಗುವುದರಲ್ಲಿ, ಅನ್ನ ಸಂಪಾದನೆಯಲ್ಲಿ, ಅಥವಾ ಭಯವನ್ನು ಕಳೆದುಕೊಳ್ಳುವುದರಲ್ಲಿ ನೆರವಾದಾತನನ್ನು ಸ್ವಂತ ತಂದೆಯಂತೆಯೇ ಗೌರವ ಮಾಡಬೇಕೆಂಬುದು ಆ ಸಂಪ್ರದಾಯ. ಇದಲ್ಲದೆ ದಾನಧರ್ಮಕಾರ್ಯಗಳಿಗೆ ಅಡ್ಡಿಯಾದವನು ಪಾತಕಿಯೆಂದೇ ಎನಿಸುತ್ತಿದ್ದನು. ದಾನಕಾರ್ಯಗಳನ್ನು ಪವಿತ್ರವೆಂದು ಎಲ್ಲರೂ ಗೌರವಿಸಬೇಕಾಗಿದ್ದಿತು. ಹಿಂದಿನ ಕಾಲದ ದಾನಶಾಸನಗಳಲ್ಲಿ "ಈ ಧರ್ಮಮಂ ಪರಿಪಾಲಿಸಿದವರ್ಗೆ ಗಂಗೆಯ ತಟದಲ್ಲಿ ಸಾಸಿರ ಕವಿಲೆಯುಂ ದಾನಮಾಡಿದ ಫಲಮಕ್ಕುಂ। ಕಿಡಿಸಿದವರ್ಗೆ ವಾರಣಾಸಿಯೊಳ್ ಸಾಸಿರ ಬ್ರಾಹ್ಮಣರಂ ಸಾಸಿರ ಕವಿಲೆಯುಮಂ ಕೊಂದ ಪಾತಕಮಕ್ಕುಂ।", "ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ್

ವಸುಂಧರಾಂ । ಷಷ್ಟಿರ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥” ಎಂಬ ವಾಕ್ಯಗಳು ಕಡೆಯಲ್ಲಿ ಅತಿ ಸಾಮಾನ್ಯ. ದಾನಧರ್ಮ ಕಾರ್ಯಗಳನ್ನು ಜನರು ಹೇಗೆ ಪಾಲಿಸುತ್ತಿದ್ದರೆಂಬುದನ್ನು ಇದರಿಂದ ನಾವು ಅರಿತುಕೊಳ್ಳಬಹುದು. ಸರ್ವಜನರ ಸ್ವತ್ತೆನಿಸಿದ ಸಂಸ್ಥೆಗಳು ಸರ್ವ ಜನರಿಂದಲೂ ಪಾಲನೆಯಾಗಬೇಕಾಗಿತ್ತು. ಸರ್ವಜನಸ್ವಾಮ್ಯಕ್ಕೆ ಅಥವಾ ಅನುಭೋಗಕ್ಕೆ ಕಂಟಕನಾದವನು ನೀಚನೆಂದೋ ಪಾತಕಿಯೆಂದೋ ಎನಿಸುತ್ತಿದ್ದನು.

**ಸ್ಥಿತಿಪಾಲನೆ**

**ನಾನಾಮುಖಸೇವೆ**

ನರಜೀವಿಗಳಿಗೂ ಪಶುಪಕ್ಷಿಗಳಿಗೂ ಜಲಸಹಾಯ, ಬಡಬಗ್ಗರ ಉದ್ಧಾರ, ಶಿಕ್ಷಣವ್ಯವಸ್ಥೆ, ಆರೋಗ್ಯಸಾಧನೆ ಮುಂತಾದ ರಾಷ್ಟ್ರಕರ್ತವ್ಯಗಳು ಜನರಾಶಿಯಿಂದಲೇ ಸಾಧಿತವಾಗಿ ಜನರಿಂದಲೇ ರಕ್ಷಿತವಾಗುತ್ತಿದ್ದವು. ವಿಹಾರ, ಮಂದಿರ, ದೇವಾಲಯಗಳೆಂಬವು ಕೇವಲ ದೇವತಾರ್ಚನೆಗೆ ಮಾತ್ರವೇ ಉದ್ದಿಷ್ಟವಾಗಿರಲಿಲ್ಲ. ಬಾಲಕರ ಶಿಕ್ಷಣಕ್ಕೆ ಅದೇ ಸ್ಥಾನ, ಅನಾಥರಿಗೆ ಅದೇ ಆಶ್ರಯ, ರೋಗಿಜನರಿಗೆ ಅದೇ ಭೈಷಜ್ಯ ಸ್ಥಾನ, ಜ್ಞಾನಸಾಧನೆಗೆ ಅದೇ ಕ್ಷೇತ್ರ, ನ್ಯಾಯತೀರ್ಮಾನಕ್ಕೆ ಅದೇ ಪವಿತ್ರಸ್ಥಳ, ಕಲಾನೈಪುಣ್ಯಕ್ಕೆ ಅದೇ ತವರ್ಮನೆ, ಉತ್ಸವವಿನೋದಗಳಿಗೆ ಅದೇ ನೆಲೆ.*

---

* ಉದಾಹರಣೆಗೆ ಕೋಡಿಯ ಮಠದ ವಿವರವನ್ನು ಕಾಣಬಹುದು : “ದಕ್ಷಿಣ ಕೇದಾರ ಸ್ಥಾನವುಂ, ಶಿವಲಿಂಗಪೂಜಾಪೂರ್ವಕ ಸಸ್ಯಸರಸಕೇದಾರಸ್ಥಾನವುಂ, ನೈಷ್ಠಿಕಬ್ರಹ್ಮಚರ್ಯಶಿವ ಮುನಿ ಜನಾನುಷ್ಠಾನ ನಿಷ್ಠಿತ ಸ್ಥಾನವುಂ, ಸಾಂಗಋಗ್ಯಜುಸ್ಸಾಮಾಥರ್ವಚತುರ್ವೇದ ಸ್ವಾಧ್ಯಾಯಸ್ಥಾನವುಂ, ಕೌಮಾರಪಾಣಿನೀಯಶಾಕಟಾಯನಶಬ್ದಾನುಶಾಸನಾದಿವ್ಯಾಕರಣ ವ್ಯಾಖ್ಯಾನಸ್ಥಾನವುಂ, ನ್ಯಾಯವೈಶೇಷಿಕಮೀಮಾಂಸಾಸಾಂಖ್ಯಬೌದ್ಧಾದಿಷಡ್ದರ್ಶನವ್ಯಾಖ್ಯಾನ ಸ್ಥಾನವುಂ, ಲಕುಲಸಿದ್ಧಾಂತಪಾತಂಜಲಾದಿಯೋಗಶಾಸ್ತ್ರವ್ಯಾಖ್ಯಾನಸ್ಥಾನವುಂ, ಅಷ್ಟಾದಶ ಪುರಾಣಧರ್ಮಶಾಸ್ತ್ರಸಕಳಕಾವ್ಯನಾಟಕನಾಟಿಕಾದಿವಿವಿಧವಿದ್ಯಾಸ್ಥಾನವುಂ, ದೀನಾನಾಥಪಂಗ್ವಂಧಬಧಿರಕಥಕಗಾಯಕವಾದಕವಾಂಶಿಕನರ್ತಕವೈತಾಳಿಕನಗ್ನಭಗ್ನಕ್ಷಪಣಕ ಏಕದಂಡಿ ತ್ರಿದಂಡಿ ಹಂಸಪರಮಹಂಸಾದಿ ನಾನಾದೇಶಭಿಕ್ಷುಕಜನಾನಿವಾರ್ಯಾನ್ನದಾನ ಸ್ಥಾನವುಂ, ನಾನಾನಾಥ ರೋಗಿಜನರೋಗ ಭೈಷಜ್ಯಸ್ಥಾನವುಂ, ಸಕಲಭೂತಾಭಯಪ್ರದಾನಸ್ಥಾನವುಮಾಗಿ ಕೋಡಿಯ ಮಠಮಿರ್ದುದು.”

ದಾನಧರ್ಮ ಪದ್ಧತಿಯೆಂಬುದು ಭಾರತೀಯ ಜನಶಿಕ್ಷಣದಲ್ಲಿ ಪವಿತ್ರವೆನಿಸಿ ಎಷ್ಟು ವ್ಯಾಪ್ತಿಯನ್ನು ಪಡೆದಿದ್ದಿತೆಂಬುದು ಸುಲಭವಾಗಿ ಗೋಚರವಾಗುತ್ತದೆ. ದೇಶದಲ್ಲೆಲ್ಲಿಯೂ ಪ್ರಚುರಿತವಾದ ಸಂಸ್ಕೃತ ಭಾಷೆಯ ವಾಕ್ಯಗಳಲ್ಲದೆ ದೇಶಭಾಷೆಗಳ ಸಾಹಿತ್ಯದಲ್ಲಿಯೂ ನಾಣ್ಣುಡಿಗಳಲ್ಲಿಯೂ ಈ ಧರ್ಮಕಾರ್ಯ ವಿವರವನ್ನು ಯಥೇಷ್ಟವಾಗಿ ಕಾಣಬಹುದು. ಕನ್ನಡ ದೇಶದಲ್ಲಿ ಕನ್ನಡ ನುಡಿಯಲ್ಲಿ ಎಷ್ಟೋ ಉಂಟು. ದೃಷ್ಟಾಂತಕ್ಕೆ ಈ ಪದ್ಯವನ್ನು ಕಾಣಬಹುದು :

> ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ಮಾಡು, ಸ
> ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು, ಮಿತ್ರರ್ಗಿಂಬುಕೆಯ್ಯು, ನಂಬಿದ ।
> ರ್ಗೆರೆವಟ್ಟಾಗಿರು, ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ
> ಮೆರೆದಳ್ವಾಲಿರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥

ಜನಶಿಕ್ಷಣ ಭಾಗದಲ್ಲಿ ಧರ್ಮಕಾರ್ಯಾಸಕ್ತಿಯನ್ನು ಉಂಟುಮಾಡಿದ ಭಾಗವನ್ನಲ್ಲದೆ ಮತ್ತೊಂದು ಭಾಗವನ್ನೂ ಕಾಣಬೇಕು. ದಾನವೆಂಬುದು ಕೊಡತಕ್ಕವನಿಗೂ ತೆಗೆದುಕೊಳ್ಳತಕ್ಕವನಿಗೂ ಇಬ್ಬರಿಗೂ ಪವಿತ್ರವಾದುದರಿಂದ ಉಪಕೃತನಾದವನ ಕೃತಜ್ಞತೆಯು ಪವಿತ್ರವಾದ ರೂಪವನ್ನೇ ತಾಳಿತ್ತು. ಕೃತಜ್ಞತೆಯ ಅಂತಸ್ತನ್ನು ಪಂಚಪಿತೃಗಳೆಂಬ ಸಂಪ್ರದಾಯದಲ್ಲಿ ಕಾಣಬಹುದು. ಶಿಕ್ಷಣ ಪಡೆಯುವುದರಲ್ಲಿ, ವಿವಾಹಿತನಾಗಿ ಗೃಹಸ್ಥನಾಗುವುದರಲ್ಲಿ, ಅನ್ನ ಸಂಪಾದನೆಯಲ್ಲಿ, ಅಥವಾ ಭಯವನ್ನು ಕಳೆದುಕೊಳ್ಳುವುದರಲ್ಲಿ ನೆರವಾದಾತನನ್ನು ಸ್ವಂತ ತಂದೆಯಂತೆಯೇ ಗೌರವ ಮಾಡಬೇಕೆಂಬುದು ಆ ಸಂಪ್ರದಾಯ. ಇದಲ್ಲದೆ ದಾನಧರ್ಮಕಾರ್ಯಗಳಿಗೆ ಅಡ್ಡಿಯಾದವನು ಪಾತಕಿಯೆಂದೇ ಎನಿಸುತ್ತಿದ್ದನು. ದಾನಕಾರ್ಯಗಳನ್ನು ಪವಿತ್ರವೆಂದು ಎಲ್ಲರೂ ಗೌರವಿಸಬೇಕಾಗಿದ್ದಿತು. ಹಿಂದಿನ ಕಾಲದ ದಾನಶಾಸನಗಳಲ್ಲಿ "ಈ ಧರ್ಮವಂ ಪರಿಪಾಲಿಸಿದವರ್ಗೆ ಗಂಗೆಯ ತಟದಲ್ಲಿ ಸಾವಿರ ಕವಿಲೆಯಂ ದಾನಮಾಡಿದ ಫಲವಕ್ಕುಂ। ಕಿಡಿಸಿದವರ್ಗೆ ವಾರಣಾಸಿಯೊಳ್ ಸಾಸಿರ ಬ್ರಾಹ್ಮಣರಂ ಸಾಸಿರ ಕವಿಲೆಯಂ ಕೊಂದ ಪಾತಕವಕ್ಕುಂ ॥", "ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ್

ಪಂಚಪಿತೃಗಳು

ಸ್ಥಿತಿಪಾಲನೆ

ವಸುಂಧರಾಂ । ಷಷ್ಟಿರ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥" ಎಂಬ ವಾಕ್ಯಗಳು ಕಡೆಯಲ್ಲಿ ಅತಿ ಸಾಮಾನ್ಯ. ದಾನಧರ್ಮ ಕಾರ್ಯಗಳನ್ನು ಜನರು ಹೇಗೆ ಪಾಲಿಸುತ್ತಿದ್ದರೆಂಬುದನ್ನು ಇದರಿಂದ ನಾವು ಅರಿತುಕೊಳ್ಳಬಹುದು. ಸರ್ವಜನರ ಸ್ವತ್ತೆನಿಸಿದ ಸಂಸ್ಥೆಗಳು ಸರ್ವಜನರಿಂದಲೂ ಪಾಲನೆಯಾಗಿರಬೇಕಾಗಿತ್ತು. ಸರ್ವಜನಸ್ವಾಮ್ಯಕ್ಕೆ ಅಥವಾ ಅನುಭೋಗಕ್ಕೆ ಕಂಟಕನಾದವನು ನೀಚನೆಂದೋ ಪಾತಕಿಯೆಂದೋ ಎನಿಸುತ್ತಿದ್ದನು.

ನಾನಾಮುಖ ಸೇವೆ

ನರಜೀವಿಗಳಿಗೂ ಪಶುಪಕ್ಷಿಗಳಿಗೂ ಜಲಸಹಾಯ, ಬಡಬಗ್ಗರ ಉದ್ಧಾರ, ಶಿಕ್ಷಣ ವ್ಯವಸ್ಥೆ, ಆರೋಗ್ಯ ಸಾಧನೆ ಮುಂತಾದ ರಾಷ್ಟ್ರಕರ್ತವ್ಯಗಳು ಜನರಾಶಿಯಿಂದಲೇ ಸಾಧಿತವಾಗಿ ಜನರಿಂದಲೇ ರಕ್ಷಿತವಾಗುತ್ತಿದ್ದವು. ವಿಹಾರ, ಮಂದಿರ, ದೇವಾಲಯಗಳೆಂಬವು ಕೇವಲ ದೇವತಾರ್ಚನೆಗೆ ಮಾತ್ರವೇ ಉದ್ದಿಷ್ಟವಾಗಿರಲಿಲ್ಲ. ಬಾಲಕರ ಶಿಕ್ಷಣಕ್ಕೆ ಅದೇ ಸ್ಥಾನ, ಅನಾಥರಿಗೆ ಅದೇ ಆಶ್ರಯ, ರೋಗಿಜನರಿಗೆ ಅದೇ ಭೈಷಜ್ಯ ಸ್ಥಾನ, ಜ್ಞಾನಸಾಧನೆಗೆ ಅದೇ ಕ್ಷೇತ್ರ, ನ್ಯಾಯ ತೀರ್ಮಾನಕ್ಕೆ ಅದೇ ಪವಿತ್ರ ಸ್ಥಲ, ಕಲಾನೈಪುಣ್ಯಕ್ಕೆ ಅದೇ ತವರ್ಮನೆ, ಉತ್ಸವ ವಿನೋದಗಳಿಗೆ ಅದೇ ನೆಲೆ.*

---

* ಉದಾಹರಣೆಗೆ ಕೋಡಿಯ ಮಠದ ವಿವರವನ್ನು ಕಾಣಬಹುದು : "ದಕ್ಷಿಣ ಕೇದಾರ ಸ್ಥಾನಮುಂ, ಶಿವಲಿಂಗಪೂಜಾಫಳಕಸಸ್ಯಸರಸಕೇದಾರಸ್ಥಾನಮುಂ, ನೈಷ್ಠಿಕಬ್ರಹ್ಮಚರ್ಯಶಿವಮುನಿಜನಾನುಷ್ಠಾನನಿಷ್ಠಿತಸ್ಥಾನಮುಂ, ಸಾಂಗಋಗ್ಯಜುಸ್ಸಾಮಾಥರ್ವಚತುರ್ವೇದಸ್ವಾಧ್ಯಾಯಸ್ಥಾನಮುಂ, ಕೌಮಾರಪಾಣಿನೀಯಶಾಕಟಾಯನಶಬ್ದಾನುಶಾಸನಾದಿವ್ಯಾಕರಣವ್ಯಾಖ್ಯಾನಸ್ಥಾನಮುಂ, ನ್ಯಾಯವೈಶೇಷಿಕಮೀಮಾಂಸಾಸಾಂಖ್ಯಬೌದ್ಧಾದಿಷಡ್ದರ್ಶನವ್ಯಾಖ್ಯಾನಸ್ಥಾನಮುಂ, ಲಕುಲಸಿದ್ಧಾಂತಪಾತಂಜಲಾದಿಯೋಗಶಾಸ್ತ್ರವ್ಯಾಖ್ಯಾನಸ್ಥಾನಮುಂ, ಅಷ್ಟಾದಶಪುರಾಣಧರ್ಮಶಾಸ್ತ್ರಸಕಳಕಾವ್ಯನಾಟಕನಾಟಕಾದಿವಿವಿಧವಿದ್ಯಾಸ್ಥಾನಮುಂ, ದೀನಾನಾಥಾದಿಪಂಗ್ವಂಧಬಧಿರಕಥಕಗಾಯಕವಾದಕವಾಂಶಿಕನರ್ತಕವೈತಾಳಿಕನಗ್ನಭಗ್ನಕ್ಷಪಣಕೈಕದಂಡಿತ್ರಿದಂಡಿಹಂಸಪರಮಹಂಸಾದಿ ನಾನಾದೇಶಭಿಕ್ಷುಕಜನಾನಿವಾರ್ಯಾನ್ನದಾನ ಸ್ಥಾನಮುಂ, ನಾನಾನಾಥರೋಗಿಜನರೋಗಭೈಷಜ್ಯಸ್ಥಾನಮುಂ, ಸಕಲಭೂತಾಭಯಪ್ರದಾನಸ್ಥಾನಮುಮಾಗಿ ಕೋಡಿಯ ಮಠಮಿರ್ಪುದು."

ಆದುದರಿಂದಲೇ ಗ್ರಾಮಸ್ಥರೆಲ್ಲರಿಗೂ ದೇವಾಲಯವೆಂಬುದು ಸರ್ವೋಪಯುಕ್ತವೂ ಸರ್ವಪವಿತ್ರವೂ ಆಗಿತ್ತು;

ಜನಸೇವೆ

ಗ್ರಾಮಸ್ಥರೆಲ್ಲರಿಗೂ ತಮ್ಮ ಗ್ರಾಮ ದೇವಾಲಯದಲ್ಲಿ ಹೆಮ್ಮೆಯಿತ್ತು. ದೇವಾಲಯವಿಲ್ಲದ ಗ್ರಾಮವು ಗ್ರಾಮವೇ ಅಲ್ಲ; ದೇವಾಲಯಕ್ಕೆ ದಾನಮಾಡುವುದರಲ್ಲಿಯೂ ಮಾಡಿದ ದಾನವನ್ನು ಚ್ಯುತಿಯಿಲ್ಲದೆ ನಡೆಸುವುದರಲ್ಲಿಯೂ ಗ್ರಾಮಸ್ಥರು ಭಕ್ತಿಬದ್ಧರಾಗಿದ್ದರು. ದೇವಾಲಯ ನಿರ್ಮಾಣದ ಮೂಲಕ ನಡೆದ ಜನಹಿತಸಾಧನೆಯಲ್ಲದೆ ಬೇರೆ ಬಗೆಗಳಲ್ಲಿಯೂ ಗ್ರಾಮಸ್ಥರು ಪರೋಪಕಾರವನ್ನು ನೆರವೇರಿಸುತ್ತಿದ್ದರು. ಧರ್ಮಾತ್ಮನಾದ ಗೃಹಸ್ಥನು ದೊಂಬರಾಟವನ್ನೋ ಗೊಂಬೆಗಳಾಟವನ್ನೋ ಆಡಿಸಿದಾಗ ಅಥವಾ ಪುರಾಣ ಹರಿಕಥೆಗಳನ್ನು ಹೇಳಿಸಿದಾಗ ಗ್ರಾಮಸ್ಥರೆಲ್ಲರಿಗೂ ಉಪಯುಕ್ತವಾಗಿತ್ತು. ಪರೋಪಕಾರ ಅಥವಾ ಜನಹಿತಸಾಧನೆಯೇ ಪುಣ್ಯವೆಂಬುದು ಸಾವಿರಾರು ವರ್ಷಗಳಿಂದ ಭಾರತೀಯರಲ್ಲಿ ಉತ್ತಮ ರೀತಿಯಲ್ಲಿ ನಡೆದುಬಂದಿರುವ ತತ್ವ. ಆ ತತ್ವದ ಆಚರಣೆಯಲ್ಲಿ ಆಧಿಕ್ಯದೋಷ ಕಾಣಬಹುದೇ ವಿನಾ ಲೋಪದೋಷವು ಕಾಣುವುದಿಲ್ಲ. ದೇಶದಲ್ಲಿರುವ ಬಾವಿ, ಕೆರೆ, ಸರಸ್ಸುಗಳಲ್ಲಿ ಅಥವಾ ಅದ್ಭುತವೆನಿಸಿದ ಸತ್ರ ದೇವಮಂದಿರಗಳಲ್ಲಿ ಪ್ರತಿಯೊಂದು ನಿರ್ಮಾಣವೂ ಪೂರ್ವಿಕರಿಗೆ ದಾನಧರ್ಮಪದ್ಧತಿಯಲ್ಲಿದ್ದ ಆಸಕ್ತಿ ನಿಷ್ಠೆಗಳನ್ನು ಪ್ರಕಟಗೊಳಿಸುತ್ತದೆ. ಯಾವ ದೇವಾಲಯದ ಚರಿತ್ರೆಯನ್ನು ನಾವು ಕಂಡಾಗ್ಯೂ ನಮಗೆ ಸೋಜಿಗವನ್ನುಂಟುಮಾಡುವ ಅಂಶಗಳು ಸ್ಪಷ್ಟವಾಗಿ ತೋರುತ್ತವೆ. ಹೊಟೇಲುಗಳು, ಕಾಫಿ ಕ್ಲಬ್ಬುಗಳು, ನಾಟಕ ಮಂದಿರಗಳು, ಸಭಾಗೃಹಗಳು ಪೂರ್ವಕಾಲದಲ್ಲಿ ಏಕೆ ರೂಪಗೊಳ್ಳಲಿಲ್ಲವೆಂಬುದಕ್ಕೆ ಸುಲಭವಾಗಿ ಸಮಾಧಾನವನ್ನು ಹೇಳಬಹುದು. ಆ ಸಂಸ್ಥೆಗಳಿಂದ ನೆರವೇರುವ ಪ್ರಯೋಜನಗಳು ಭಾರತೀಯರಿಗೆ ಇತರ ಸಂಸ್ಥೆಗಳಿಂದ ಒಡಗೂಡುತ್ತಿದ್ದವು.

ಆಡಳಿತವು ದುಷ್ಟಶಿಕ್ಷಣ ಶಿಷ್ಟಪಾಲನಗಳೆಂಬ ಶಾಂತಿಕ್ಷೇಮ ರಕ್ಷಣೆಗಳಲ್ಲಿಯೇ ತೊಡಗಿದ್ದಾಗ ಜನಹಿತಸಾಧನೆಯು ನಾನಾಮುಖವಾಗಿ ಜನರಿಂದಲೇ ಧರ್ಮಕಾರ್ಯಗಳೆಂಬ ರೀತಿಯಲ್ಲಿ ಕೈಗೂಡುತ್ತಿತ್ತು.

ಧರ್ಮಕಾರ್ಯಗಳನ್ನು ಎಂತಹ ಪ್ರಭುವಾದರೂ ಕೆಡಿಸಲು ಅಂಜುತ್ತಿದ್ದ ಕಾರಣದಿಂದ ಜನಜೀವನದಲ್ಲಿ ಸರ್ಕಾರಕ್ಕೆ ವಿಶೇಷವಾದ ಪ್ರವೇಶವಿರಲಿಲ್ಲ. ಸರ್ಕಾರಕ್ಕೂ ಜನರಿಗೂ ಘರ್ಷಣೆಯು ತೋರಿಕೊಳ್ಳಲು ಆಸ್ಪದ ವಿರಲಿಲ್ಲ. ಧರ್ಮಕಾರ್ಯಗಳನ್ನು ಎಲ್ಲರೂ ಆವಶ್ಯ ಕರ್ತವ್ಯಗಳೆಂದು ಭಾವಿಸಿದ್ದರೇ ವಿನಾ ಐಚ್ಛಿಕವೆಂದು ತಿಳಿದಿರಲಿಲ್ಲ. ಎಲ್ಲರೂ ದೇವಾಲಯ ನಿರ್ಮಾಣಗಳನ್ನು ಮಾಡಿಯೇತೀರಬೇಕಾಗಿತ್ತೆಂದಲ್ಲ; ಧನಿಕರಾದವರು (ಕೆಲವೇಳೆ ಆ ಯೋಗ್ಯತೆಯಿಲ್ಲದಿದ್ದವರೂ) ದೇವಮಂದಿರದ ಸ್ಥಾಪನೆಗೆ ತೊಡಗುತ್ತಿದ್ದರು. ಸಾಮಾನ್ಯರಾದವರು ಆ ಧರ್ಮಗಳನ್ನು ಗೌರವಿಸುತ್ತಲಿದ್ದುದು ಮಾತ್ರವಲ್ಲದೆ ತಮ್ಮ ಶಕ್ತ್ಯನುಸಾರ ಧರ್ಮನಿರತರಾಗುತ್ತಿದ್ದರು. ಅದರಲ್ಲಿ ಕನಿಷ್ಠವೆಂದು ಎಣಿಕೆಯಾದುದು, ಅಂದರೆ ಎಂತಹವನಾದರೂ ಮಾಡತಕ್ಕದ್ದು—ಹಸಿದವನಿಗೆ ಅಶನವನ್ನು ನೀಡುವುದು, ಅನಾಥರಿಗೆ ದಾನಮಾಡುವುದು. ಈ ಪದ್ಧತಿಯು ಎಷ್ಟು ಪ್ರಬಲವಾಗಿ ನಾಟಿತ್ತೆಂಬುದನ್ನು ಭಾರತೀಯ ಭಿಕ್ಷುಕ ವರ್ಗದಲ್ಲಿ ಕಾಣಬಹುದು. ಯಾಚಕರಾಗಿ ಬಂದವರನ್ನು ದೇವರೇ ಬಂದಂತೆ ಗೌರವಿಸುವ ಆದರ್ಶದಲ್ಲಿಯೂ, ಭಾರತೀಯರಲ್ಲಿ ಭಿಕ್ಷೆಯೆತ್ತುವುದು ಪವಿತ್ರವೆನಿಸಿರುವುದರಲ್ಲಿಯೂ, ಅದರ ಪರಿಣಾಮವಾಗಿ ಭಾರತೀಯ ತಿರುಪಗಾರರು ವಹಿಸುವ ಸ್ವಾತಂತ್ರ್ಯದಲ್ಲಿಯೂ ಇತರ ದೇಶಗಳಲ್ಲಿಲ್ಲದ ವೈಶಿಷ್ಟ್ಯವನ್ನು ಕಾಣಬಹುದು. ಇಂಗ್ಲೆಂಡಿನಲ್ಲಿ ಭಿಕ್ಷೆಬೇಡುವುದು ಅಪರಾಧವೆನಿಸಿತು; ಭಾರತೀಯರಲ್ಲಿ ಪವಿತ್ರವೆನ್ನಿಸಿತು. ತಿರುಪಗಾರರನ್ನು ಹೊಡೆಯುವುದಾಗಲಿ ಬಡಿಯುವುದಾಗಲಿ ಭರತವರ್ಷದಲ್ಲಿ ಅಚಿಂತ್ಯವಾಗಿಯೇ ಪರಿಣಮಿಸಿತು.

**ಪ್ರಾಚೀನ ಪದ್ಧತಿ**

ಭಾರತೀಯ ಜನರಲ್ಲಿ **ಕರ್ತವ್ಯಪ್ರಜ್ಞೆಯು** ರೂಢಮೂಲವಾಗಿ ಪ್ರಬಲವಾಗಿ ಸರ್ವತ್ರ ನೆಲೆಸಿತು. **ಅಧಿಕಾರಪ್ರಜ್ಞೆಯು** ಬಲಗೊಳ್ಳಲೇ ಇಲ್ಲ. ಕರ್ತವ್ಯಪಾಲನೆಯಲ್ಲಿಯೇ ಸೂಚಿತವಾದ ಅಧಿಕಾರವನ್ನು ಯಾರೂ ಅಡ್ಡಿಮಾಡಲಿಲ್ಲ; ಅಡ್ಡಿಪಡಿಸುವ ಯೋಚನೆಯೇ ತೋರಲಿಲ್ಲ. ಜನರ ಅಧಿಕಾರ ಭಾಗವು ತೊಂದರೆಗೇ ಸಿಕ್ಕಲಿಲ್ಲವಾದ

**ಅಧಿಕಾರ ಪತ್ರಗಳ ಅಭಾವ**

ಕಾರಣದಿಂದ ಅಧಿಕಾರ ರಾಶಿಯನ್ನು ಶಾಸ್ತ್ರೀಯವಾಗಿ ವಿವೇಚಿಸುವ ಅವಶ್ಯವೇ ತೋರಲಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಇದಕ್ಕೆ ವ್ಯತಿರಿಕ್ತವಾಗಿಯೇ ನಡೆಯಿತು; ಅಲ್ಲಿಯ ಜನರಾಶಿಗಳು ತಮ್ಮ ಅಧಿಕಾರಗಳನ್ನು ನೆಲೆಗೊಳಿಸಿ ಕೊಳ್ಳಲು ಸರ್ಕಾರಗಳಿಗೆ ವಿರೋಧಿಗಳಾಗಿ ಹೆಣಗಾಡಿ ಅಧಿಕಾರಗಳನ್ನು ಸಾಧಿಸಿಕೊಳ್ಳಬೇಕಾಯಿತು. ಅಡ್ಡಿ ತೋರಿದ ಕಾರಣದಿಂದ ಪುನಃ ಅಡ್ಡಿ ತೋರಿ ಲೋಪವಾಗದಂತೆ ಅವರು ಅಧಿಕಾರ ಭಾಗವನ್ನು ರಕ್ಷಿಸಿಕೊಳ್ಳುವ ವಿಧಾನಗಳನ್ನು ಅವಲಂಬಿಸಬೇಕಾಯಿತು. ತತ್ವಜ್ಞರ ಅಭಿಪ್ರಾಯದಲ್ಲಿ ಅಧಿಕಾರಪ್ರಜ್ಞೆಗಿಂತಲೂ ಕರ್ತವ್ಯಪ್ರಜ್ಞೆಯೇ ಉತ್ತಮವಾದುದೆಂದು ನಿರ್ಣಯವಾಗಿದೆಯಾದರೂ ಭಾರತೀಯರು ಪೂರ್ವಾರ್ಜಿತ ಕರ್ತವ್ಯಪ್ರಜ್ಞೆ ಮಾತ್ರದಿಂದಲೇ ತೃಪ್ತರಾಗಿರಲು ಸಾಧ್ಯವಿಲ್ಲ. ಪ್ರಾತಿನಿಧ್ಯ ತತ್ವವು ಆಚರಣೆಯಲ್ಲಿ ವಿಸ್ತಾರಗೊಳ್ಳುವ ಸ್ಥಿತಿಯಲ್ಲಿ ಪೌರರಾದವರು ತಮ್ಮ ಕರ್ತವ್ಯಗಳ ಮತ್ತು ಅಧಿಕಾರಗಳ ಪರಿಜ್ಞಾನವನ್ನು ಸಂಪೂರ್ಣವಾಗಿ ಪಡೆಯಲೇ ಬೇಕು. ಕೇವಲ ಶಾಂತಿ ಕ್ಷೇಮ ರಕ್ಷಣೆಗಳಿಂದಲೇ ಕೃತಕೃತ್ಯರೆನಿಸದೆ ಸರ್ಕಾರದವರು ಜನಹಿತ ಸರ್ವಸ್ವವನ್ನೂ ತಮ್ಮ ಕರ್ತವ್ಯಕ್ಷೇತ್ರದಲ್ಲಿ ಕಂಡು ಅನೇಕಾನೇಕವಾದ ಕೆಲಸಕಾರ್ಯಗಳನ್ನು ಪ್ರಯತ್ನಿಸುವ ಕಾಲ ಸ್ಥಿತಿಯೇ ಬೇರೆ. ಪೌರನ ಸ್ಥಾನವೇ ಆ ಸ್ಥಿತಿಯಲ್ಲಿ ಬದಲಾಗುವುದು.

**ಪೌರನೇ ರಾಷ್ಟ್ರಕರ್ತ**

ಆಧುನಿಕ ಕಾಲದಲ್ಲಿ ಸರ್ಕಾರವು ರಕ್ಷಣೆಯ ಕರ್ತವ್ಯ ಮಾತ್ರವನ್ನೇ ಪಾಲಿಸುತ್ತ ಇರಲು ಸಾಧ್ಯವಿಲ್ಲ; ಜನಜೀವನ ರಂಗದಲ್ಲೆಲ್ಲಿಯೂ ಪ್ರವೇಶಮಾಡಿ ದೇಶೋದ್ಧಾರಕ್ಕೆ ಸಾಧಕವಾಗಬಹುದಾದುದೆಲ್ಲವನ್ನೂ ಕೈಕೊಳ್ಳುತ್ತದೆ. ಪೌರರು ಅನುಭವಿಸುವ ಉಪಕಾರವಾಗಲಿ ಪ್ರಯೋಜನವಾಗಲಿ ಸೌಕರ್ಯಾನುಕೂಲ್ಯಗಳಾಗಲಿ ಅವು ಸ್ಥಳೀಯ ಅಥವಾ ಪ್ರಾದೇಶಿಕ ಅಥವಾ ಕೇಂದ್ರ ಸರ್ಕಾರಗಳಿಂದಲೋ ಜನಸಂಸ್ಥೆಗಳಿಂದಲೋ ಸಿದ್ಧವಾಗಿರುತ್ತವೆ. ಆಡಳಿತದಲ್ಲಿ ಭಾಗವನ್ನೂ ಪಡೆದವರಾದ ಪೌರರ ಹೊಣೆಗಾರಿಕೆಯು ಹೆಚ್ಚಲೇ ಹೆಚ್ಚುತ್ತದೆ. ಸರ್ಕಾರವನ್ನು ತಲೆಕೆಳಗು ಮಾಡಬಲ್ಲ ಪೌರರಿಗೆ ಸಹಜವಾಗಿ ಹಕ್ಕುಗಳೂ ಉಂಟು, ಬಾಧ್ಯತೆಗಳೂ ಉಂಟು; ಅಥವಾ ಅಧಿಕಾರವೂ ಕರ್ತವ್ಯವೂ ವಿಶೇಷವಾಗಿ ಉಂಟು. ಜನಸ್ವಾಮ್ಯ ತತ್ವವನ್ನು

ಅವಲಂಬಿಸಿದ ರಾಷ್ಟ್ರದ ಪೌರರು ರಾಷ್ಟ್ರದ ಸ್ಥಿತಿಗತಿಗಳಲ್ಲಿ ಆಸಕ್ತಿಯುತರಾಗಿ ತಕ್ಕ ಪರಿಜ್ಞಾನವನ್ನು ಪಡೆದಿರುವುದೇ ಅಲ್ಲದೆ ತಮ್ಮ ಕರ್ತವ್ಯಾಧಿಕಾರಗಳನ್ನು ಯೋಗ್ಯರೀತಿಯಿಂದ ನಿರ್ವಹಿಸುತ್ತಿರಬೇಕು. ಸರ್ಕಾರವೆನ್ನುವುದು ಪೌರರನ್ನು ಅವಲಂಬಿಸಿದಾಗ ಪೌರರು ವಿವೇಚನೆಯುಳ್ಳವರಾದಪಕ್ಷದಲ್ಲಿ ಸಬಲವಾಗಿಯೂ, ಪೌರರು ವಿವೇಕಹೀನರಾದ ಪಕ್ಷದಲ್ಲಿ ದುರ್ಬಲವಾಗಿಯೂ ಇರುತ್ತದೆ. 'ಯಥಾ ರಾಜಾ ತಥಾ ಪ್ರಜಾಃ' ಎಂಬ ವಾಕ್ಯಕ್ಕಿಂತಲೂ 'ಯಥಾ ಪೌರಾಸ್ತಥಾ ರಾಷ್ಟ್ರಂ' ಅಥವಾ 'ಪೌರರಂತೆ ಸರ್ಕಾರ'ವೆಂಬುದು ಈಚಿನ ಕಾಲದ ಸೂತ್ರ.

**ಅನ್ಯೋನ್ಯತೆ**

'ಜನರ ಯೋಗ್ಯತೆಯು ಹೇಗೋ ಹಾಗೆಯೇ ಅವರಿಗೆ ದೊರಕುವ ಸರ್ಕಾರ' ಮತ್ತು 'ಜನರ ಯೋಗ್ಯತೆಗೆ ತಕ್ಕ ವಿಧಿಪ್ರಾಪ್ತಿಯಾಗುತ್ತದೆ' ಎಂಬುದರ ಅರ್ಥ ಇದೇ. ಜನ ಮತ್ತು ಸರ್ಕಾರ ಎಂಬೆರಡು ಪರಸ್ಪರವಾಗಿ ಪ್ರಭಾವವನ್ನು ಬೀರಿ ಒಂದನ್ನೊಂದು ಮಾರ್ಪಡಿಸತಕ್ಕವುಗಳು. ಎರಡೂ ಪರಸ್ಪರಾವಲಂಬಿಗಳಾದ ರಾಷ್ಟ್ರಭಾಗಗಳು. ರಾಷ್ಟ್ರವೆಂಬುದು ರಥದಂತೆ ಆದರೆ ರಥದ ಎರಡು ಚಕ್ರಗಳಂತೆ ಇರತಕ್ಕವು ಜನ ಮತ್ತು ಸರ್ಕಾರ; ಎರಡೂ ಅನ್ಯೋನ್ಯವಾಗಿದ್ದರೆ ಮುಂದಕ್ಕೆ ಗತಿಯುಂಟು, ಅನ್ಯೋನ್ಯತೆಯಿಲ್ಲದಿದ್ದರೆ ಹಳ್ಳವೇ ಗತಿ. ಜನಸ್ವಾಮ್ಯವುಳ್ಳ ರಾಷ್ಟ್ರವಾದರಂತೂ ಅಜ್ಞರಾಗಿಯೋ, ವಿವೇಕ ರಹಿತರಾಗಿಯೋ, ಯಾದವೀಕಲಹ ನಿರತರಾಗಿಯೋ, ಅವ್ಯವಸ್ಥೆಗೊಳಗಾಗಿಯೋ ಜನರಿದ್ದಲ್ಲಿ ಅವರಿಂದ ನಿರ್ಮಿತವಾದ ಸರ್ಕಾರವು ಅವರ ದುರ್ಗುಣಗಳನ್ನೇ ಪ್ರತಿಬಿಂಬಿಸುತ್ತದೆ. ವಿಧಿಯೇ ಸ್ವಾಮಿಯೆನಿಸಿದ ಬಳಿಕ ಆ ವಿಧಿಯನ್ನು ರೂಪಗೊಳಿಸುವವರು ವಿವೇಕಪೂರ್ಣರಾಗಿರತಕ್ಕುದು ಅತ್ಯವಶ್ಯ.

**ನಡತೆ**

ನೀತಿಶಾಸ್ತ್ರದಲ್ಲಿ ಪರಿಶ್ರಮವಿಲ್ಲದಿದ್ದರೂ ಸಾಧಾರಣವಾದ ವಿಚಾರದಿಂದಲೇ ಇದಕ್ಕೆ ನಿದರ್ಶನಗಳನ್ನು ಕಾಣಬಹುದು. ಪೌರನ ಕರ್ತವ್ಯಾಧಿಕಾರಗಳನ್ನು ಸುಲಭವಾಗಿ ಅವುಗಳಲ್ಲಿ ತಿಳಿಯಬಹುದು. ದತ್ತಾಪಹಾರ ಮಾಡಿದರೆ ಅಥವಾ ಧರ್ಮಕಾರ್ಯಗಳನ್ನು ಕೆಡಿಸಿದರೆ ಹಿಂದಿನ ಕಾಲದಿಂದ

ಪಂಚಮಹಾಪಾತಕಿಯೆನಿಸುವುದರಲ್ಲಿ ಅಡಗಿದ ತತ್ವವೇ ಬೇರೆ ರೂಪದಲ್ಲಿ ಕಾಣುವುದು. ಪೌರನಿಗೆ ನಗರದ ಯಾವ ಬೀದಿಯಲ್ಲಾದರೂ ಸಂಚಾರ ಮಾಡುವ ಅಧಿಕಾರವುಂಟು; ಆದರೆ ಬೀದಿಯ ಪಕ್ಕದಲ್ಲಿರುವ ತೋಟದಲ್ಲಿಯೋ ಉದ್ಯಾನದಲ್ಲಿಯೋ ಓಡಾಡುವ ಅಧಿಕಾರವಿಲ್ಲ. ಬೀದಿಯಲ್ಲಿಯೇ ಪೌರನು ಹೊರಡಬೇಕು; ಆ ಬೀದಿಯಲ್ಲಿ ಪಾದಚಾರಿಗಳಿಗೆ ಉದ್ದಿಷ್ಟವಾದ ಭಾಗ ವೇರ್ಪಟ್ಟಿದ್ದರೆ ಪಾದಚಾರಿಯಾದಾತನು ಆ ಭಾಗವನ್ನೇ ಉಪಯೋಗಿಸ ಬೇಕು. ಬೀದಿಯೆಂಬುದು ಎಲ್ಲರಿಗೂ ಸೇರಿದ ಸ್ವತ್ತು; ಆದ್ದರಿಂದ ತಾನೊಬ್ಬನು ಚೌಕದಲ್ಲಿ ಸ್ನೇಹಿತರನ್ನು ಸಂಧಿಸಿ ಅಲ್ಲಿಯೇ ಸ್ಥಲವನ್ನು ಆಕ್ರಮಿಸಿ ಕುಶಲಪ್ರಶ್ನೆಗಳನ್ನು ಮಾಡುತ್ತ ಒಂದು ಸಣ್ಣ ಸಭೆಯನ್ನು ನಡೆಸಲಾರನು. ಬೀದಿಯಲ್ಲಿ ಹೋಗುತ್ತಲಿರುವಾಗ ಮುಳ್ಳುಗಳೋ ಗಾಜಿನ ಚೂರುಗಳೋ ಮಾರ್ಗದಲ್ಲಿ ಬಿದ್ದಿದ್ದ ಪಕ್ಷದಲ್ಲಿ ಯೋಗ್ಯನಾದಾತನು ಅವು ಗಳನ್ನು ತಾನೇ ಎತ್ತಿ ಎಸೆಯುತ್ತಾನೆ ಅಥವಾ ಬೇರೆಯವರಿಂದ ಹಾಗೆ ನೆರವೇರಿಸುತ್ತಾನೆ. ಬೀದಿಯಲ್ಲಿ ಉಗುಳುವುದಾಗಲಿ ಕಸ ಹಾಕುವುದಾಗಲಿ ಯೋಗ್ಯನಲ್ಲಿ ಕಾಣತಕ್ಕ ಲಕ್ಷಣಗಳೇ ಅಲ್ಲ. ಇದೇ ರೀತಿಯಲ್ಲಿ ಸರ್ವಜನ ಸ್ವತ್ತುಗಳಾದ ಉಪವನಗಳಾಗಲಿ, ನೀರಿನ ನಲ್ಲಿಯಾಗಲಿ, ಕಡೆಗೆ ರೈಲು ಬಂಡಿಯಾಗಲಿ ಅನುಭವಿಸುವ ಅಧಿಕಾರವುಳ್ಳ ಪೌರನು ಮಾಡಬಾರದ ಕೆಲಸಗಳನ್ನು ಸುಲಭವಾಗಿ ಎಣಿಸಬಹುದು. ವಿವೇಚನೆಯಿಲ್ಲದ ಪೌರರೇ ಇದ್ದ ಪಕ್ಷದಲ್ಲಿ ಪರಿಣಾಮವೇನು? ಉಪವನವಿದ್ದರೂ ಅದರಲ್ಲಿ ಹೂವಾಗಲಿ ಹಣ್ಣಾಗಲಿ ಇರುವುದಿಲ್ಲ, ಬೀದಿಗಳಲ್ಲಿ ಸದಾ ಗಲೀಜು, ರೈಲುಬಂಡಿಗಳಲ್ಲಿ ಯಾವಾಗಲೂ ಹೊಲಸು.

**ಪೌರಶಬ್ದ**

ಪೌರ ಎಂಬ ಶಬ್ದವೇ ವಿಶಿಷ್ಟವಾದುದು. ಸರ್ಕಾರಕ್ಕೊಳಗಾದ ಮಾತ್ರದಿಂದ ಪೌರ ಎನ್ನಿಸುವುದಿಲ್ಲ. ಪ್ರಜಾ ಶಬ್ದಕ್ಕೂ ಪೌರ ಶಬ್ದಕ್ಕೂ ವಿಶೇಷವಾದ ಭೇದ ವುಂಟು. ಆಳ್ವಿಕೆಗೊಳಗಾದವರು ಪ್ರಜಾ ಎನಿಸು ವವರು. ಪೌರರು ಆಳ್ವಿಕೆಗೊಳಗಾಗಿದ್ದರೂ ಆಳ್ವಿಕೆಯ ಅಧಿಕಾರದಲ್ಲಿ ಭಾಗಿಗಳಾದವರು. ಪೌರ ಎಂಬ ಶಬ್ದವಾಗಲಿ ಸಿಟಿಸನ್ ಎಂಬ ಇಂಗ್ಲಿಷ್ ಶಬ್ದವಾಗಲಿ ಪಟ್ಟಣವೆಂಬ ಅರ್ಥವನ್ನು ಕೊಡುವ ಶಬ್ದದಿಂದ ಹುಟ್ಟಿದ್ದು.

ಪೋಲಿಸ್ ಎಂಬುದು (Polis) ಗ್ರೀಕ್ ಭಾಷೆಯಲ್ಲಿಯೂ, ಸಿವಿಟಾಸ್ (Civitas) ಎಂಬುದು ಲ್ಯಾಟಿನ್ ಭಾಷೆಯಲ್ಲಿಯೂ ನಗರ ಎಂಬ ಅರ್ಥವುಳ್ಳವು. ಆ ಎರಡು ಶಬ್ದಗಳಿಂದಲೇ ಪಾಲಿಟಿಕ್ಸ್ (Politics) ಮತ್ತು ಸಿವಿಕ್ಸ್ (Civics) ಅಥವಾ ರಾಷ್ಟ್ರನೀತಿ ಮತ್ತು ಪೌರನೀತಿಗಳೆಂಬ ಮಾತುಗಳು ಹುಟ್ಟಿದವು. ಪಾಶ್ಚಾತ್ಯರಲ್ಲಿ ನೀತಿಶಾಸ್ತ್ರವು ರೂಪವೆತ್ತಿದುದು ನಗರಗಳಲ್ಲಿಯೇ; ನಗರಗಳಲ್ಲಿಯೇ ಅವರ ಸಭ್ಯತೆಯೂ ಮೊದಲಾದುದು. ಆದುದರಿಂದ ಅವರಲ್ಲಿ ಸಭ್ಯತೆಯೆಂಬುದಕ್ಕೆ ನಾಗರಿಕತೆಯೆಂದೇ (Civilisation) ರೂಢಿಯಾಯಿತು. ಪೌರ ಎಂದರೆ ಪುರನಿವಾಸಿ ಮಾತ್ರವಲ್ಲ; ಸಭ್ಯತೆಯ ಲಕ್ಷಣಗಳನ್ನು ಪಡೆದವನು. ಸಭ್ಯತೆಯೆಂದರೆ ವಿಸ್ತಾರವಾದ ಅರ್ಥವೇ ಉಂಟು. ಸಭಾಯೋಗ್ಯನಾಗಿರುವುದು ಸಭ್ಯತೆ; 'ಸಭಾ' ಎಂದರೆ ಒಟ್ಟಿಗೆ ಪ್ರಕಾಶಿಸುವುದು; ಅಂದರೆ ನೆರೆಹೊರೆಯವರಲ್ಲಿ ಅಥವಾ ಇತರ ಪೌರರಲ್ಲಿ ಯೋಗ್ಯತೆಯಿಂದ ಹೊಂದಿಕೊಂಡು ಸಾಮಾನ್ಯವಾದ ಧರ್ಮವನ್ನು ಆಚರಿಸತಕ್ಕವನು ಪೌರನು. ಸಮುದಾಯದಲ್ಲಿ ಒಬ್ಬನಾಗಿ, ಇತರರ ಸುಖದುಃಖಗಳಲ್ಲಿ ಭಾಗಿಯಾಗಿ, ಸಮುದಾಯದ ಸೌಭಾಗ್ಯ ಸಾಧನೆಯಲ್ಲಿ ಪ್ರಯತ್ನಶೀಲನಾದವನು ಪೌರನು.

**ಪೌರಲಕ್ಷಣ**

ಇತರರ ಸಂಪರ್ಕವಿಲ್ಲದೆಯೇ ಇರಲು ಬಯಸುವವನು ಪೌರನೆಂದೆನಿಸಲಾರನು. ಯೋಗಿಗಳೂ ತಪಸ್ವಿಗಳೂ ಅರಣ್ಯಗಳಲ್ಲಿದ್ದುಕೊಂಡು ಇತರರ ಸಂಬಂಧವೇ ಇಲ್ಲದೆ ಇರತಕ್ಕವರಾದರೆ ಅವರು ಪೌರರೆನಿಸಲಾರರು. ರಾಬಿನ್‌ಸನ್ ಕ್ರುಸೋ ಅಂತಹವರು ಪೌರರೇ ಅಲ್ಲ. ಸಮಾಜದ ಅಂಗವಾಗಿ ಸಮಾಜದ ಕಷ್ಟಸುಖಗಳಲ್ಲಿ ಭಾಗಿಯಾಗತಕ್ಕವನೇ ಪೌರ ಶಬ್ದಕ್ಕೆ ಅರ್ಹನು. ದೇಶದ ನಿವಾಸಿಯಾಗದಿದ್ದಲ್ಲಿ ಪೌರನೆನಿಸುವುದಕ್ಕೂ ಆಗುವುದಿಲ್ಲ. ಮನೆಮಾರು ಮಾಡಿಕೊಂಡು ಸ್ಥಿರವಾಗಿ ದೇಶದಲ್ಲಿ ನೆಲೆಸದಿರುವಾತನು ದೇಶದ ಸುಖದುಃಖಗಳನ್ನು ತನ್ನದೆಂದು ಹೇಗೆ ಕಟ್ಟಿಕೊಂಡಾನು? ಸಮಾಜದ ಅಥವಾ ರಾಷ್ಟ್ರದ ಭಾಗಿಯಾದಾತನು ರಾಷ್ಟ್ರನಿವಾಸಿಯಾಗಿರಲೇಬೇಕು. ಆದ್ದರಿಂದ ದೇಶೀಯರಾದವರೇ ಒಂದು ದೇಶದ ಪೌರರೆನಿಸತಕ್ಕವರು. ಹೊಸದಾಗಿ ಬಂದು ನೆಲೆಸುವವರಾದರೆ ಒಂದು

ಕಾಲಾವಧಿಯು ನಿರ್ಣೀತವಾಗಿದ್ದು ಆ ಅವಧಿಯು ಕಳೆದ ಕೂಡಲೆ ದೇಶೀಯರಲ್ಲಿ ಸ್ವೀಕೃತ(Domiciled)ರಾಗಿ ಪೌರರೆಂದು ಗಣ್ಯರಾಗಬೇಕು. ರಾಷ್ಟ್ರದ ಉನ್ನತಿ ಅವನತಿಗಳಲ್ಲಿ ಆಸಕ್ತಿಯನ್ನು ವಹಿಸಲು ದೇಶೀಯನಾಗದಿದ್ದರೆ ಸಾಧ್ಯವಿಲ್ಲ. ವ್ಯಾಪಾರಕ್ಕೋ ಸಂಚಾರಕ್ಕೋ ದೇಶದಲ್ಲಿ ಪ್ರಯಾಣಮಾಡುವವರೂ ಸ್ವಲ್ಪ ಕಾಲ ದೇಶದಲ್ಲಿ ವಾಸಮಾಡುವವರೂ ಪೌರರಾಗಲಾರರು. ಅಂತಹವರು ದೇಶದ ಸ್ವಾಮ್ಯವನ್ನು ವಹಿಸಲಾಗುವುದಿಲ್ಲ; ಅವರಿಗೆ ಸ್ವದೇಶದಲ್ಲಿರಬಹುದಾದಷ್ಟು ಭಕ್ತಿ ವಿಶ್ವಾಸಗಳು ಅನ್ಯದೇಶದಲ್ಲಿರುವುದಿಲ್ಲ. ಪೌರಶಬ್ದಕ್ಕೆ ಇನ್ನೂ ಒಂದು ಅರ್ಥವುಂಟು; ಅದೇ ಮುಖ್ಯವಾದುದು. ಪೌರನೆಂಬಾತನು ಸ್ವತಂತ್ರನಾದವನು; ಮತ್ತು ತನ್ನ ದೇಶದ ಸ್ವಾಮ್ಯದಲ್ಲಿ ಭಾಗಿಯಾಗಿ ದೇಶದ ಆಡಳಿತದಲ್ಲಿ ಪಾಲುದಾರನಾದವನು. ಕೊಂಡು ಮಾರುವ ಗುಲಾಮರು ಪೌರರೆನಿಸುವುದಿಲ್ಲ. ಅದೇ ರೀತಿಯಲ್ಲಿಯೇ ನಿರಂಕುಶ ಪ್ರಭುತ್ವಕ್ಕೊಳಗಾದ ಪ್ರಜೆಗಳು ಪೌರರೆನಿಸುವುದಿಲ್ಲ. ಆಡಳಿತದಲ್ಲಿ ಭಾಗವಿಲ್ಲದವರು ಪೌರಶಬ್ದಕ್ಕೆ ಅರ್ಹರೇ ಅಲ್ಲ. ಈ ರೀತಿಯಲ್ಲಿ ಪೌರರೆನಿಸಿಕೊಳ್ಳಲು ಪೂರ್ಣವಾದ ಅರ್ಹತೆಯನ್ನು ಪಡೆದವರು ಅಮೆರಿಕದ ಅಥವಾ ಫ್ರಾನ್ಸಿನ ನಿವಾಸಿಗಳಂತಹವರು. ಯಾವ ದೇಶದಲ್ಲಿ ಸರ್ಕಾರವು ಜನಸ್ವಾಮ್ಯತತ್ವದ ಆಧಾರವನ್ನು ಹೊಂದಿರುವುದಿಲ್ಲವೋ ಆ ದೇಶದ ಜನರನ್ನು ಪೌರರೆಂದು ಶಾಸ್ತ್ರೀಯವಾಗಿ ಕರೆಯಲಾಗುವುದಿಲ್ಲ.

ಸ್ವತ್ತಲ್ಲ

ದೇಶದ ನಿವಾಸಿಗಳೆಲ್ಲರೂ ಪೌರರೆನಿಸತಕ್ಕದ್ದು. ಕೆಲವರು ಮಾತ್ರ ಪೌರರಾಗಿಯೂ ಇತರರು ಆ ಪದವಿಯಿಲ್ಲದೆಯೂ ಇರಲಾಗುವುದಿಲ್ಲ. ಪೌರ ಶಬ್ದವು ಪುರಕ್ಕೆ ಸಂಬಂಧಪಟ್ಟುದಾದರೂ ದೇಶದ ಸಮುಸ್ತ ನಿವಾಸಿಗಳಿಗೂ ಅನ್ವಯವಾಗತಕ್ಕುದು. ಗ್ರಾಮಸ್ಥರಾಗಲಿ ಪಟ್ಟಣಿಗರಾಗಲಿ, ಸ್ತ್ರೀಯರಾಗಲಿ ಪುರುಷರಾಗಲಿ ಪೌರತ್ವದ ಅನುಭೋಗದಲ್ಲಿ ದೇಶೀಯರೆಲ್ಲರೂ ಸಮಾನರೇ. ಎಲ್ಲರಿಗೂ ಸಹಜವಾಗಿರಬೇಕಾದುದು ಪೌರಪದವಿ. ಆ ಪದವಿಯನ್ನು ಮಾರುವುದಕ್ಕಾಗಲಿ ಕೊಳ್ಳುವುದಕ್ಕಾಗಲಿ ಆಗುವುದಿಲ್ಲ. ಇತರ ಸ್ವತ್ತುಗಳಂತೆ ಪೌರಪದವಿಯು ಇರತಕ್ಕುದಲ್ಲ. ಪೌರತನದ

ಸ್ವತ್ತನ್ನು ಸಂಪಾದಿಸಲು ಪ್ರತ್ಯೇಕವಾದ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಪದವೀಧರನಾಗಬೇಕಾದುದೂ ಇಲ್ಲ. ದೇಶೀಯರೆಲ್ಲರಿಗೂ ಸಹಜವಾಗಿ ಲಭಿಸತಕ್ಕುದು ಆ ಪದವಿ. ಆದುದರಿಂದ ದೇಶೀಯನಾದವನೇಲೆ ಇಷ್ಟ ವಿರಲಿ, ಇಲ್ಲದಿರಲಿ ಪೌರನಾಗಿಯೇ ಇರಬೇಕು. ಪೌರಕರ್ತವ್ಯಾಧಿಕಾರಗಳ ಬಂಧನದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಒಂದು ಮನೆಯಲ್ಲಿ ಹುಟ್ಟಿ ದವರು ತಮ್ಮ ತಾಯಿತಂದೆಗಳನ್ನು ಹೇಗೆ ಒಪ್ಪಿಕೊಳ್ಳದೆ ಇರಲಾರರೋ ಅದೇ ರೀತಿಯಲ್ಲಿ ಒಂದು ರಾಷ್ಟ್ರದಲ್ಲಿ ಹುಟ್ಟಿದ ಪೌರರು ಆ ರಾಷ್ಟ್ರ ಸಂಬಂಧವನ್ನು ಬಿಟ್ಟಿರಲಾರರು.

ಪೌರತನವು ಅಮೂಲ್ಯವಾದ ಸ್ವತ್ತಾದರೂ ಕೊಂಡು ಮಾರುವ ಸ್ವತ್ತಲ್ಲವೆಂದರೆ ಹೇಗೆ? ಪೌರನಾದವನಿಗೆ ಅಧಿಕಾರವುಂಟು, ಕರ್ತವ್ಯ ವುಂಟು. ಆ ಕರ್ತವ್ಯಾಧಿಕಾರಗಳ ನಿರ್ವಾಹವೇ ಪೌರಧರ್ಮವೆಂಬುದು. ಸ್ವತ್ತಲ್ಲವೆಂದರೆ ಅರ್ಥವೇನು? ಕೊಂಡು ಮಾರುವುದಕ್ಕಿಲ್ಲದ ಸ್ವತ್ತು ಎಂತಹ ಸ್ವತ್ತು? ರಾಷ್ಟ್ರ ಸೌಭಾಗ್ಯವೆಂಬುದೇ ಆ ಸ್ವತ್ತು. ಆ ಸ್ವತ್ತನ್ನು ಅನುಭವಿಸುವ ಅಧಿಕಾರವು ಪೌರರಿಗುಂಟು. ಆ ಸ್ವತ್ತನ್ನು ಕೆಡಿಸುವ ಅಧಿಕಾರವಿಲ್ಲ. ಪೌರನಾದವನು ಯಾವ ಕೆಲಸವನ್ನು ಕೈಕೊಂಡಾಗ್ಯೂ ಸಕಲ ರಾಷ್ಟ್ರದ ಹಿತಚಿಂತನೆಯನ್ನು ಮಾಡಿಯೇ ಕೆಲಸಕ್ಕೆ ತೊಡಗಬೇಕು. ಸಕಲ ರಾಷ್ಟ್ರದ ಮೇಲ್ಮೆಯಲ್ಲಿ ನಟ್ಟ ದೃಷ್ಟಿಯುಳ್ಳವನಾಗಿರಬೇಕು. ತನ್ನ ಸ್ವಂತ ಲಾಭದ ದೃಷ್ಟಿಯಿಂದ ರಾಷ್ಟ್ರವೆಂಬ ಸಮಾಜದಲ್ಲಿ ಇತರರಿಗೆ ನಷ್ಟ ಪಡಿಸಿದರೆ ಆಗ ಪೌರನು ಚೋರನೆನಿಸುವನು. ಆದುದರಿಂದ ಪೌರತನದ ಸ್ವತ್ತು ವೈಯಕ್ತಿಕವಾದ ಸ್ವತ್ತಲ್ಲ. ಪೌರತನದ ಸ್ವತ್ತು ರಾಷ್ಟ್ರ ಸೌಭಾಗ್ಯದಲ್ಲಿ ಭಾಗವಾದುದರಿಂದ ಅದೇ ಒಂದು ಭಾಗ್ಯ; ಇತರ ಸುಖ ಸಂಪತ್ತುಗಳನ್ನು ಸಂಪಾದಿಸಿಕೊಳ್ಳುವ ಸಾಧಕ ಮಾತ್ರವಲ್ಲ. ಪೌರರು ತಮ್ಮ ಪೌರಪದವಿಯ ಭಾಗ್ಯವನ್ನು ತಾವು ಅನುಭವಿಸಿ ಸ್ಥಿತಿಲೋಪವಿಲ್ಲದೆ ಮುಂದಿನವರಿಗೆ ಸಲ್ಲಿಸತಕ್ಕುದು. ಅವಿಭಕ್ತಕುಟುಂಬದಲ್ಲಿ ಆಸ್ತಿಪಾಸ್ತಿ ಗಳು ಮನೆಯವು, ಯಾವ ಒಬ್ಬನಿಗೂ ಸೇರಿದುದಲ್ಲ; ಅದರಂತೆಯೇ ಪೌರ ತನದ ಆಸ್ತಿಯೆಂಬುದು. ಪೌರಪದವಿಯುಳ್ಳಾತನು ಆ ಭಾಗ್ಯವನ್ನು ತನ್ನ ಆಶ್ರಯದಲ್ಲಿ ಕೆಲಕಾಲವಿರುವ ಸ್ವತ್ತೆಂದು ಭಾವಿಸಬೇಕು.

**ಮೂಲ ತತ್ವಗಳು**

ಪೌರಪದವಿಯಲ್ಲಿ ಬೇರೂರಿರುವ ಮೂರು ತತ್ವಗಳುಂಟು. ಆ ತತ್ವಗಳು ಫ್ರಾನ್ಸಿನ ಮಹಾಕ್ರಾಂತಿಯ ಕಾಲದಿಂದ ಅತಿ ಪ್ರಸಿದ್ಧವಾಗಿವೆ. ಪೌರಪದವಿಯೂ **ಸ್ವಾತಂತ್ರ್ಯವೂ** ಎಡೆಬಿಡದೆ ಇರತಕ್ಕದ್ದು. ಸ್ವಾತಂತ್ರ್ಯವೆಂಬುದು ಮಾನವ ಜಾತಿಗೇ ಅಲ್ಲದೆ ಪಶುಪಕ್ಷಿ ಜಾತಿಗಳಿಗೂ ಸಹಜವಾದುದು, ಪ್ರಿಯವಾದುದು. ಆದರೆ ಸಮಾಜಜೀವಿಯಾದವನಿಗೆ ಸ್ವಾತಂತ್ರ್ಯವೆಂದರೆ ಸತ್ಪರಿಣಾಮಕ್ಕೆ ಮಾತ್ರವೇ ಸ್ವಾತಂತ್ರ್ಯ; ದುಷ್ಪರಿಣಾಮಕ್ಕಲ್ಲ. ಸ್ವತಂತ್ರನಾಗಿದ್ದೇನೆಂದು ಪೌರನಾದವನು ತಲೆಕೆಳಗಾಗಿ ಬೀದಿಯಲ್ಲಿ ನಡೆಯುವೆನೆಂದು ಹೊರಟರೆ ಆಗ ಅದು ಸ್ವಾತಂತ್ರ್ಯವೆನಿಸುವುದಿಲ್ಲ, ಉನ್ಮಾದವೆನಿಸುವುದು. ಪೌರರ ಸ್ವಾತಂತ್ರ್ಯವು ಅತಿ ಸಹಜ; ಆದರೆ ರಾಷ್ಟ್ರೋನ್ನತಿಕಾರಕವಾಗಿರತಕ್ಕುದು ಸ್ವತಂತ್ರ ವರ್ತನೆಗೆ ಪರಮ ಲಕ್ಷ್ಯವಾಗಿದ್ದೇ ಇರಬೇಕು. ಎರಡನೆಯ ತತ್ವ **ಸರ್ವಸಮತ್ವ**ವೆಂಬುದು. ಒಂದು ರಾಷ್ಟ್ರದಲ್ಲಿರುವ ಪೌರರೆಲ್ಲರೂ ಪರಸ್ಪರವಾಗಿ ಸಮಾನರಾದವರು. ಯಾರೂ ಹೆಚ್ಚಲ್ಲ, ಯಾರೂ ಕಡಿಮೆಯಲ್ಲ. ಪ್ರತಿ ಪೌರನೂ ತನ್ನಂತೆಯೇ ಇತರರೂ ಪೌರರು ಎಂಬುದನ್ನು ಸದಾ ನೆನಪಿನಲ್ಲಿಟ್ಟಿರಬೇಕು. ಎಂತಹ ಪೌರನಾದರೂ ಪೌರನೇ. ತಾನೆಷ್ಟು ಅಧಿಕಾರಿಯೋ ಇತರರೂ ಅಷ್ಟೇ ಅಧಿಕಾರಿಗಳು ಎಂಬುದನ್ನು ಯಾವ ಪೌರನೂ ಮರೆಯತಕ್ಕುದಲ್ಲ. ಈ ಸಮತ್ವದ ಆಚರಣೆಗೆ ಆಧಾರವಾದುದು ನ್ಯಾಯ. ನ್ಯಾಯವೆಂದರೆ ಹೆಚ್ಚು ಕಡಿಮೆಯಿಲ್ಲದ ಸಮಾನತ್ವವೆಂದೇ ಅರ್ಥವಾಗುವುದು. ಆದ್ದರಿಂದ ಪೌರನೀತಿಯಲ್ಲಿ ಸ್ವಾತಂತ್ರ್ಯ ತತ್ವಕ್ಕೆಷ್ಟು ಬಲವುಂಟೋ ಸಮಾನತ್ವವೆಂಬ ತತ್ವಕ್ಕೂ ಅಷ್ಟೇ ಬಲವುಂಟು. **ಭ್ರಾತೃಭಾವ**ವೆಂಬುದು ಮೂರನೆಯದು. ಪೌರರೆಲ್ಲರೂ ಸೋದರರು; ಅನ್ಯೋನ್ಯವಾಗಿ ಸಮಾನ ಸುಖದುಃಖಿಗಳಾಗಿ, ಸಮಾನ ಪ್ರಯತ್ನವುಳ್ಳವರಾಗಿ ಇರತಕ್ಕದ್ದು ಅದರ ತಿರುಳು. ನ್ಯಾಯತತ್ವದಿಂದ ಸಮತ್ವ ತತ್ವವು ಹುಟ್ಟಿಕೊಂಡಿತು. ರಾಷ್ಟ್ರತತ್ವದಿಂದ ಸೋದರಭಾವವೆಂಬ ತತ್ವವು ತೋರಿಕೊಂಡಿತು.

ಇಂತಹ ಪೌರತನದ ನಿರ್ವಾಹದಲ್ಲಿ ಯೋಗ್ಯನಾದ ಪೌರನಿಗಿರತಕ್ಕ ಗುಣಗಳು ಯಾವುವು? ಅಥವಾ ಪೌರನಿರ್ವಾಹದಲ್ಲಿ ಅತ್ಯವಶ್ಯವಾದ

ಗುಣಗಳು ಯಾವುವು? ದೇಶೀಯರಲ್ಲದವರು ಪೌರರಾಗಲಾರರೆಂದು ನಿರ್ಣಯ ಮಾಡಿದಾಗಲೇ ಮೊದಲಿನ ಗುಣವು **ಸೂಚಿತ** ವಾಯಿತು. ಪೌರನಿಗೆ ಮೊದಲು ಇರತಕ್ಕ ಗುಣ **ದೇಶಭಕ್ತಿ** ಅಥವಾ **ರಾಷ್ಟ್ರಭಕ್ತಿ**. ರಾಷ್ಟ್ರ ಭಕ್ತಿಯಿಲ್ಲದಿದ್ದರೆ ರಾಷ್ಟ್ರ ಹಿತಚಿಂತನೆಯಾದೀತೇ? ಆದ್ದರಿಂದ ದೇಶ ಭಕ್ತಿಯು ಅತ್ಯವಶ್ಯ. ಆದರೆ ಕೇವಲ ದೇಶಭಕ್ತಿ ಮಾತ್ರ ಇದ್ದರೆ ಸಾಲದು. ವಿಚಾರ ರಹಿತವಾದ ಭಕ್ತಿಯಿಂದ ಅನರ್ಥವೇ ಸಂಭವಿಸಬಹುದು. ಆದ್ದರಿಂದ ದೇಶಭಕ್ತಿಯೊಂದಿಗೆ ಯುಕ್ತಾಯುಕ್ತ ಪರಿಶೀಲನೆಯಿರಬೇಕು. ಆ ಪರಿ ಶೀಲನೆಗೆ ದೇಶದ ಸ್ಥಿತಿಗಳ ಪರಿಜ್ಞಾನವಿಲ್ಲದಿದ್ದರೆ ಆಗುವುದಿಲ್ಲ. ಆದ್ದರಿಂದ ದೇಶಭಕ್ತಿ, **ಸ್ಥಿತಿಗತಿಗಳ ಪರಿಜ್ಞಾನ** ಮತ್ತು **ವಿವೇಚನಾ ಶಕ್ತಿ**ಗಳು ಪೌರರಲ್ಲಿ ಸಹಜ ಗುಣಗಳಾಗಿರಬೇಕು. ಸ್ಥಿತಿಗತಿಗಳ ಪ್ರಜ್ಞೆಯೂ ವಿವೇಕವೂ ಇಲ್ಲದಿದ್ದರೆ ರಾಷ್ಟ್ರ ಭಕ್ತಿಯು ಮೌಢ್ಯಕ್ಕೆ ಕಾರಣವಾಗ ಬಹುದು. ಅಂಧ ಭಕ್ತಿಯು ಸತ್ಪರಿಣಾಮಕಾರಕವಾದುದಲ್ಲ.

**ಪೌರಗುಣ, ದೇಶಭಕ್ತಿ**

ಧರ್ಮಾರ್ಥಕಾಮಮೋಕ್ಷಗಳೆಂಬುದಾಗಿ ಪುರುಷಾರ್ಥಗಳನ್ನು ನಾಲ್ಕು ಬಗೆಗಳಾಗಿ ವಿಂಗಡಿಸಿದ ಆರ್ಯರು ಪ್ರತಿಯೊಬ್ಬನಿಗೂ ಬ್ರಹ್ಮ, ದೈವ, ಪಿತೃ, ಮನುಷ್ಯ, ಭೂತಗಳೆಂಬ **ಪಂಚ ಯಜ್ಞ**ಗಳನ್ನೂ ಋಷಿಗಳಿಗೆ, ಪಿತೃಗಳಿಗೆ, ದೇವತೆಗಳಿಗೆ ಮೂರು **ಋಣ**ಗಳನ್ನೂ ವಿಧಿಸಿದರು. ಪಂಚ ಯಜ್ಞಗಳೆಂಬವು ಪಂಚ ಕ್ಷೇತ್ರಗಳು. ಮಾನವನು ಐದು ಕ್ಷೇತ್ರಗಳಲ್ಲಿ ಅಥವಾ ರಂಗಗಳಲ್ಲಿ ಕರ್ತವ್ಯಪಾಲನೆಮಾಡಬೇಕು. ಈ ಐದು ರಂಗ ಗಳನ್ನು ಕ್ರಮವಾಗಿ ಆತ್ಮ, ಕುಟುಂಬ, ನೆರೆ, ರಾಷ್ಟ್ರ, ಮಾನವರಾಶಿ ಗಳೆಂಬುದಾಗಿ ಭಾವಿಸಬೇಕೆಂದು ಮಹಾತ್ಮಾ ಗಾಂಧೀಜಿಯವರ ಅಭಿಪ್ರಾಯ. ಮೊದಲು ದೇಹ, ಮನಸ್ಸು, ಮುಂತಾದ ಸ್ವಂತ ಕ್ಷೇತ್ರದಲ್ಲಿ ಪೂರ್ಣ ವಿಕಾಸವನ್ನು ಪಡೆಯತಕ್ಕದ್ದು; ತರುವಾಯ ಕುಟುಂಬ ರಕ್ಷಣೆ ಅಥವಾ ಗೃಹಧರ್ಮಪಾಲನೆಯು ಕರ್ತವ್ಯರಂಗವೆನಿಸು ವುದು. ಆ ತರುವಾಯ ನೆರೆಹೊರೆಯವರ ಕ್ಷೇತ್ರ ಅಥವಾ ಕುಲ ಅಥವಾ ಗ್ರಾಮವೆಂಬ ವಿಭಾಗದಲ್ಲಿ ಕರ್ತವ್ಯಪಾಲನೆಯನ್ನು ನೆರವೇರಿಸತಕ್ಕುದು. ಸಮಾಜ, ರಾಷ್ಟ್ರ ಅಥವಾ ದೇಶವೆಂಬುದು ಮೂರನೆಯ ಕ್ಷೇತ್ರಕ್ಕಿಂತಲೂ

ವಿಸ್ತಾರವಾದುದು; ಅದಕ್ಕಿಂತಲೂ ವಿಸ್ತಾರವಾದುದು ಕಡೆಯದಾದ ಮಾನವರಾಶಿ ಅಥವಾ ಲೋಕ. ಎಣಿಕೆಮಾಡುವುದರಲ್ಲಿ ಕಿರಿದಾದುದರಿಂದ ಮೊದಲು ಮಾಡಬಹುದಾದರೂ ಧರ್ಮವಿಚಾರದಲ್ಲಿ ಪ್ರಾಧಾನ್ಯವು ಹಿರಿದಾದುದಕ್ಕೇ ಸಲ್ಲುವುದು. ಧರ್ಮಿಷ್ಠನಾದವನು ಕ್ರಮವಾಗಿ ಲೋಕ, ದೇಶ, ಗ್ರಾಮ, ಗೃಹ, ಆತ್ಮಗಳನ್ನು ಚಿಂತಿಸಿ ಅವುಗಳಲ್ಲಿ ಸಂದೇಹ ತೋರಿದಾಗ ಚಿಕ್ಕದನ್ನು ದೊಡ್ಡದಕ್ಕೆ ಬಿಟ್ಟುಬಿಡಬೇಕು. ಉಭಯ ಸಂಕಟ ಅಥವಾ ಧರ್ಮಸಂಕಟಗಳು ತೋರಿಕೊಂಡಾಗ ಹಿರಿದಾದ ಭಾಗವನ್ನೇ ಆರಿಸಬೇಕು. ಈ ಅರ್ಥವನ್ನು ಕೊಡುವ ಶ್ಲೋಕವೊಂದು ನಾಣ್ಣುಡಿಯಂತೆಯೇ ಎಲ್ಲರಿಗೂ ತಿಳಿದಿದೆ:—

> ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
> ಗ್ರಾಮಂ ಜನಪದಸ್ಯಾರ್ಥೇ ಸ್ವಾತ್ಮಾರ್ಥೇ ಪೃಥಿವೀಂ ತ್ಯಜೇತ್ ॥

ಇದನ್ನು ಅನುಸರಿಸಿ ಕರ್ತವ್ಯಕ್ಷೇತ್ರಗಳಲ್ಲಿ ಮುಖ್ಯತೆಯನ್ನು ನಿರ್ಣಯಿಸುವುದರಲ್ಲಿ ಕುಲಭಕ್ತಿಗಿಂತಲೂ ಗ್ರಾಮಭಕ್ತಿಯು ದೊಡ್ಡದು, ಗ್ರಾಮಭಕ್ತಿಗಿಂತಲೂ ಜನಪದಭಕ್ತಿಯು ದೊಡ್ಡದು ಎಂದು ನಿಶ್ಚಯವಾಗುತ್ತದೆ. ತನ್ನ ಸ್ವಂತ ಪ್ರಯೋಜನಕ್ಕಿಂತಲೂ ದೇಶದ ಪ್ರಯೋಜನವು ದೊಡ್ಡದು ಎಂಬ ಪರಿಜ್ಞಾನವು ಪೌರರಿಗಿಲ್ಲದಿದ್ದ ಪಕ್ಷದಲ್ಲಿ ಸಂಕುಚಿತ ಬುದ್ಧಿಯೇ ತೋರಿ ಮೌಢ್ಯವೂ ಮೂರ್ಖತನವೂ ಕೆಲಸಕಾರ್ಯಗಳಲ್ಲಿ ಸಿದ್ಧವಾಗುವುವು.

ರಾಷ್ಟ್ರಭಕ್ತಿಯೆಂಬುದು ರಾಷ್ಟ್ರದಲ್ಲಿರುವವರೆಲ್ಲರಲ್ಲಿಯೂ ನೆಲಸಿರಬೇಕಾದ ಗುಣ. ಪೌರರಲ್ಲಿಯೂ ರಾಷ್ಟ್ರಭಕ್ತಿಯಿರಬೇಕು, ಸರ್ಕಾರದಲ್ಲಿಯೂ ಇರಬೇಕು. ರಾಷ್ಟ್ರದ ಮೂಲೋದ್ದೇಶವೇ ಪ್ರತಿಯೊಬ್ಬನ ಪೂರ್ಣವಿಕಾಸ ಅಥವಾ ಸರ್ವಸಿದ್ಧಿಯಾಗಿರುವಲ್ಲಿ ರಾಷ್ಟ್ರದ ಉದ್ದೇಶ ಸಾಧನೆಗಾಗಿಯೇ ಇರತಕ್ಕ ಸರ್ಕಾರವು ರಾಷ್ಟ್ರಭಕ್ತಿಯಿಂದ ಕೂಡಿಯೇ ಇರಬೇಕು. ಸರ್ಕಾರವು ರಾಷ್ಟ್ರಭಕ್ತಿಯಿಂದ ಕೂಡಿದ್ದು, ರಾಷ್ಟ್ರದ ಸ್ಥಿತಿಗತಿಗಳ ಪರಿಚಯವನ್ನು ಸಂಪೂರ್ಣವಾಗಿ ಪಡೆದು, ಯುಕ್ತಾಯುಕ್ತ ವಿವೇಚನೆಯಿಂದ ಕೆಲಸಕಾರ್ಯಗಳನ್ನು ನಡೆಸುತ್ತಿದ್ದ ಪಕ್ಷದಲ್ಲಿ ಮಾತ್ರವೇ

ರಾಷ್ಟ್ರದ ಉದ್ದೇಶವು ಸಾಧಿತವಾಗುವುದು. ರಾಷ್ಟ್ರಭಕ್ತಿಯು ಸರ್ಕಾರಕ್ಕೂ ಪೌರಸಮೂಹದವರಿಗೂ ಸಮಾನವಾಗಿರತಕ್ಕ ಗುಣ. ಇಬ್ಬರಲ್ಲಿಯೂ ಆ ಭಕ್ತಿಯು ಸಮಾನವಾಗಿಲ್ಲದಿದ್ದ ಪಕ್ಷದಲ್ಲಿ ರಾಷ್ಟ್ರವೆಂಬ ಸಂಸ್ಥೆಯೇ ಇಲ್ಲವೆಂದು ಹೇಳಬೇಕಾಗುವುದು. ರಾಷ್ಟ್ರಭಕ್ತಿಯು ವಿಶಾಲ ವಾದುದು, ಸಂಕುಚಿತವಾದುದಲ್ಲ. ರಾಜತ್ವವಿರುವ ರಾಷ್ಟ್ರಗಳಲ್ಲಿ ರಾಜಭಕ್ತಿಯೆನ್ನುವುದು ರಾಷ್ಟ್ರಭಕ್ತಿಯ ರೂಪ ಮಾತ್ರವೇ. ರಾಜನು ರಾಷ್ಟ್ರದ ಮೂರ್ತಿಯಾದುದರಿಂದ ರಾಜನಲ್ಲಿ ಭಕ್ತಿಯನ್ನಿಡುವುದು ಸಹಜ ವಾದ ಧರ್ಮ. ಇಂಗ್ಲಂಡಿನ ದೊರೆಯಲ್ಲಿ ಇಂಗ್ಲೀಷರೆಲ್ಲರೂ ಭಕ್ತಿಯನ್ನು ತೋರಿಸುವಂತೆಯೇ ರಾಜತ್ವವಿರುವ ರಾಷ್ಟ್ರಗಳಲ್ಲಿ ರಾಜಭಕ್ತಿಯು ಪೌರರಲ್ಲಿರಬೇಕಾದ ಗುಣವೇ. ಭಾರತೀಯರು ಸಮ್ರಾಟರಲ್ಲಿ ಭಕ್ತಿಯುತ ರಾಗಿರತಕ್ಕುದು ಸಹಜವೇ. ಆದರೆ ರಾಜಭಕ್ತಿಯು ರಾಷ್ಟ್ರಭಕ್ತಿಯ ಅಂಶವೆಂಬುದನ್ನು ಮರೆಯಲಾಗದು. ಆಲಿವರ್ ಕ್ರಾಂವೆಲ್ ಅಥವಾ ಜಾರ್ಜ್ ವಾಷಿಂಗ್ಟನ್ ಎಂಬುವವರು ರಾಷ್ಟ್ರಕರ್ತರೆನಿಸಿದ ಪೌರರು; ಅವರ ರಾಷ್ಟ್ರಭಕ್ತಿಗೆ ಎಲ್ಲೆಯೇ ಇರಲಿಲ್ಲ. ಆದರೂ ಅವರು ರಾಷ್ಟ್ರ ಭಕ್ತಿಯಿಂದ ಪ್ರೇರಿತರಾಗಿಯೇ ರಾಜದ್ರೋಹಿಗಳಾಗಿದ್ದರು. ಗೃಹಭಕ್ತಿ, ಜಾತಿಭಕ್ತಿ, ಗ್ರಾಮಭಕ್ತಿ, ರಾಜಭಕ್ತಿಗಳು ರಾಷ್ಟ್ರಭಕ್ತಿಯ ಭಾಗಗಳು ಮಾತ್ರವೆಂಬ ಪರಿಜ್ಞಾನವು ಪೌರರಿಗಿದ್ದೇ ತೀರಬೇಕು. ತನ್ನ ಮನೆ ಮುಂದೆ ದೀಪವನ್ನೋ ನಲ್ಲಿಯನ್ನೋ ಇಡಿಸುವ ಪೌರ ಸಭಾಸದಸ್ಯನು ಗೃಹಭಕ್ತಿಯುತನೇನೋ ಹೌದು, ಆದರೆ ನಗರಭಕ್ತನು ಹೌದೋ ಅಲ್ಲವೋ ಸಂದೇಹ. ರಾಜಭಕ್ತಿ ಅಥವಾ ಸ್ವಾಮಿಭಕ್ತಿಯೆಂಬುದು ಭರತ ವರ್ಷದಲ್ಲಿ ವೃದ್ಧಿಗೊಂಡಂತೆ ಪ್ರಾಯಶಃ ಬೇರೆ ಯಾವ ದೇಶದಲ್ಲಿಯೂ ವೃದ್ಧಿಪಡೆಯಲಿಲ್ಲ. ಹೊಯಿಸಳರ ಕಾಲದ ಗರುಡರು ತಮ್ಮ ಸ್ವಾಮಿಯು ಕಾಲಾಧೀನನಾದ ಕೂಡಲೆ ತಾವೂ ಸಿಡಿತಲೆಗೊಡುತ್ತಿದ್ದರು. ಈ ಸಂಗತಿ ಯಲ್ಲಿ ಅತ್ಯಂತ ಸ್ವಾಮಿಭಕ್ತಿ ತೋರುವುದು; ಆದರೆ ರಾಷ್ಟ್ರಕ್ಕೆ ನಷ್ಟವೂ ತೋರುವುದು. ವಿಷ್ಣುವರ್ಧನ ರಾಜನ ಗರುಡನಾಗಿದ್ದ ಕುವರ ಲಕ್ಷ್ಮನು ತೊಟ್ಟ ಪಣದಂತೆ ಪ್ರಾಣವನ್ನರ್ಪಿಸದೆ ಜೀವಂತನಾಗಿಯೇ ಇದ್ದ ಪಕ್ಷದಲ್ಲಿ ರಾಷ್ಟ್ರದಲ್ಲಿ ಎಂತಹ ವೀರನು ಇರುತ್ತಿದ್ದನು? ಆದ್ದರಿಂದ ರಾಜಭಕ್ತಿಯಲ್ಲಿ

ವ್ಯಕ್ತಿ ಭಕ್ತಿಯು ಮುಖ್ಯವಾದುದಲ್ಲ; ರಾಜತ್ವವೆಂಬ ತತ್ವದಲ್ಲಿ ಭಕ್ತಿಯು ಮುಖ್ಯವಾದುದು. ಈ ತಾರತಮ್ಯ ಜ್ಞಾನವು ರಾಷ್ಟ್ರದ ಪೌರರಿಗಿದ್ದೇ ತೀರಬೇಕು. ಹಿಂದೆ ನಡೆದ ಯುದ್ಧಗಳಲ್ಲಿ ಸ್ವಾಮಿಯು ಹತನಾದ ಕೂಡಲೆ ಸೈನಿಕರೆಲ್ಲರೂ ಖಿನ್ನತೆಯಿಂದ ಯುದ್ಧವನ್ನು ಬಿಟ್ಟೋಡುತ್ತಿದ್ದುದಕ್ಕೆ ಈ ಸಂಕುಚಿತವಾದ ಭಕ್ತಿಯೇ ಕಾರಣವಾಗಿದ್ದಿತು. ಸಂಕುಚಿತವಾದ ಭಕ್ತಿ ಭೇದಗಳೆಲ್ಲವೂ ವಿಶಾಲವಾದ ರಾಷ್ಟ್ರಭಕ್ತಿಯಲ್ಲಿ ಅಡಗಿದ್ದರೆಯೇ ಸುಲಕ್ಷಣ.

**ಧೈರ್ಯಸ್ಥೈರ್ಯಾದಿಗಳು**

ಪೌರರಾದವರು ರಾಷ್ಟ್ರಭಕ್ತಿಯನ್ನು ಯೋಗ್ಯರೀತಿಯಲ್ಲಿ ಪಡೆದಿರ ತಕ್ಕುದಲ್ಲದೆ ಧೈರ್ಯಸ್ಥೈರ್ಯ ಸಾಹಸಗಳನ್ನೂ ಪಡೆದಿರಬೇಕು. ಸಾಧಾರಣವಾಗಿ ಧೀರನಾದ ದೇಶಭಕ್ತನೆಂದರೆ ದೇಶಕ್ಕಾಗಿ ಯುದ್ಧಕ್ಕೆ ಹೊರಟು ಯುದ್ಧಭೂಮಿಯಲ್ಲಿ ಪ್ರಾಣವನ್ನು ಅರ್ಪಿಸುವ ಯೋಧನ ಸ್ಮರಣೆಯೇ ನಮಗೆ ಆಗುವುದು. ಅದರಿಂದ ಯುದ್ಧರಂಗದಲ್ಲಿ ಮಾತ್ರವೇ ಧೈರ್ಯ ಸಾಹಸ ಗುಣಗಳು ಪ್ರಕಾಶವಾಗುತ್ತವೆಯೆಂದು ಭಾವಿಸಬಾರದು. ಯುದ್ಧವಿಲ್ಲದ ಕಾಲಸ್ಥಿತಿಯಲ್ಲಿಯೂ ಧೈರ್ಯ ಸಾಹಸಗಳು ಅತ್ಯವಶ್ಯಕವಾಗಿರಬೇಕಾದ ಗುಣಗಳು. ಪ್ರಬಲವಾದ ಸಾಂಕ್ರಾಮಿಕ ವ್ಯಾಧಿಯಿಂದ ನರಳುವ ರೋಗಿಯ ಬಳಿಗೆ ಹೊರಡುವ ವೈದ್ಯನಿಗೂ ಕಳ್ಳರನ್ನು ಹಿಡಿಯಲು ಹೊರಡುವ ಚೋರಗ್ರಾಹಕಾಧಿಕಾರಿಗೂ ಧೈರ್ಯ ಸಾಹಸಗಳಿಲ್ಲದೆ ಹೋದರೆ ಅವರ ಕೆಲಸವೇ ನಡೆಯುವುದಿಲ್ಲ. ರಾಷ್ಟ್ರಗತಿಯನ್ನು ನಿರ್ಧರಿಸುವ ಸಮಯದಲ್ಲಿ ಅಧಿಕಾರಯುಕ್ತನಾದಾತನಿಗೆ ಧೈರ್ಯವಿಲ್ಲದಿದ್ದರೆ ನಿಶ್ಚಯಮಾಡುವುದೇ ಆಗುವುದಿಲ್ಲ. ಪೇನಾ ಹಿಡಿದು ಒಂದು ಕಾಗದಕ್ಕೆ ರುಜುಹಾಕುವುದೇ ಅತಿ ಸಾಹಸವೆನಿಸುವಂತಹ ಸಂದರ್ಭಗಳೇ ಎಷ್ಟೋ ಒದಗುತ್ತವೆ. ಶಾಂತಿಕಾಲದಲ್ಲಿಯೂ ಪೌರರಿಗೆ ಧೈರ್ಯ ಸ್ಥೈರ್ಯಗಳು ಇದ್ದೇತೀರಬೇಕು. ಅಜ್ಞಾನ, ರೋಗ, ಕ್ಷಾಮ, ದಾರಿದ್ರ್ಯ, ನೀಚತನ ಮುಂತಾದ ಪ್ರಬಲ ವೈರಿಗಳನ್ನು ಇದಿರಿಸುವುದೇ ನಿರಂತರವಾದ ರಾಷ್ಟ್ರಪ್ರಯತ್ನ. ಆ ಪ್ರಯತ್ನದಲ್ಲಿ ಧೈರ್ಯಸ್ಥೈರ್ಯಾದಿ ಸುಗುಣಗಳು ಪೌರರಲ್ಲಿಲ್ಲದಿದ್ದರೆ ಮೇಲುತೋರುವುದೇ ಇಲ್ಲ.

ರಾಷ್ಟ್ರವೆಂಬುದು ಏಕದೇಹದಂತೆ ಇರತಕ್ಕ ನ್ಯಾಯವನ್ನು ಆಗಲೇ ಕಂಡೆವು. ಒಂದು ಲಕ್ಷ ಸೈನ್ಯವೆಂಬುದರಲ್ಲಿ ಒಂದು ಸಾವಿರ ಭಟರು ಅಶಿಕ್ಷಿತರಾಗಿಯೋ ರೋಗಗ್ರಸ್ತ ರಾಗಿಯೋ ಇದ್ದರೆ ಅದು ಒಂದು ಲಕ್ಷ ಸೈನ್ಯ ವೆನಿಸುವುದಿಲ್ಲ. ಮಾವಿನ ಹಣ್ಣಿನಲ್ಲಿ ಒಂದು ಭಾಗವು ಕೊಳೆತಿದ್ದರೆ ಹಣ್ಣೆಲ್ಲವೂ ಕೆಟ್ಟಹಾಗೆಯೇ; ಯಾವ ಭಾಗದಲ್ಲಿಯಾದರೂ ದೌರ್ಬಲ್ಯವಿದ್ದರೆ ಒಟ್ಟು ದೇಹಕ್ಕೇ ದೌರ್ಬಲ್ಯ ತೋರುವುದು. ಹಾಗೆಯೇ ರಾಷ್ಟ್ರದ ಪೌರರಲ್ಲಿ ಕೆಲವರು ಅಜ್ಞರಾಗಿಯೋ, ಸ್ವಾರ್ಥಪರರಾಗಿಯೋ, ಹೇಡಿ ಗಳಾಗಿಯೋ ಇದ್ದಲ್ಲಿ ರಾಷ್ಟ್ರಕ್ಕೇ ಹಾನಿಯುಂ ತೋರಬಹುದು. ದೇಹ ಬಲದಲ್ಲಿಯೋ ಬುದ್ಧಿಬಲದಲ್ಲಿಯೋ ವಿಕೃತನಾಗಿ ಒಬ್ಬನಿದ್ದರೂ ಕೂಡ ಆ ಒಬ್ಬನ ಪಾಲಿನಷ್ಟು ದೌರ್ಬಲ್ಯ ರಾಷ್ಟ್ರಕ್ಕೇ ಸೋಕುತ್ತದೆ. ಪ್ರಾಚೀನ ಕಾಲದಲ್ಲಿ ಶಸ್ತ್ರಶಬ್ದೋಪಜೀವಿಗಣಗಳೆನಿಸಿದ್ದ ಕಠ, ಮಾಳವ, ಯೌಧೇಯ ಮೊದಲಾದ ಭಾರತೀಯರಲ್ಲಿಯೂ ಗ್ರೀಕರಲ್ಲಿ ಸ್ಪಾರ್ಟ ಎಂಬ ವಿಭಾಗ ದಲ್ಲಿಯೂ ಕುರೂಪಿಗಳೋ ದುರ್ಬಲರೋ ಆದ ಮಕ್ಕಳು ಹುಟ್ಟಿದರೆ ಅವುಗಳನ್ನು ಬದುಕುವುದಕ್ಕೇ ಬಿಡುತ್ತಿರಲಿಲ್ಲ; ವಧೆಮಾಡಿಸಿಬಿಡುತ್ತಿದ್ದರು. ಕುರೂಪಿಗಳಾಗಿ ಹುಟ್ಟಿದ ಭಾಗ್ಯಹೀನರನ್ನು ಆ ರೀತಿ ಹತ್ಯೆಗೆ ಗುರಿ ಮಾಡುವುದು ಯುಕ್ತವೇ ಎಂಬುದು ವಿಚಾರಾರ್ಹವಾದುದು. ಆದರೆ ದುರ್ಬಲರೋ, ಅಜ್ಞಾನಿಗಳೋ, ಹೇಡಿಗಳೋ ಆದ ಪೌರರಿದ್ದಲ್ಲಿ ರಾಷ್ಟ್ರಕ್ಕೆ ದೌರ್ಬಲ್ಯ ಉಂಟಾಗುವುದೆಂಬುದರಲ್ಲಿ ಸಂಶಯವಿಲ್ಲ. *ಯಾರ ವಸ್ತುವನ್ನು ಕದಿಯದಿದ್ದರೂ ಕಳ್ಳನೆನಿಸುವ ಸಂಭವವು ಭಗವದ್ಗೀತೆಯಲ್ಲಿ ಸೂಚಿತ ವಾಗಿದೆ. ತನ್ನಿಂದ ರಾಷ್ಟ್ರಕ್ಕೆ ಅಥವಾ ಲೋಕಕ್ಕೆ ನಡೆಯಬಹುದಾಗಿದ್ದ ಉಪಕಾರವನ್ನು ನಡೆಸದೆ ತಟಸ್ಥನಾದವನು ಲೋಕಕ್ಕೆ ಸೇರತಕ್ಕ ವಸ್ತುವನ್ನು ಲೋಕಕ್ಕೆ ಸಲ್ಲಿಸದೆ ಇರುವ ಕಾರಣದಿಂದ ಚೋರನೇ ಆಗುತ್ತಾನೆ. ಪೌರರಾದವರು ಈ ತತ್ವವನ್ನು ಮನಸ್ಸಿನಲ್ಲಿಟ್ಟುಕೊಂಡು ರಾಷ್ಟ್ರಭಕ್ತಿಯುತರಾಗಿ ಶ್ರಮೆಯನ್ನು ವಹಿಸಬೇಕು.

ದೌರ್ಬಲ್ಯ

---

* ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯನ್ತೇ ಯಜ್ಞಭಾವಿತಾಃ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ॥

ಜನಸ್ವಾಮ್ಯ ತತ್ವವನ್ನು ಆಚರಿಸುವ ರಾಷ್ಟ್ರದಲ್ಲಿ ಪೌರರು ವಿಶಿಷ್ಟವಾದ ಆಚಾರಗಳನ್ನು ಪಡೆದಿರಬೇಕಾಗಿರುತ್ತದೆ.

ಪೌರ ಶಿಷ್ಟಿ

ಜನಸ್ವಾಮ್ಯ ತತ್ವದ ಅನುಷ್ಠಾನವಿಲ್ಲದೆ ಪೂರ್ಣವಾದ ಪೌರ ಗೌರವವು ಲಭಿಸುವುದಿಲ್ಲ. ಪೌರನೀತಿಯಲ್ಲಿಯೇ **ಪೌರಶಿಷ್ಟಿ**ಯೆಂಬುದುಂಟು. ಪೌರರೆಲ್ಲರೂ ವಿಶೇಷವಾದ ಶಿಷ್ಟಾಚಾರವನ್ನು ಪಾಲಿಸಬೇಕು. ಐರೋಪ್ಯ ದೇಶಗಳಲ್ಲಿ ಸಂಚರಿಸಿ ಬಂದ ಭಾರತೀಯರು ಪುನಃ ಪುನಃ ಇಂಗ್ಲೆಂಡಿನ ಪೌರರ ಶಿಷ್ಟಾಚಾರಗಳನ್ನು ವರ್ಣಿಸಿ ಶ್ಲಾಘಿಸುವುದನ್ನು ಎಲ್ಲರೂ ಕೇಳಿಯೇ ಇರುತ್ತಾರೆ. ಟಿಕೆಟ್ಟು ಕೊಳ್ಳುವಾಗ ಕ್ರಮವಾಗಿ ಒಬ್ಬರ ಹಿಂದೊಬ್ಬರು ನಿಲ್ಲುವ ಪರಿಯೇನು, ಅಂಚೆಯ ಪೆಟ್ಟಿಗೆಗಳ ಮೇಲೆ ರಾಶಿ ರಾಶಿಯಾಗಿ ಕಾಗದ ಪತ್ರಗಳನ್ನು ಪೇರಿಸುವ ಬಗೆಯೇನು, ಬೀದಿಗಳು ಚೊಕ್ಕಟವಾಗಿದ್ದು ಕಾಗದವನ್ನು ಹರಿದಾತನು ಆ ಚೂರುಗಳನ್ನು ಬೀದಿಯಲ್ಲಿ ಬಿಸಾಡದೆ ತನ್ನ ಜೇಬಿನಲ್ಲಿ ಹಾಕಿಕೊಳ್ಳುವ ಪ್ರಜ್ಞೆಯೇನ—ಎಷ್ಟೋ ವಿಧದಲ್ಲಿ ಅಲ್ಲಿಯ ಪೌರರಲ್ಲಿ ಶಿಷ್ಟಾಚಾರಗಳ ವರ್ಣನೆಯನ್ನು ಕೇಳುತ್ತೇವೆ. ಇವಲ್ಲದೆ ಅಲ್ಲಿಯ ಪೌರರಿಗೆ ಛಂದಾಧಿಕಾರವೆಂದರೆ ಪ್ರಾಣಕ್ಕಿಂತ ಹೆಚ್ಚಿನ ವಸ್ತುವಾಗಿದೆ. ನಮ್ಮ ದೇಶದಲ್ಲಾದರೆ ಈ ಶಿಷ್ಟಾಚಾರಗಳು ಇನ್ನೂ ಹುಟ್ಟಿಕೊಳ್ಳುವುದರಲ್ಲಿಯೇ ಇವೆ. ಪೌರರಾದವರು ಎಂತಹ ವಿನಯವನ್ನೂ ಶಿಷ್ಟಾಚಾರಗಳನ್ನೂ ಬದ್ಧರಾಗಿ ನಡೆಸಬೇಕೋ ಅವುಗಳನ್ನು ಪ್ರಾಜ್ಞರಾದವರು ಪ್ರಚಾರಪಡಿಸಬೇಕು. ಪೌರಶಿಷ್ಟಿ (Civic Discipline) ಎಂಬುದೂ ಪೌರರಿಗಿರತಕ್ಕ ಸುಲಕ್ಷಣಗಳಲ್ಲಿ ಗಣ್ಯವಾಗತಕ್ಕುದು.

ಪೌರಧರ್ಮಾಚರಣೆಯಲ್ಲಿ ಖ್ಯಾತಿವೆತ್ತವರನ್ನು ಎಲ್ಲ ಕಾಲಗಳಲ್ಲಿಯೂ ಎಲ್ಲ ದೇಶಗಳಲ್ಲಿಯೂ ಎಂತಹ ರಾಷ್ಟ್ರಸ್ವರೂಪವಿದ್ದಾಗ್ಯೂ ವಿಶೇಷವಾಗಿ ಗೌರವಿಸಿಯೇ ಇರುತ್ತಾರೆ. ಪೌರಧರ್ಮದಲ್ಲಿ ಪರೋಪಕಾರವು ನಾನಾ ವಿಧವಾಗಿ ನೆರವೇರುತ್ತದೆಯಾದುದರಿಂದ ಅಂತಹ ಧರ್ಮಾತ್ಮರಲ್ಲಿ ಕೃತಜ್ಞತೆಯನ್ನು ತೋರುವುದು ಸಹಜವಾಗಿಯೇ ಇರುತ್ತದೆ. ಭರತವರ್ಷದ ಜನಜೀವನದಲ್ಲಿ ಅಂತಹ ಧರ್ಮಾತ್ಮರನ್ನು ಎಲ್ಲರೂ ಗೌರವಿಸುತ್ತಿದ್ದುದಲ್ಲದೆ ಅವರು

ಪೌರ ಸನ್ಮಾನ

ಕಾಲಗತಿಯನ್ನು ಪಡೆದ ತರುವಾಯ ಅವರ ಹೆಸರುಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತಲಿದ್ದರು. ರಾಜಪುರುಷರು ಅಂತಹವರಿಗೆ ಸನ್ಮಾನಗಳನ್ನೂ ಬಿರುದುಗಳನ್ನೂ ಕೊಡುತ್ತಿದ್ದುದು ಅದೇ ಕಾರಣದಿಂದಲೇ. ಪಾಶ್ಚಾತ್ಯ ದೇಶಗಳಲ್ಲಿಯೂ ರಾಜಪುರುಷರು ಧರ್ಮಾತ್ಮರಿಗೆ ಬಿರುದುಗಳನ್ನೂ ವಿಶಿಷ್ಟ ಮರ್ಯಾದೆಗಳನ್ನೂ ಕೊಡಿಸುತ್ತಿದ್ದರು. ಆ ದೇಶಗಳಲ್ಲಿ ರಾಜತ್ವವು ನಷ್ಟವಾಗಿ ಗಣರಾಷ್ಟ್ರಸ್ವರೂಪಗಳೇ ವಿಶೇಷವಾಗಿ ತೋರಿಕೊಂಡ ತರುವಾಯ ಈ ಮರ್ಯಾದೆಯು ಬೇರೆ ರೂಪವನ್ನು ತಾಳಿತು. ನಗರದ ಸ್ವಾತಂತ್ರ್ಯ ವನ್ನರ್ಪಿಸುವುದು (Granting the Freedom of Cities), ನಗರ ಭಾಗ ಗಳಿಗೆ ಅಂತಹವರ ಹೆಸರುಗಳನ್ನಿಡುವುದು, ಚೌಕಗಳಲ್ಲಿಯೂ ಸಭಾಗೃಹ ಗಳಲ್ಲಿಯೂ ಅಂತಹವರ ವಿಗ್ರಹಗಳನ್ನು ಸ್ಥಾಪಿಸುವುದು, ರಾಷ್ಟ್ರ ಗೌರವಾರ್ಹರ ಭಾವಚಿತ್ರಗಳಿಗಾಗಿಯೇ ವಿಶಿಷ್ಟವಾದ ಗೌರವ ಮಂದಿರ ಗಳನ್ನು ಏರ್ಪಡಿಸುವುದು ಮೊದಲಾಗಿ ಅನೇಕ ಪ್ರಸಿದ್ಧ ಬಗೆಗಳಲ್ಲಿ ಗಣ ರಾಷ್ಟ್ರಗಳ ಜನರು ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸುವುದುಂಟು.

**ನಿಸ್ಪೃಹತೆ**

ಸಂಯುಕ್ತರಾಜ್ಯದಲ್ಲಿಯೂ ಬ್ರಿಟಿಷ್ ಸಮುದಾಯಬಂಧದಲ್ಲಿಯೂ ರಾಜಪುರುಷರಿಂದ ನಡೆಯತಕ್ಕ ಸನ್ಮಾನಗಳು ಅನೇಕವಾಗಿ ಉಂಟು. ಭಾರತೀಯರಿಗಾಗಿಯೇ ವಿಶೇಷವಾದ ಸನ್ಮಾನಗಳೂ ಬಿರುದುಗಳೂ ಉಂಟು. ಭಾರತೀಯ ಸಂಸ್ಥಾನಗಳಲ್ಲಿ ಸಂಸ್ಥಾನಾಧಿಪತಿಗಳೂ ಯಥೋ ಚಿತವಾಗಿ ಮರ್ಯಾದೆಮಾಡುವ ಆಚಾರಗಳನ್ನು ನಡೆಸುತ್ತಾರೆ. ಈ ಮರ್ಯಾದೆ ಗಳ ವಿಷಯದಲ್ಲಿ ಒಂದಂಶವನ್ನು ಮರೆಯಬಾರದು. ಮರ್ಯಾದೆಯ ಅಥವಾ ಬಿರುದಿನ ಆಸೆಯಿಂದಲೇ ಕೆಲವರು ಧರ್ಮಕೆಲಸಗಳಲ್ಲಿ ನಿರತರಾಗಬಹುದು. ಶ್ರೇಷ್ಠರಾದವರು ಕೆಲವೇಳೆಗಳಲ್ಲಿ ಮರ್ಯಾದೆಗಳು ಲಭಿಸಿದಾಗ್ಗೂ ಬೇಡ ವೆಂದಿದ್ದಾರೆ. ಗೋಖಲೆಯವರಿಗೆ ಲಾರ್ಡ್ ಹಾರ್ಡಿಂಜ್‌ರವರು ನೈಟ್ಹುಡ್ (Knighthood) ಎಂಬ ಮರ್ಯಾದೆಯನ್ನು ಕೊಡಿಸಲು ಯತ್ನಿಸಿದಾಗ ಗೋಖಲೆಯವರು ಬೇಡವೆಂದು ತಮ್ಮ ನಿಷ್ಕಾಮಕರ್ಮದ ಗುಣವನ್ನು ವ್ಯಕ್ತಪಡಿಸಿ ಶ್ರೇಷ್ಠವಾದ ಆದರ್ಶವನ್ನು ತೋರಿದರು. ಇಂಗ್ಲಂಡಿನಲ್ಲಿ ಪ್ರಸಿದ್ಧ ಮಂತ್ರಿಯಾಗಿದ್ದ ಗ್ಲಾಡ್‌ಸ್ಟನ್ ಎಂಬಾತನಿಗೆ ಲಾರ್ಡ್ ಪದವಿಯನ್ನು

ಕೊಡಿಸುವ ಪ್ರಸ್ತಾಪ ಬಂದಾಗ ಆತನೂ ಅದೇ ರೀತಿಯಲ್ಲಿ ವರ್ತಿಸಿದ್ದನು. ಅಮೆರಿಕದೇಶದಲ್ಲಿ ಬಿರುದುಗಳೆಂಬುದೇ ಇಲ್ಲ. ಒಣಹೆಮ್ಮೆಯನ್ನು ತೋರಿಸ ತಕ್ಕವೆಂದು ಅವುಗಳನ್ನು ಅಲ್ಲಿಯ ಜನರು ತಿರಸ್ಕರಿಸುತ್ತಾರೆ.

ಭಾರತೀಯ ಗುಣ

ಭಾರತೀಯ ಸಂಪ್ರದಾಯದಲ್ಲಿ ಮರ್ಯಾದೆಯ ಆಸೆಯಿಂದ ಮಾತ್ರವೇ ಅಲ್ಲದೆ ಕೃತಜ್ಞತೆಯ ನಿರೀಕ್ಷೆಯಿಂದ ಧರ್ಮ ಕಾರ್ಯಗಳನ್ನು ನಡೆಸುವುದು ದುಷ್ಟವೆನಿಸುತ್ತದೆ. ಧರ್ಮಿಷ್ಠನಾದಾತನು ಕೇವಲ ಪುಣ್ಯಲಾಭಕ್ಕಾಗಿ ಅಂತಹ ಕೆಲಸಗಳಲ್ಲಿ ತೊಡಗುತ್ತಾನೆ. ನಿಸ್ಪೃಹನಾದ ಧರ್ಮಾತ್ಮನನ್ನು ಸ್ತೋತ್ರಮಾಡಿದ ವೇಳೆಯಲ್ಲಿ ಆತನಿಗೆ ಹಿಂಸೆಯೇ ತೋರುತ್ತದೆ. ಈ ಕಾರಣ ದಿಂದಲೇ ಪೂರ್ವಿಕರು ತಮ್ಮ ಹೆಸರುಗಳನ್ನು ತಿಳಿಸದೆ ಮರೆಮಾಚಿದರು. ಪ್ರಸಿದ್ಧವಾದ ಕೈಲಾಸ ದೇವಾಲಯವನ್ನು ಕಟ್ಟಿದ ವಾಸ್ತುಕಲಾವಿದನು ಯಾರೋ ಇಂದಿಗೂ ತಿಳಿದಿಲ್ಲ. ಅಥವಾ ತಮ್ಮ ವಿಗ್ರಹಗಳನ್ನೋ ಚಿತ್ರ ಗಳನ್ನೋ ಇಡಿಸಬೇಕೆಂದು ತೋರಿದರೆ ಪೂರ್ವಿಕರು ಭಕ್ತರಂತೆ ದೇವಸ್ಥಾನದ ದ್ವಾರದ ಬಳಿ ಇಡಿಸುತ್ತಿದ್ದರು. ಪೂರ್ವಿಕರು ಫೋಟೋ ತೆಗೆಸಿಕೊಂಡರೆ ತಮ್ಮ ಇಷ್ಟದೇವತೆಯ ಬಳಿ ದೀನರಂತೆ ಕೈಜೋಡಿಸಿ ನಿಲ್ಲುತ್ತಿದ್ದುದನ್ನೂ ಈಗಿನ ಕಾಲದವರು ತಮ್ಮ ಸ್ವಂತ ಫೋಟೋವಿಗೆ ಸ್ವಹಸ್ತಾಕ್ಷರದಿಂದ ಅಲಂಕಾರಮಾಡುವ ಪದ್ಧತಿಯನ್ನೂ ಹೋಲಿಸಿ ಶುದ್ಧ ಭಾರತೀಯ ಸಂಪ್ರದಾಯ ಯಾವುದೆಂದು ನಿಷ್ಕರ್ಷೆಮಾಡಿಕೊಳ್ಳಬಹುದು.

## 2. ಪೌರ ಕರ್ತವ್ಯಾಧಿಕಾರಗಳು

ಅಧಿಕಾರ ಕರ್ತವ್ಯಗಳು, ಪರಸ್ಪರಾವಲಂಬಿಗಳು, ಅಧಿಕಾರ ಪತ್ರಗಳು, ರಾಷ್ಟ್ರದ ಲಕ್ಷ್ಯ, ಜರ್ಮನರ ಕೋಶ, ಅನ್ಯೋನ್ಯತೆ, ಕರ್ತವ್ಯಗಳು, ಪೌರಾಧಿಕಾರ ಲಕ್ಷಣ, ಅಧಿಕಾರ ಭೇದಗಳು, ಪ್ರಮಾಣ ಪತ್ರಗಳ ಅಭಾವ, ಭಾರತೀಯ ಪೌರತಾ, ಸಾಮ್ರಾಜ್ಯ ಪೌರತಾ, ಭಾರತೀಯ ಪೌರರ ಕರ್ತವ್ಯಗಳು, ಬಲವಂತ, ಐಚ್ಛಿಕ, ಮಿತಿಗಳು, ಮುಖ್ಯಾಧಿಕಾರಗಳು, ದೈಹಿಕ ಸ್ವಾತಂತ್ರ್ಯ, ಸಂಚಾರ ಸ್ವಾತಂತ್ರ್ಯ, ಮತಧರ್ಮದ ಸ್ವಾತಂತ್ರ್ಯ, ವಾಕ್ಸ್ವಾತಂತ್ರ್ಯ, ಸಂಘ ಸ್ವಾತಂತ್ರ್ಯ, ನಿರೋಧ ಸ್ವಾತಂತ್ರ್ಯ, ರಾಜಕೀಯ ಅಧಿಕಾರ, ಭಾರತೀಯ ಸ್ಥಿತಿ.

**ಅಧಿಕಾರ ಕರ್ತವ್ಯಗಳು**

ತಮ್ಮ ದೇಶದ ಆಡಳಿತದಲ್ಲಿ ಭಾಗಿಗಳಾಗಿ ಸರ್ಕಾರದೊಂದಿಗೆ ಆಪ್ತ ಸಂಬಂಧವನ್ನು ಪಡೆದಾಗ ದೇಶದ ಪೌರರು ನಿರ್ವಹಿಸತಕ್ಕ ಕರ್ತವ್ಯಾಧಿಕಾರಗಳನ್ನು ವಿಚಾರ ಯುಕ್ತವಾಗಿ ತಿಳಿಯಲೇ ಬೇಕಾಗುತ್ತದೆ. ಪ್ರಾಚೀನ ಭಾರತೀಯ ರಾಷ್ಟ್ರಪದ್ಧತಿಗಳಲ್ಲಿ ರಾಜತ್ವವೇ ಮುಖ್ಯ ವಾಗಿದ್ದುದರಿಂದ ಸರ್ಕಾರದಲ್ಲಿ ಪೌರರು ವಿಶೇಷವೆನ್ನಬಹುದಾದ ಭಾಗವನ್ನು ಪಡೆದಿರಲಿಲ್ಲ. ಜನಸ್ವಾಮ್ಯ ಪ್ರಾತಿನಿಧ್ಯ ತತ್ವಗಳನ್ನು ಅವಲಂಬಿಸಿದ ಕೂಡಲೇ ಪೌರಸಮೂಹಕ್ಕೆ ವಿಶಿಷ್ಟವಾದ ಭಾಗವು ಸಂದು ಪೌರರು ತಮ್ಮ ಕರ್ತವ್ಯಗಳನ್ನೂ ಅಧಿಕಾರಗಳನ್ನೂ ದಕ್ಷತೆಯಿಂದಲೂ ಎಚ್ಚರಿಕೆ ಯಿಂದಲೂ ಪಾಲಿಸಬೇಕಾಗಿರುತ್ತದೆ.

**ಪರಸ್ಪರಾವಲಂಬಿಗಳು**

ಅಧಿಕಾರಗಳನ್ನೂ ಕರ್ತವ್ಯಗಳನ್ನೂ ಬೇರೆ ಬೇರೆಯೆಂದು ಕಾಣುವು ದಾದರೂ ವಾಸ್ತವವಾಗಿ ಅವು ಅನ್ಯೋನ್ಯವಾಗಿರ ತಕ್ಕವು. ಕರ್ತವ್ಯದಲ್ಲಿಯೇ ಅಧಿಕಾರ ಭಾಗ ವುಂಟು; ಅಧಿಕಾರದಲ್ಲಿಯೇ ಕರ್ತವ್ಯ ಭಾಗವುಂಟು. ಕರ್ತವ್ಯಾಧಿಕಾರಗಳು ಎಡೆಬಿಡದೆ ಅನ್ಯೋನ್ಯವಾಗಿರತಕ್ಕವು. ಕರ್ತವ್ಯ ವಿಲ್ಲದ ಅಧಿಕಾರವಿರುವುದಿಲ್ಲ; ಅಧಿಕಾರವಿಲ್ಲದ ಕರ್ತವ್ಯವಿರುವುದಿಲ್ಲ. ಉದಾಹರಣೆಗೆ ನಾನು ನನ್ನ ಹಿತ್ತಿಲಲ್ಲಿ ಹೂಗಿಡಗಳನ್ನು ಬೆಳೆಸಬಹುದು; ಬಿಡುವ ಹೂಗಳನ್ನು ನಾನೇ ಅನುಭವಿಸಬೇಕೆಂಬ ನಿರೀಕ್ಷೆ ಅಥವಾ ಅಧಿಕಾರವು ನನಗುಂಟು. ನೆರೆಯವರು ಆ ಹೂಗಳನ್ನು ಕಿತ್ತರೆ ನನಗೆ ಕೋಪಬರುವುದು. ಏತಕ್ಕೆ? ನನ್ನ ಹಿತ್ತಿಲಿನಲ್ಲಿ ಬೆಳೆದ ಹೂಗಳಿಗೆ

ನೆರೆಯವರಿಗೆ ಅಧಿಕಾರವಿಲ್ಲ, ನನಗೇ ಇರುವುದಾದುದರಿಂದ. ಒಂದು ವೇಳೆ ನೆರೆಯಾತನು ಹೂತೋಟವನ್ನು ತನ್ನ ಹಿತ್ತಿಲಲ್ಲಿ ಬೆಳೆಸಿದಾಗ ಅಲ್ಲಿ ನನಗೆ ಅಧಿಕಾರ ಲೇಶವೂ ಇರುವುದಿಲ್ಲ; ಆದ್ದರಿಂದ ನೆರೆಯಾತನ ಅಧಿಕಾರವನ್ನು ಗೌರವಿಸುವುದು ನನ್ನ ಕರ್ತವ್ಯ. ನನ್ನ ಸ್ವತ್ತನ್ನು ಇತರರು ಅಪಹರಿಸ ಬಾರದೆಂಬುದು ನನ್ನ ಅಧಿಕಾರವಾದರೆ ಇತರರ ಸ್ವತ್ತನ್ನು ನಾನು ಅಪಹರಿಸದೆ ಇರತಕ್ಕುದು ನನ್ನ ಕರ್ತವ್ಯ. ಸಭೆಯು ನೆರೆದು ಚರ್ಚೆ ಗಳಾಗುವ ಸಂದರ್ಭದಲ್ಲಿ ನಾನು ಸಭಿಕನಾಗಿದ್ದಪಕ್ಷದಲ್ಲಿ ಮಾತನಾಡುವ ಹಕ್ಕು ಅಥವಾ ಅಧಿಕಾರ ನನಗುಂಟು; ನಾನೆದ್ದು ಮಾತನಾಡಿದಾಗ ಇತರರು ನನ್ನ ಭಾಷಣಕ್ಕೆ ಕಿವಿಗೊಡತಕ್ಕದ್ದು ಇತರರ ಕರ್ತವ್ಯ ಅಥವಾ ನನ್ನ ಅಧಿಕಾರ. ಆದರೆ ಇತರರು ಮಾತನಾಡುವಾಗ ನನ್ನ ಕಿವಿಯನ್ನು ಕೊಡುವುದು ನನ್ನ ಕರ್ತವ್ಯ, ಇತರರ ಅಧಿಕಾರ. ನನ್ನ ಮನೆಗೆ ಬೆಂಕಿಯೋ ಕಳ್ಳರೋ ಬಿದ್ದಾಗ ನೆರೆಯವರು ನನಗೆ ಸಹಾಯಮಾಡಬೇಕೆಂದು ನಾನು ನಿರೀಕ್ಷಿಸಿದಲ್ಲಿ ನಾನು ನೆರೆಯವರ ಮನೆಗೆ ಬೆಂಕಿಯೋ ಕಳ್ಳರೋ ಬಿದ್ದ ಕಾಲದಲ್ಲಿ ಸಹಾಯಮಾಡಿಯೇ ತೀರಬೇಕು. ಹಕ್ಕುಬಾಧ್ಯತೆಗಳು ಅಥವಾ ಅಧಿಕಾರ ಕರ್ತವ್ಯಗಳು ಎಡೆಬಿಡದೆ ಇರತಕ್ಕವು. ಒಂದೇ ಅಂಶವು ಕೆಲವೇಳೆ ಕರ್ತವ್ಯವಾಗಿಯೂ ಕೆಲವೇಳೆ ಅಧಿಕಾರವಾಗಿಯೂ ಕಾಣಬಹುದು. ದೇಶದ ರಕ್ಷಣೆಗೆ ಸೊಂಟಕಟ್ಟಿ ಯುದ್ಧಕ್ಕೆ ಹೊರಟು ಪ್ರಾಣವನ್ನು ಅರ್ಪಿಸುವುದು ಕರ್ತವ್ಯವೂ ಹೌದು, ಅಧಿಕಾರವೂ ಹೌದು. ಪ್ರತಿನಿಧಿಗಳ ವರಣ ಕಾಲದಲ್ಲಿ ಛಂದವನ್ನು ಕೊಡುವುದು ಕರ್ತವ್ಯವೋ ಅಧಿಕಾರವೋ? ಎರಡೂ ಹೌದು. ಅದಕ್ಕೇ ಕೆಲವು ದೇಶಗಳಲ್ಲಿ ಛಂದಗಳನ್ನು ಕೊಡದೆ ತಟಸ್ಥರಾಗಿದ್ದ ಪೌರರು ಕರ್ತವ್ಯ ಪರಾಙ್ಮುಖರಾದರೆಂದು ಆಪಾದಿತರಾಗಿ ಶಿಕ್ಷೆಗೂ ಗುರಿಯಾಗು ತ್ತಾರೆ. ಆಸ್ಟ್ರೇಲಿಯದಲ್ಲಿ ಹಲಕೆಲವರು ಭಾರತೀಯರು ನೆಲೆಸಿರುವರು; ಅವರು ದೂರಪ್ರಯಾಣ ಮಾಡಲಾರದೆ ಛಂದವನ್ನು ಕೊಡದೆ ಇದ್ದಾಗ ಅಲ್ಲಿಯ ಸರ್ಕಾರದವರು "ನೀವು ನಿಮ್ಮ ಛಂದಗಳನ್ನು ಕೊಡದೆ ಹೋದ ಪಕ್ಷದಲ್ಲಿ ಶಿಕ್ಷೆಗೆ ಗುರಿಯಾದೀರಿ" ಎಂದು ಎಚ್ಚರಿಕೆಕೊಟ್ಟರು. ಈ ರೀತಿ ಯಲ್ಲಿ ಕರ್ತವ್ಯವೂ ಅಧಿಕಾರವೂ ಒಂದೇ ವಿಷಯಕ್ಕಿರುವ ಎರಡು ಮುಖಗಳು.

ಕರ್ತವ್ಯದಿಂದ ಅಧಿಕಾರ ಹುಟ್ಟುವುದೋ ಅಧಿಕಾರದಿಂದ ಕರ್ತವ್ಯ ಹುಟ್ಟುವುದೋ? ಎರಡೂ ಉಂಟು. ಆದರೆ ಕರ್ತವ್ಯಪಾಲನೆಯೇ ಹೆಚ್ಚು ಶ್ರೇಯಸ್ಕರವಾದುದು. ಅಧಿಕಾರಗಳು ಕರ್ತವ್ಯಗಳಾಗಿ ಪರಿಣಮಿಸು ತ್ತಿದ್ದರೆಯೇ ಉತ್ತಮಸ್ಥಿತಿ. ಭಾರತೀಯರಲ್ಲಿ ಅಧಿಕಾರ ಪ್ರಜ್ಞೆಗಿಂತಲೂ ಕರ್ತವ್ಯ ಪ್ರಜ್ಞೆಯು ಉತ್ತಮವಾಗಿರತಕ್ಕ ಅಂಶವು ಹಿಂದೆಯೇ ಸೂಚಿತ ವಾಯಿತು. ತತ್ವಜ್ಞರಾದ ಆರ್ಯರು ಉತ್ತಮವಾದುದನ್ನೇ ಸಂಪ್ರದಾಯ ವಾಗಿ ನೆಲೆಗೊಳಿಸಿದರು.

ಅಧಿಕಾರ ಪತ್ರಗಳು

ಪಾಶ್ಚಾತ್ಯದೇಶಗಳಲ್ಲಿ ಪೌರಾಧಿಕಾರಗಳ ವಿವರವು ಅಲ್ಲಿಯ ರಾಷ್ಟ್ರ ರಚನೆಯ ಆಧಾರಪತ್ರಗಳಲ್ಲಿ ಸ್ಫುಟವಾಗಿ ಲಿಖಿತ ವಾಗಿ ರಾಷ್ಟ್ರಸ್ವರೂಪದ ಲಕ್ಷಣಗಳೇ ಆಗಿರುತ್ತವೆ. ಆ ದೇಶಗಳಲ್ಲಿ ಬಹು ಕಾಲ ಪೌರರಿಗೆ ಆ ಅಧಿಕಾರ ಗಳು ಸಲ್ಲಲಿಲ್ಲ; ಆದಕಾರಣದಿಂದ ರಾಷ್ಟ್ರಸುಧಾರಣೆಗಳು ನಡೆದಾಗ ಪೌರಮುಖ್ಯರು ಪೌರಾಧಿಕಾರ ವಿವರಗಳನ್ನು ಪತ್ರಸ್ಥವಾಗಿ ಸ್ಥಾಪಿಸಿದರು. ಪತ್ರಸ್ಥವಾಗಿ ಮೂಲವಿಧಿಯಲ್ಲಿ ಸೇರಿದ ತರುವಾಯ ಯಾರಿಗಾಗಲಿ ಪೌರರ ಅಧಿಕಾರಗಳನ್ನು ಅಡ್ಡಿಮಾಡಲು ಆಸ್ಪದವಿರುವುದಿಲ್ಲ. ರಾಷ್ಟ್ರದಲ್ಲಿ ವಿಧಿಯೇ ಸ್ವಾಮಿಯಾದಾಗ ವಿಧಿ ರೂಪವನ್ನು ಪಡೆದ ಪೌರಾಧಿಕಾರ ಗಳನ್ನು ಯಾರಾದರೂ ಅಡ್ಡಿಮಾಡಿದ್ದೇ ಆದರೆ ಅಲ್ಲಿಯ ಪೌರರು ನ್ಯಾಯ ಸ್ಥಾನಗಳಿಗೆ ಹೊರಟು ವಿಧಿಬಲದಿಂದ ತಮ್ಮ ಅಧಿಕಾರಗಳನ್ನು ಪ್ರತಿಷ್ಠಿಸಿ ಕೊಳ್ಳಬಲ್ಲವರಾಗಿರುತ್ತಾರೆ. ಪತ್ರಸ್ಥವಾಗಿ ಮೊದಲು ತೋರಿಕೊಂಡದ್ದು ಫ್ರಾನ್ಸಿನ ಮಹಾಕ್ರಾಂತಿಯ ಸಮಯದಲ್ಲಿ; ಸ್ವಾತಂತ್ರ್ಯ ಪ್ರಕಟನೆ (Declaration of Independence) ಯೆಂಬುದನ್ನು ಸಿದ್ಧಗೊಳಿಸಿದಾಗ "ನಾವು ಈ ತತ್ವಗಳನ್ನು ಸ್ವತಸ್ಸಿದ್ಧವಾದವೆಂದು ಭಾವಿಸಿದ್ದೇವೆ. ಸೃಷ್ಟಿ ಯಲ್ಲಿ ಮಾನವರೆಲ್ಲರೂ ಸಮಾನರಾದವರು. ಸೃಷ್ಟಿಕರ್ತನಿಂದಲೇ ಮಾನವ ರಿಗೆ ಜನ್ಮಸಿದ್ಧವಾದ ಅಧಿಕಾರಗಳು ಕೆಲವು ನಿಷ್ಕೃಷ್ಟವಾಗಿರುತ್ತವೆ; ಅವು ಗಳಲ್ಲಿ ಬದುಕು, ಸ್ವಾತಂತ್ರ್ಯ ಮತ್ತು ನೆಮ್ಮದಿಗಳು ಸೇರಿರತಕ್ಕವು. ಇವುಗಳ ಸಾಧನೆಗಾಗಿ ಶಾಸನಮಾಡುವ ಸರ್ಕಾರಗಳು ಶಾಸನ ಕ್ಕೊಳಗಾದ ಜನರ ಸಮ್ಮತಿಯಿಂದಲೇ ತಮ್ಮ ಅಧಿಕಾರವನ್ನು ಪಡೆದು

ಸ್ಥಾಪಿತವಾಗಿರುತ್ತವೆ. ಯಾವ ಸಂದರ್ಭದಲ್ಲಾದರೂ ಸರ್ಕಾರದ ಸ್ವರೂಪವು ಈ ಪರಮ ಲಕ್ಷ್ಯಕ್ಕೆ ಬಾಧಕವಾಗಿ ಪರಿಣಮಿಸಿದರೆ ಆ ಸರ್ಕಾರವನ್ನು ಬದಲಾಯಿಸಿ ಅಥವಾ ನಾಶಗೊಳಿಸಿ ಸೂಕ್ತವಾದ ಸರ್ಕಾರವನ್ನು ರಚಿಸಿಕೊಳ್ಳುವ ಅಧಿಕಾರವು ಜನರಿಗಿರುತ್ತದೆ.'' ಎಂಬ ವಾಕ್ಯಗಳನ್ನು ಸಾರಿದರು. ಸಾಧಾರಣವಾಗಿ ಆಧುನಿಕ ರಾಷ್ಟ್ರಗಳಲ್ಲಿ ಈ ವಾಕ್ಯಗಳಲ್ಲಿ ಸೂಚಿತವಾಗಿರುವ ತತ್ವಗಳೇ ಅಡಿಗಲ್ಲುಗಳಾಗಿರುತ್ತವೆ. ಅವುಗಳನ್ನನುಸರಿಸಿ ಪೌರಾಧಿಕಾರ ವಿವರಗಳನ್ನು ಅಮೆರಿಕ, ಜರ್ಮನಿ ಮುಂತಾದ ರಾಷ್ಟ್ರಗಳಲ್ಲಿ ರಾಷ್ಟ್ರಪತ್ರಗಳಲ್ಲಿಯೇ ವಿಸ್ತಾರವಾಗಿ ಕಾಣಬಹುದಾಗಿದೆ.

**ರಾಷ್ಟ್ರದ ಲಕ್ಷ್ಯ**

ರಾಷ್ಟ್ರವೆಂಬುದು ಇರುವುದು ಏತಕ್ಕೆ? ಜನರು ತೆರಿಗೆಗಳನ್ನು ತೆರುತ್ತ, ಸರ್ಕಾರಕ್ಕೆ ಬಲವನ್ನು ಕೊಡುತ್ತ, ಸರ್ಕಾರದ ನಿಯಮಗಳಿಗೆ ಅನುಸಾರವಾಗಿ ನಡೆದುಕೊಳ್ಳುತ್ತ ಇರುವುದು ಏತಕ್ಕೆ? ಇದಕ್ಕೆ ಸಮಾಧಾನವನ್ನು ಹಿಂದೆಯೇ ಕಂಡೆವು. ರಾಷ್ಟ್ರದ ಲಕ್ಷ್ಯವಾವುದೆಂದರೆ ಪ್ರತಿ ಪೌರನ ಸರ್ವಸಿದ್ಧಿ, ಪೂರ್ಣವಿಕಾಸ. ಸರ್ವಸಿದ್ಧಿಯೆಂದರೇನು? ಅಂದರೆ ಪ್ರತಿ ಪೌರನೂ ತನ್ನ ದೈಹಿಕ, ಮಾನಸಿಕ, ನೈತಿಕ ಮತ್ತು ಆಧ್ಯಾತ್ಮಿಕ ಚೈತನ್ಯಗಳನ್ನು ಎಷ್ಟು ಸಾಧ್ಯವೋ ಅಷ್ಟು ವೃದ್ಧಿಪಡಿಸಿಕೊಳ್ಳುವುದರಲ್ಲಿ ರಾಷ್ಟ್ರವು ಅನುಕೂಲವನ್ನೊದಗಿಸಬೇಕು. ಆರೋಗ್ಯವಂತನಾಗುವುದರಲ್ಲಿ, ಪ್ರಾಜ್ಞನಾಗುವುದರಲ್ಲಿ, ನೆಮ್ಮದಿ ಕೂಡಿ ಬಾಳುವುದರಲ್ಲಿ ಪೌರನಿಗೆ ರಾಷ್ಟ್ರವು ಸಹಾಯವಾಗಿರತಕ್ಕದ್ದು. ಪೌರನಿಗೆ ದೈಹಿಕ ಸ್ವಾತಂತ್ರ್ಯ ವಾಕ್ಸ್ವಾತಂತ್ರ್ಯ ಮತ್ತು ಸಂಘ ಸ್ವಾತಂತ್ರ್ಯಗಳು ಇರತಕ್ಕದ್ದು. ಪೌರನಾದವನು ರಾಷ್ಟ್ರದ ವ್ಯವಸ್ಥೆಯಲ್ಲಿ ತನ್ನ ಶಿಕ್ಷಣಸಿದ್ಧಿಯನ್ನು ನಿರೀಕ್ಷಿಸಬಲ್ಲವನಾಗಿರಬೇಕು, ಮತ್ತು ವ್ಯವಸಾಯ ಉದ್ಯೋಗ ವ್ಯಾಪಾರಗಳಲ್ಲಿ ನೆಮ್ಮದಿಯನ್ನೂ ಅಭಿವೃದ್ಧಿಯನ್ನೂ ರಾಷ್ಟ್ರದಿಂದಲೇ ಪಡೆಯತಕ್ಕವನಾಗಿರಬೇಕು. ತೆರಿಗೆ ಸುಂಕಗಳು ಹಗುರವಾಗಿರಬೇಕು; ರಾಷ್ಟ್ರದ ಎಲ್ಲೆಡೆಗಳಲ್ಲಿಯೂ ಶಾಂತಿ ಕ್ಷೇಮಗಳು ರೂಢಿಯಾಗಿ ನೆಲೆಸಿರಬೇಕು; ಜನತೆಯ ಎಲ್ಲ ವರ್ಗಗಳವರೂ ನೆಮ್ಮದಿಯಿಂದಲೂ

ಗೌರವದಿಂದಲೂ ಬದುಕುತ್ತಲಿರಬೇಕು. ಜ್ಞಾನ ವಿಜ್ಞಾನ ರಾಶಿಗಳು ಪ್ರವರ್ಧಮಾನಗಳಾಗಿರಬೇಕು; ಕಲಾಸಕ್ತಿ ಪರಿಣತಿಗಳು ಹೆಚ್ಚುತ್ತಲಿರಬೇಕು. ಎಲ್ಲ ಬಗೆಗಳಲ್ಲಿಯೂ ರಾಷ್ಟ್ರವು ಅಭಿವೃದ್ಧಿಪಡೆಯುತ್ತಿದ್ದು ತಮ್ಮ ರಾಷ್ಟ್ರವನ್ನು ಕಂಡು ಅಲ್ಲಿಯ ಪೌರರು ಹಿಗ್ಗುವಂತೆ, ಮಾತೃಭೂಮಿಯನ್ನು ನೆನೆಸಿದಾಗ ಹೆಮ್ಮೆಗೊಳ್ಳುವಂತೆ ಇರಬೇಕು.

ಜರ್ಮನರ ಕೋಶ

ಇಂತಹ ಉದ್ದೇಶಗಳನ್ನು ಇಟ್ಟುಕೊಂಡು ಜರ್ಮನ್ ಜನರು ತಮ್ಮ ರಾಷ್ಟ್ರಸುಧಾರಣೆಯನ್ನು ನಡೆಸಿ ಪೌರಾಧಿಕಾರ ವಿವರವನ್ನು ವಿಸ್ತಾರವಾಗಿ ಉಲ್ಲೇಖಿಸಿದರು. ಅವುಗಳಲ್ಲಿ ಮುಖ್ಯವಾದುವನ್ನು ನಾವು ಕಾಣಬಹುದು:

(1) ದೇಹದ ಸ್ವಾತಂತ್ರ್ಯ; ಪೌರನ ದೇಹವು ಪವಿತ್ರವೆಂದೆನಿಸತಕ್ಕುದು. ಬಂಧನೆಗಾಗಲಿ ಹಿಂಸೆಗಾಗಲಿ ಒಳಗಾಗತಕ್ಕುದಲ್ಲ.

(2) ಸಂಚಾರ ಸ್ವಾತಂತ್ರ್ಯ; ಇಷ್ಟಬಂದೆಡೆಯಲ್ಲಿ ನೆಲೆಸುವ ಸ್ವಾತಂತ್ರ್ಯ. ಪೌರನಾದವನು ರಾಷ್ಟ್ರದಲ್ಲಿ ಎಲ್ಲಿಗಾದರೂ ಯಾವಾಗ ಬೇಕಾದರೂ ನಿರಾತಂಕವಾಗಿ ಸಂಚರಿಸಬಲ್ಲವನು. ರಾಷ್ಟ್ರದ ಯಾವ ಎಡೆಯಲ್ಲಿಯಾದರೂ ವಾಸಮಾಡುವ ಅಧಿಕಾರವುಳ್ಳವನು.

(3) ಹೊರಗಿನ ಸಂಚಾರ, ನೆಲೆಗಳಲ್ಲಿ ಪೌರನಿಗೆ ಇರತಕ್ಕ ರಕ್ಷಣೆ. ಸ್ವರಾಷ್ಟ್ರವನ್ನು ಬಿಟ್ಟು ಹೊರಗೆ ಹೊರಟಾಗ ಪೌರನಿಗೆ ತನ್ನ ರಾಷ್ಟ್ರದ ಸರ್ಕಾರದವರು ಬೆಂಬಲವನ್ನು ಕೊಡತಕ್ಕುದು. ಇತರ ರಾಷ್ಟ್ರಗಳಲ್ಲಿ ತಮ್ಮ ದೇಶೀಯರಿಗೆ ಯೋಗ್ಯವಾದ ಗೌರವವು ಸಲ್ಲುವಂತೆಯೂ ಅಪಾಯ ಸಂಭವಿಸದಂತೆಯೂ ನೆರವೇರಿಸತಕ್ಕುದು.

(4) ಪೌರರ ಮನೆಗಳು ಪವಿತ್ರವಾಗಿರತಕ್ಕುದು.

(5) ಪೌರರಿಗೆ ಸ್ವತ್ತನ್ನು ಪಡೆದು ಅನುಭವಿಸುವ ಅಧಿಕಾರವಿರತಕ್ಕುದು.

(6) ಮತಧರ್ಮದ ಆಚರಣೆಗಳಲ್ಲಿ ಪೌರನಿಗೆ ನಿರ್ಬಂಧವಾಗಲಿ ಬಲವಂತದ ಆತಂಕವಾಗಲಿ ಇರಕೂಡದು. ತನ್ನ ಅಂತಃ ಕರಣಕ್ಕೆ ತೋರಿದಂತೆ ದೇವರನ್ನು ಅರ್ಚಿಸುವ ಅಧಿಕಾರ ವಿರಬೇಕು.

(7) ಕಾಗದವಾಗಲಿ ತಂತಿಯಾಗಲಿ ಟೆಲಿಫೋನಾಗಲಿ ಪೌರರ ಸ್ವಂತ ಕಾಗದ ಪತ್ರಗಳು ಪವಿತ್ರವಾಗಿರತಕ್ಕದು.

(8) ಬಾಯಿಮಾತಿನಿಂದಲಾಗಲಿ, ಬರೆವಣಿಗೆಯಿಂದಲಾಗಲಿ ಪೌರರು ತಮ್ಮ ಮನಸ್ಸಿನ ಅಭಿಪ್ರಾಯಗಳನ್ನು ಪ್ರಕಾಶಗೊಳಿಸುವ ಅಧಿಕಾರವನ್ನು ಪಡೆದಿರತಕ್ಕದು.

(9) ರಾಷ್ಟ್ರದ ಆಡಳಿತದಲ್ಲಿ ನೌಕರನೋ ಹುದ್ದೇದಾರನೋ ಆಗಲು ಪೌರನಿಗೆ ಅಧಿಕಾರವುಂಟು. ಎಂತಹ ಅಧಿಕಾರ ಪದವಿ ಯನ್ನಾದರೂ ಪೌರರು ಪಡೆಯಬಹುದಾಗಿರಬೇಕು.

(10) ವಿಧಿಯೆದುರಿನಲ್ಲಿ ಎಲ್ಲರೂ ಸಮಾನರಾಗಿರಬೇಕು.

(11) ಸಾರ್ವಜನಿಕ ಸಭೆಗಳನ್ನು ಸೇರಿಸುವ ಅಧಿಕಾರವು ಎಲ್ಲ ಪೌರರಿಗೂ ಇರತಕ್ಕದು.

(12) ಸಂಘಗಳನ್ನು ಸ್ಥಾಪಿಸುವ ಅಧಿಕಾರವು ಪೌರರೆಲ್ಲರಿಗೂ ಇರತಕ್ಕದು.

(13) ಕರಾರುಗಳನ್ನು ರಚಿಸಿಕೊಳ್ಳುವ ಅಧಿಕಾರವು ಪೌರರಿಗಿರ ತಕ್ಕದು.

(14) ವ್ಯಾಪಾರೋದ್ಯೋಗಗಳ ಸ್ವಾತಂತ್ರ್ಯವು ಪೌರರೆಲ್ಲರಿಗೂ ಇರತಕ್ಕದು.

(15) ಪೌರರೆಲ್ಲರಿಗೂ ವಿವಾಹ ಸ್ವಾತಂತ್ರ್ಯವಿರತಕ್ಕದು.

(16) ಪೌರರೆಲ್ಲರಿಗೂ ಧಂದಾಧಿಕಾರವಿರತಕ್ಕದು.

(17) ಪೌರರೆಲ್ಲರಿಗೂ 18ನೆ ವಯಸ್ಸಿನವರೆಗೆ ಶಿಕ್ಷಣವನ್ನು ಪಡೆಯುವ ಅಧಿಕಾರವಿರತಕ್ಕದು.

(18) ಪ್ರತಿ ಪೌರನಿಗೂ ಜೀವನದಲ್ಲಿ ತಕ್ಕಷ್ಟು ಸಮೃದ್ಧಿಯನ್ನೊದಗಿಸುವ ಉದ್ಯೋಗದ ಅಧಿಕಾರವಿರತಕ್ಕುದು. ಪೌರನ ಚೈತನ್ಯ ವಿಶೇಷದಿಂದ ರಾಷ್ಟ್ರಕ್ಕೆ ಎಷ್ಟು ಮೇಲಾಗಬಹುದೋ ಅಷ್ಟು ಸಾಧಿತವಾಗುವಂತೆ ಆ ಉದ್ಯೋಗವು ಇರಬೇಕು.

ಕಡೆಯ ಅಂಶದ ಭಾಗವಾಗಿಯೇ ನಿರುದ್ಯೋಗಕಾಲದ ವಿಮೆ, ವೃದ್ಧಾಪ್ಯದ ವೇತನ ಮುಂತಾದವು ತೋರಿಕೊಂಡಿವೆ.

**ಅನ್ಯೋನ್ಯತೆ**

ಈ ಹದಿನೆಂಟು ಅಧಿಕಾರಗಳಲ್ಲಿ ಕೆಲವು ನಮಗೆ ಚೋದ್ಯವಾಗಿ ಕಾಣಬಹುದು. ವಿವಾಹ ಸ್ವಾತಂತ್ರ್ಯ, ಇಷ್ಟದೇವತಾರ್ಚನೆಯ ಅಧಿಕಾರ, ಮುಂತಾದವು ನಮಗೆ ವಿಚಿತ್ರವೆಂದೇ ತೋರುತ್ತವೆ. ಸಾವಿರಾರು ವರ್ಷಕಾಲದಿಂದ ಶಾಂತಿ ಸಹನಗಳನ್ನು ರೂಢಮೂಲವಾಗಿ ಪಡೆದಿರುವ ಭಾರತೀಯರಿಗೆ ಇತರ ರಾಷ್ಟ್ರಗಳಲ್ಲಿ ಮತಸಹಿಷ್ಣುತೆಯಿಲ್ಲದೆ ನಡೆದ ಘೋರ ಕೃತ್ಯಗಳ ಕಲ್ಪನೆಯೇ ಆಗುವುದಿಲ್ಲ. ಹಾಗೆಯೇ ಉತ್ತಮವಾದ ವಿವಾಹವಿಧಿಯನ್ನು ಪಡೆದ ಭಾರತೀಯರು ವಿವಾಹ ವಿಚಾರದಲ್ಲಿ ಇತರರು ಆತಂಕವನ್ನು ಕಾಣುತ್ತಾರೆಂಬುದನ್ನೇ ಪೂರ್ಣವಾಗಿ ಗ್ರಹಿಸದೆ ಇರಬಹುದು. ಆದರೆ ಒಟ್ಟಿನಲ್ಲಿ ಈ ಪೌರಾಧಿಕಾರ ಕೋಶವು ಸರ್ಕಾರವೂ ಪೌರರೂ ಅನ್ಯೋನ್ಯ ಪ್ರಯತ್ನದಿಂದ ಸಾಧಿಸತಕ್ಕ ಅಂಶಗಳನ್ನು ಒದಗಿಸುತ್ತದೆ. ಪ್ರಯತ್ನವು ಇಬ್ಬರಿಂದಲೂ ನಡೆದುದೇ ಆದರೆ ಸರ್ವಸಿದ್ಧಿಯ ಸಾಧನೆಯು ಸುಲಭವಾಗುವುದು. ಅನ್ಯೋನ್ಯತೆಯಿಲ್ಲದೆ ವಿರೋಧವೇ ಪರಸ್ಪರವಾಗಿದ್ದಲ್ಲಿ ಇಂತಹ ಸಿದ್ಧಿ ಯಾವುದೂ ಲಭ್ಯವೇ ಅಲ್ಲ; ಅಂತಹ ವಿರೋಧ ಸ್ಥಿತಿಯಲ್ಲಿ ಶಾಸ್ತ್ರೀಯವಾದ ರಾಷ್ಟ್ರವೇ ಇರುವುದಿಲ್ಲ. ಸರ್ಕಾರದ ಲಕ್ಷ್ಯವೇ ಬೇರೆ, ಪೌರರ ಲಕ್ಷ್ಯವೇ ಬೇರೆಯಾಗಿದ್ದ ಪಕ್ಷದಲ್ಲಿ ವಿರೋಧವೇ ಮೂಡುವುದು. ಒಂದು ದೇಶದವರು ಮತ್ತೊಂದು ದೇಶದವರನ್ನು ಆಕ್ರಮಿಸಿ ತಮ್ಮ ಆಳ್ವಿಕೆಗೆ ಅನ್ಯದೇಶೀಯರನ್ನು ಅಧೀನರನ್ನಾಗಿ ಮಾಡಿದ ಸಂದರ್ಭದಲ್ಲಿ ಇಂತಹ ಪರಸ್ಪರ ವಿರೋಧವು ಸಹಜವಾಗಿಯೇ ತೋರಿಕೊಳ್ಳುವುದು.

ಅಂತಹ ಸ್ಥಿತಿಯಲ್ಲಿ ರಾಷ್ಟ್ರವಿದೆಯೆಂದು ಶಾಸ್ತ್ರೀಯವಾಗಿ ಹೇಳಲಾಗುವುದಿಲ್ಲ. ಜನಸ್ವಾಮ್ಯತತ್ವದ ಆಚರಣೆಯಲ್ಲಿ ಪ್ರತಿ ದೇಶಕ್ಕೂ ಆ ದೇಶೀಯರೇ ಸ್ವಾಮಿಗಳು, ಅಥವಾ ಒಡೆಯರು.

**ಕರ್ತವ್ಯಗಳು**

ದೇಶಕ್ಕೆ ಅಥವಾ ರಾಷ್ಟ್ರಕ್ಕೆ ಒಡೆಯರಾದ ಪೌರರಿಗೆ ಕರ್ತವ್ಯಗಳೂ ಅಧಿಕಾರಕ್ಕೆ ತಕ್ಕಂತೆಯೇ ಇರುತ್ತವೆ. ಪ್ರತಿಯೊಂದು ಅಧಿಕಾರವೂ ಒಂದೊಂದು ಕರ್ತವ್ಯವನ್ನೊಳಗೊಂಡೇ ಇರುತ್ತದೆ.' ಅವುಗಳಲ್ಲದೆ ಜರ್ಮನಿಯಲ್ಲಿ ಪೌರರು ಪಾಲಿಸತಕ್ಕ ಇತರ ಕರ್ತವ್ಯಗಳುಂಟು. ತೆರಿಗೆಗಳನ್ನು ಕೊಟ್ಟು ವಿಧಿಗಳಿಗೂ ನಿಬಂಧನೆಗಳಿಗೂ ಅನುಸಾರವಾಗಿ ನಡೆಯುವುದು ಸ್ವತಸ್ಸಿದ್ಧವಾಗಿಯೇ ಇರತಕ್ಕ ಕರ್ತವ್ಯ. ಇದಲ್ಲದೆ ಪ್ರತಿ ಪೌರನೂ ರಾಷ್ಟ್ರಕ್ಕಾಗಿ ಚಮೂಶಿಕ್ಷಣವನ್ನು ಪಡೆಯುತಕ್ಕುದು ಜರ್ಮನಿಯ ವಿಧಿ. ಇನ್ನೂ ಜರ್ಮನಿಯಲ್ಲಿ ಪೌರನಾದವನು ಗೌರವ ಕಾರ್ಯವು ಒದಗಿದಾಗ ಯೋಗ್ಯವಾದ ಕಾರಣವಿಲ್ಲದೆ ತಪ್ಪಿಸಿಕೊಳ್ಳಲಾರನು. ದೃಷ್ಟಾಂತಕ್ಕೆ ನಗರ ಸಭೆಗೆ ಸದಸ್ಯನಾಗಿರಬೇಕೆಂದು ನಗರಸ್ಥರು ಇಷ್ಟಪಟ್ಟು ಕರೆದಾಗ ತನಗಿಷ್ಟವಿಲ್ಲವೆಂದು ತಪ್ಪಿಸಿಕೊಳ್ಳಲಾಗುವುದಿಲ್ಲ.

ಕರ್ತವ್ಯಾಧಿಕಾರಗಳು ಜರ್ಮನಿಯಲ್ಲಿದ್ದಂತೆಯೇ ಇತರ ರಾಷ್ಟ್ರಗಳಲ್ಲಿಯೂ ಹೆಚ್ಚುಕಡಿಮೆಯಾಗಿಯೇ ಇದ್ದು ಪತ್ರಸ್ಥವಾಗಿ ರಾಷ್ಟ್ರದ ಆಧಾರಪತ್ರಗಳಲ್ಲಿ ಸೇರಿರುತ್ತವೆ. ಅಧಿಕಾರವೆನ್ನುವುದು ಹೇಗೆ? ಅಧಿಕಾರ ಲಕ್ಷಣಗಳೇನು? ಅಧಿಕಾರಕ್ಕೆ ಮಿತಿಯೇನು? ಅಧಿಕಾರ ನಿರ್ವಾಹದ ಲಕ್ಷ್ಯವೇನು? ಈ ಪ್ರಶ್ನೆಗಳಿಗೆ ತಕ್ಕ ಸಮಾಧಾನವೇನೆಂದು ವಿಚಾರಿಸಿ ತರುವಾಯ ಅಧಿಕಾರಗಳಲ್ಲಿರುವ ಭೇದಗಳನ್ನು ಕಾಣಬೇಕು.

**ಪೌರಾಧಿಕಾರ ಲಕ್ಷಣ**

ಪೌರಾಧಿಕಾರಕ್ಕೆ ಮೊದಲಿನ ಎಲ್ಲೆ ಅಥವಾ ಮಿತಿಯಾಗಿರತಕ್ಕುದು ರಾಷ್ಟ್ರದ ಉದ್ದೇಶ. ರಾಷ್ಟ್ರದ ಉದ್ದೇಶಕ್ಕೆ ಭಂಗವನ್ನುಂಟುಮಾಡತಕ್ಕದ್ದಾದರೆ ಪೌರಾಧಿಕಾರವೆನಿಸಲಾರದು. ಪೌರಾಧಿಕಾರವು ರಾಷ್ಟ್ರೋದ್ದೇಶಕ್ಕೆ ಹಿತಕಾರಿಯಾಗಿಯೂ ಸಾಧಕವಾಗಿಯೂ ಇರಬೇಕೇ ವಿನಾ

ಬಾಧಕವಾಗಿರತಕ್ಕುದಲ್ಲ. ಎರಡನೆಯದಾಗಿ ಪೌರಾಧಿಕಾರಗಳೆಂಬವು ಎಲ್ಲ ಪೌರರಿಗೂ ಇರತಕ್ಕದ್ದೇ ವಿನಾ ಕೆಲವರಿಗೆ ಮಾತ್ರ ಇರತಕ್ಕುವಲ್ಲ. ಪಟ್ಟಣಿಗರಿಗೆ ಇದ್ದಷ್ಟೇ ಗ್ರಾಮಸ್ಥರಿಗೂ ಇರತಕ್ಕದ್ದು; ಗಂಡಸರಿಗಿದ್ದ ಹಾಗೆಯೇ ಸ್ತ್ರೀಯರಿಗೂ ಇರತಕ್ಕದ್ದು. ಒಂದು ಸಮಯದಲ್ಲಿ ಕಾರಣಾಂತರದಿಂದ ಕೆಲವರಿಗೆ ಮಾತ್ರ ಅಧಿಕಾರಗಳಿದ್ದಾಗ್ಯೂ ಕಾಲಕ್ರಮದಲ್ಲಿ ಎಲ್ಲರಿಗೂ ಸೇರತಕ್ಕದ್ದಾಗಿಯೇ ಆ ಅಧಿಕಾರಗಳಿರತಕ್ಕದ್ದು; ಇಲ್ಲದಿದ್ದರೆ ಅವು ಪೌರಾಧಿಕಾರಗಳೆನಿಸತಕ್ಕುವೇ ಅಲ್ಲ. ಪೌರಸಮೂಹದಲ್ಲಿ ಯಾವುದಾದರೊಂದು ಭಾಗಕ್ಕೆ ಮಾತ್ರ ಅಧಿಕಾರವನ್ನೊದಗಿಸುವುದು ನ್ಯಾಯಸಮ್ಮತವೇ ಅಲ್ಲ. ನ್ಯಾಯವಿರೋಧ ಮಾತ್ರವಲ್ಲದೆ ಹಾಗೆ ನೆರವೇರಿಸುವುದರಲ್ಲಿ ಹಾನಿಯೇ ಸಂಭವಿಸಬಹುದು. ರೋಮಕರು ಬ್ರಿಟನ್ನನ್ನು ಜಯಿಸಿದ ತರುವಾಯ ಅಲ್ಲಿಯ ದೇಶೀಯರನ್ನು ನಿರಾಯುಧರನ್ನಾಗಿ ಮಾಡಿ ಅವರಿಗೆ ಸೈನ್ಯ ಪ್ರವೇಶದ ಅಧಿಕಾರವನ್ನೇ ಕೊಡದಾದರು; ಯೆಹೂದೀ ರಾಷ್ಟ್ರವನ್ನು ಗೆದ್ದ ಕಾಲದಲ್ಲಿ ಆಂಗ್ಲೇಜನರು ಯೆಹೂದ್ಯರಿಗೂ ಈಸಾಯಿಗಳಿಗೂ ಸೈನ್ಯ ಪ್ರವೇಶದ ಅಧಿಕಾರವಿಲ್ಲದಂತೆ ಮಾಡಿ ಅದೇ ನೆಪದಿಂದ ಅವರಿಂದ ಸೆಸಿಯಾ ತೆರಿಗೆಯನ್ನು ಎತ್ತಿದರು. ಎರಡು ಸಂದರ್ಭಗಳಲ್ಲಿಯೂ ಅನ್ಯಾಯವೂ ಅನರ್ಥವೂ ಸಂಭವಿಸಿದವು. ರೋಮಕರ ಚರಿತ್ರೆಯಲ್ಲಿ ಗುಲಾಮರ ಸ್ಥಿತಿಗತಿಗಳನ್ನೂ ಫ್ರಾನ್ಸ್‌ದೇಶದಲ್ಲಿ ಅಧಿಕಾರಮತ್ತರಾಗಿದ್ದ ಶ್ರೀಮಂತ ಮತ್ತು ಪುರೋಹಿತವರ್ಗದವರ ಸ್ಥಿತಿಗತಿಗಳನ್ನೂ ಪ್ರಬಲವಾದ ದೃಷ್ಟಾಂತಗಳಾಗಿ ಭಾವಿಸಬಹುದು. ಅಧಿಕಾರಗಳಿಗೆ ಮತ್ತೂ ಒಂದು ಲಕ್ಷಣವಿರತಕ್ಕುದು ಅವಶ್ಯ. ಏನೆಂದರೆ ಅವಶ್ಯತೋರಿದಾಗ ಪೌರಾಧಿಕಾರವನ್ನು ಪೌರನು ನ್ಯಾಯಸ್ಥಾನದಲ್ಲಿ ಸ್ಥಾಪಿಸಿಕೊಳ್ಳುವಂತೆ ಇರಬೇಕು; ಅದಕ್ಕೆ ಅಧಿಕಾರ ಭಾಗಗಳು ಸ್ಪಷ್ಟವಾಗಿ ಕ್ರೋಡೀಕೃತವಾಗಿ ರಾಷ್ಟ್ರದ ಮೂಲಪತ್ರಗಳಲ್ಲಿ ಉಲ್ಲಿಖಿತವಾಗಿರಬೇಕು. ಪೌರರ ಅಧಿಕಾರ ವಿಷಯದಲ್ಲಿ ಸಂಶಯಕ್ಕೆ ಅವಕಾಶವಿರಬಾರದು. ಅವುಗಳನ್ನು ನಿಷೇಧಿಸುವ ಅಥವಾ ವಿರೋಧಿಸುವ ಅಧಿಕಾರವು ಯಾರಿಗೂ ಇರತಕ್ಕುದಲ್ಲ. ಯಾರೂ ಪೌರಾಧಿಕಾರಗಳನ್ನು ಅಸಡ್ಡೆಮಾಡಲಾಗದಂತೆ ಇರತಕ್ಕುದು. ಆದ್ದರಿಂದ ಅಧಿಕಾರ ವಿವರವು ಪತ್ರಸ್ಥವಾಗಿರತಕ್ಕುದು.

ಈ ಲಕ್ಷಣತ್ರಯಗಳನ್ನು ಪಡೆದಿದ್ದ ಪಕ್ಷದಲ್ಲಿಯೇ ಪೌರಾಧಿಕಾರವೆನಿಸುವ ಅರ್ಹತೆಯುಂ ತೋರುತ್ತದೆ. ಅಧಿಕಾರ ಮೂಲವನ್ನೋ ಅಧಿಕಾರ ಭೇದವನ್ನೋ ಕುರಿತು ವಿಚಾರಮಾಡುವಾಗ ಸಾಧಾರಣವಾಗಿ ಪೌರಾಧಿಕಾರಗಳನ್ನು ಜನ್ಮಸಿದ್ಧ ಅಥವಾ ಸಹಜವಾದವುಗಳು ಎನ್ನುವುದುಂಟು. ಪೌರಾಧಿಕಾರ ಭೇದಗಳಲ್ಲಿ ನಾವು **ಮೂಲವಾದ ಅಧಿಕಾರಗಳು, ನ್ಯಾಯವಾದ ಅಧಿಕಾರಗಳು** ಮತ್ತು **ರಾಜಕೀಯ** (ರಾಷ್ಟ್ರಸಂಬಂಧ) **ಅಧಿಕಾರಗಳು** ಎಂದು ಮೂರಾಗಿ ವಿಂಗಡಿಸಿಕೊಳ್ಳಬಹುದು. ಹುಟ್ಟಿದವನಿಗೆ ಉಸಿರಾಡುವ ಅಧಿಕಾರವಿಲ್ಲವೇ, ಅಥವಾ ಹಸಿವಾದರೆ ತಿನ್ನುವ ಅಧಿಕಾರವಿಲ್ಲವೇ ಎಂದು ಚರ್ಚೆಮಾಡುವುದು ಕುಹಕವಾದುದು. ಅಂತಹವು ಇಲ್ಲಿ ವಿಚಾರಣೀಯವೇ ಅಲ್ಲ. ವಿಧಿಯ ಭಾಗವಾಗಬಹುದಾದ ಅಧಿಕಾರ ಭಾಗವನ್ನೇ ವಿಚಾರಮಾಡುವಾಗ ಮೂರು ಭೇದಗಳು ಮಾತ್ರ ಉಂಟು :

ಅಧಿಕಾರ ಭೇದಗಳು

1. **ಮೂಲಾಧಿಕಾರಗಳು** (Fundamental Rights).—ಇತರ ಅಧಿಕಾರಗಳ ಮತ್ತು ಕರ್ತವ್ಯಗಳ ನಿರ್ವಾಹಕ್ಕೆ ಇವು ಮೂಲವಾದುದರಿಂದ ಇವುಗಳನ್ನು ಮೂಲಾಧಿಕಾರಗಳೆಂದು ಕರೆಯಬಹುದು. ಅವುಗಳಲ್ಲಿ ಮುಖ್ಯವಾದವು: (*a*) ಪ್ರತಿ ಪೌರನೂ ಆರೋಗ್ಯವಂತನಾಗಿರಲು ತಕ್ಕ ದೈಹಿಕ ಶಿಕ್ಷಣದ ಮತ್ತು ಅವಶ್ಯ ಚಿಕಿತ್ಸೆಯ ಅನುಕೂಲವನ್ನು ಪಡೆಯತಕ್ಕದ್ದು, (*b*) ಪ್ರತಿ ಪೌರನೂ ಯೋಗ್ಯನಾಗಿರಲು ತಕ್ಕ ಮಾನಸಿಕ ಮತ್ತು ಬೌದ್ಧಿಕ ಶಿಕ್ಷಣವನ್ನು ಪಡೆಯತಕ್ಕದ್ದು, (*c*) ಪ್ರತಿ ಪೌರನೂ ಜೀವನವನ್ನು ನಡೆಸಲು ಸಾಕಾದಷ್ಟು ಅನುಕೂಲವನ್ನು ಪಡೆಯತಕ್ಕದ್ದು. ಬದುಕನ್ನು ಕಳೆಯಲು ಆರ್ಥಿಕರೀತಿಯಲ್ಲಿ ಕನಿಷ್ಠವೆಂದು ನಿರ್ಣಯಿಸಬಹುದಾದಷ್ಟು ಪ್ರತಿಯೊಬ್ಬರಿಗೂ ಇರತಕ್ಕದ್ದು.

ಈ ಮೂರನ್ನೂ ಒದಗಿಸತಕ್ಕವು ಬಲವಂತದ ಶಿಕ್ಷಣ ಮತ್ತು ಉದ್ಯೋಗ ಪ್ರಾಪ್ತಿಗಳೆಂಬವು.

2. **ನ್ಯಾಯಾಧಿಕಾರಗಳು** (Civil Rights). ಇವುಗಳನ್ನೂ ಅನೇಕವಾಗಿ ವಿಂಗಡಿಸಬಹುದು. ಮುಖ್ಯವಾದವು: (*a*) ಉಪಜೀವನಪ್ರಾಪ್ತಿ,

(*b*) ಸಂಚಾರದ ಅಧಿಕಾರ, (*c*) ಸ್ವತ್ತಿನ ಅಧಿಕಾರ, (*d*) ಕ್ಷೇಮಪ್ರಾಪ್ತಿ, (*e*) ನ್ಯಾಯಪ್ರಾಪ್ತಿ, (*f*) ಮತಸ್ವಾತಂತ್ರ್ಯ, (*g*) ವಾಕ್ಸ್ವಾತಂತ್ರ್ಯ, (*h*) ಸಂಘ ಸ್ವಾತಂತ್ರ್ಯ, (*i*) ವಿರೋಧ ಸ್ವಾತಂತ್ರ್ಯ.

೩. **ರಾಷ್ಟ್ರಸಂಬಂಧವಾದವು ಅಥವಾ ರಾಷ್ಟ್ರಾಧಿಕಾರಗಳು** (Political Rights).—ಇವುಗಳಲ್ಲಿ ಮುಖ್ಯವಾದವು: (*a*) ಛಂದಾಧಿಕಾರ, (*b*) ವರಣಾರ್ಥಿಯಾಗಿ ನಿಲ್ಲುವ ಅಧಿಕಾರ, (*c*) ಸರ್ಕಾರದ ಉದ್ಯೋಗವನ್ನು ಪಡೆಯುವ ಅಧಿಕಾರ.

**ಪ್ರಮಾಣಪತ್ರಗಳ ಅಭಾವ**

ಭರತವರ್ಷದಲ್ಲಿ ಬ್ರಿಟಿಷ್ ಪ್ರದೇಶಗಳಲ್ಲಾದರೂ ದೇಶೀಯ ಸಂಸ್ಥಾನಗಳಲ್ಲಾದರೂ ವಿಧಿಗಳು ಒಂದೇ ಬಗೆಯಾಗಿರತಕ್ಕವು. ವೈಸ್ರಾಯಿ ಸರ್ಕಾರದಲ್ಲಿ ನಿಶ್ಚಿತವಾದ ವಿಧಿಗಳು ಸಮಸ್ತ ದೇಶಕ್ಕೂ ಅನ್ವಯಿಸಬಲ್ಲವು. ಆದರೆ ಇಂಗ್ಲಂಡಿನ ಮ್ಯಾಗ್ನ ಕಾರ್ಟ (Magna Carta) ಅಥವಾ ಬಿಲ್ ಆಫ್ ರೈಟ್ಸ್ (Bill of Rights) ಎಂಬಂತಹ ಅಥವಾ ಫ್ರಾನ್ಸ್, ಅಮೆರಿಕಾ ದೇಶಗಳಲ್ಲಿರುವಂತಹ ಪ್ರಮಾಣಪತ್ರಗಳು ಭರತವರ್ಷದಲ್ಲಿರುವುದಿಲ್ಲ. ಭಾರತೀಯ ಪೌರಾಧಿಕಾರಗಳು ಪ್ರತ್ಯೇಕವಾಗಿ ವಿಧಿರೂಪವನ್ನು ಪಡೆದೇ ಇಲ್ಲ; ಇರುವ ವಿಧಿಸೂತ್ರಗಳಲ್ಲಿ ಸೂಚಿತವಾಗಿವೆ. ಪತ್ರಸ್ಥವಾಗಿಲ್ಲದೆ ಸೂಚಿತ ಮಾತ್ರವಾಗಿಯೇ ಇರುವುದರಿಂದ ತೊಂದರೆಗಳು ತೋರಿಕೊಳ್ಳಬಹುದು; ಆದುದರಿಂದ ಭಾರತೀಯ ಅಧಿಕಾರಸ್ಥಾಪನೆಯಲ್ಲಿ ದೌರ್ಬಲ್ಯವು ಹುಟ್ಟುವುದು.

**ಭಾರತೀಯ ಪೌರತಾ**

ಸಂಸ್ಥಾನಗಳಲ್ಲಿಯೂ ಬ್ರಿಟಿಷ್ ಪ್ರದೇಶಗಳಲ್ಲಿಯೂ ವಿಧಿಯು ಬಹುತರ ಏಕರೂಪವಾಗಿಯೇ ಇರುವ ದೆಸೆಯಿಂದ ಎರಡು ಭಾಗಗಳ ಜನರನ್ನೂ ಭಾರತೀಯ ಪೌರರೆಂದು ಭಾವಿಸಬಹುದು. ಸಂಸ್ಥಾನಗಳಿಗೂ ಪ್ರದೇಶಗಳಿಗೂ ಒಳಭೇದಗಳುಂಟು; ಸಂಸ್ಥಾನಗಳಲ್ಲಿಯೇ ಪರಸ್ಪರವಾಗಿ ಸ್ಥಿತಿಗತಿಗಳಲ್ಲಿ ಭೇದಗಳುಂಟು. ಬ್ರಿಟಿಷ್ ಪ್ರದೇಶಗಳಲ್ಲಿ ಮಾತ್ರ ಒಂದರಲ್ಲಿದ್ದ ಹಾಗೆಯೇ ಮತ್ತೊಂದರಲ್ಲಿಯೂ ಇರುವುದೆಂದು ಸಾಮಾನ್ಯವಾಗಿ ಭಾವಿಸ

ಬಹುದು. ಸಂಸ್ಥಾನದ ಜನರು ಸಂಸ್ಥಾನಾಧಿಪತಿಗಳ ಪ್ರಜೆಗಳು; ಪ್ರದೇಶಗಳಲ್ಲಿ ನಿವಾಸಿಗಳಾಗಿರುವವರು ಬ್ರಿಟಿಷ್ ಪ್ರಜೆಗಳು. ಆದಾಗ್ಯೂ ವೈಸ್ರಾಯಿಯ ಅಧಿಕಾರಕ್ಕೆ ಎರಡು ಭಾಗಗಳೂ ಒಳಪಟ್ಟಿರುವುದರಿಂದ ಎರಡು ಭಾಗಗಳ ಜನರೂ ಭಾರತೀಯ ಪೌರರಾಗಿಯೇ ಇರತಕ್ಕವರು. ಇಡೀ ಭರತವರ್ಷವು ಏಕದೇಶವಾದ ಕಾರಣದಿಂದ ಯಾವ ಭಾಗದಲ್ಲಿದ್ದರೂ ಜನರು ಮೊದಲು ಭಾರತೀಯರೆನಿಸಿ ತರುವಾಯ ಕರ್ಣಾಟಕರು, ಆಂಧ್ರರು, ಮರಾಟರು, ಇತ್ಯಾದಿಯಾಗಿ ವಿಭಾಗಕ್ಕೊಳಗಾಗುತ್ತಾರೆ. ಭರತವರ್ಷದ ಯಾವ ಪ್ರಾಂತದಲ್ಲಿದ್ದರೂ ಭಾರತೀಯ ಪೌರರೆಂಬುವವರು ಪೌರ ಶಬ್ದಕ್ಕೆ ಪೂರ್ಣವಾದ ಅರ್ಹತೆಯನ್ನು ಪಡೆದವರಲ್ಲವೆಂಬುದನ್ನು ನೆನಪಿನಲ್ಲಿಡ ತಕ್ಕುದು. ಆಡಳಿತದಲ್ಲಿ ಭಾಗಿಯಾಗದೆ ಪೌರರೆನಿಸಲಾರರಾದ ಕಾರಣದಿಂದ ಭಾರತೀಯರಿಗೆ ಪ್ರಜೆಯೆಂಬುದು ಒಪ್ಪಿದಂತೆ ಪೌರ ಶಬ್ದವು ಒಪ್ಪುವುದಿಲ್ಲ.

**ಸಾಮ್ರಾಜ್ಯ ಪೌರತಾ**

ಕೆಲವು ಸಮಯಗಳಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಪೌರತನ (Citizenship of the British Empire) ಎಂಬ ಪ್ರಯೋಗವುಂಟು. ಆದರೆ ಬ್ರಿಟಿಷ್ ಸಾಮ್ರಾಜ್ಯವೆಂಬುದರಲ್ಲಿ ಅನೇಕ ಕ್ಷೇತ್ರಗಳುಂಟು; ಒಂದು ಕ್ಷೇತ್ರದಲ್ಲಿರುವಂತೆ ವಿಧಿಸೂತ್ರಗಳು ಮತ್ತೊಂದು ಕ್ಷೇತ್ರದಲ್ಲಿರುವುದಿಲ್ಲ. ಸಾಮ್ರಾಜ್ಯಕ್ಕೆ ಏಕವಿಧಿಯೆಂಬುದಿಲ್ಲ. ಅಲ್ಲದೆ ಸಾಮ್ರಾಜ್ಯ ಪೌರಪದವಿಯೆಂಬುದನ್ನು ವಿವರಿಸುವ ಪ್ರಮಾಣಪತ್ರವಾವುದೂ ಇಲ್ಲ. ಆದ್ದರಿಂದ ಭಾರತೀಯರು ಬ್ರಿಟಿಷ್ ಸಾಮ್ರಾಜ್ಯದ ಪ್ರಜಾರಾಶಿಯಲ್ಲಿ ಸೇರಿದ್ದರೂ ಸಾಮ್ರಾಜ್ಯ ಪೌರರೆಂಬುದಾಗಿ ಯಾವ ಅಧಿಕಾರಗಳನ್ನೂ ಸ್ಥಾಪಿಸಿಕೊಳ್ಳಲಾರದವರು. ಈ ಕಾರಣದಿಂದ ಡುಮಿನಿಯನ್ನುಗಳಲ್ಲಿಯೂ ಕಾಲೋನಿಗಳಲ್ಲಿಯೂ ನೆಲೆಸಿರುವ ಭಾರತೀಯರು ತಮ್ಮ ಪೌರಾಧಿಕಾರಗಳನ್ನು ನಿರ್ವಾಹಮಾಡಿಕೊಳ್ಳುವುದು ಕಷ್ಟತರವಾಗಿ ಅನೇಕ ಆತಂಕಗಳಿಗೆ ಗುರಿಯಾಗಬೇಕಾಗಿದೆ. ಡುಮಿನಿಯನ್ನುಗಳ ಸರ್ಕಾರಗಳೂ ಕಾಲೊನಿಗಳ ಸರ್ಕಾರಗಳೂ ಭಾರತೀಯರು ಅವರ್ಣರಾದ ಕಾರಣದಿಂದ ಪೌರಾಧಿಕಾರಕ್ಕೆ ಅಯೋಗ್ಯರೆಂದು ನಿರ್ಣಯಿಸಿದಾಗ ಭಾರತೀಯರು ಏನು ಮಾಡುವುದಕ್ಕೂ ಆಗುವುದಿಲ್ಲ. ಇಂಗ್ಲಂಡಿನಲ್ಲಿ ನೆಲೆಸಿದವರಾದರೆ ಸ್ವೀಕೃತ ಪೌರರಾಗು

ವುದರಲ್ಲಿ ಆಟ್ಟಿಯಿಲ್ಲ. ಅಲ್ಲಿ ನೆಲೆಸಿದ ಭಾರತೀಯರಲ್ಲಿ ಮೂವರು ಅಲ್ಲಿಯ ಪೌರನುಂಬ್ಬರಾಗಿ ಕಾಮನ್ಸ್ ಸಭೆಗೆ ಸದಸ್ಯರೂ ಆದರು. ಇಂಗ್ಲಂಡಿನಲ್ಲಿ ನೆಲೆಸಬಹುದಾದ ಭಾರತೀಯರ ಸಂಖ್ಯೆಯು ಅಲ್ಪವಾಗಿಯೇ ಇರತಕ್ಕ ದ್ದಾದುದರಿಂದ ಇಂಗ್ಲಿಷ್ ಪೌರಪದವಿಯು ಭಾರತೀಯರಿಗೆ ಸೇರತಕ್ಕ ದ್ದೆಂದು ಹೇಳಲಾಗುವುದಿಲ್ಲ. ಪ್ರಮಾಣ ರಹಿತವಾದುದರಿಂದ ಸಾಮ್ರಾಜ್ಯ ಪೌರಪದವಿಯೆಂಬುದನ್ನು ಶಾಸ್ತ್ರೀಯವಾಗಿ ವಿಚಾರಮಾಡುವುದಕ್ಕೆ ಸಾಧ್ಯವಿಲ್ಲ.

**ಭಾರತೀಯ ಪೌರರ ಕರ್ತವ್ಯಗಳು—ಬಲವಂತ**

ರಾಷ್ಟ್ರದಲ್ಲಿ ಸರ್ಕಾರಕ್ಕೆ ವಿಧೇಯವಾಗಿ ನಡೆದುಕೊಂಡಿರುವುದು ಪ್ರಜೆಗಳೆಲ್ಲರ ಕರ್ತವ್ಯ. ಆ ಕರ್ತವ್ಯಪಾಲನೆ ಯಿಂದಲೇ ಸರ್ಕಾರದೊಡನೆ ಸಹಕರಿಸಿದಂತಾಗು ವುದು. ಕಂದಾಯ ತೆರಿಗೆಗಳನ್ನು ವಿಧ್ಯುಕ್ತವಾದ ರೀತಿಯಲ್ಲಿ ಸಲ್ಲಿಸುತ್ತಿರಬೇಕಾದುದಲ್ಲದೆ ಭಾರ ತೀಯರು ವಿಧಿಗನುಸಾರವಾಗಿ ನಡೆಸತಕ್ಕ ಬೇರೆ ಕರ್ತವ್ಯಗಳುಂಟು. ಯಾವುವೆಂದರೆ:—

(1) ಕ್ರಿಮಿನಲ್ ನ್ಯಾಯಸ್ಥಾನಗಳಲ್ಲಿ ಕರೆದಾಗ ಪಂಚಾಯತನಾಗಿ (Juryman) ಇದ್ದು ನೆರವಾಗತಕ್ಕದ್ದು.

(2) ಯಾವುದಾದರೂ ಅಪರಾಧವು ನಡೆದಾಗ ಅದರ ಸಂಬಂಧವಾಗಿ ತನಗೆ ತಿಳಿದ ಸಮಾಚಾರವನ್ನು ಅಧಿಕಾರಿವರ್ಗದವರು ಕೇಳಿದಾಗ ನಿರ್ವಂಚನೆಯಿಂದ ತಿಳಿಸುವುದು.

(3) ವಿಧಿಗೆ ವಿರುದ್ಧವಾಗಿ ಸೇರಿದ ಸಭೆಗಳನ್ನೂ ಗುಂಪುಗಳನ್ನೂ ಚದರಿಸುವ ಕಾರ್ಯದಲ್ಲಿ ತನ್ನ ಕೈಲಾದಮಟ್ಟಿಗೂ ಅಧಿ ಕಾರಿ ವರ್ಗದವರಿಗೆ ಸಹಾಯಮಾಡುವುದು.

(4) ಗುಲ್ಲೆದ್ದ ಕಾಲದಲ್ಲಿ ಕಂಟಕಗ್ರಾಹಿಗಳ ಪಡೆಯನ್ನು ಬಲಪಡಿಸ ಬೇಕೆಂದು ತೋರಿ ದಂಡಾಧಿಕಾರಿಯು ಕಂಟಕಗ್ರಾಹಿ ಯಾಗತಕ್ಕದೆಂದು ಆಜ್ಞೆಮಾಡಿದಾಗ ಪೋಲೀಸ್ ಅಥವಾ ಕಂಟಕಗ್ರಾಹಿಗಳ ದಳದಲ್ಲಿ ಸೇರಿ ಕರ್ತವ್ಯವನ್ನು ಪಾಲಿಸ ತಕ್ಕದು.

ಇವುಗಳ ಜತೆಗೆ ರಾಷ್ಟ್ರದ ದಂಡವಿಧಿ (Penal Code) ಯಲ್ಲಿ ಮಾಡಬಾರದವುಗಳೆಂಬ ವಿಷಯಗಳನ್ನೂ ಸೇರಿಸಬೇಕು. ವಿಧೇಯನಾದ ಪ್ರಜೆಯು ಈ ವಿಧಿಗಳೆಲ್ಲವನ್ನೂ ಪಾಲಿಸಬೇಕು; ಪಾಲಿಸದಿದ್ದಲ್ಲಿ ಅವಿಧೇಯನೆನಿಸಿ ಅಪರಾಧಿತನಾಗುತ್ತಾನೆ. ಆದ್ದರಿಂದ ವಿಧ್ಯುಕ್ತವಾದ ಕರ್ತವ್ಯಗಳನ್ನು ಬಲವಂತದ ಕರ್ತವ್ಯಗಳೆಂದು ಭಾವಿಸಬಹುದು. ಬಲವಂತದ್ದಲ್ಲದೆ ಐಚ್ಛಿಕವೆನ್ನಬಹುದಾದ ಕರ್ತವ್ಯಗಳೂ ಪೌರರಿಗೆ ಹೇರಳವಾಗಿಯೇ ಇರುತ್ತವೆ. ರಾಷ್ಟ್ರದ ಕ್ಷೇಮಾಭಿವೃದ್ಧಿಗಳಿಗಾಗಿ ಪೌರರು ಶ್ರಮೆಪಡಬೇಕು; ನಾನಾ ಬಗೆಗಳಲ್ಲಿ ಶ್ರಮೆಯನ್ನು ವಹಿಸಬಹುದು. ಪೌರರು ತಮ್ಮ ಕರ್ತವ್ಯ ನಿರ್ವಾಹದಲ್ಲಿ ಒಂದು ಪಾಲನ್ನು ಸರ್ಕಾರದೊಡನೆ ಸಹಕಾರಮೂಲಕವಾಗಿಯೂ, ಹೆಚ್ಚು ಪಾಲನ್ನು ಸ್ವತಂತ್ರವಾಗಿಯೂ ನೆರವೇರಿಸತಕ್ಕವರು. ಸರ್ಕಾರದವರಿಗೆ ಬೇಕಾದ ಸಹಕಾರ ಭಾಗವನ್ನು ವಿಧಿಗಳಲ್ಲಿಯೇ ಸೇರಿಸಿರುವುದರಿಂದ ನಿರ್ಬಂಧದಿಂದಲಾದರೂ ಪೌರರು ಆ ಭಾಗವನ್ನು ಪಾಲಿಸಬೇಕಾಗುತ್ತದೆ. ವಿಧಿಗಳಲ್ಲಿ ಇಲ್ಲದೆ ಇರುವ ಭಾಗದಲ್ಲಿಯೂ ಪೌರರು ಸರ್ಕಾರದವರೊಂದಿಗೆ ಸಹಕರಿಸತಕ್ಕವರು. ಉದಾಹರಣೆಗೆ, ರಾಷ್ಟ್ರಕಂಟಕರ ಬೆನ್ನಟ್ಟಿ ಹಿಡಿದುತರಲು ಕಂಟಕಗ್ರಾಹಿಗಳು ಸಿದ್ಧರಾಗಿರುತ್ತಾರೆ. ತಿಳಿದ ಸಮಾಚಾರವನ್ನು ಅಧಿಕಾರಿಗಳಿಗೆ ತಿಳಿಸಲೇಬೇಕೆಂದು ವಿಧಿಯೇ ಸಾರುವುದು. ಕಳ್ಳನನ್ನು ಹಿಡಿಯುವುದರಲ್ಲಿ ಅಧಿಕಾರಿಗೆ ಸಹಾಯವಾಗಿರಬೇಕೆಂದು ವಿಧಿಯು ಹೇಳಿಲ್ಲ. ಆದರೆ ಪೌರರು ಅನೇಕ ವೇಳೆ ಪೋಲೀಸ್ ಸಿಬ್ಬಂದಿಗೆ ಕಳ್ಳರನ್ನು ಹಿಡಿಯುವುದರಲ್ಲಿ ಸಹಾಯವಾಗುವುದೇ ಅಲ್ಲದೆ ತಾವೇ ಮುಂದಾಗಿ ಹಿಡಿದುಕೊಡುವರು. ಎಷ್ಟೋ ವೇಳೆಗಳಲ್ಲಿ ರಾಷ್ಟ್ರಕಂಟಕರನ್ನು ಪೌರರೇ ಅತಿ ಸಾಹಸದಿಂದ ಹಿಡಿದಿರುವರು. ಇಂತಹ ಐಚ್ಛಿಕ ಕರ್ತವ್ಯಗಳನ್ನು ನೆರವೇರಿಸಿದಾಗಲೂ ಪೌರರು ಸರ್ಕಾರಕ್ಕೆ ಸಹಕಾರವನ್ನೇ ಸಲ್ಲಿಸುತ್ತಾರೆ.

**—ಐಚ್ಛಿಕ**

ಈ ರೀತಿಯಲ್ಲಿ ನಿರ್ಬಂಧದಿಂದಲೂ ನಿರ್ಬಂಧವಿಲ್ಲದೆಯೂ ಸರ್ಕಾರಕ್ಕೆ ಸಹಾಯಮಾಡುತ್ತ ಪೌರರಾದವರು ಅನೇಕ ವಿಧಗಳಲ್ಲಿ ತಮ್ಮ ಸ್ವಂತ ಇಚ್ಛೆಯಿಂದಲೇ ರಾಷ್ಟ್ರದ ಅಭಿವೃದ್ಧಿಗೆ ನೆರವಾಗುವ ಕರ್ತವ್ಯಗಳನ್ನು ಕೈಕೊಂಡು ನಿರ್ವಹಿಸಬಲ್ಲವರು. ಪೌರರು ತಮಗೆ ತೋರಿದ ಕೆಲಸಕಾರ್ಯ

ಗಳೆಲ್ಲವನ್ನೂ ನಿರ್ವಹಿಸಬಹುದು; ರಾಷ್ಟ್ರಕ್ಕೆ ಹಿತವಾಗಿರುವುದೊಂದೇ ಅವಶ್ಯವಾದ ಲಕ್ಷಣ. ರಾಷ್ಟ್ರದ ಕ್ಷೇಮಾಭಿವೃದ್ಧಿಗೆ ಅಹಿತವಾದ ಕಾರ್ಯಗಳನ್ನು ಪೌರರು ಕೈಕೊಂಡ ವೇಳೆಗಳಲ್ಲಿ ಸರ್ಕಾರದವರೇ ಅಲ್ಲಿ ಪ್ರವೇಶಿಸಿ ಬಲವಂತದಿಂದ ಅವುಗಳನ್ನು ಅಡ್ಡಿಪಡಿಸಬೇಕಾಗಿರುತ್ತದೆ. ರಾಷ್ಟ್ರಹಿತಕಾರ್ಯಗಳಿಗೆ ಕೊನೆಯೇ ಇಲ್ಲ. ಸ್ವತಂತ್ರವಾಗಿ ಶಾಲೆಗಳನ್ನು ನಡೆಸುವುದು, ಶ್ರಮಜೀವಿಗಳ ಮಕ್ಕಳ ಆಟಪಾಟಗಳಿಗೆ ಏರ್ಪಾಟು ಮಾಡುವುದು, ವಾಚನಾಲಯಗಳನ್ನೂ ಪುಸ್ತಕಭಂಡಾರಗಳನ್ನೂ ಸ್ಥಾಪಿಸುವುದು, ಮದ್ಯಪಾನ ನಿರೋಧಕಾರ್ಯದಲ್ಲಿ ಸಹಾಯಮಾಡುವುದು, ಶಿಕ್ಷಣವನ್ನೊದಗಿಸುವ ವಿನೋದಗಳನ್ನು ವ್ಯವಸ್ಥೆಗೊಳಿಸುವುದು, ಆರೋಗ್ಯ ಸಂಬಂಧವಾದ ತಿಳುವಳಿಕೆಯನ್ನು ಜನರಿಗೆ ಉಂಟುಮಾಡುವುದು, ಭಜನ ಮಂದಿರಗಳನ್ನು ನಡೆಸುವುದು ಮುಂತಾದ ಸಾರ್ವಜನಿಕ ಕೆಲಸಕಾರ್ಯಗಳೆಲ್ಲವೂ ರಾಷ್ಟ್ರಹಿತವನ್ನು ಸಾಧಿಸತಕ್ಕ ಪೌರ ಪ್ರಯತ್ನಗಳೇ. ಇಂತಹ ಕೆಲಸಕಾರ್ಯಗಳನ್ನು ನಡೆಸಲು ಅನೇಕಾನೇಕ ಸಂಘಗಳು ಸ್ವತಂತ್ರವಾಗಿಯೇ ಇರುತ್ತವೆ. ಅಂತಹ ಸಂಘಗಳಲ್ಲಿ ಸೇರಿಕೊಂಡು ತನ್ನ ಶಕ್ತ್ಯನುಸಾರ ಕಾರ್ಯನಿರ್ವಾಹವನ್ನು ಮಾಡುವುದು ಪ್ರತಿ ಪೌರನ ಕರ್ತವ್ಯವಾಗಿರುತ್ತದೆ. ಸರ್ಕಾರದವರು ಕೈಕೊಳ್ಳಲಾಗದ ರಾಷ್ಟ್ರಹಿತ ಕಾರ್ಯಗಳನ್ನು ಇಂತಹ ಸಂಸ್ಥೆಗಳು ಕೈಕೊಳ್ಳುವ ಕಾರಣದಿಂದ ಇವುಗಳಿಗೆ ಸರ್ಕಾರದವರು ಕೂಡಿದಮಟ್ಟಿಗೂ ಸಹಾಯಮಾಡತಕ್ಕದ್ದು ನ್ಯಾಯವಾಗಿರುತ್ತದೆ. ಕೆಲವು ರಾಷ್ಟ್ರಗಳಲ್ಲಿ ಸರ್ಕಾರದವರು ತಮ್ಮ ಕೆಲಸಕಾರ್ಯಗಳ ವಿವರವನ್ನೇ ವಿಮರ್ಶೆಮಾಡಿ ತಮ್ಮಲ್ಲಿಯೇ ದೋಷಾರೋಪಣೆಯನ್ನು ಮಾಡುವ ಸಂಸ್ಥೆಗಳಿಗೂ ಸಹಾಯವನ್ನೊದಗಿಸುವುದುಂಟು. ರಾಷ್ಟ್ರನೀತಿ ವಿಚಾರಕವಾದ ಸಂಘಗಳಲ್ಲಿ ರಾಷ್ಟ್ರಕ್ಕೆ ಅತ್ಯುತ್ತಮವಾದ ಸ್ವರೂಪ ಯಾವುದೋ ಅದನ್ನು ಸಾಧಿಸುವ ಉದ್ದೇಶವು ಸಹಜವಾಗಿರುತ್ತದೆ; ಅವುಗಳ ಕಾರ್ಯವಿವರದಲ್ಲಿ ಸರ್ಕಾರಕ್ಕೆ ವಿರೋಧವೇ ತೋರಬಹುದು. ಆದಾಗ್ಗೂ ಅಂತಹ ಸಂಘಗಳನ್ನು ಸರ್ಕಾರದವರು ಪ್ರೋತ್ಸಾಹಪಡಿಸತಕ್ಕದ್ದಾಗಿರುತ್ತದೆ. ರಾಷ್ಟ್ರಹಿತದ ಗುರಿಯನ್ನು ತಪ್ಪದೆ ಇರುವ ಎಲ್ಲ ಕೆಲಸಕಾರ್ಯಗಳೂ ಪ್ರೋತ್ಸಾಹಕ್ಕೆ ಅರ್ಹವಾದ

ವುಗಳೇ. ಸರ್ಕಾರದವರ ನೀತಿಯನ್ನು ಖಂಡಿಸುವ ಕರ್ತವ್ಯನಿರ್ವಾಹದಿಂದ ರಾಷ್ಟ್ರಹಿತವೇ ಆಗತಕ್ಕುದಾದುದರಿಂದ ಆಧುನಿಕ ಕಾಲದ ಸರ್ಕಾರಗಳೆಲ್ಲವೂ ಅಂತಹ ವಿಮರ್ಶೆ ಖಂಡನೆಗಳನ್ನು ವಿಶ್ವಾಸದಿಂದ ಪ್ರೋತ್ಸಾಹಿಸುತ್ತವೆ.

**ಮಿತಿಗಳು**

ಈ ರೀತಿಯಲ್ಲಿ ಪೌರರ ಸಾಧನೆಗೆ ಮಿತಿಯನ್ನು ತೋರುವುದೇ ಕಷ್ಟ; ಪೌರರು ನಿರ್ವಹಿಸಬಹುದಾದ ಕೆಲಸಕಾರ್ಯಗಳಿಗೆ ನಿಜವಾಗಿ ಮೇರೆಯೇ ಇರುವುದಿಲ್ಲ. ರಾಷ್ಟ್ರಕ್ಕೆ ಅಹಿತವಲ್ಲದ ಕೆಲಸಗಳನ್ನೆಲ್ಲವನ್ನೂ ಪೌರರು ಕೈಕೊಳ್ಳಬಹುದು. ರಾಷ್ಟ್ರಕ್ಕೆ ಹಿತವನ್ನೇ ಪ್ರತ್ಯಕ್ಷವಾಗಿ ಉಂಟುಮಾಡುವ ಸಾವಿರಾರು ಕೆಲಸಗಳನ್ನೂ ಕೈಕೊಳ್ಳಬಹುದು. ಈ ಕಾರ್ಯರಂಗದಲ್ಲಿ ಪೌರರಿಗೆ ಯಾವ ಅಡ್ಡಿಯೂ ಇರಬಾರದು. ಅಂದರೆ ಪೌರರಿಗೆ ಸ್ವಾತಂತ್ರ್ಯವಿರತಕ್ಕದ್ದು. ಸ್ವಾತಂತ್ರ್ಯವೆಂಬುದು ಉನ್ಮಾದವಲ್ಲ. ಪೌರಸ್ವಾತಂತ್ರ್ಯವು ಅವಿಚ್ಛಿನ್ನವಾಗಿಯೂ ನಿರಾತಂಕವಾಗಿಯೂ ಇರತಕ್ಕದ್ದು. ಆ ಸ್ವಾತಂತ್ರ್ಯಕ್ಕೆ ಎರಡೇ ಎಲ್ಲೆಗಳು. ಒಂದನೆಯದಾಗಿ ರಾಷ್ಟ್ರಕ್ಕೆ ಅಹಿತವಾಗದಂತಿರತಕ್ಕದ್ದು. ಎರಡನೆಯದಾಗಿ ಪೌರನಾದಾತನು ತನ್ನ ಸ್ವಾತಂತ್ರ್ಯಕ್ಕಾಸೆಪಟ್ಟ ರೀತಿಯಲ್ಲಿಯೇ ಇತರ ಪೌರರ ಸ್ವಾತಂತ್ರ್ಯವನ್ನು ಗೌರವಿಸುತ್ತ ಇತರರ ಸ್ವಾತಂತ್ರ್ಯಕ್ಕೆ ಅಡ್ಡಿಯಾಗದೆ ಇರತಕ್ಕದ್ದು. ಎರಡು ಎಲ್ಲೆಗಳೂ ಬಲು ಮುಖ್ಯವಾದವು ಮತ್ತು ಪ್ರಬಲವಾದವು. ಸ್ವಲ್ಪ ಮಾತ್ರ ವಿಚಾರದಿಂದಲೇ ಎರಡನೆಯ ಎಲ್ಲೆಯು ಎಂತಹ ಪ್ರತಿಬಂಧಕವಾಗಿರುವುದೆಂಬುದನ್ನು ಕಾಣಬಹುದು.

**ಮುಖ್ಯಾಧಿಕಾರಗಳು**

ಇನ್ನು ಪೌರಸ್ವಾತಂತ್ರ್ಯದ ಲಕ್ಷಣಗಳೆನಿಸಿದ ಪೌರಾಧಿಕಾರ ಭಾಗದಲ್ಲಿ ಮುಖ್ಯವಾದವುಗಳನ್ನು ಕಾಣಬಹುದು. ಸಾಮಾನ್ಯವಾಗಿ ಎಲ್ಲ ರಾಷ್ಟ್ರಗಳಲ್ಲಿಯೂ ಪೌರಸ್ವಾತಂತ್ರ್ಯವು ಪವಿತ್ರಸ್ಥಾನವನ್ನೇ ಪಡೆದಿದೆ. ನಮ್ಮ ದೇಶದಲ್ಲಿ ಪೌರಸ್ವಾತಂತ್ರ್ಯವನ್ನು ಸ್ಥಾಪಿಸತಕ್ಕ ಪೌರಾಧಿಕಾರ ವಿವರವು ವಿಧಿಕೋಶದಲ್ಲಿ ಸ್ಪಷ್ಟವಾಗಿ ಪತ್ರಸ್ಥವಾಗಿಲ್ಲ; ವಿಧಿಯಲ್ಲಿ ಸೂಚಿತವಾಗಿರುವುದು. ಪೌರಾಧಿಕಾರ ಭಾಗದಲ್ಲಿ ಪ್ರತಿಯೊಂದು ಅಧಿಕಾರದಲ್ಲಿಯೂ

ಕರ್ತವ್ಯಭಾಗವು ಅಡಗಿಯೇ ಇರುವ ಅಂಶವನ್ನು ಕಾಣಲು ವಿಮರ್ಶೆಯು ಅವಶ್ಯ. ಮುಖ್ಯವಾದ ಅಧಿಕಾರಗಳನ್ನು ಮಾತ್ರ ಸ್ಥೂಲವಾಗಿ ವಿಮರ್ಶೆ ಮಾಡಿ, ಅವುಗಳಲ್ಲಿ ತೋರುವ ಕರ್ತವ್ಯ ಭಾಗವನ್ನು ನೋಡಿ, ಅಧಿಕಾರ ಭಾಗದಿಂದ ರಾಷ್ಟ್ರಹಿತವು ಹೇಗೆ ಸಾಧಿತವಾದೀತೆಂಬುದನ್ನು ಮನಗಾಣ ಬಹುದು. ಅಧಿಕಾರಗಳ ಸದುಪಯೋಗ ದುರುಪಯೋಗಗಳೂ ತಕ್ಕಮಟ್ಟಿಗೆ ಸ್ಪಷ್ಟವಾಗುತ್ತವೆ. ದೈಹಿಕ ಸ್ವಾತಂತ್ರ್ಯ, ಸಂಚಾರ ಸ್ವಾತಂತ್ರ್ಯ, ಮತ ಸ್ವಾತಂತ್ರ್ಯ, ವಾಕ್ಸ್ವಾತಂತ್ರ್ಯ, ಸಂಘ ಸ್ವಾತಂತ್ರ್ಯ ಮತ್ತು ನಿರೋಧ ಸ್ವಾತಂತ್ರ್ಯವೆಂಬವುಗಳ ವಿಚಾರವನ್ನು ಮಾಡಬಹುದು.

## 1. ದೈಹಿಕ ಸ್ವಾತಂತ್ರ್ಯ

ಪೌರನಾದವನ ದೇಹವು ಪರಮ ಪವಿತ್ರವಾದುದು. ಪೌರ ನೊಬ್ಬನ ದೇಹಕ್ಕೆ ಅನ್ಯರು ಯಾರಾದರೂ ಘಾಸಿಪಡಿಸಿದ ಸಂದರ್ಭದಲ್ಲಿ ದಂಡನೀಯವಾದ ಅಕೃತ್ಯವು ನಡೆಯಿತೆಂದೂ, ರಾಷ್ಟ್ರಕ್ಕೇ ಅಹಿತವಾದ ಕಾರ್ಯವು ನಡೆಯಿತೆಂದೂ ಸರ್ಕಾರದವರೇ ಅದರ ವಿಚಾರಣೆಯನ್ನು ಕೈಕೊಳ್ಳತಕ್ಕುದು ವಿಧಿ. ಕ್ರಿಮಿನಲ್ ವಿಭಾಗದಲ್ಲಿ ಎಂತಹ ಅಪರಾಧ ವಾದರೂ ರಾಷ್ಟ್ರಸಮ್ಮುಖದಲ್ಲಿ ನಡೆದ ಅಪರಾಧವಾಗಿಯೇ ಪರಿಣಮಿಸು ತ್ತದೆ. ಪೌರರನ್ನು ಕಳ್ಳರಿಂದಲೂ, ದರೋಡೆಗಾರರಿಂದಲೂ, ಹಂತಕರಿಂದಲೂ, ಉನ್ಮತ್ತರಿಂದಲೂ ರಕ್ಷಿಸತಕ್ಕುದು ಸರ್ಕಾರದವರ ಪ್ರಥಮ ಕರ್ತವ್ಯ ವಾಗಿಯೇ ಇರುತ್ತದೆ. ಆದರೆ ಪೌರರ ದೈಹಿಕ ಕ್ಷೇಮವನ್ನು ರಕ್ಷಿಸತಕ್ಕ ಸರ್ಕಾರವೇ ನಿರಪರಾಧಿಗಳಾಗಿಯೂ ವಿಧೇಯರಾಗಿಯೂ ಇರುವವರನ್ನು ಬಂಧಿಸುವುದಕ್ಕಾಗಲಿ ದಂಡಿಸುವುದಕ್ಕಾಗಲಿ ಆಸ್ಪದವಿರಬಾರದು. ಆಸ್ಪದ ವಿದ್ದಲ್ಲಿ ಕುರಿಗಳ ಹಿಂಡನ್ನು ರಕ್ಷಿಸಲು ತೊಡಗಿದ ತೋಳದ ಕಥೆಯಂತೆ ಆಗುವುದು. ತೃಪ್ತಿಕರವಾದ ಕಾರಣವಿಲ್ಲದೆ ಅಧಿಕಾರಿಗಳು ಯಾವ ಪೌರನನ್ನೂ ಹಿಡಿಯಲಾಗದು. ವಾರಂಟಿಲ್ಲದೆ ಅರೆಸ್ಟುಮಾಡಲಾಗದೆಂಬ ನಿಯಮಕ್ಕಿದೇ ಸಮಾಧಾನ. ಪೋಲೀಸ್ ಅಧಿಕಾರಿಯು ಸಾಮಾನ್ಯನಾದ ಪೌರನನ್ನು ಹಿಡಿಯಬೇಕಾದಾಗ ವಾರಂಟೆಂಬುದಿದ್ದೇ ತೀರಬೇಕು; ಪೌರ ನಾದಾತನ ಗೃಹವನ್ನು ಪ್ರವೇಶಮಾಡುವಾಗಲೂ ಗೃಹಸ್ಥನ ಅಪ್ಪಣೆ ಯಿಲ್ಲದೆ ಪ್ರವೇಶಮಾಡುವ ಅಧಿಕಾರವು ಆತನಿಗಿಲ್ಲ; ಇವು ನಮ್ಮ ದೇಶ

ದಲ್ಲಿಯೂ ಇರುವ ನಿಯಮಗಳು. ಅಪರಾಧವು ನಡೆದ ಅಥವಾ ನಡೆಯುವ ಸಂದರ್ಭದಲ್ಲಿ ಮಾತ್ರ ಪೋಲೀಸ್ ಅಧಿಕಾರಿಯು ಸಾಕ್ಷಿಗಳನ್ನು ಇಟ್ಟುಕೊಂಡು ಮನೆಯನ್ನು ಬಲವಂತದಿಂದ ಪ್ರವೇಶಮಾಡಲೂ ಬಹುದು, ಅಪರಾಧಿಗಳನ್ನು ಹಿಡಿದು ಬಂಧಿಸಲೂ ಬಹುದು; ಆದರೆ ನಿರ್ಬಂಧದಲ್ಲಿಟ್ಟ 24 ಗಂಟೆಗಳೊಳಗಾಗಿ ಪೋಲೀಸ್ ಅಧಿಕಾರಿಯು ಆಪಾದಿತನನ್ನು ದಂಡಾಧಿಕಾರಿಯ ಎದುರಿಗೆ ಕರೆದೊಯ್ದು ವಿಚಾರಣೆಗೆ ಪ್ರಾರಂಭ ಮಾಡಬೇಕು. 24 ಗಂಟೆಗಳಿಗಿಂತ ಹೆಚ್ಚು ಕಾಲ ನಿರ್ಬಂಧದಲ್ಲಿಟ್ಟಿರಲು ಪೋಲೀಸ್ ಅಧಿಕಾರಿಗಳಿಗೆ ವಿಧಿಬಲವಿರುವುದಿಲ್ಲ.

ಅಸಾಧಾರಣ ಸ್ಥಿತಿಯು ತೋರಿದಾಗ ಅಥವಾ ರಾಷ್ಟ್ರದ ಶಾಂತಿ ಕ್ಷೇಮಗಳಿಗೆ ಆತಂಕ ತೋರಬಹುದಾದಾಗ ದಂಡಾಧಿಕಾರಿಗಳು ವಿಶೇಷವಾದ ಅಧಿಕಾರವನ್ನು ಪ್ರಯೋಗಿಸಬೇಕಾಗುವುದು. ಪೌರರಕ್ಷಣೆಯ ಉದ್ದೇಶಕ್ಕಾಗಿ ಶಂಕೆಯ ಆಧಾರಬಲದಿಂದಲೇ ಅಧಿಕಾರಿ ವರ್ಗದವರು ಪೌರರಾದವರನ್ನು ವಾರಂಟಿಲ್ಲದೆ ದಸ್ತಗಿರಿಮಾಡುವುದೂ, ತಮಗೆ ತೋರಿದಷ್ಟು ಕಾಲ ನಿರ್ಬಂಧದಲ್ಲಿಟ್ಟಿರುವುದೂ ಉಂಟು. ಯುದ್ಧದ ಕಾಲದಲ್ಲಿ ಎಲ್ಲ ಸರ್ಕಾರಗಳೂ ಇಂತಹ ಪ್ರವರ್ತನೆಗೆ ತೊಡಗಬೇಕಾಗುತ್ತದೆ. ಸಾಧಾರಣವಾಗಿ ಅಧಿಕಾರ ವರ್ಗದವರಿಗೆ ಇಂತಹ ಅಧಿಕಾರವಿದ್ದು ಆ ಅಧಿಕಾರವು ಪ್ರಯೋಗವಾಗುತ್ತಿದ್ದು ಪ್ರಬಲವಾದ ಮತ್ತು ತೃಪ್ತಿಕರವಾದ ಕಾರಣಗಳಿಲ್ಲದಿದ್ದಲ್ಲಿ ಅನ್ಯಾಯವೆನಿಸುವುದು.

ಸಂಯುಕ್ತ ರಾಜ್ಯದಲ್ಲಿ ಹೆಬಿಯಸ್ ಕಾರ್ಪಸ್ ಎಂಬ ಹೆಸರಿನ ಒಂದು ವಿಧಿಭಾಗವುಂಟು. ಅದರಿಂದ ಪೌರರ ದೈಹಿಕ ಸ್ವಾತಂತ್ರ್ಯವು ಸ್ಥಾಪಿತವಾಗಿದೆ. ನಮ್ಮ ದೇಶದಲ್ಲಿ ಅಂತಹ ವಿಧಿಗಳಾಗಲಿ ಕಾನೂನುಗಳಾಗಲಿ ಇಲ್ಲ; ಆದರೆ ಇತರ ಕಾನೂನು ನಿಬಂಧನೆಗಳ ವಿವರದಲ್ಲಿ ಸೂಚಿತವಾಗಿವೆ. ಹೀಗಿರುವುದರಿಂದ ಅಸ್ಪಷ್ಟವಾಗಿರುವುದೆಂಬ ಆಕ್ಷೇಪಣೆಗೆ ಒಳಗಾಗಿದೆ.

ಅಧಿಕಾರದ ಎರಡನೆಯ ಎಲ್ಲೆಯು ದೈಹಿಕ ಸ್ವಾತಂತ್ರ್ಯದ ವಿಷಯದಲ್ಲಿ ತೋರಿಕೊಳ್ಳುವುದು ಹೇಗೆ? ತಾನು ಸ್ವತಂತ್ರನೆಂದು ಪೌರನೊಬ್ಬನು ಮತ್ತೊಬ್ಬನಿಗೆ ತೊಡರಗಾಲನ್ನು ಕೊಟ್ಟು ಮುಗ್ಗರಿಸುವಂತೆ ಮಾಡಿದರೆ ತಕ್ಷಣವೇ ಆತನ ಸ್ವಾತಂತ್ರ್ಯಕ್ಕೆ ಅಡ್ಡಿಮಾಡಿದಹಾಗಾಗುತ್ತದೆ; ತನ್ನ

ಅಧಿಕಾರವನ್ನು ದುರುಪಯೋಗಪಡಿಸಿದಂತೆಯೇ ಆಗುತ್ತದೆ. ತಾನು ಸ್ವತಂತ್ರನಾಗಿರಬೇಕೆಂಬುದಕ್ಕೆ ಇತರರು ತನಗೆ ಅಧೀನರಾಗಿರಬೇಕೆಂದು ಅರ್ಥವಲ್ಲ. ತಾನೆಷ್ಟು ಸ್ವಾತಂತ್ರ್ಯವನ್ನು ಅಪೇಕ್ಷಿಸುವನೋ ಅಷ್ಟು ಸ್ವಾತಂತ್ರ್ಯವನ್ನು ಇತರರಲ್ಲಿ ಗೌರವಿಸುತ್ತ, ತನ್ನಂತೆಯೇ ಇತರರೂ ಎಂದು ವರ್ತಿಸಬೇಕು. ತನ್ನ ಕೋಪ ತಾಪಗಳನ್ನು ತಡೆಯಬೇಕು. ಈ ರೀತಿಯಲ್ಲಿ ಸ್ವಾತಂತ್ರ್ಯವೆಂಬುದು ಕಾರ್ಯತಃ ಶಮದಮಗಳಾಗಿ ಪರಿಣಮಿಸತಕ್ಕುದು.

## 2. ಸಂಚಾರ ಸ್ವಾತಂತ್ರ್ಯ

ಪೌರನಾದವನು ಯಾವ ವಿಧವಾದ ಆತಂಕವೂ ಇಲ್ಲದೆ ತನ್ನಿಷ್ಟಾನುಸಾರವಾಗಿ ಚಲಿಸುವ ಅಧಿಕಾರವುಳ್ಳವನಾಗಿರಬೇಕು. ಎಲ್ಲಿಗೆ ಬೇಕಾದರೂ, ಯಾವಾಗ ಬೇಕಾದರೂ, ಹೇಗೆ ಬೇಕಾದರೂ ಸಂಚರಿಸುವ ಅಧಿಕಾರವು ಪೌರನಿಗೆ ಸಹಜವಾಗಿರತಕ್ಕುದು. ಆತನ ಸಂಚಾರಕ್ಕೆ ಎಂತಹ ಅಡ್ಡಿಯೂ ರಾಷ್ಟ್ರದಲ್ಲಿರಬಾರದು. ರಾಷ್ಟ್ರದಲ್ಲಿ ನೆಲೆಸುವ ವಿಷಯದಲ್ಲಿಯೂ ಅದೇ ರೀತಿಯಲ್ಲಿಯೇ ಪೌರನಿಗಿಷ್ಟಬಂದೆಡೆಯಲ್ಲಿ ವಾಸಿಸುವ ಸ್ವಾತಂತ್ರ್ಯವಿರತಕ್ಕದ್ದು. ತನ್ನಿಷ್ಟದಂತೆ ಸ್ವರಾಷ್ಟ್ರದಲ್ಲಿ ಸಂಚರಿಸುವ ಪೌರನನ್ನು ಅಡ್ಡಿಪಡಿಸುವುದು ಅಪರಾಧವೆಂದೇ ಗಣ್ಯವಾಗತಕ್ಕದ್ದಾಗಿರಬೇಕು. ಸರ್ಕಾರವಿರುವುದೇ ಜನರಿಗೆ ಈ ಅನುಕೂಲವನ್ನು ಒದಗಿಸುವುದಕ್ಕಾಗಿ. ಆದ್ದರಿಂದ ಸಮರ್ಪಕವಾಗಿರುವ ಸರ್ಕಾರವಾವುದೂ ಪೌರ ಸಂಚಾರಕ್ಕೆ ಅನಾನುಕೂಲವನ್ನುಂಟುಮಾಡುವುದಿಲ್ಲ.

ಸಂಚಾರ ಸ್ವಾತಂತ್ರ್ಯದ ಅಧಿಕಾರವು ಸಮಸ್ತ ಪೌರರಿಗೂ ಸಹಜವಾಗಿರಬೇಕಾದುದರಿಂದ ಒಬ್ಬ ಪೌರನು ಮತ್ತೊಬ್ಬ ಪೌರನ ಸಂಚಾರಕ್ಕೆ ಆಕ್ಷೇಪವನ್ನಾಗಲಿ ಆತಂಕವನ್ನಾಗಲಿ ಒಡ್ಡಬಾರದು. ತನಗೆ ಇರಬೇಕಾದ ಅಧಿಕಾರವು ಇತರ ಪೌರರಿಗೂ ಇರತಕ್ಕದ್ದೆಂಬ ನಿಯಮವನ್ನು ಪಾಲಿಸಬೇಕು.

## 3. ಮತಧರ್ಮದ ಸ್ವಾತಂತ್ರ್ಯ

ಪಾಶ್ಚಾತ್ಯದೇಶಗಳಲ್ಲಿ ಈ ಅಧಿಕಾರವನ್ನು ಅಮೂಲ್ಯವೆಂದು ಭಾವಿಸಿರುವರು. ದೇವರನ್ನು ತನಗೆ ತೋರಿದ ರೀತಿಯಲ್ಲಿ ಪೂಜಿಸುತ್ತ ತನಗೆ

ಒಪ್ಪಿದ ಮತಧರ್ಮವನ್ನು ಅವಲಂಬಿಸುವುದರಲ್ಲಿ ಪ್ರತಿ ಪೌರನಿಗೂ ಸರ್ವ ಸ್ವಾತಂತ್ರ್ಯವಿರತಕ್ಕದ್ದೆಂಬುದು ಈ ಅಧಿಕಾರದ ಅರ್ಥ. ಅನೇಕ ಕಾಲ ಸಹಿಷ್ಣುತೆಯನ್ನೇ ಮುಖ್ಯ ಲಕ್ಷಣವಾಗಿ ಪಡೆದಿರುವ ಹಿಂದೂ ಜನರಿಗೆ ಈ ಅಧಿಕಾರವು ಸ್ವಲ್ಪ ವಿಚಿತ್ರವಾಗಿಯೇ ತೋರಬಹುದು. ಪಾಶ್ಚಾತ್ಯ ರಾಷ್ಟ್ರಗಳ ನಿವಾಸಿಗಳು ಈ ವಿಷಯದಲ್ಲಿ ಬಹುಕಾಲ ಹಿಂಸೆಯನ್ನು ಅನುಭವಿಸಿದ್ದಾರೆ. ಈಗಲೂ ಕೆಲವು ರಾಷ್ಟ್ರಗಳಲ್ಲಿ ಮತಾಚರಣೆಗಳ ವಿಷಯದಲ್ಲಿ ಸಂಪೂರ್ಣವಾದ ತಾಳ್ಮೆಯು ತೋರಿಕೊಂಡಿಲ್ಲ. ಹಿಂದೂ ಮತಸ್ಥರು ಇತರರನ್ನು ತಮ್ಮ ಮತಕ್ಕೆ ಸೇರಿಸುವ ಆಚಾರವನ್ನೇ ಬೆಳೆಸದೆ, ಬೇಕಾದವರು ಬೇಕಾದ ಮತವನ್ನು ಅವಲಂಬಿಸಬಹುದೆಂಬ ಉದಾರತತ್ವವನ್ನನುಸರಿಸುತ್ತ ಇತರ ಮತಸ್ಥರಿಗೆ ಅಡ್ಡಿಮಾಡುವ ಚಿಂತನೆಯನ್ನೇ ಮಾಡಲಿಲ್ಲ. ಆದರೆ ಇತರ ಮತಸ್ಥರು ತಮ್ಮ ಮತವೇ ಶ್ರೇಷ್ಠತಮವೆಂದು ನಂಬಿ ತಮ್ಮ ಮತದಲ್ಲಿಯೇ ಇತರರನ್ನೂ ಸೇರಿಸುವ ಪ್ರಯತ್ನ ಮಾಡತಕ್ಕವರು. ಈ ಮತಬೋಧೆಯ ಪ್ರಯತ್ನದಲ್ಲಿ ದುರುದ್ದೇಶವಿರುವುದಿಲ್ಲ. ಸದುದ್ದೇಶದಿಂದಲೇ, ತಪ್ಪು ಮಾರ್ಗದಲ್ಲಿ ಹೆಜ್ಜೆ ಹಾಕುತ್ತಿರುವವರನ್ನು ಸನ್ಮಾರ್ಗಕ್ಕೆಳೆದು ಉದ್ಧಾರಮಾಡುವ ಪರೋಪಕಾರ ದೃಷ್ಟಿಯಿಂದಲೇ, ಕ್ರೈಸ್ತ ಮತಸ್ಥರೂ ಮುಸಲ್ಮಾನರೂ ತಮ್ಮ ಮತಪ್ರಚಾರಕ್ಕೆ ತೊಡಗುತ್ತಾರೆ. ಅನ್ಯಮತಸ್ಥರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುವ ಅಂಶದಲ್ಲಿಯೇ ತೊಂದರೆಗಳು ತೋರಿಕೊಳ್ಳುತ್ತವೆ.

ಕೆಲವು ಸರ್ಕಾರಗಳು ಇಷ್ಟವಾದ ಮತಧರ್ಮವೊಂದನ್ನಾರಿಸಿಕೊಂಡು ಅದನ್ನೇ ರಾಷ್ಟ್ರದ ಮತಧರ್ಮವಾಗಿ ಸ್ಥಾಪಿಸಿ ಅನ್ಯಮತಸ್ಥರನ್ನು ಅನೇಕ ಅನಾನುಕೂಲತೆಗಳಿಗೆ ಗುರಿಮಾಡಿದುದುಂಟು. ಈಚಿನ ಕಾಲದಲ್ಲಿ ರಾಷ್ಟ್ರ ಸ್ವರೂಪದಲ್ಲಿ ಅಂತಹ ಮತಧರ್ಮದ ಪಕ್ಷಪಾತದ ಸುಳಿವೇ ಇರಬಾರದೆಂಬುದು ಸಾಮಾನ್ಯವಾದ ತತ್ವ. ಸರ್ಕಾರವು ಅಥವಾ ರಾಷ್ಟ್ರವು ಎಲ್ಲ ಪೌರರಿಗೂ ಸೇರಿದ್ದಾದುದರಿಂದ ಒಂದು ಭಾಗದವರಿಗೆ ಮಾತ್ರ ಅನುಕೂಲವಾಗಿರತಕ್ಕ ರಾಷ್ಟ್ರಸ್ಥಿತಿಯು ನ್ಯಾಯವೇ ಅಲ್ಲವೆಂದು ಸಿದ್ಧಾಂತ. ಪೌರರಾದವರು ತಮ್ಮ ಪೂರ್ವಿಕರ ಮತವನ್ನೇ ಅವಲಂಬಿಸುವುದಕ್ಕೂ ಬೇರೆ ಮತವನ್ನು ಸ್ವೀಕರಿಸುವುದಕ್ಕೂ ಸ್ವತಂತ್ರರಾಗಿಯೇ ಇರತಕ್ಕುದು.

ರಾಷ್ಟ್ರಮುಖವಾದ ಸರ್ಕಾರವು ಒಂದು ಮತಧರ್ಮದಲ್ಲಿ ಪಕ್ಷಪಾತ ತೋರುವುದಾಗಲಿ, ಪೌರರು ತಮ್ಮಿಷ್ಟಾನುಸಾರವಾಗಿ ಮತಾಂತರ ಸ್ವೀಕಾರ ಮಾಡುವುದರಲ್ಲಿ ಆತಂಕವನ್ನೊಡ್ಡುವುದಾಗಲಿ ನ್ಯಾಯವಲ್ಲ. ಸರ್ಕಾರವು ಯಾವ ಒಂದು ಮತವನ್ನೂ ಕಟ್ಟಿಕೊಳ್ಳದೆ ಇರುವುದಲ್ಲದೆ ಎಲ್ಲ ಮತಗಳಲ್ಲಿಯೂ ಸಮಾನವಾದ ದೃಷ್ಟಿಯನ್ನು ತೋರುತ್ತ ವರ್ತಿಸುತ್ತಿರಬೇಕು. ಮತವಿಷಯದಲ್ಲಿ ಪ್ರವೇಶವನ್ನೇ ಮಾಡದೆ ಇರುವುದು ಸರ್ಕಾರಕ್ಕೆ ಸದಾ ಸಾಧ್ಯವಾಗುವುದಿಲ್ಲ; ಎರಡು ಬೇರೆ ಬೇರೆ ಮತಸ್ಥರು ಕಲಹಕ್ಕೆ ತೊಡಗಿದಾಗ ಸರ್ಕಾರವು ಪ್ರವೇಶಮಾಡಲೇಬೇಕಾಗುವುದು. ಆದ್ದರಿಂದ ಸರ್ಕಾರದ ಪ್ರವರ್ತನೆಯು ಔದಾಸೀನ್ಯವಾಗಿರಬಾರದು; ಎಚ್ಚರಿಕೆಯಿಂದ ಕೂಡಿದ ತಾಳ್ಮೆ ಮತ್ತು ಸಮದೃಷ್ಟಿ ಅಥವಾ ನ್ಯಾಯರಕ್ಷಣೆಯಾಗಿರಬೇಕು.

ಪೌರನಿಗೆ ಇಷ್ಟವಾದ ಮತವನ್ನು ಅವಲಂಬಿಸುವ ಸ್ವಾತಂತ್ರ್ಯ ವಿರತಕ್ಕದ್ದು ನ್ಯಾಯ. ಆದರೆ ಯಾವ ಪೌರನಾದರೂ ಇತರರಿಗೆ ಅದೇ ವಿಧವಾದ ಸ್ವಾತಂತ್ರ್ಯವನ್ನು ಸಲ್ಲಿಸಬೇಕಾದುದು ಕರ್ತವ್ಯ. ಇತರರು ತಮ್ಮಿಷ್ಟಬಂದ ಮತವನ್ನು ಅನುಸರಿಸುವುದರಲ್ಲಿ ತಾನು ತನಗಿಷ್ಟವಿಲ್ಲವೆಂದು ಆತಂಕವನ್ನೊಡ್ಡಬಾರದು. ನಾಸ್ತಿಕರೆಂದರೆ ಸಾಧಾರಣವಾಗಿ ಜನರಿಗೆ ತಾಳ್ಮೆಯು ಮಾಯವಾಗುವುದು. ಆದರೂ ನಾಸ್ತಿಕರು ಶ್ರೇಷ್ಠ ಪೌರರಾಗಿರಬಹುದು. ಬ್ರಾಡ್ಲಾ (Bradlaugh) ಮತ್ತು ಇಂಗರ್ಸಾಲ್ (Ingersoll) ಎಂಬುವವರು ಪ್ರಸಿದ್ಧ ನಾಸ್ತಿಕರು; ಆದರೂ ಅವರು ತಮ್ಮ ದೇಶಗಳ ಹಿತವನ್ನು ಸಾಧಿಸಿದ ಪ್ರಸಿದ್ಧ ಪೌರರು. ಇತರರಲ್ಲಿ ಸಹನೆಯನ್ನು ತೋರದಿದ್ದಾಗ ಪೌರನಿಗೆ ಸ್ವಾತಂತ್ರ್ಯವೇ ಇರುವುದಿಲ್ಲ. ತನ್ನ ಸ್ವಾತಂತ್ರ್ಯಕ್ಕೆ ಅಸ್ತಿಭಾರವಾದುದು ಅನ್ಯರಲ್ಲಿ ಸಹಿಷ್ಣುತೆ. ಈ ಅಮೋಘ ತತ್ತ್ವವನ್ನು 2,000 ವರ್ಷಗಳ ಹಿಂದೆಯೇ ಧರ್ಮಾಶೋಕ ಚಕ್ರವರ್ತಿಯು ಸಾರಿ ಇಡೀ ಜಗತ್ತಿಗೇ ಆದರ್ಶಗಳನ್ನು ತೋರಿಕೊಟ್ಟನು.

ಇತರರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುವ ಅಧಿಕಾರವಿರಬೇಕೆನ್ನುವವರು ಇತರರಿಗೂ ಅದೇ ಅಧಿಕಾರವನ್ನು ಒಪ್ಪಿಸಬೇಕು. ಕ್ರೈಸ್ತರೂ ಮುಸಲ್ಮಾನರೂ ಇತರರನ್ನು ತಮ್ಮ ಮತಗಳಿಗೆ ಸೇರಿಸಿ

ಕೊಳ್ಳುವ ಪ್ರಯತ್ನಮಾಡತಕ್ಕವರು; ಅವರ ಪ್ರಯತ್ನದಲ್ಲಿ ಆತಂಕ ತೋರ ಬಾರದೆನ್ನುವುದಾದರೆ ಬ್ರಹ್ಮಸಮಾಜದವರೋ ಆರ್ಯಸಮಾಜದವರೋ ಪ್ರಯತ್ನಪಟ್ಟು ಕ್ರೈಸ್ತರನ್ನೂ ಮುಸಲ್ಮಾನರನ್ನೂ ತಮ್ಮ ಮತಗಳಿಗೆ ಸೇರಿಸಿಕೊಳ್ಳುವ ವಿಷಯದಲ್ಲಿ ತಾವೂ ಆಕ್ಷೇಪವನ್ನು ತೋರಬಾರದು. ಇಂತಹ ಮತಸ್ವೀಕಾರ ಪದ್ಧತಿಗಳಲ್ಲಿ ಮಾತ್ರವೇ ತೊಂದರೆ ತೋರುವುದಿಲ್ಲ. ಮತಾಚಾರಗಳು ಪರಸ್ಪರ ವಿರೋಧವುಳ್ಳವುಗಳಾದರೆ ತೊಂದರೆಯು ಸಿದ್ಧ ವಾಗಿಯೇ ಇರುತ್ತದೆ. ಉದಾಹರಣೆಗೆ ಮಸೀದಿಗಳೆದುರಿಗೆ ವಾಲಗ ವನ್ನೂದುವ ಒಂದು ಅಂಶವನ್ನು ಪರೀಕ್ಷಿಸಬಹುದು. ಮುಸಲ್ಮಾನರು ಮಸೀದಿಗಳು ಪವಿತ್ರಸ್ಥಲಗಳಾದುದರಿಂದಲೂ, ಅಲ್ಲಿ ಭಕ್ತರು ತದೇಕ ಮನಸ್ಕರಾಗಿ ದೇವರ ಪ್ರಾರ್ಥನೆ ಮಾಡುತ್ತಿರುವುದರಿಂದಲೂ ಅವು ಗಳೆದುರಿನಲ್ಲಿ ಬಾಜಾಬಜಂತ್ರಿಗಳು ನಡೆಯತಕ್ಕುದಲ್ಲವೆಂದು ಅಭಿಪ್ರಾಯ ಪಡುವರು. ಹಿಂದೂಗಳಾದರೆ ಬೀದಿಗಳಲ್ಲಿ ಉತ್ಸವಗಳನ್ನೂ ಮೆರವಣಿಗೆ ಗಳನ್ನೂ ಮಂಗಳಗಾನವಿಲ್ಲದೆ ನಡೆಸುವುದು ಅಯುಕ್ತವೆಂದು ಅಭಿಪ್ರಾಯ ಪಡತಕ್ಕವರು. ಒಬ್ಬರ ಹಿತವು ಮತ್ತೊಬ್ಬರಿಗೆ ಅಹಿತವಾಗಿ ಪರಿಣಮಿಸುವ ಇಂತಹ ಉಭಯಸಂಕಟದ ಸಮಯದಲ್ಲಿ ನ್ಯಾಯ ತೀರ್ಮಾನಮಾಡು ವುದೇ ಅಸಾಧ್ಯ. ಹೇಗೆ ಇತ್ಯರ್ಥಮಾಡಿದಾಗ್ಯೂ ಯಾರಿಗಾದರೊಬ್ಬರಿಗೆ ಅಸಮಾಧಾನವಿದ್ದೇ ಇರುವುದು. ಇಂತಹ ಸಂದರ್ಭಗಳಲ್ಲಿ "ಮತ್ತೊಂದು ಧರ್ಮವನ್ನು ಅನುಸರಿಸತಕ್ಕವರಿಗೆ ಅಹಿತವಾಗಿ ತೋರುವ ನಿಯಮವನ್ನು ಒಂದು ಧರ್ಮದವರು ಅವಲಂಬಿಸಬಹುದೇ?" ಎಂದು ಚರ್ಚೆಮಾಡ ಬಹುದು. ಆ ಚರ್ಚೆಯಿಂದ ದೃಷ್ಟಿವೈಶಾಲ್ಯವೊದಗಬಹುದು; ತೀರ್ಮಾನವು ಪ್ರಾಪ್ತವಾಗುವುದಿಲ್ಲ.

ಇಂತಹ ಸಂದರ್ಭಗಳಲ್ಲಿ ಅಧಿಕಾರ ನಿರ್ವಾಹಕ್ಕಿಂತಲೂ ಕರ್ತವ್ಯ ನಿರ್ವಾಹವು ದೊಡ್ಡದೆಂಬುದು ಅನುಷ್ಠಿತವಾದಲ್ಲಿ ತೋರಿದ ತೊಂದರೆಯೆಲ್ಲವೂ ಮಾಯವಾಗುವುದು. ಇತರರ ಅಧಿಕಾರವನ್ನು ಮೊದಲು ಸಲ್ಲಿಸುವ ಔದಾರ್ಯವು ಸಹಜಗುಣವಾದಲ್ಲಿ ತೊಂದರೆಯು ತೋರುವುದೇ ಇಲ್ಲ. ಮಸೀದಿಗಳ ಮುಂದೆ ವಾದ್ಯಗಳನ್ನು ಬಾರಿಸಬಾರದೆಂದು ಹಿಂದೂಜನರು ಮುಸಲ್ಮಾನರ ಇಷ್ಟವನ್ನು ಗೌರವಿಸುವ ಬುದ್ಧಿಯನ್ನೇ ತೋರಿದಲ್ಲಿ

ಮುಸಲ್ಮಾನರೇ ಕರೆದು ಬಾರಿಸಿಕೊಂಡುಹೋಗಿರೆಂದು ಹೇಳಿದರೂ ಹಿಂದೂಗಳು ಬಾರಿಸುವುದಿಲ್ಲ. ಹಿಂದೂಗಳು ಉತ್ಸವವನ್ನು ನಡೆಸಿದಾಗ ಮಂಗಲವಾದ್ಯಗಳಿಲ್ಲದೆಹೋದರೆ ಉತ್ಸವಕ್ಕೆ ಲೋಪವೆಂದು ಭಾವಿಸುವ ಅಂಶವನ್ನು ಗೌರವಿಸಿ ಮುಸಲ್ಮಾನರು ಹಿಂದೂಜನರ ಇಷ್ಟವನ್ನು ಮೊದಲೇ ಸನ್ಮಾನಮಾಡುವ ಬುದ್ಧಿಯನ್ನು ತೋರಿದಲ್ಲಿ ತಮ್ಮ ಮಸೀದಿಗಳ ಮುಂದೆ ವಾದ್ಯಧ್ವನಿಗಳಾದರೂ ಆಕ್ಷೇಪವನ್ನೇ ಮಾಡುವುದಿಲ್ಲ. ಈ ದೃಷ್ಟಾಂತದಲ್ಲಿ ಕರ್ತವ್ಯದೃಷ್ಟಿಯು ಅಧಿಕಾರದೃಷ್ಟಿಗಿಂತ ಎಷ್ಟು ಹೆಚ್ಚಿನದೆಂಬುದು ಸ್ಪಷ್ಟವಾಗುತ್ತದೆ.

ಮತಸಂಬಂಧವಾದ ವಿಷಯದಲ್ಲಿ ಮಾತ್ರವೇ ಈ ಕರ್ತವ್ಯಾಧಿಕಾರಗಳಿರತಕ್ಕುವಲ್ಲ; ಎಲ್ಲ ವಿಧವಾದ ಅಭಿಪ್ರಾಯಗಳಲ್ಲಿಯೂ ಆಚರಣೆಗಳಲ್ಲಿಯೂ ಇರತಕ್ಕವು. ಪೌರನಾದವನು ತನ್ನ ಅಭಿಮತ ನಿಶ್ಚಯಗಳಂತೆ ವರ್ತಿಸಲು ಅಧಿಕಾರಿ ಹೇಗೋ ಹಾಗೆಯೇ ಇತರ ಪೌರರೂ ತಮ್ಮ ಅಭಿಮತ ನಿಶ್ಚಯಗಳಂತೆ ವರ್ತಿಸುವುದರಲ್ಲಿ ಅಧಿಕಾರಿಗಳು ಎಂಬುದನ್ನು ಮರೆಯಬಾರದು. ಪ್ರತಿಯೊಬ್ಬರಿಗೂ ತಮ್ಮ ಬುದ್ಧಿಗೆ ತೋರಿದಂತೆ ಅಭಿಪ್ರಾಯ ನಿಷ್ಕರ್ಷೆಮಾಡಿಕೊಳ್ಳುವ ಸ್ವಾತಂತ್ರ್ಯವಿರಬೇಕು. ಅಭಿಪ್ರಾಯದ ಅಥವಾ ಆಚರಣೆಯ ಸ್ವಾತಂತ್ರ್ಯಕ್ಕೆ ರಾಷ್ಟ್ರಹಿತವೊಂದೇ ಅಡ್ಡಿಯನ್ನು ನಿರ್ಮಿಸತಕ್ಕ ಅಂಶ. ಪತಿಯು ಮೃತಪಟ್ಟ ಸಮಯದಲ್ಲಿ ಸಹಧರ್ಮಿಣಿಯು ಸಾವಿನಲ್ಲಿಯೂ ಪತಿಯನ್ನಗಲಿರಬಾರದೆಂಬ ಪಾತಿವ್ರತ್ಯ ಧರ್ಮದ ಆಚರಣೆಯಲ್ಲಿ ಸಹಗಮನದ ಪದ್ಧತಿಯು ಹುಟ್ಟಿತು. ಸಹಗಮನಮಾಡಿದ ಮಹಿಳೆಯರ ಹೆಸರುಗಳು ಇಂದಿಗೂ ನಿತ್ಯಸ್ಮರಣೀಯವಾಗಿವೆ. ಆದರೆ ಸಹಗಮನವು ಒಂದು ಬಗೆಯ ಆತ್ಮಹತ್ಯವೇ ಆದುದರಿಂದ ರಾಷ್ಟ್ರಕ್ಕೆ ಅಹಿತವಾದುದು. ಎಷ್ಟು ಉದ್ದಾಮವಾದ ವೀರತ್ವವಿದ್ದರೂ ಆತ್ಮಹತ್ಯವನ್ನು ರಾಷ್ಟ್ರವು ಸೈರಿಸಲಾರದು. ಆದುದರಿಂದ ಸಹಗಮನ ಪದ್ಧತಿಯನ್ನು ಸರ್ಕಾರದವರು ಒಪ್ಪಿಕೊಳ್ಳಲಾರರು; ಆ ಪದ್ಧತಿಯ ಆಚರಣೆಯಲ್ಲಿ ಪೌರ ಸ್ವಾತಂತ್ರ್ಯವು ಇರತಕ್ಕುದಲ್ಲ. ರಷ್ಯಾ ದೇಶದಿಂದ ಭ್ರಷ್ಟರಾದ ಕೆಲವರು ಡುಖೋಬೋರರು ವಸ್ತ್ರಹೀನರಾಗಿರತಕ್ಕುದೇ ಸಹಜವೆಂಬ ಅಭಿಪ್ರಾಯವುಳ್ಳವರು ಕೆನಡ ಡುಮಿನಿಯನ್ನಿನಲ್ಲಿ ನೆಲೆಸಿದರು.

ಆ ಡುಮಿನಿಯನ್ನಿನ ಸರ್ಕಾರದವರು ಅವರಿಗೆ ಸ್ವಾತಂತ್ರ್ಯವನ್ನು ಕೊಡದಾದರು. ನಗ್ನರಾಗಿ ಬೀದಿಗಳಲ್ಲಿ ಹೊರಟರೆ ಅದರಿಂದ ರಾಷ್ಟ್ರದ ಇತರ ಪೌರರಿಗೆ ಅಸಹ್ಯವಾಗಿ ತೋರುವುದೆಂಬುದು ಆ ಸರ್ಕಾರದವರ ಅಭಿಪ್ರಾಯವಾಗಿತ್ತು. ಆದ್ದರಿಂದ ಆ ಗುಂಪಿನವರನ್ನು ದಂಡಿಸುವುದಕ್ಕೂ ಆ ಸರ್ಕಾರದವರು ಸಿದ್ಧರಾದರು. ನಮ್ಮ ದೇಶದಲ್ಲಿ ಕೆಲವು ಸಂನ್ಯಾಸಿಗಳು ನಗ್ನರಾಗಿಯೇ ಇರುವುದುಂಟು; ಆದರೆ ಅವರ ನಗ್ನತೆಯಿಂದ ಇಲ್ಲಿಯ ಜನರಿಗೆ ಅಸಹ್ಯ ತೋರುವುದಿಲ್ಲ. ಅವರನ್ನು ಗುರುಸ್ಥಾನದಲ್ಲಿಟ್ಟು ಮರ್ಯಾದೆಮಾಡುವರು. ಡುಖೋಬೋರರು ಇತರರ ಸಂಪರ್ಕವೇ ಇಲ್ಲದಂತೆ ತಾವೇ ಪ್ರತ್ಯೇಕರಾಗಿರುವವರಾದರೆ, ಎಲ್ಲಿಯವರೆಗೆ ಅವರ ವರ್ತನೆಯಿಂದ ರಾಷ್ಟ್ರಹಾನಿ ತೋರುವುದಿಲ್ಲವೋ ಅಲ್ಲಿಯವರೆಗೆ ಸರ್ಕಾರದವರು ಅವರ ಗೋಜಿಗೆ ಹೋಗುವಹಾಗಿಲ್ಲ.

ಆದ್ದರಿಂದ ಮತಧರ್ಮ ಸ್ವಾತಂತ್ರ್ಯವೆಂಬ ಅಧಿಕಾರದಲ್ಲಿ ಇತರರ ಅಧಿಕಾರವನ್ನು ಗೌರವಿಸುವ ಕರ್ತವ್ಯವೊಂದು, ರಾಷ್ಟ್ರಕ್ಕೆ ಲೋಪ ತೋರದೆ ಇರುವುದೊಂದು, ಅಂತು ಎರಡು ಎಲ್ಲೆಗಳು. ಎರಡೂ ಪ್ರಬಲವಾದವುಗಳು.

## 4. ವಾಕ್ಸ್ವಾತಂತ್ರ್ಯ

ವಾಕ್ಕೆಂದರೆ ಬಾಯಿಮಾತು ಮಾತ್ರವೇ ಅಲ್ಲ; ಬರಹವೂ ಸೇರತಕ್ಕದ್ದು. ಸಂಜ್ಞೆಗಳನ್ನೂ ವಾಕ್ಕಿನಲ್ಲಿ ಸೇರಿಸಬಹುದು. ತನ್ನ ಮನಸ್ಸಿನಲ್ಲಿರುವುದನ್ನು ಪ್ರಕಾಶಪಡಿಸುವುದಕ್ಕೇ ವಾಕ್ಕೆಂದು ಹೇಳತಕ್ಕದ್ದು. ವಾಕ್ಸ್ವಾತಂತ್ರ್ಯವೆಂದರೆ ಪೌರನಾದವನು ಮಾತನಾಡುವಾಗ ಮತ್ತು ಬರೆಯುವಾಗ ಏನನ್ನು ಬೇಕಾದರೂ, ಯಾವಾಗ ಬೇಕಾದರೂ, ಹೇಗೆ ಬೇಕಾದರೂ ತನ್ನ ಮನಸ್ಸಿನ ಯೋಚನೆಗಳನ್ನು ಪ್ರಕಟಗೊಳಿಸಲು ಸ್ವತಂತ್ರನಾಗಿರಬೇಕೆಂಬುದು. ಈ ಅಧಿಕಾರಕ್ಕೂ ಅಡ್ಡಿಗಳು ಎರಡೇ— ರಾಷ್ಟ್ರಹಿತ, ಅನ್ಯರ ಅಧಿಕಾರದಲ್ಲಿ ಗೌರವ. ಎರಡು ಬಗೆಯ ಅಡ್ಡಿಗಳೂ ವಿಧಿರೂಪದಲ್ಲಿಯೇ ಸಿದ್ಧವಾಗಿರುತ್ತವೆ. ರಾಷ್ಟ್ರಕ್ಕೆ ವಿರೋಧವಾಗಿ ವಾಕ್ಪ್ರಯೋಗವಮಾಡಿದಾಗ ರಾಷ್ಟ್ರದ್ರೋಹವೆಂಬ ಅಪರಾಧವು ತೋರಿ

ಕೊಂಡು ದಂಡಾರ್ಹವೆನಿಸುವುದು. ಅಶ್ಲೀಲವಾದ ರೀತಿಯಲ್ಲಿ ಮಾತ ನಾಡಿದರೂ ಬರೆದರೂ ರಾಷ್ಟ್ರಕ್ಕೆ ಅಹಿತವಾದುದರಿಂದ ದಂಡಾರ್ಹವಾಗು ವುದು. ಮತ್ತೊಬ್ಬರನ್ನು ಬೈದಾಡಿದ್ದೇ ಆದರೆ ಮಾನನಷ್ಟದ ಆಪಾದನೆಗೆ ಗುರಿಯಾಗುವ ಸಂಭವವುಂಟು.

ಇತರರ ಅಧಿಕಾರಕ್ಕೆ ಸಲ್ಲಿಸಬೇಕಾದ ಗೌರವವೇ ಎಂತಹ ಪ್ರಬಲ ವಾದ ಅಡ್ಡಿಯಾಗಬಹುದೆಂಬುದನ್ನು ಚರ್ಚೆಯ ಸಭೆಗಳಲ್ಲಿ ಕಾಣಬಹುದು. ಸಭಿಕರೆಲ್ಲರೂ ಅಲ್ಲಿ ಮಾತನಾಡುವ ಅಧಿಕಾರವುಳ್ಳವರು. ಆದರೆ ತನ್ನ ಮಾತನ್ನು ಇತರರು ಕೇಳಬೇಕಾದರೆ ಪ್ರತಿ ಸಭಿಕನೂ ಇತರರ ಮಾತು ಗಳಿಗೆ ಅವಕಾಶವನ್ನೂ ಗಮನವನ್ನೂ ಕೊಡಬೇಕು. ಇಬ್ಬರು ಮೂವರು ಏಕಕಾಲದಲ್ಲಿ ಎದ್ದು ಮಾತನಾಡುವುದು, ಒಬ್ಬನೇ ಪುನಃಪುನಃ ಎದ್ದು ನಿಂತು ಮಾತನಾಡಲು ಪ್ರಯತ್ನಿಸುವುದು, ಮಾತನಾಡುವ ಸಮಯವೂ ಅವಕಾಶವೂ ದೊರೆತಾಗ ಅಸಂಬದ್ಧವಾಗಿಯೋ ಅತಿದೀರ್ಘವಾಗಿಯೋ ಭಾಷಣಮಾಡುವುದು ಮುಂತಾದವುಗಳಿಂದ ಸಭೆಯ ಕೆಲಸವೇ ಕೆಡು ವುದು. ಸಭಾಪತಿಯಾದವನು ರಾಷ್ಟ್ರಪತಿಯಂತೆಯೋ ದಂಡಾಧಿಕಾರಿ ಯಂತೆಯೋ ಇದ್ದು ಸಭಾಕಾರ್ಯವು ಸಾಂಗವಾಗಿ ನಡೆಯಲು ತಕ್ಕ ನಿಬಂಧನೆಗಳನ್ನು ಬಲವಂತಪಡಿಸುವುದೇ ಅಲ್ಲದೆ ಅವಶ್ಯ ತೋರಿದಾಗ ತಾನೇ ಆಚಾರನಿಷ್ಕರ್ಷೆಯನ್ನು ವಿಧಿಸುವನು. ಸಭಾಪತಿಯ ಆಜ್ಞೆ ಯನ್ನು ಅಸಡ್ಡೆಮಾಡುವುದು ಸಭಾಸಮುಖದಲ್ಲಿ ಅಪರಾಧ ನಡೆದಂತೆಯೇ ಪರಿಣಮಿಸುವುದು. ರಾಷ್ಟ್ರದ ಶಾಸಕ ಸಭೆಗಳಲ್ಲಿ ಸಭಾಪತಿಯೇ ದಂಡಧರನು. ಆ ಸಭೆಗಳಲ್ಲಿ ಮಾತ್ರ ವಿಶಿಷ್ಟವಾದ ಆಚಾರವಿರತಕ್ಕುದು ಅವಶ್ಯ. ಹೊರಗಡೆ ಹೇಳಿದರೆ ರಾಷ್ಟ್ರದ್ರೋಹವೆಂದೋ ದಂಡಾರ್ಹ ವೆಂದೋ ನಿಶ್ಚಯವಾಗತಕ್ಕ ಅಂಶಗಳನ್ನು ಶಾಸಕ ಸಭೆಗಳ ಸದಸ್ಯರು ಸಭೆಗಳಲ್ಲಿ ಹೇಳಲು ವಿಶಿಷ್ಟವಾದ ಸ್ವಾತಂತ್ರ್ಯವು ಅವರಿಗಿರುತ್ತದೆ. ನಿರ್ವಂಚನೆಯಿಂದ ತಮ್ಮ ಅಭಿಪ್ರಾಯಗಳನ್ನು ಪ್ರಕಾಶಗೊಳಿಸುವುದು ಆ ಸಭಿಕರ ಕರ್ತವ್ಯ. ಆದ್ದರಿಂದ ಅವರಿಗೆ ಆ ಅಧಿಕಾರವಿರತಕ್ಕುದು ನ್ಯಾಯ. ಆದರೆ ಆ ಸಭಿಕರು ಅಲ್ಲಿಯ ನಿಯಮಗಳಿಗೂ ಆಚಾರ ಸಂಪ್ರದಾಯಗಳಿಗೂ ಬದ್ಧರಾಗಿಯೇ ಭಾಷಣಮಾಡಬೇಕು.

ಆಧುನಿಕ ಕಾಲದಲ್ಲಿ ವಾಕ್ಸ್ವಾತಂತ್ರ್ಯವನ್ನು ಹೆಚ್ಚಾಗಿ ಆಶಿಸತಕ್ಕದ್ದು ವೃತ್ತಪತ್ರಿಕೆಗಳ ಸಮೂಹ. ಭಾಷಣಗಳಿಗೆ ವೇದಿಕೆ ಹೇಗೋ ಲೇಖನಕ್ಕೆ ಪತ್ರಿಕೆಗಳೂ ಪುಸ್ತಕಗಳೂ ಹಾಗೆ. ಮುದ್ರಣ ಯಂತ್ರಗಳ ಉಪಯೋಗವು ಹೆಚ್ಚುತ್ತಲಿರುವ ಆಧುನಿಕ ಕಾಲದಲ್ಲಿ ವೃತ್ತಪತ್ರಿಕೆಗಳೂ, ಮಾಸಪತ್ರಿಕೆಗಳೂ, ಪುಸ್ತಕಗಳೂ ಜನಜೀವನದಲ್ಲಿ ಪ್ರಬಲವಾದ ಸ್ಥಾನವನ್ನು ಪಡೆದಿವೆ. ಜನರ ಅಭಿಪ್ರಾಯಗಳು ಸ್ಪಷ್ಟವಾಗಿ ಪ್ರಕಟವಾಗುವುದು ಆ ಮೂಲಕವೇ. ಭಾಷಣವಾದರೆ ತಾತ್ಕಾಲಿಕವಾಗಿರುವುದು; ಲೇಖನವಾದರೆ ಸ್ಥಿರವಾಗಿ ಉಳಿಯುವುದು. ಆದ್ದರಿಂದ ವೃತ್ತಪತ್ರಿಕೆಗಳೇ ಜನತೆಯ ಮುಖ. ಜನತೆಯ ಇಷ್ಟವನ್ನನುಸರಿಸಿ ಸರ್ಕಾರವು ನಡೆಯಬೇಕಾಗಿರುವಾಗ್ಗೆ ವೃತ್ತಪತ್ರಿಕೆಗಳಿಗೆ ಯಾವ ಆತಂಕವೂ ಇಲ್ಲದೆ ಇರತಕ್ಕದ್ದು ಅತ್ಯವಶ್ಯವೆನಿಸಿದೆ. ವ್ಯಕ್ತಿ ದೂಷಣ, ಅಶ್ಲೀಲ ಪ್ರಯೋಗ ಮುಂತಾದವು ದಂಡವಿಧಿಗೇ ವಿರುದ್ಧವಾದುದರಿಂದ ಸಾಮಾನ್ಯ ದಂಡವಿಧಿಯೇ ವೃತ್ತಪತ್ರಿಕೆಗಳಿಗೆ ಸಾಕಾದಷ್ಟು ಎಲ್ಲೆಗಳಾಗಿರತಕ್ಕುದು. ಆಧುನಿಕ ರಾಷ್ಟ್ರಗಳಲ್ಲಿ ವೃತ್ತಪತ್ರಿಕೆಗಳಿಗೆ ಅಡ್ಡಿಯನ್ನೊಡ್ಡುವುದು ನ್ಯಾಯ ಸಮ್ಮತವಾದುದೇ ಅಲ್ಲ. ಸರ್ಕಾರದ ನಡೆವಳಿಕೆಗಳನ್ನು ವೃತ್ತಪತ್ರಿಕೆಗಳು ವಿಮರ್ಶೆಗೆ ಗುರಿಮಾಡಿದಷ್ಟೂ ರಾಷ್ಟ್ರಕ್ಕೆ ಒಳ್ಳೆಯದೇ ಎಂಬ ಅಭಿಪ್ರಾಯವು ಬಲವಾಗಿದೆ. ಅಮೆರಿಕದ ಸರ್ವಾಧ್ಯಕ್ಷನಾದ ರೂಸ್‌ವಾಲ್ಟ್ ಎಂಬಾತನು ರಾಷ್ಟ್ರೋದ್ಧಾರಕ್ಕಾಗಿ ಪ್ರಬಲ ಸನ್ನಾಹವನ್ನು ತೊಡಗಿದಾಗ ವೃತ್ತಪತ್ರಿಕಾ ಸಂಪಾದಕರನ್ನು ಗೌರವದಿಂದ ಕರೆಯಿಸಿ "ನೀವು ನನ್ನನ್ನು ಹೊಗಳಿದರೆ ನಿಮ್ಮ ಕರ್ತವ್ಯ ಕೈಗೂಡಿದಂತಾಗಲಿಲ್ಲ. ನಾನು ಮೊದಲು ಮಾಡಿರುವ ಪ್ರಯತ್ನದಲ್ಲಿರಬಹುದಾದ ದೋಷಗಳನ್ನು ತೋರಿಕೊಡುವುದು ನಿಮ್ಮ ಕರ್ತವ್ಯ" ಎಂದು ಹೇಳಿದನು. ಇದರಿಂದ ವೃತ್ತಪತ್ರಿಕೆಗಳಿಂದ ರಾಷ್ಟ್ರಹಿತವು ಹೇಗೆ ನಡೆದೀತೆಂದೂ ವೃತ್ತಪತ್ರಿಕೆಗಳು ರಾಷ್ಟ್ರಾಂಗಗಳಲ್ಲಿ ಗಣ್ಯವಾಗಿರುವುದು ಹೇಗೆಂದೂ ಸ್ಪಷ್ಟವಾಗುವುದು.

ರಾಷ್ಟ್ರಕ್ಕೆ ವಿಪತ್ತು ತೋರಿಕೊಂಡ ಕಾಲದಲ್ಲಿ ಮಾತ್ರ ಕಾರ್ಯಾಂಗದವರು ವಾಕ್ಸ್ವಾತಂತ್ರ್ಯಕ್ಕೆ ಆತಂಕವನ್ನು ಕಲ್ಪಿಸಬಹುದು. ಯುದ್ಧವೇಳೆಗಳಲ್ಲಿ ಸರ್ಕಾರದವರು ಸಮಾಚಾರವಾಹಿನಿಗಳನ್ನು ತಮ್ಮ

ಸ್ವಾಧೀನದಲ್ಲಿಯೇ ಇಟ್ಟುಕೊಂಡು ತಮಗೆ ಉಚಿತವೆಂದು ತೋರಿದಷ್ಟು ಮಾತ್ರ ಸಮಾಚಾರವನ್ನು ಪ್ರಕಟವಾಗುವಂತೆ ಬಿಟ್ಟು ವಾಕ್ಸ್ವಾತಂತ್ರ್ಯ ವನ್ನೂ ತಡೆಯುವರು. ಅಂತಹ ಕಾಲಗಳಲ್ಲಿ ಕಾರ್ಯಾಂಗದವರಿಗೆ ಆಪದ್ರಕ್ಷಣೆಯ ವಿಧಿ (Defence of the Realm)ಗೆ ಅನುಸಾರವಾಗಿ ಅಸಾಧಾರಣವಾದ ಅಧಿಕಾರಬಲವು ಪ್ರಾಪ್ತವಾಗುತ್ತದೆ. ಆ ಅಧಿಕಾರ ವನ್ನು ಶಾಸಕ ಸಭೆಗಳೇ ಒಪ್ಪಿಸಿದ ಕಾರಣದಿಂದ ಎಲ್ಲರೂ ಆ ಅಧಿಕಾರವನ್ನು ಗೌರವಿಸಬೇಕಾಗುತ್ತದೆ. ಆದರೆ ಇದು ಅಪರೂಪವಾದ ಕಾಲದಲ್ಲಿ ತೋರಿ ಕೊಳ್ಳತಕ್ಕುದು ; ಸಾಮಾನ್ಯ ವೇಳೆಗಳಲ್ಲಿ ತೋರತಕ್ಕದ್ದಲ್ಲ.

## ೯. ಸಂಘ ಸ್ವಾತಂತ್ರ್ಯ

ಪೌರರಲ್ಲಿ ಯಾರೂ ಏಕಾಂಗಿಯಾಗಿ ಇತರರ ಸಂಪರ್ಕವೇ ಇಲ್ಲದೆ ಇರಲಾಗುವುದಿಲ್ಲ. ಪೌರಜೀವನದಲ್ಲಿ ಒಂಟಿಯಾಗಿ ಕೆಲಸಮಾಡುವುದು ಕಷ್ಟಸಾಧ್ಯ. ಹತ್ತು ಜನರು ಜತೆಗೂಡಿದ ವೇಳೆಯಲ್ಲಿ ಕೆಲಸವು ಶೀಘ್ರ ವಾಗಿಯೂ ಸಮರ್ಪಕವಾಗಿಯೂ ನೆರವೇರುತ್ತದೆ. ಪೌರರಿಗೆ ಅವಶ್ಯವಾದ ವಿಷಯಗಳನ್ನು ಹತ್ತಾರು ಜನರು ಸೇರಿ ಚರ್ಚೆಮಾಡಿ ನಿರ್ದುಷ್ಟವಾದ ಮತ್ತು ತೃಪ್ತಿಕರವಾದ ಮಾರ್ಗವನ್ನು ನಿರ್ಧರಿಸಿ ಕೆಲಸಕ್ಕೆ ತೊಡಗಿ ದಲ್ಲಿ ಇಷ್ಟಾರ್ಥವು ಸುಲಭವಾಗಿಯೂ, ಸಮರ್ಪಕವಾಗಿಯೂ, ಶೀಘ್ರ ವಾಗಿಯೂ ಈಡೇರುವುದು. ಪಟ್ಟಣದಲ್ಲಿ ನೀರಿನ ಸರಬರಾಯಿ ತೃಪ್ತಿಕರವಾಗಿಲ್ಲದಿದ್ದಲ್ಲಿ ಪಟ್ಟಣ ನಿವಾಸಿಗಳೆಲ್ಲರೂ ಕಲೆತು ಕೃತಪ್ರಯತ್ನ ರಾದರೆ ಸುಲಭವಾಗಿ ತಿದ್ದುಪಡಿಯಾಗುವುದು. ಇಂತಹ ವಿಷಯಗಳೇ ಅಲ್ಲದೆ ಉತ್ಸವ ವಿನೋದಗಳಿಗಾಗಲಿ, ಆಟಪಾಟಗಳಿಗಾಗಲಿ, ವ್ಯಾಸಂಗ ಕ್ಕಾಗಲಿ, ಉದ್ಯೋಗಕ್ಕಾಗಲಿ, ವ್ಯಾಪಾರಕ್ಕಾಗಲಿ, ಕಲಾನುಭೋಗ ಕ್ಕಾಗಲಿ ಸಂಘಗಳು ಅತ್ಯವಶ್ಯಕ.

ಸಾಮಾನ್ಯವಾದ ಉದ್ದೇಶಗಳನ್ನು ಸಾಧಿಸಲು ಎಂತಹ ಕ್ಷೇತ್ರ ದಲ್ಲಾದರೂ ಸಂಘದ ಬಲ್ಮೆಯೇ ಬಲ್ಮೆ. ವೇದಾಂತ ಪ್ರವರ್ತಕ ಸಭೆಗಳಿಂದ ಮೊದಲ್ಗೊಂಡು ಗಿರಣಿಗಳ ಕೆಲಸಗಾರರ ಸಂಘದವರೆಗೆ ಪ್ರತಿ ಉದ್ದೇಶ ಸಾಧನೆಗೂ ಸಂಘವೇ ಏರ್ಪಾಡಾಗಿರುತ್ತದೆ. ಹೊಸ ಉದ್ದೇಶ ತೋರಿ

ದೊಡನೆಯೇ ಹೊಸ ಸಂಘವು ತೋರಿಕೊಳ್ಳುವುದು. ಸಂಘಗಳು ಹುಟ್ಟುವುದೂ ಮಾಯವಾಗುವುದೂ ರಾಷ್ಟ್ರಜೀವನದಲ್ಲಿ ನಿತ್ಯಗಟ್ಲೆಯಂತೆ. ಹಿತಸಾಧನೆಗಾಗಿ ಸಂಘವನ್ನು ಕಟ್ಟಿಕೊಳ್ಳುವ ಸ್ವಾತಂತ್ರ್ಯವು ಎಲ್ಲ ಪೌರರಿಗೂ ಸ್ವತಸ್ಸಿದ್ಧವಾಗಿ ಇರತಕ್ಕದ್ದು.

ಸಂಘ ಸ್ವಾತಂತ್ರ್ಯಕ್ಕೆ ಅಡ್ಡಿಯಾಗಿರತಕ್ಕವು ಹಿಂದೆ ಸೂಚಿತವಾದಂತೆ ಎರಡೇ. ಕಳ್ಳರು ಒಂದು ಸಂಘವನ್ನು ಕಟ್ಟಿಕೊಂಡರೆ ಆದರಿಂದ ರಾಷ್ಟ್ರಕ್ಕೆ ಹಾನಿಯೇ ಆಗುವುದು. ಆದ್ದರಿಂದ ರಾಷ್ಟ್ರಕ್ಕೆ ಅಹಿತವಲ್ಲದ ಉದ್ದೇಶದಿಂದ ಸ್ಥಾಪಿತವಾಗಿ ಕರ್ತವ್ಯನಿರ್ವಾಹ ಮಾಡುವ ಸಭೆಗಳಿಗೂ, ಸಮಾಜಗಳಿಗೂ, ಸಂಘಗಳಿಗೂ ಸಾಧಾರಣವಾದ ದಂಡವಿಧಿಯು ಎಲ್ಲೆಯೇ ಸಾಕಾಗಿರುತ್ತದೆ.

## ೮. ನಿರೋಧ ಸ್ವಾತಂತ್ರ್ಯ

ನಿರೋಧ ಸ್ವಾತಂತ್ರ್ಯವೆಂಬುದೂ ಪೌರರಿಗೆ ಸಹಜಸಿದ್ಧವಾದ ಅಧಿಕಾರವೇ ಆದರೂ ಇತರ ಅಧಿಕಾರಗಳಂತೆ ಅಲ್ಲ. ನಿರೋಧಾಧಿಕಾರವನ್ನು ನಿರ್ವಾಹಗೊಳಿಸುವುದು ಬಲು ಕಷ್ಟದ ಕೆಲಸ. ಸಾಧಾರಣವಾಗಿ ಉಪಯುಕ್ತವಾಗತಕ್ಕದ್ದೇ ಅಲ್ಲ.

ಇಂಗ್ಲಂಡಿನಲ್ಲಿ 13ನೇ ಶತಮಾನದಲ್ಲಿಯೇ ಈ ಅಧಿಕಾರವು ಸೂಚಿತವಾಯಿತು. ಜಾನ್ ಎಂಬ ದುಷ್ಟರಾಜನ ಆಳ್ವಿಕೆಯಲ್ಲಿ ಅಸಮಾಧಾನಪಟ್ಟ ಪ್ರಜಾಮುಖ್ಯರು ದಂಗೆಯೆದ್ದು ರಾಜನೊಡನೆ ಹೆಣಗಾಡಿ ಕಡೆಗೆ ಬಲವಂತದಿಂದ ಮ್ಯಾಗ್ನ ಕಾರ್ಟ (Magna Carta) ಎಂಬ ಪ್ರಸಿದ್ಧ ಸನ್ನದನ್ನು ಪಡೆದರು. ಆಳ್ವಿಕೆಯು ತೃಪ್ತಿಕರವಾಗಿಲ್ಲದಿದ್ದ ಸ್ಥಿತಿಯಲ್ಲಿ ಪೌರರಿಗೆ ಸರ್ಕಾರದ ಅಧಿಕಾರವನ್ನು ನಿರೋಧಿಸುವ ಅಧಿಕಾರವು ಅಂದಿನಿಂದ ಇಂಗ್ಲಂಡಿನಲ್ಲಿ ಪ್ರತಿಷ್ಠಿತವಾಯಿತು. ಫ್ರಾನ್ಸಿನಲ್ಲಿ ರಾಷ್ಟ್ರದ ಪ್ರಮಾಣಪತ್ರಗಳಲ್ಲಿಯೇ ದುಷ್ಟವಾದ ಆಳ್ವಿಕೆಯನ್ನು ನಾಶಗೊಳಿಸಲು ಜನರಿಗಿರುವ ಅಧಿಕಾರವು ಪ್ರಕಟವಾಯಿತು. ಜನರೇ ಎದ್ದು ವಿರೋಧಿಸುವವರಾದರೆ ಅವರನ್ನು ತಡೆಯಬಲ್ಲವರಾರು? ಜನರ ಶಕ್ತಿಯನ್ನು ನಿರೋಧಿಸಲು ಪ್ರಯತ್ನಪಡುವುದು ಕೆನ್ಯೂಟ್ ರಾಜನು ಸಮುದ್ರಕ್ಕೆ ಆಜ್ಞೆಯನ್ನು ಸಾರಿದಂತೆಯೇ.

ಜನರಾಶಿಗಿರುವ ಈ ಅಧಿಕಾರದ ಅಂಶವು ಪೌರನಿಗೂ ಇರುವುದು. ನ್ಯಾಯತತ್ವಕ್ಕೆ ವಿರುದ್ಧವೆಂದು ನಿಶ್ಚಿತವಾಗುವ ವಿಧಿಯೋ ಕಟ್ಟಳೆಯೋ ಆಡಳಿತದಲ್ಲಿ ತೋರಿಕೊಂಡಾಗ ಪೌರನಿಗೆ ಆ ವಿಧಿಯನ್ನೂ ಕಟ್ಟಳೆಯನ್ನೂ ಅಡ್ಡಿಮಾಡುವ ಸ್ವಾತಂತ್ರ್ಯವುಂಟು. ನ್ಯಾಯಪಕ್ಷಪಾತಿಯಾದ ಪೌರನಿಗೆ ನ್ಯಾಯವಿರುದ್ಧವಾದ ನಿಯಮನಿಬಂಧನೆಗಳನ್ನು ನಿರೋಧಿಸುವ ಪ್ರಯತ್ನವು ಕರ್ತವ್ಯವಾಗಿಯೇ ಪರಿಣಮಿಸುತ್ತದೆ. ಇಂಗ್ಲಂಡಿನಲ್ಲಿ ಹಿರೇ ಚಾರ್ಲಸ್ ದೊರೆಯು ಷಿಪ್ ಮನಿ ಅಥವಾ ಹಡಗಿನ ಹಣವೆಂಬ ತೆರಿಗೆಯನ್ನು ವಿಧಿಸಿದಾಗ ಅದು ನ್ಯಾಯವಿರುದ್ಧವಾದುದೆಂದು ಹ್ಯಾಂಪ್ಡೆನ್ ಎಂಬ ಪೌರಮುಖ್ಯನು ತೆರಿಗೆಯನ್ನು ಕೊಡದೆ ಮುಷ್ಕರಹಿಡಿದು ಶಿಕ್ಷೆಯನ್ನು ಅನುಭವಿಸಿದನು. ಹಾಗೆಯೇ ಆಲಿವರ್ ಕ್ರಾಂವೆಲ್, ಜಾರ್ಜ್ ವಾಷಿಂಗ್ಟನ್ ಮುಂತಾದವರು ಪ್ರಸಿದ್ಧರಾಗಿ ರಾಷ್ಟ್ರವೀರರಲ್ಲಿ ಗಣ್ಯರಾದರು.

ಆದರೆ ನ್ಯಾಯಸಮ್ಮತವಾದುದೋ ನ್ಯಾಯವಿರುದ್ಧವಾದುದೋ ನಿಶ್ಚಯಮಾಡಲು ಸಾಮಾನ್ಯ ಪೌರರಿಗೆ ಸಾಧ್ಯವಾದುದೇ ಅಲ್ಲ. ಎಂತಹ ಪ್ರಾಜ್ಞರಾದರೂ ಜಾರಬಹುದು. ನ್ಯಾಯಾನ್ಯಾಯ ನಿಷ್ಕರ್ಷೆಯೆಂಬ ಅತಿಗಹನವಾದ ಕರ್ತವ್ಯದಲ್ಲಿ ಸ್ವಲ್ಪ ತಪ್ಪುಮಾಡಿದಾಗ್ಯೂ ನಿರೋಧವನ್ನು ಕೈಗೊಂಡಾತನೂ ಆತನನ್ನು ಅವಲಂಬಿಸಿದವರೂ ಘೋರವಾದ ಅನರ್ಥಗಳಿಗೆ ತುತ್ತಾಗುವರು. ನಿರೋಧಾಧಿಕಾರವನ್ನು ತಾಳಿ ಕರ್ತವ್ಯನಿರ್ವಾಹ ಪ್ರಯತ್ನದಲ್ಲಿ ಮೂರ್ಖರೆನಿಸಿಕೊಳ್ಳುವುದು ಬಹು ಸುಲಭ, ವೀರರೆನಿಸುವುದು ಬಲು ಕಷ್ಟ.

ನಿಯಮ ನಿಬಂಧನೆಗಳ ನಿರೋಧ ಪ್ರಯತ್ನವು ಅನೇಕ ರೂಪಗಳನ್ನು ತಾಳಬಹುದು. ಆದರೆ ನಿರೋಧವನ್ನು ಕೈಕೊಳ್ಳುವ ಮೊದಲು ಪೌರನು ನ್ಯಾಯಾನ್ಯಾಯ ವಿಚಾರವನ್ನು ಕೂಲಂಕಷವಾಗಿ ನಡೆಸುವುದು ಮಾತ್ರವೇ ಅಲ್ಲದೆ ಅನ್ಯಾಯವೆಂದು ಸಿದ್ಧಾಂತವಾದ ತರುವಾಯ ವಿಧಿಬದ್ಧನಾಗಿ ಪ್ರವರ್ತಿಸುತ್ತ ಮಾಡಬಹುದಾದುದೆಲ್ಲವನ್ನೂ ಪುನಃಪುನಃ ಮಾಡಿ ಆ ಪ್ರಯತ್ನಗಳು ವ್ಯರ್ಥವೆನಿಸಿದ ಅನಂತರವೇ ನಿರೋಧವನ್ನು ಎಸಗಬೇಕು. ನಿರೋಧ ಪ್ರಯತ್ನವು ಕಟ್ಟಕಡೆಯಲ್ಲಿ ಅನುಸರಣೀಯವಾಗತಕ್ಕದ್ದು; ಕಟ್ಟಕಡೆಯವರೆಗೂ ಆಲೋಚ್ಯವಾದುದೇ ಅಲ್ಲ.

ಈ ಆರು ಪೌರಾಧಿಕಾರಗಳೂ ಮೂಲಾಧಿಕಾರಗಳು. ಇವುಗಳ ಪ್ರಾಪ್ತಿಯಿಲ್ಲದಿದ್ದರೆ ಪೌರಜೀವನವೇ ಅಸಾಧ್ಯ. ಪಶುಗಳಂತೆಯೋ ಗುಲಾಮರಂತೆಯೋ ಬದುಕನ್ನು ಕಳೆಯುವುದಾದರೆ ಈ ಮೂಲಾಧಿಕಾರಗಳಿಲ್ಲದೆ ನಡೆಯಬಹುದು. ಚೈತನ್ಯಯುಕ್ತವಾದ ಜೀವನವನ್ನು ನಡೆಸುವುದರಲ್ಲಿ ಈ ಆರು ಅಧಿಕಾರಗಳೂ ಆಧಾರಭೂತವಾದವು. ಇವುಗಳ ಸುಸ್ಥಿತಿಗಾಗಿಯೇ ರಾಷ್ಟ್ರವಿರತಕ್ಕುದು. ಪೌರಜೀವನಕ್ಕೆ ಅಸ್ತಿಭಾರವಾದ ಈ ಅಧಿಕಾರಗಳಿಲ್ಲದಿದ್ದ ಪಕ್ಷದಲ್ಲಿ ರಾಷ್ಟ್ರವೆಂಬ ಶಬ್ದವೇ ಅನ್ವಯಿಸುವುದಿಲ್ಲ; ಒಂದು ಬಗೆಯ ಸೆರೆಮನೆಯಾಗಿ ಪರಿಣಮಿಸುವುದು.

ರಾಜಕೀಯ ಅಧಿಕಾರ

ಇತರ ಪೌರಾಧಿಕಾರಗಳು ಎಂತಹವಾದರೂ ಈ ಆರು ಅಧಿಕಾರಗಳಿಗೆ ಹೊಂದಿಕೊಂಡಿರಬೇಕೇ ವಿನಾ ವಿರುದ್ಧವಾಗಿರಕೂಡದು. ಛಂದಾಧಿಕಾರವೇ ಮೊದಲಾದ ರಾಜಕೀಯ ಅಧಿಕಾರಗಳು ಜನಸ್ವಾಮ್ಯ ತತ್ವವನ್ನು ಆಚರಿಸಿದಾಗ ತೋರಿಕೊಳ್ಳತಕ್ಕವು. ಅಧಿಕಾರ ಲಾಭವಾದಷ್ಟೂ ಕರ್ತವ್ಯ ಕ್ಷೇತ್ರವು ದೊಡ್ಡದಾಗುತ್ತದೆ. ರಾಜಕೀಯ ಅಧಿಕಾರಗಳು ಪ್ರಾಪ್ತವಾಗಿದ್ದ ಸ್ಥಿತಿಯಲ್ಲಿ ಪೌರರು ಹೆಚ್ಚಾದ ಯೋಗ್ಯತೆಯನ್ನು ತೋರಬೇಕಾಗುವುದು. ಛಂದಾಧಿಕಾರ ನಿರ್ವಾಹದಲ್ಲಿ ವಿವೇಚನೆಯಿಂದ ನಿರ್ವಹಿಸುವುದು ಅತ್ಯವಶ್ಯ; ಆ ಅಧಿಕಾರವನ್ನು ಪಡೆದು ತರುವಾಯ ತಾತ್ಸಾರ ತೋರುವುದರಿಂದ ಅಯೋಗ್ಯತೆಯೇ ಪ್ರಕಾಶವಾಗುತ್ತದೆ. ಛಂದಾಧಿಕಾರಕ್ಕಿಂತ ಹೆಚ್ಚಿನದು ವರಣೇಚ್ಛೆಯ ಅಧಿಕಾರ. ವರಣಾರ್ಥಿಯಾದವನು ಇತರರಿಗಿಂತ ವಿಸ್ತಾರವಾದ ಕರ್ತವ್ಯಭಾಗವನ್ನು ಆರಿಸಿಕೊಳ್ಳುವವನು. ರಾಜಕೀಯ ಉದ್ಯೋಗಗಳ ಅಧಿಕಾರವೂ ಹಾಗೆಯೇ ಯೋಗ್ಯತೆಯನ್ನು ಅಪೇಕ್ಷಿಸತಕ್ಕದ್ದು. ಎಲ್ಲ ಅಧಿಕಾರಗಳಿಗೂ ಇರುವ ಒಂದು ಲಕ್ಷಣವು ರಾಜಕೀಯವಾದ ಅಧಿಕಾರಗಳ ವಿಚಾರದಲ್ಲಿ ಸದಾ ನೆನಪಿನಲ್ಲಿರತಕ್ಕುದು. ಏನೆಂದರೆ ಅಧಿಕಾರ ಲಾಭವೇ ಲಕ್ಷ್ಯವಲ್ಲ; ಲಕ್ಷ್ಯವು ಸರ್ವಸಿದ್ಧಿ. ಸರ್ವಸಿದ್ಧಿಯನ್ನು ಒದಗಿಸಿಕೊಳ್ಳಲು ಪೌರಾಧಿಕಾರಗಳು ಸಾಧಕಸಾಮಗ್ರಿ ಮಾತ್ರ. ರಾಜಕೀಯಾಧಿಕಾರಗಳು ಪ್ರಾಪ್ತವಾದಾಗ ಪೌರರು ತಮ್ಮ ಆಡಳಿತವನ್ನು ತಾವೇ ನಿರ್ವಹಿಸಬೇಕಾಗುವುದು; ರಾಷ್ಟ್ರಭಾರವನ್ನೇ ಹೊರಬೇಕಾಗು

ವುದು. ಅಧಿಕಾರಗಳನ್ನು ಪಡೆಯುವುದು ಒಳ್ಳೆಯದು; ಆದರೆ ಅಧಿಕಾರಗಳನ್ನು ಪಡೆದು ತಟಸ್ಥರಾಗಿಯೋ ಅವಿವೇಕಿಗಳಾಗಿಯೋ ಇರುವುದು ಸುಲಭ. ಆದ್ದರಿಂದ ಅಧಿಕಾರಲಾಭವಾದಾಗ ಪೌರ ಪರೀಕ್ಷೆಯು ನಡೆಯುವುದು. ಕರ್ತವ್ಯನಿರ್ವಾಹವೇ ಮುಖ್ಯವಾದುದು ಮತ್ತು ಶ್ರೇಯಸ್ಕರವಾದುದು. ಅಧಿಕಾರಪ್ರಾಪ್ತಿಯು ಕರ್ತವ್ಯ ಪರಾಯಣತೆಯಲ್ಲಿ ಪರಿಣಾಮವನ್ನು ಪಡೆಯುತ್ತಿದ್ದರೆಯೇ ಸುಸ್ಥಿತಿಯೆಂದು ಹೇಳತಕ್ಕುದು.

ಭಾರತೀಯ ಸ್ಥಿತಿ

ಭರತವರ್ಷವು ಬ್ರಿಟಿಷರ ಅಧೀನದಲ್ಲಿರುವ ರಾಷ್ಟ್ರ; ಆದುದರಿಂದ ಸ್ವತಂತ್ರವಾದ ರಾಷ್ಟ್ರವಲ್ಲ. ಭಾರತೀಯರನ್ನು ಶಾಸ್ತ್ರದೃಷ್ಟಿಯಲ್ಲಿ ಪ್ರಜೆಗಳೆಂದು ಕರೆಯತಕ್ಕದ್ದೇ ವಿನಾ ಪೌರರೆಂದು ಕರೆಯಲಾಗುವುದಿಲ್ಲ. ಆದರೆ ಪೌರರಾಗುವ ಗತಿಯುಂಟು; ಆ ಗತಿಯಲ್ಲಿ ಹೆಜ್ಜೆಗಳನ್ನಿಡಲು ಮೊದಲಾಗಿದೆ. ಸದ್ಯಸ್ಥಿತಿಯಲ್ಲಿ ಬ್ರಿಟಿಷ್ ಪ್ರದೇಶಗಳಲ್ಲಾಗಲಿ ದೇಶೀಯ ಸಂಸ್ಥಾನಗಳಲ್ಲಾಗಲಿ ಕಾರ್ಯಾಂಗದವರಿಗೆ ಅಮಿತವಾದ ಅಧಿಕಾರಬಲವೇ ಇದೆ. ಕಾರಣವನ್ನು ತಿಳಿಸದೆ ವಾರಂಟಿಲ್ಲದೆ ದಸ್ತಗಿರಿಮಾಡುವುದು, ವಿಚಾರಣೆಗೊಯ್ಯದೆ ನಿರ್ಬಂಧದಲ್ಲಿಯೇ ಇಟ್ಟಿರುವುದು, ಸಂಚಾರಕ್ಕೆ ಅಡ್ಡಿಮಾಡುವುದು, ಸಂಘಗಳನ್ನೂ ಸಭೆಗಳನ್ನೂ ಭಂಗಪಡಿಸುವುದು, ವೃತ್ತಪತ್ರಿಕೆಗಳಿಗೆ ನಿರ್ಬಂಧಗಳನ್ನೊಡ್ಡುವುದು, ಮುಂತಾದ ಅನೇಕ ವಿಧಗಳಲ್ಲಿ ಭಾರತೀಯರ ಪೌರಾಧಿಕಾರವು ಕಾರ್ಯಾಂಗದವರ ಅಧಿಕಾರಕ್ಕೆ ಅಧೀನವಾಗಿದೆ. ಶಾಸನಾಧಿಕಾರವು ಕಾರ್ಯಾಂಗದವರ ಸ್ವಾಧೀನವಾಗಿರುವುದಲ್ಲದೆ ನ್ಯಾಯಾಂಗವೂ ಅವರ ಅಧೀನದಲ್ಲಿಯೇ ಇರುವುದರಿಂದ ನ್ಯಾಯತೀರ್ಮಾನವೂ ಅನೇಕ ವೇಳೆ ಕಾರ್ಯಾಂಗದವರ ಇಷ್ಟವನ್ನನುಸರಿಸಿಯೇ ನಡೆಯಬೇಕಾಗಿರುತ್ತದೆ. ನ್ಯಾಯಸ್ಥಾನದಲ್ಲಿ ವಿಚಾರಣೆಗೊಳಗಾದ ಸಂದರ್ಭದಲ್ಲಿ ಪೌರಾಧಿಕಾರ ಭಾಗವು ನಿಯಮ ನಿಬಂಧನೆಗಳಲ್ಲಿ ಸೂಚಿತಮಾತ್ರವೇ ಆಗಿರುವುದರಿಂದ ವಾಕ್ಯಾರ್ಥಪ್ರಸಂಗದಲ್ಲಿ ಕಾರ್ಯಾಂಗಕ್ಕೆ ಅಧೀನರಾದ ನ್ಯಾಯಾಧಿಕಾರಿಗಳ ನಿರ್ಣಯದಂತೆ ನಿಶ್ಚಿತವಾಗುವುದು. ಅಧಿಕಾರ ಭಾಗವು ಲುಪ್ತವೋ ಸಂದಿಗ್ಧವೋ ಆಗಿರುವಾಗ ಪೌರರ ಕರ್ತವ್ಯಕ್ಷೇತ್ರವೂ ಕಿರಿದಾದುದು. ಅವರ ಸ್ವಾತಂತ್ರ್ಯವೂ ಭಗ್ನ ಅಥವಾ ಭಿನ್ನವಾದ ರಾಶಿ ಮಾತ್ರವಾದುದು; ಪೂರ್ಣವಾದುದಲ್ಲ.

## 3. ಪೌರನಿರ್ವಾಹದ ಆತಂಕಗಳು

**ಕರ್ತವ್ಯವಿಸ್ತಾರ, ಪ್ರಾತಿನಿಧ್ಯ ಮೋಹ, ಆಪತ್ಪರಂಪರೆ, ಮುಖ್ಯ ಆತಂಕಗಳು, ಅಜ್ಞತೆ, ಅಲಕ್ಷ್ಯ, ಸಂಕುಚಿತ ದೃಷ್ಟಿ, ಆಶೆ, ಜನತೆಯ ಅಭಿಪ್ರಾಯ, ನೀತಿಯ ಆದರ್ಶ, ಭಾರತೀಯ ರಾಷ್ಟ್ರಭಕ್ತಿ, ಭಾರತೀಯ ದೃಷ್ಟಿ.**

**ಕರ್ತವ್ಯವಿಸ್ತಾರ**

ಭಾರತವರ್ಷದ ಆಡಳಿತವನ್ನು ಕೈಕೊಂಡು ನಡೆಸುವುದರಲ್ಲಿ ಬ್ರಿಟಿಷರು ತಮ್ಮ ಪರಮೋದ್ದೇಶವನ್ನು 1917ರಲ್ಲಿ ಪಾರ್ಲಿಮೆಂಟ್ ಸಭೆಯಲ್ಲಿ ಪ್ರಕಟಗೊಳಿಸಿದರು. ಭಾರತೀಯ ರಾಷ್ಟ್ರಭಾರ ನಿರ್ವಾಹದಲ್ಲಿ ಭಾರತೀಯರನ್ನೇ ಕಾಲಕ್ರಮವಾಗಿ ಸ್ವರಾಷ್ಟ್ರಭಾರ ನಿರ್ವಾಹಕರಾಗುವಂತೆ ನೆರವೇರಿಸುವುದು ತಮ್ಮ ಅಂತಿಮ ಲಕ್ಷ್ಯವೆಂದು ಪ್ರಕಾಶಗೊಳಿಸಿದರು. ಆ ಉದ್ದೇಶ ಸಾಧನೆಗಾಗಿ ಆಡಳಿತದ ವಿಧಾನಗಳಲ್ಲಿ ಶಾಸಕಸಭೆಗಳೂ ಪ್ರಾತಿನಿಧ್ಯತತ್ವದ ಆಚರಣೆಯೂ ಮೂಡಿಕೊಂಡವು. ಸದ್ಯಸ್ಥಿತಿಯನ್ನು 20–30 ವರ್ಷಗಳ ಹಿಂದಿನ ಸ್ಥಿತಿಯೊಂದಿಗೆ ಹೋಲಿಸಿ ನೋಡಿದಲ್ಲಿ ಭಾರತೀಯ ಪ್ರಜಾಸಮೂಹದ ಕರ್ತವ್ಯಕ್ಷೇತ್ರವು ವಿಸ್ತಾರಗೊಳ್ಳುತ್ತಲಿರುವ ಅಂಶವು ಸ್ಪಷ್ಟವಾಗಿ ತೋರುವುದು. ಸ್ಥಳೀಯ ಸಂಸ್ಥೆಗಳಲ್ಲಿ, ಪ್ರಾದೇಶಿಕ ಸಂಸ್ಥೆಗಳಲ್ಲಿ ಮತ್ತು ಕೇಂದ್ರ ಸಂಸ್ಥೆಗಳಲ್ಲಿ ಶಾಸಕಾಧಿಕಾರದಲ್ಲಿ ಪ್ರತಿನಿಧಿಗಳಿಗೆ ಪೂರ್ಣಾಧಿಕಾರವಿಲ್ಲದಿದ್ದಾಗ್ಯೂ ಪ್ರವೇಶವೊದಗಿದೆ. ಕರ್ತವ್ಯಭಾಗವು ಹೆಚ್ಚಿದೆ. ಈ ಕರ್ತವ್ಯನಿರ್ವಾಹದಲ್ಲಿ ಹೆಚ್ಚಿನ ಯೋಗ್ಯತೆಯೇ ಅವಶ್ಯ.

**ಪ್ರಾತಿನಿಧ್ಯ ಮೋಹ**

ಇಂಗ್ಲಂಡ್, ಫ್ರಾನ್ಸ್ ಅಥವಾ ಅಮೆರಿಕ ದೇಶಗಳಲ್ಲಿ ಪ್ರಾತಿನಿಧ್ಯವೂ ಜನಸ್ವಾಮ್ಯವೂ ಸಂಪ್ರದಾಯರೂಪದಲ್ಲಿ ನೆಲೆಗೊಂಡು ಭದ್ರವಾಗಿವೆ. ಅಂತಹ ರಾಷ್ಟ್ರಗಳಲ್ಲಿ ಪ್ರಾತಿನಿಧ್ಯತತ್ವದ ಅನುಷ್ಠಾನದಲ್ಲಿ ಅನೇಕಾನೇಕ ವಿಪತ್ತುಗಳು ತೋರಿಕೊಂಡವು. ಪ್ರಾತಿನಿಧ್ಯ ಸಂಪ್ರದಾಯವನ್ನು ಪಡೆದ ರಾಷ್ಟ್ರಗಳಲ್ಲಿಯೇ ವಿಪತ್ತುಗಳು ತೋರಿಕೊಳ್ಳಬಹುದಾದರೆ ಹೊಸದಾಗಿ ಆ ಸಂಪ್ರದಾಯವನ್ನು ನೆಲೆಗೊಳಿಸಲು ಯತ್ನಿಸುವ ರಾಷ್ಟ್ರಗಳಲ್ಲಿ ಪೌರರು

ಎಷ್ಟು ಎಚ್ಚರಿಕೆಯನ್ನು ವಹಿಸಿದರೂ ಸಾಲದೆನ್ನಿಸುತ್ತದೆ. ಆ ರಾಷ್ಟ್ರಗಳ ಸ್ಥಿತಿಗತಿಗಳನ್ನು ಕುರಿತು ಒಬ್ಬಾನೊಬ್ಬರು ಈ ಪರಿ ವರ್ಣಿಸುತ್ತಾರೆ:—

"ವೆಲ್ಸ್, ಬರ್ನಾರ್ಡ್ ಷಾ ಮುಂತಾದವರು ಜನಸ್ವಾಮ್ಯದ ಆಚರಣೆಗೇ ವಿರೋಧಿಗಳಾಗಿದ್ದಾರೆ. ಏಕೆಂದರೆ ಜನರು ತಮ್ಮನ್ನು ತಾವೇ ಎಂದೂ ಆಳಿಕೊಂಡಿಲ್ಲ; ಆಳಿಕೊಳ್ಳಬಲ್ಲವರೂ ಅಲ್ಲ. ಆಳಿಕೊಳ್ಳುವುದು ಸರಿಯೂ ಅಲ್ಲ.

"ವರಣಾಧಿಕಾರವನ್ನು ಪ್ರಯೋಗಮಾಡುವ ಜನಸ್ತೋಮದಲ್ಲಿ ಸೇಕಡ 99 ಮಂದಿಗೆ ನೌಕಾಶಸ್ತ್ರ ಸನ್ಯಸನ, ಔದ್ಯೋಗಿಕ ಪರಿಷ್ಕರಣ, ಆಯವ್ಯಯ ಶೋಧನೆ ಮುಂತಾದ ಮಹದ್ಗಹನವಾದ ಪ್ರಸ್ತಾಪಗಳಲ್ಲಿ ಏನುತಾನೇ ತಿಳಿದಿದ್ದೀತು! ಆದರೂ ಅಧಿಕಾರ ಪಡೆಯಲಪೇಕ್ಷಿಸುವ ಪಕ್ಷದವರು ಯಾರಾದರೂ ಅವರ ಛಂದಗಳನ್ನು ಸಂಪಾದಿಸಬೇಕು. ಅವರ ಅಭಿಪ್ರಾಯವನ್ನು ಗೌರವಿಸಬೇಕು, ಮತ್ತು ಸಾಧ್ಯವಾದಲ್ಲಿ ಅವರಿಗೆ ಲಂಚವನ್ನೂ ಸಲ್ಲಿಸಬೇಕು. ರಾಷ್ಟ್ರಕರ್ತರೂ ರಾಷ್ಟ್ರಾಧಿಕಾರಿಗಳೂ ಅವರ ಅಜ್ಞಾನವನ್ನೂ, ಅವರ ಮನೋಭಾವಗಳನ್ನೂ, ಅವರ ಕಲ್ಪನೆಗಳನ್ನೂ ಮೆಚ್ಚಿಸುತ್ತಲಿರಬೇಕು; ಹೀಗೆ ಮಾಡಬೇಕಾದುದು ದುರುದ್ದೇಶದಿಂದಾಗಲಿ ದುರಾಶೆಯಿಂದಾಗಲಿ ಅಲ್ಲ; ಕೇವಲ ತಮ್ಮ ಆದರ್ಶ ಧ್ಯೇಯಗಳಿಗನುಸಾರವಾಗಿ ರಾಷ್ಟ್ರವನ್ನು ನಡೆಸಲು ಆಸ್ಪದ ಮಾತ್ರವನ್ನು ಪಡೆಯುವ ಉದ್ದೇಶದಿಂದ ಅವರಿಗೆ ದೊಂಬಿಯನ್ನು ಒಲಿಸಿಕೊಳ್ಳುವ ನಿರ್ಬಂಧವು ಪ್ರಬಲವಾಗಿಯೇ ಇರುತ್ತದೆ. ವೃತ್ತಪತ್ರಿಕೆಗಳಾದರೋ ನಿಜಸ್ಥಿತಿಗಳನ್ನು ಮರೆಮಾಚಿ, ಸತ್ಯವನ್ನು ವಿಕೃತಗೊಳಿಸಿ, ಕೋಪತಾಪಗಳನ್ನು ಉದ್ರೇಕಪಡಿಸುತ್ತ ಜನರಿಗೆ ಮಂಕುಬೂದಿಯನ್ನೆರಚುತ್ತಲೇ ಇರುತ್ತವೆ. ಕಡೆಯಲ್ಲಿ ನಡೆಯುವುದೇನೆಂದರೆ ಈ ಜನಸಮೂಹದಿಂದ ವರಣಸಿದ್ಧರಾದವರು ಪಾರ್ಲಿಮೆಂಟು ಸಭೆಯಲ್ಲಿ ಕುಳಿತು ಆ ಜನರು ಸ್ವಪ್ನದಲ್ಲಿಯೂ ಕಾಣದ ನಾನಾ ವಿಧವಾದ ಪ್ರಸಂಗಗಳಲ್ಲಿ ಶಾಸನಗಳನ್ನೂ ನಿಬಂಧನೆಗಳನ್ನೂ ರಚಿಸುವ ಕಾರ್ಯದಲ್ಲಿ ತೊಡಗುವುದು.

"ಜನಸ್ವಾಮ್ಯವೆಂಬುದು ಒಂದು ಬಿಸಿಲ್ಗುದುರೆ. ಜನರು ತಮ್ಮನ್ನು ತಾವೇ ಆಳಿಕೊಳ್ಳುತ್ತಿರುವೆವೆಂಬ ಒಂದು ಭ್ರಾಂತಿಯಲ್ಲಿರುತ್ತಾರೆ. ವಾಸ್ತವವಾಗಿ ಜನರನ್ನು ಮೂಗುದಾರ ಹಾಕಿ ಎಳೆಯುವವರು ಅಧಿಕಾರಿವರ್ಗದವರು ಮತ್ತು ರಹಸ್ಯವಾಗಿ ಮಹತ್ತರವಾದ ವಿಷಯಗಳನ್ನು ಇತ್ಯರ್ಥಮಾಡುವ ಮಂತ್ರಿವರ್ಗದವರು. ರಾಜಕೀಯ ಪ್ರಪಂಚದಲ್ಲಿ ಮೇಧಾವಿಗಳ ನೇತೃತ್ವವನ್ನು ಅಡ್ಡಿಮಾಡುವುದೊಂದೇ ಜನಸ್ವಾಮ್ಯದ ಆಚರಣೆಯ ಮುಖ್ಯ ಮಹಿಮೆ. ಜನಸ್ವಾಮ್ಯಯುಕ್ತ ರಾಷ್ಟ್ರದಲ್ಲಿ ಬುದ್ಧಿವಂತನಾದವನು ಕೆಲಸಕಾರ್ಯಗಳನ್ನು ನೆರವೇರಿಸಲು ಯತ್ನಿಸುವುದು ಮಕ್ಕಳ ಕ್ರೀಡಾಗೃಹದಲ್ಲಿ ಕುಳಿತು

ಗ್ರಂಥವನ್ನು ಬರೆಯಲು ಮೊದಲಿಟ್ಟ ಹಾಗೆ. ತನ್ನ ಕೆಲಸವು ಪೂರೈಸುವವರೆಗೂ ಆ ಮಕ್ಕಳನ್ನು ಸಮಾಧಾನಗೊಳಿಸುತ್ತಿರಬೇಕು. ಪದೇ ಪದೇ ಅವರಿಗೆ ಮಿಠಾಯಿಯನ್ನೂ ಗೊಂಬೆಗಳನ್ನೂ ಕೊಡುತ್ತಿರಬೇಕು. ಆಗಾಗ್ಗೆ ಅಡುಗೂಲಜ್ಜಿ ಕಥೆಗಳನ್ನು ಹೇಳಬೇಕು. ಮಧ್ಯೇ ಮಧ್ಯೇ ಎದ್ದು ಅವರೊಡನೆ ಕೂಸುಮರಿಯಾಟವನ್ನು ಆಡಬೇಕು. ಇಂತಹ ಕೆಲಸಕ್ಕೆ ಪಾರವೆಲ್ಲಿಯಾದರೂ ಉಂಟೇ !"

ಪಾಶ್ಚಾತ್ಯ ದೇಶಗಳಲ್ಲಿಯೇ ಜನಸ್ವಾಮ್ಯ ಅಥವಾ ಜನಾಧಿಪತ್ಯ ತತ್ವದಲ್ಲಿ ವಿಶ್ವಾಸವು ದುರ್ಬಲವಾಗುತ್ತಿದೆ. ಕೆಲವು ರಾಷ್ಟ್ರಗಳಲ್ಲಿ ಏಕಾಧಿಪತ್ಯವನ್ನೇ ನಡೆಸುತ್ತಲಿದ್ದಾರೆ; ಬೇರೆ ಕೆಲವು ರಾಷ್ಟ್ರಗಳಲ್ಲಿ ಅತಿ ನೂತನವಾದ ರಾಷ್ಟ್ರತತ್ವಗಳನ್ನು ಅನುಸರಿಸಲು ಯತ್ನಿಸಿ, ಸೋಜಿಗವೆನಿಸುವ ರಾಷ್ಟ್ರರೂಪಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಜನಾಧಿಪತ್ಯ ಪ್ರಾತಿನಿಧ್ಯ ತತ್ವಗಳು ಎಲ್ಲ ರಾಷ್ಟ್ರಗಳಿಗೂ ಒಂದೇ ರೀತಿಯಲ್ಲಿ ಹಿತವಾಗಿ ಪರಿಣಮಿಸಲಾರವು. ಭಾರತಭೂಮಿಯಲ್ಲಿ ಆ ತತ್ವಗಳು ಯುಕ್ತವೋ ಅಯುಕ್ತವೋ ಎಂಬ ಪ್ರಶ್ನೆಗೆ ಸಮಾಧಾನವೂ ಏಕರೀತಿಯಾಗಿಲ್ಲ; ಅಭಿಪ್ರಾಯ ಭೇದಕ್ಕೆ ಅವಕಾಶವಿದೆ. ಆದರೆ ಪ್ರಾತಿನಿಧ್ಯವನ್ನು ಅವಲಂಬಿಸಿರುವ ಭಾರತೀಯರು ಆ ಮಾರ್ಗದಲ್ಲಿ ಒದಗಬಹುದಾದ ಆಪತ್ತುಗಳನ್ನು ಮೊದಲೇ ತಿಳಿದುಕೊಂಡು ಅವುಗಳು ತೋರಿಕೊಳ್ಳದಂತೆ ಎಚ್ಚರವನ್ನು ವಹಿಸಬೇಕೆಂಬುದರಲ್ಲಿ ಸಂದೇಹವಿಲ್ಲ. ಪ್ರಾತಿನಿಧ್ಯತತ್ವಗಳನ್ನೊಪ್ಪಿಕೊಂಡ ರಾಷ್ಟ್ರಗಳ ಅನುಭವಲಬ್ಧವಾದ ಸಂಗತಿಗಳನ್ನು ಭಾರತೀಯ ಪೌರರು ಸಾವಧಾನದಿಂದ ಗಮನಿಸತಕ್ಕದ್ದು ಕರ್ತವ್ಯವಾಗಿರುತ್ತದೆ. ಹಾಗೆ ಎಚ್ಚರವನ್ನು ವಹಿಸಿದಲ್ಲಿ ಇತರ ರಾಷ್ಟ್ರಗಳಲ್ಲಿ ತೋರಿಕೊಂಡ ಆತಂಕ ವಿಪತ್ತುಗಳು ನಮ್ಮ ದೇಶದಲ್ಲಿಯೂ ತೋರಿಕೊಳ್ಳದಂತೆ ವ್ಯವಸ್ಥೆಮಾಡಲು ಸಾಧ್ಯವಾಗುವುದು. ರೋಗವು ತಗಲಿದ ಮೇಲೆ ಔಷಧಿಯನ್ನು ಹುಡುಕುವುದಕ್ಕಿಂತಲೂ ರೋಗ ಬಾರದಂತೆಯೇ ಎಚ್ಚರವನ್ನು ತಾಳುವುದು ಮೇಲು.

ಪ್ರಾತಿನಿಧ್ಯತತ್ವವು ಆಚರಣೆಯಲ್ಲಿದ್ದಾಗಲೂ ಸ್ವಾತಂತ್ರ್ಯವಿಲ್ಲದಂತೆ ಪರಿಣಾಮವಾಗಬಹುದೆಂಬುದನ್ನು ಪಾಶ್ಚಾತ್ಯರು ಅನುಭವಸಿದ್ಧವಾಗಿ ಕಂಡರು. ಪ್ರಾತಿನಿಧ್ಯದ ಅನುಷ್ಠಾನದಲ್ಲಿ ರಾಷ್ಟ್ರಾಧಿಕಾರಕ್ಕಾಗಿ ಜನತೆಯ ವರ್ಗಗಳಲ್ಲಿ ವಿಪರೀತವಾದ ಪೋಟಾಪೋಟಿಯು ನಡೆಯುತ್ತದೆ. ವರ್ಗ

ಗಳಲ್ಲಿ ಪರಸ್ಪರ ವೈಷಮ್ಯವು ಪ್ರಬಲವಾಗಿ ದೇಶದ ಜನರಲ್ಲಿ ಸ್ವಯೂಥ ಕಲಹಗಳು ರೇಗುತ್ತವೆ. ಧನಿಕರಾದವರು ಗೆಲ್ಲುತ್ತಾರೆ, ಬಡವರಾದವರು ಸೋಲುತ್ತಾರೆ. ಧನಿಕರಿಗೇ ಜಯಪ್ರಾಪ್ತಿಯೂ

ಆಪತ್ಪರಂಪರೆ

ಅಧಿಕಾರಲಾಭವೂ ಆಗುವುದು ಯಾವ ನ್ಯಾಯ ತತ್ವಕ್ಕೂ ಒಪ್ಪತಕ್ಕುದಲ್ಲ. ಪದೇ ಪದೇ ವರಣ ಗಳು ನಡೆಯುತ್ತಿರುವುದರಿಂದ ಜನರು ಸದಾ ಉದ್ರಿಕ್ತಸ್ಥಿತಿಯಲ್ಲಿಯೇ ಇರುತ್ತ ಶಾಂತತೆಯೆಂಬುದನ್ನೇ ಪಡೆಯದೆ ಇರಬೇಕಾಗುವುದು. ಜೀವನದಲ್ಲಿ ಶಾಂತಿಯಿಲ್ಲದೆ ಹೋಗುವುದು ಮಾತ್ರವೇ ಅಲ್ಲದೆ ವರಣಕಾಲದ ಸ್ಪರ್ಧೆ ಯಲ್ಲಿ ದುರ್ನೀತಿಯು ಅತಿ ಸುಲಭವಾಗಿ ಎಲ್ಲ ವರ್ಗಗಳಲ್ಲಿಯೂ ಅಂಟು ಜಾಡ್ಯದಂತೆ ವ್ಯಾಪಿಸುತ್ತದೆ. ಛಂದಗಳನ್ನು ಕೂಡಿಸುವ ಪ್ರಯತ್ನದಲ್ಲಿ ನಾನಾ ರೀತಿಗಳಲ್ಲಿ ಛಂದಗಳ ಸಂಪಾದನೆಯಾಗುವುದು. ನೀತಿಭಂಗವಾಗ ಬಾರದೆಂದು ಎಷ್ಟು ನಿಯಮ ನಿಬಂಧನೆಗಳನ್ನು ರಚಿಸಿದರೂ ನೀತಿಯು ನೆಲೆಸುವುದಿಲ್ಲ; ನಿಯಮಗಳೆಷ್ಟು ವಿಸ್ತಾರವಾಗಿರಬಹುದೋ ದುರ್ನೀತಿಯ ಕೌಶಲವೂ ಅಷ್ಟೇ ವಿಸ್ತಾರವಾಗುತ್ತದೆ. ನಿಯಮವು ಸಿದ್ಧವಾದರೆ ಅದನ್ನು ತಪ್ಪಿಸಿಕೊಳ್ಳುವುದು ಹೇಗೆ ಎಂಬ ಯೋಚನೆಯೇ ವರಣಕಾರ್ಯನಿರತ ರಾದವರಿಗೆ ಹುಟ್ಟುವುದು. ನೀತಿನಾಶವು ಎಲ್ಲೆಲ್ಲಿಯೂ ವೇಗವಾಗಿ ನಡೆಯುವುದಲ್ಲದೆ ಆಡಳಿತವು ಸ್ಥಿರಪಡುವುದೇ ಕಷ್ಟವಾಗುತ್ತದೆ. ಪಕ್ಷ ವಿಪಕ್ಷಗಳ ಕಿತ್ತಾಟವಲ್ಲದೆ ಕಾರ್ಯಾಂಗವು ಪದೇ ಪದೇ ಒದಲಾಗುತ್ತಲಿರು ತ್ತದೆ. ಇಂಗ್ಲಂಡಿನಲ್ಲಿ ಶಾಸಕಾಂಗವೇ ಅಧಿಕಾರ ಪ್ರಬಲವೆಂದಿದ್ದಾಗ್ಯೂ ವಾಸ್ತವ್ಯದಲ್ಲಿ ಕಾರ್ಯಾಂಗ ಪ್ರಮುಖರೇ ಶಾಸಕಾಂಗವನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ನಡೆಸತಕ್ಕವರು. ಜನಾಧಿಪತ್ಯವು ಆಚರಣೆಯಲ್ಲಿ ಅಲ್ಪಜನರ ಆಧಿಪತ್ಯವಾಗಿಯೇ ಪರಿಣಮಿಸುವುದು. ಜನರು ಆಡಳಿತವೆಲ್ಲವೂ ತಮ್ಮ ಇಷ್ಟಾನುಸಾರವಾಗಿ ನಡೆಯತಕ್ಕದ್ದೆಂಬ ಮಾಯಾಪ್ರಪಂಚದಲ್ಲಿಯೇ ಇದ್ದು ಮೂಢರಾಗುವರು. ನಿಯಮ ನಿಬಂಧನೆಗಳು ಅಸಂಖ್ಯಾಕವಾಗಿ ಪರಿಣಮಿಸಿ ಘೋರಾರಣ್ಯದಂತೆ ಬೆಳೆಯುವುದೇ ಅಲ್ಲದೆ ಸರ್ಕಾರವು ಅಸ್ಥಿರ ವಾಗಿದ್ದು ಅಧೈರ್ಯಪಡಬೇಕಾಗಿರುತ್ತದೆ. ದುರ್ನೀತಿಯು ಅಚಿಂತ್ಯವಾದ ಅವತಾರಗಳನ್ನೇ ಎಲ್ಲ ಕ್ಷೇತ್ರಗಳಲ್ಲಿಯೂ ಎತ್ತುತ್ತದೆ. ಅಧಿಕಾರಲಾಭಾ

ಲಾಭಗಳಲ್ಲಿ ನಡೆಯುವ ಮೋಸಕೃತ್ಯಗಳು ವರ್ಣನಾತೀತ. ಇವೆಲ್ಲವೂ ಅಲ್ಲದೆ ಬಹುಪಕ್ಷದವರ ಮೂರ್ಖತೆಯೆನ್ನುವುದು ಹೆಜ್ಜೆ ಹೆಜ್ಜೆಗೂ ಪ್ರತ್ಯಕ್ಷವಾಗಿ ತೋರಿಕೊಳ್ಳುತ್ತದೆ; ಸಂಖ್ಯಾದುರ್ಬಲರಾದವರು ದುರ್ಗತಿಗೆ ಸಿಕ್ಕದಂತೆ ವಿಧವಿಧವಾಗಿ ಮುಷ್ಕರ ಸಂಧಾನಗಳನ್ನು ನಡೆಸಬೇಕಾಗುವುದು. ಪ್ರಾಜ್ಞರು ಸಾಧಾರಣವಾಗಿ ಅಲ್ಪಸಂಖ್ಯಾಕರಾಗಿಯೇ ಇರುತ್ತಾರೆ; ಅಂತಹವರಿಗೆ ಆಸ್ಪದವೇ ದೊರಕುವುದಿಲ್ಲ. ಜ್ಞಾನವಂತರೂ ವಿವೇಚನಶಾಲಿಗಳೂ ರಾಷ್ಟ್ರಸೇವೆಯನ್ನು ಕೈಕೊಳ್ಳುವುದಕ್ಕೇ ಪ್ರಬಲವಾದ ಅಡ್ಡಿಯು ತೋರಿಕೊಳ್ಳುವುದು. ಬಹುಪಕ್ಷದವರ ಅತ್ಯಾಚಾರವೂ ಉಂಟು, ಅಲ್ಪಪಕ್ಷದವರ ಅತ್ಯಾಚಾರವೂ ಉಂಟು. ಇಬ್ಬರ ಕಿತ್ತಾಟದಲ್ಲಿಯೇ ರಾಷ್ಟ್ರದ ಶಕ್ತಿ ತೇಜಸ್ಸುಗಳು ವ್ಯರ್ಥವಾಗಿಬಿಡುವುವು.

ಒಟ್ಟಿನಲ್ಲಿ ಜಯಲಾಭವಾಗುವುದು ಕೆಲವರಿಗೆ. ಧನಬಲವೋ ಅಧಿಕಾರಬಲವೋ ಉಳ್ಳ ಕೆಲವರಿಗೆ ಮಾತ್ರ ಜಯಸಿದ್ಧಿಯಾದಾಗ ಬಹು ಜನರಿಗೆ ದುರ್ಗತಿಯೇ ಪ್ರಾಪ್ತಿ. ಲಕ್ಷಾಧೀಶನಾಗಿ ಒಬ್ಬನು ತೇರ್ಗಡೆಯಾಗುವುದರಲ್ಲಿ ಲಕ್ಷಮಂದಿ ದಾರಿದ್ರ್ಯಕೂಪದಲ್ಲಿ ಬಿದ್ದಹಾಗೆಯೇ ರಾಷ್ಟ್ರೀಯ ಅಧಿಕಾರ ನಿರ್ವಾಹದಲ್ಲಿಯೂ ಕೂಡ ಕೆಲವರು ಮಾತ್ರ ಮೇಲ್ಮೆಯನ್ನೂ ಅನೇಕರು ಕೀಳನ್ನೂ ಪಡೆಯುವರು. ದೇಶಗಳಲ್ಲಿ ಶಾಂತತೆಯಾಗಲಿ ಗಾಂಭೀರ್ಯವಾಗಲಿ ತೋರುವುದೇ ಇಲ್ಲ; ಸದಾ ಗಡಿಬಿಡಿಯೇ. ಜನರು ಧೀರತೆಯನ್ನೂ ಮನೋಬಲವನ್ನೂ ಬಲಪಡಿಸಿಕೊಳ್ಳಬಹುದಾದರೂ ಸ್ವಾರ್ಥತೆಯನ್ನೂ ಅತ್ಯಾಶೆಯನ್ನೂ ಜತೆಯಲ್ಲಿಯೇ ಅನಿವಾರ್ಯವಾಗಿ ಬೆಳೆಸಬೇಕಾಗುವುದು. ಸದಾ ಕ್ಷುಬ್ಧವೂ ಅಲ್ಲಕಲ್ಲೋಲವೂ ಆಗಿ ಮೊಳಗುತ್ತಲಿರುವ ಸಮುದ್ರದಂತೆಯೇ ದೇಶವಿರತಕ್ಕುದು. ಶಾಂತಿ, ನಿದಾನ, ವಿರಾಮಗಳು ಮಾಯವಾಗಿ ಆತುರ, ಆರ್ಭಟ, ಕೋಲಾಹಲಗಳೇ ಜೀವನದ ಲಕ್ಷಣಗಳಾಗಿ ಪರಿಣಮಿಸತಕ್ಕವು.

**ಮುಖ್ಯ ಆತಂಕಗಳು**

ಇವುಗಳನ್ನು ಪರಿಶೀಲಿಸಿ ಪಾಶ್ಚಾತ್ಯ ದೇಶಗಳ ಪ್ರಾಜ್ಞರು ಅಲ್ಲಿಯ ಪೌರಸಮೂಹಗಳಿಗೆ ಕೆಲವಂಶಗಳಲ್ಲಿ ಎಚ್ಚರಿಕೆ ಕೊಡುತ್ತಲೇ ಇರುವರು. ಪ್ರಾತಿನಿಧ್ಯಸ್ವರೂಪದ ಆಡಳಿತವನ್ನು ನಡೆಸುವುದರಲ್ಲಿ ಪೌರರಿಗೆ ವಿಪತ್ಕಾರಕಗಳಾದ ಅಂಶಗಳು ಮುಖ್ಯವಾಗಿ ನಾಲ್ಕು:—

**1. ಅಜ್ಞತೆ.**—ಅಜ್ಞನಾದ ಪೌರನು ಛಂದಾಧಿಕಾರವನ್ನು ಪ್ರಯೋಗಿಸುವುದೂ ಅಳಲೆಕಾಯಿ ಪಂಡಿತನು ಔಷಧವನ್ನು ಕೊಡುವುದೂ ಒಂದೇ. ರೋಗವು ಗುಣವಾಗುವುದಕ್ಕೆ ಪ್ರತಿಯಾಗಿ ಹಿಂದೆ ಇಲ್ಲದಿದ್ದ ರೋಗಗಳು ತೋರಿಕೊಳ್ಳುವ ಸಂಭವ ಹೇಗೋ ಹಾಗೇ ಅಜ್ಞಾನಿಯಾಗಿ ಪೌರನು ತನ್ನ ಛಂದವನ್ನು ಕೊಡುವುದರಲ್ಲಿ ಹೊಸದಾದ ತೊಂದರೆಗಳು ಹುಟ್ಟಬಹುದು. ಪ್ರಾತಿನಿಧ್ಯವುಳ್ಳ ರಾಷ್ಟ್ರದ ನಿರ್ವಾಹದಲ್ಲಿ ಪೌರರೆಲ್ಲರೂ ಪ್ರಜ್ಞಾವಂತರಾಗಿ ಮಾತ್ರವೇ ಅಲ್ಲದೆ ವಿವೇಚನಾಪರರಾಗಿಯೂ ಇರ ತಕ್ಕದ್ದು ಅತ್ಯವಶ್ಯಕ. ಪಾಶ್ಚಾತ್ಯ ರಾಷ್ಟ್ರಗಳ ಪೌರರಲ್ಲಿ ವೃತ್ತಪತ್ರಿಕೆ ಗಳನ್ನು ಓದುವುದೂ ಸಭೆಗಳಲ್ಲಿ ಭಾಗಿಗಳಾಗುವುದೂ ಕನಿಷ್ಠಪಕ್ಷದ ಕರ್ತವ್ಯಗಳಾಗಿರುತ್ತವೆ. ಆದರೆ ಅಷ್ಟು ಮಾತ್ರ ಸಾಲದು. ಏಕೆಂದರೆ ವೃತ್ತಪತ್ರಲೇಖನಗಳೂ ಭಾಷಣಗಳೂ ಸಾಮಾನ್ಯವಾಗಿ ಪಕ್ಷಪಾತ ದಿಂದಲೇ ಕೂಡಿರುತ್ತವೆ. ಪೌರನಿಗೆ ಅಭಿಪ್ರಾಯ ಸ್ವಾತಂತ್ರ್ಯವುಂಟು; ಆ ಸ್ವಾತಂತ್ರ್ಯವನ್ನು ಯೋಗ್ಯರೀತಿಯಲ್ಲಿ ವಿನಿಯೋಗಿಸಲು ಪೌರನು ವಿಷಯವನ್ನು ಆಮೂಲಾಗ್ರವಾಗಿ ಪರಿಚಯಮಾಡಿಕೊಂಡು, ಪೂರ್ವಾ ಪರಗಳನ್ನು ವಿಮರ್ಶೆಮಾಡಿ ವಿವೇಕವನ್ನು ಅವಲಂಬಿಸಿದ ತರುವಾಯ ಇತ್ಯರ್ಥವನ್ನು ಮಾಡಬೇಕು. ಇಷ್ಟು ವಿಸ್ತಾರವಾದ ಕರ್ತವ್ಯವನ್ನು ನಿರ್ವಹಿಸಲು ಎಲ್ಲರಿಗೂ ತಕ್ಕ ಯೋಗ್ಯತೆಯಿರುವುದಿಲ್ಲ; ಯೋಗ್ಯತೆ ಯಿದ್ದರೂ ಸಾಕಾದಷ್ಟು ಕಾಲ ದೊರಕುವುದಿಲ್ಲ. ಆದ್ದರಿಂದ ಸಾಮಾನ್ಯ ಜನರು ಯಾವುದಾದರೂ ಒಂದು ಪಕ್ಷವನ್ನು ಹಿಡಿದು ಆ ಪಕ್ಷದ ನಾಯಕರು ಹೇಳಿದಂತೆ ಆಚರಿಸಬೇಕಾಗುತ್ತದೆ. ನಾಯಕರನ್ನು ವರಿಸಿ ಕೊಂಡ ತರುವಾಯವೂ ಮೂಕಪ್ರಾಣಿಗಳಂತೆ ಅನುಸರಿಸಬಾರದು; ಅನುಸರಿಸುವುದರಲ್ಲಿ ವಿಧೇಯತೆಯನ್ನೂ ತೋರಬೇಕು, ಎಚ್ಚರವನ್ನೂ ತೋರಬೇಕು.

ಪೌರರೆಲ್ಲರೂ ತಮ್ಮ ರಾಷ್ಟ್ರದ ಸ್ಥಿತಿಗತಿಗಳನ್ನು ಆದ್ಯಂತವಾಗಿ ತಿಳಿಯಲು ಸದಾ ಪ್ರಯತ್ನನಿರತರಾಗಿರಬೇಕು. ಜ್ಞಾನಸವಂತರಾಗಿ ಮನಸ್ಸಿನಲ್ಲಿ ತೀರ್ಮಾನಮಾಡಿಕೊಂಡು ಛಂದದಾನದ ವೇಳೆಯಲ್ಲಿ ರಾಷ್ಟ್ರದ ಹಿತವನ್ನು ಸ್ಮರಿಸುತ್ತ ವಿವೇಕಶಾಲಿಗಳಾಗಿ ಛಂದಪ್ರಯೋಗ ಮಾಡಬೇಕು.

2. **ಅಲಕ್ಷ್ಯ.**—ಸುಶಿಕ್ಷಿತರಾದವರೂ, ಸ್ವತಂತ್ರಬುದ್ಧಿಬಲದಿಂದಲೇ ಇತ್ಯರ್ಥಮಾಡಲು ದಕ್ಷರಾದವರೂ ರಾಷ್ಟ್ರಕರ್ತವ್ಯಗಳನ್ನು ಗಮನಿಸದೆಯೇ ತಟಸ್ಥರಾಗಿರುವುದುಂಟು. ಹಾಗೆ ದೂರಸ್ಥರಾಗಿರುವುದರಿಂದ ರಾಷ್ಟ್ರಕ್ಕೆ ಅವರಿಂದ ಒದಗಬಹುದಾದ ಪ್ರಯೋಜನವು ದೊರೆಯದಂತೆ ಪರಿಣಮಿಸುತ್ತದೆ. ಆದ್ದರಿಂದ ಕರ್ತವ್ಯಭ್ರಷ್ಟರಾದವರು ರಾಷ್ಟ್ರಸಮುಖದಲ್ಲಿ ದ್ರೋಹಿಗಳೆಂದೇ ಎನಿಸತಕ್ಕವರು. ಅಲ್ಪಸಂಖ್ಯಾಕರಾದುದರಿಂದ ತಮ್ಮಿಂದ ಏನೂ ಸಾಧ್ಯವಿಲ್ಲವೆಂದುಕೊಂಡು ಸುಮ್ಮನಾಗಿದ್ದರೆ ಯಾರಿಗೂ ಏನೂ ಲಾಭವಿಲ್ಲ. ಸಂಖ್ಯಾದುರ್ಬಲರಾಗಿದ್ದರೂ ಪ್ರಾಜ್ಞರಾದವರು ಪ್ರಯತ್ನಶಾಲಿಗಳಾಗಿ ಇತರರನ್ನು ತಮ್ಮ ದಾರಿಗೆಳೆಯಲು ಸನ್ನಾಹಪಡಬೇಕು.

3. **ಸಂಕುಚಿತ ದೃಷ್ಟಿ.**—ಪೌರನಾದವನು ತನ್ನ ಕಾರ್ಯನಿರ್ವಾಹದಲ್ಲಿ ಸಮಸ್ತ ರಾಷ್ಟ್ರವನ್ನು ಮರೆತು ಯಾವುದೋ ಒಂದು ಭಾಗದ ಹಿತವನ್ನು ಮಾತ್ರ ಸ್ಮರಿಸಿದರೆ ರಾಷ್ಟ್ರಕ್ಕೆ ಅಪರಾಧ ಮಾಡಿದಂತೆಯೇ ಆಗುವುದು. ಅಧಿಕಾರಸ್ಥರು ಯಾವುದೋ ಒಂದು ಭಾಗದವರಿಗೆ ಮಾತ್ರ ಉಪಕಾರವನ್ನು ಮಾಡಿದರೆ ತಕ್ಷಣವೇ ಅವರನ್ನು ಪಕ್ಷಪಾತವುಳ್ಳವರೆಂದು ನಿಂದಿಸುವುದುಂಟು. ಪೌರಕರ್ತವ್ಯಕ್ಷೇತ್ರದಲ್ಲಿಯೂ ಪಕ್ಷಪಾತಿಗಳೆಂಬ ನಿಂದೆಗೆ ಬೇಕಾದಷ್ಟು ಅವಕಾಶವುಂಟು. ಸ್ವಕುಲಾಭಿಮಾನದಿಂದಲೋ ಸ್ವಜಾತಿಯಭಿಮಾನದಿಂದಲೋ ಪೌರನು ಪೌರಕರ್ತವ್ಯವನ್ನು ನೆರವೇರಿಸಿದರೆ ರಾಷ್ಟ್ರ ಸಮುಖದಲ್ಲಿ ದ್ರೋಹವೇ ನಡೆದಂತಾಗುವುದು. ಪೌರ ಕರ್ತವ್ಯಾಧಿಕಾರಗಳ ಪಾಲನೆಯಲ್ಲಿ ಕಿರಿದಾದುದನ್ನು ಹಿರಿದಾದುದಕ್ಕೆ ಬಲಿಕೊಡಬೇಕೆಂಬ ಸೂತ್ರವನ್ನು ಸದಾ ಅವಲಂಬಿಸಬೇಕು. ಗ್ರಾಮಭಕ್ತಿಗಿಂತಲೂ ಜಾತಿಭಕ್ತಿಗಿಂತಲೂ ರಾಷ್ಟ್ರಭಕ್ತಿಯು ದೊಡ್ಡದು. ರಾಷ್ಟ್ರ ಭಕ್ತಿಗೆ ಆತಂಕವಾಗಿ ತೋರುವ ಜಾತಿವಿಶ್ವಾಸವಾಗಲಿ ಕ್ಷೇತ್ರಭಕ್ತಿಯಾಗಲಿ ಅಯುಕ್ತವಾದುದು.

4. **ಆಶೆ.**—ಗ್ರಾಮವಾಗಲಿ, ನಗರವಾಗಲಿ, ಜಿಲ್ಲೆಯಾಗಲಿ, ಇನ್ನೂ ದೊಡ್ಡದಾದ ಕ್ಷೇತ್ರವಾಗಲಿ ಪೌರನಿಗೆ ಹೆಜ್ಜೆ ಹೆಜ್ಜೆಗೂ ಆಶೆಯನ್ನು ಹುಟ್ಟಿಸುವ ಸಂದರ್ಭಗಳು ತೋರಿಕೊಳ್ಳುತ್ತಲೇ ಇರುತ್ತವೆ. ಒಂದು ಸಲ

ಆಶೆಗೆ ಮನಸ್ಸು ಕೊಟ್ಟರೆ ಸ್ವಾರ್ಥಸಾಧನೆಯೇ ಸ್ಥಿರವಾಗಿ ನೆಲೆಸುವುದು. ಧನದಾಶೆಯೋ, ಅಧಿಕಾರದಾಶೆಯೋ, ಗೌರವ ಪ್ರತಿಷ್ಠೆಗಳ ಆಶೆಯೋ ಯಾವುದಾದರೂ ಸರಿಯೇ, ರಾಷ್ಟ್ರಭಕ್ತನು ಮನಸ್ಸುಕೊಟ್ಟರೆ ದುರ್ಬಲ ನಾಗಿ ದುರ್ನೀತಿಗೆಡೆಗೊಡುವನು. ಶಾಸನ ಸಭೆಗೆ ಸದಸ್ಯನಾದವನ ಬಳಿಗೆ ವ್ಯಾಪಾರಸ್ಥರೋ ಕಾರಭಾರಿಗಳೋ ಬಂದು ತಮ್ಮ ಪರವಾಗಿ ವರ್ತಿಸುವಂತೆ ಹಣದಾಶೆಯನ್ನು ಹುಟ್ಟಿಸಿ ಸಮಾಧಾನಗೊಳಿಸಬಹುದು. ಅಥವಾ ಪದವಿ ಪಡೆದಾತನು ಬೇರೆ ಬಗೆಯ ಪ್ರಯೋಜನವನ್ನು ಕಲ್ಪಿಸಿಕೊಡುವ ನೆಪವನ್ನು ತೋರಿ ರಾಷ್ಟ್ರಭಕ್ತನ ಸ್ವಾತಂತ್ರ್ಯವನ್ನು ಅಪಹರಿಸಬಹುದು. ಅಲ್ಪ ಸ್ವಲ್ಪ ಖ್ಯಾತಿಯನ್ನು ಪಡೆದಕೂಡಲೆ ರಾಷ್ಟ್ರಸೇವಕನಿಗೆ ಇಂತಹ ಆಶೆಗಳು ಪದೇ ಪದೇ ತೋರಿಕೊಳ್ಳುತ್ತವೆ. ಅಂತಹ ಸಂದರ್ಭಗಳಲ್ಲಿ ರಾಷ್ಟ್ರಭಕ್ತನು ನಿಸ್ಪೃಹನಾಗಿರಬೇಕು. ಅಧಿಕಾರ ಪ್ರತಿಷ್ಠೆಗಳ ಆಶೆಯನ್ನು ಬೆಳೆಸಿದಾಗಲೂ ರಾಷ್ಟ್ರಸೇವೆಯೆಂಬುದು ಸ್ವಸೇವೆಯಾಗಿ ಪರಿಣಮಿಸುವುದು. ಖ್ಯಾತಿಯು ಹೆಚ್ಚುತ್ತ ನಿಸ್ಪೃಹತೆಯ ಕಷ್ಟವೂ ಹೆಚ್ಚುವುದು.

**ಜನತೆಯ ಅಭಿಪ್ರಾಯ**

ಪ್ರಾತಿನಿಧ್ಯತತ್ವದ ಆಚರಣೆಯು ನಮ್ಮ ದೇಶದಲ್ಲಿ ಇನ್ನೂ ತಾರುಣ್ಯ ದಲ್ಲಿಯೇ ಇದೆಯೆಂದು ಹೇಳಬಹುದಾದರೂ ಈ ವಿಪತ್ತುಗಳೆಲ್ಲವೂ ತೋರಿಕೊಂಡೇ ಇವೆ. ದುರ್ನೀತಿಯ ಲಕ್ಷಣಗಳು ಬಲಗೊಂಡ ಪಕ್ಷದಲ್ಲಿ ಸ್ವಾತಂತ್ರ್ಯವೆಂಬುದು ಉನ್ಮಾದವಾಗಿ ಪರಿಣಮಿಸುವುದು; ಪೌರರು ರಾಷ್ಟ್ರಭೂಷಣರಾಗಿರುವುದಕ್ಕೆ ಬದಲಾಗಿ ರಾಷ್ಟ್ರಕಂಟಕರಾಗಿ ಕಳಂಕ ಸ್ವರೂಪರಾಗುತ್ತಾರೆ. ಪ್ರಬಲವಾದ ಅನರ್ಥಗಳು ತೋರಿಕೊಳ್ಳಲು ಅನುಕೂಲವೊದಗುತ್ತದೆ. ಈ ವಿಪತ್ತುಗಳನ್ನು ನಿಯಮ ನಿಬಂಧನೆಗಳ ಮೂಲಕ ನಿವಾರಿಸಲು ಸಾಧ್ಯವಿಲ್ಲ. ಪೌರಸ್ವಾತಂತ್ರ್ಯವನ್ನು ಅಡಗಿಸುವುದು ಅಕ್ಷಮ್ಯವಾದುದರಿಂದ ಸ್ವಾತಂತ್ರ್ಯವಿದ್ದಷ್ಟೂ ದುರ್ನೀತಿಗೆ ಅವಕಾಶವು ದೊರಕುತ್ತದೆ. ಅವುಗಳನ್ನು ಅಡಗಿಸಲು ವಿಧಿಗೆ ಬಲವಿಲ್ಲ. ಅವುಗಳನ್ನು ಅಡಗಿಸತಕ್ಕದ್ದು ಜನಾಭಿಪ್ರಾಯವೆಂಬುದೊಂದೇ. ಜನತೆಯ ಅಭಿಪ್ರಾಯ ವೆಂಬುದು ಜನರಿಂದಲೇ ರೂಪಗೊಳ್ಳತಕ್ಕುದು. ಜಾತಿಯ ಆಚಾರ ನಿಯಮ ಗಳನ್ನು ಪಾಲಿಸದಿದ್ದರೆ ಯಾವ ರೀತಿಯಲ್ಲಿ ಗೃಹಸ್ಥನು ಜಾತಿಭ್ರಷ್ಟ

ನೆನಿಸುತ್ತಾನೋ ಅದೇ ರೀತಿಯಲ್ಲಿ ಜನತೆಯಿಂದ ಭ್ರಷ್ಟನೆನಿಸುವ ವಿಪತ್ತನ್ನು ತೋರುವ ಜನಾಭಿಪ್ರಾಯವೆಂಬುದು ಪ್ರಬಲವಾಗಿರಬೇಕು. ಜನಾಭಿಪ್ರಾಯದ ಅಂತಸ್ತು ಬಲ್ಮೆಗಳು ಹೇಗಿರುತ್ತವೆಯೋ ಪೌರರೂ ಹಾಗೆಯೇ ಶೀಲಬಲವುಳ್ಳವರಾಗಿರುತ್ತಾರೆ. ಜಾತಿಕಟ್ಟಿದ್ದಂತೆಯೇ ಒಟ್ಟು ರಾಷ್ಟ್ರದಲ್ಲಿ ಜನದಕಟ್ಟೆಂಬುದು ರೂಪಸಿದ್ಧಿಯನ್ನು ಜನಾಭಿಪ್ರಾಯದ ಮೂಲಕ ತಾಳಬೇಕು. ಆದರೆ ಜನಾಭಿಪ್ರಾಯವೆಂಬುದು ರೂಪಗೊಳ್ಳುವುದೇ ಕಷ್ಟ. ಜನರ ಅಭಿಪ್ರಾಯವು ನಾನಾವಿಧವಾಗಿಯೇ ಇರುವುದು; ಅನೇಕ ಸಂದರ್ಭಗಳಲ್ಲಿ ಪರಸ್ಪರ ವಿರುದ್ಧವಾಗಿಯೇ ಇರುವುದು. ಒಂದು ಪತ್ರಿಕೆಯ ಅಭಿಪ್ರಾಯವನ್ನು ಬೇರೊಂದು ಪತ್ರಿಕೆಯು ಖಂಡಿಸುವುದು; ಒಬ್ಬರು ಹೇಳಿದುದನ್ನು ಮತ್ತೊಬ್ಬರು ಪ್ರತಿಭಟಿಸುವರು. ಹೀಗೆ ಪಕ್ಷ ವಿಪಕ್ಷಗಳು ಸರಿಸುಮಾರಾಗಿ ಎಲ್ಲ ಸಂದರ್ಭಗಳಲ್ಲಿಯೂ ತೋರಿಕೊಳ್ಳುವುವು. ಸಮಸ್ತ ರಾಷ್ಟ್ರಕ್ಕೂ ಅನ್ವಯಿಸುವ ವಿಷಯವಾಗಿದ್ದು, ಸಮಸ್ತ ಜನರೂ ಏಕಕಾಲದಲ್ಲಿ ವಿವೇಚನೆಯಿಂದ ಪೂರ್ವಾಪರಗಳನ್ನು ಯೋಚಿಸಿ, ಏಕಕಂಠದಿಂದ ನಿಶ್ಚಯಮಾಡಿದರೆ ಆಗ ಅದನ್ನು ಜನಾಭಿಪ್ರಾಯವೆಂದು ಹೇಳಬಹುದು. ಹೀಗೆ ಎಂದಾದರೂ ನೆರವೇರಲು ಸಾಧ್ಯವೇ? ಆದ್ದರಿಂದ ಜನಾಭಿಪ್ರಾಯವು ಹೀಗೆಂದು ನಿಷ್ಕರ್ಷೆಯಾಗುವುದೇ ಕಷ್ಟ. ಜನರ ಅಭಿಪ್ರಾಯವೆಂದು ಆಗಾಗ್ಗೆ ತೋರತಕ್ಕುದನ್ನು ಸ್ವಲ್ಪ ಪರೀಕ್ಷೆಮಾಡಿ ನೋಡಿದಕೂಡಲೆ ಯಾರೋ ಒಬ್ಬರು ಹೇಳಿಕೊಟ್ಟದ್ದೇ ಆಗಿರುತ್ತದೆ. ಆದ್ದರಿಂದ ಜನಾಭಿಪ್ರಾಯದ ಸಿದ್ಧಿಯು ಬಲುಕಷ್ಟ. ಆದರೆ ಜನಾಭಿಪ್ರಾಯವೆಂಬುದೇ ಇಲ್ಲದಿದ್ದರೆ ರಾಷ್ಟ್ರದಲ್ಲಿ ನೀತಿಯ ಕಟ್ಟಿರುವುದು ಹೇಗೆ?

**ನೀತಿಯ ಆದರ್ಶ**

ಇದಕ್ಕೆ ಉತ್ತರ ಜನರಲ್ಲಿ ಸಂಪ್ರದಾಯವಾಗಿ ನೆಲೆಸಿದ ನೀತಿಯ ಅಂತಸ್ತು. ಆ ನೀತಿಯ ಅಂತಸ್ತನ್ನು ಸ್ಥಾಪಿಸತಕ್ಕವರು ಆದರ್ಶಭೂತರಾದ ಪೌರರು. ಹಿಂದಿನ ಕಾಲದಲ್ಲಿಯೇ ಆದರ್ಶಗಳನ್ನು ನೆಲೆಗೊಳಿಸಿದ ಮಹಾಪುರುಷರ ಜನ್ಮಧಾರಣೆಯು ನಡೆದಿದ್ದು ಅವರ ಜೀವನವೃತ್ತಾಂತ ವಿವರಗಳು ಜನಜೀವನದಲ್ಲಿ ನಿತ್ಯಸ್ಮರಣೀಯವಾಗಿದ್ದ ಪಕ್ಷದಲ್ಲಿ

ದುರ್ನೀತಿಯು ತೋರಿಕೊಂಡರೂ ದುರ್ನೀತಿಯೆಂದು ಭಾಸವಾಗಿ ದುರ್ಬಲವಾಗುವುದು. ಭರತವರ್ಷದ ಇಂದಿನ ಬಲವೆಲ್ಲವೂ ಹಿಂದಿನ ಕಾಲದಿಂದ ಸಂಪ್ರದಾಯರೂಪದಲ್ಲಿ ಅಡಗಿರುವ ಉದಾತ್ತವಾದ ಆದರ್ಶಗಳಲ್ಲಿ ನೆಲೆಸಿದೆ. ಈಚಿನ ಕಾಲದಲ್ಲಿಯೂ ಸರ್ ಫಿರೂಸ್ ಷಾ ಮಹೆತಾ, ಗೋಪಾಲಕೃಷ್ಣ ಗೋಖಲೆ, ವಿಟ್ಠಲಭಾಯಿ ಪಟೇಲ್ ಮುಂತಾದ ಆದರ್ಶ ಪೌರರು ಬದುಕಿದ್ದು ಮೇಲ್ಪಂಕ್ತಿಯನ್ನು ತೋರಿಕೊಟ್ಟಿದ್ದಾರೆ. ಅವರು ತೋರಿಕೊಟ್ಟ ನೀತಿಯನ್ನೇ ಅವಲಂಬಿಸಲು ಭಾರತೀಯ ಪೌರರು ಕೃತಪ್ರಯತ್ನರಾಗಿ ಎರಡು ಸದ್ಗುಣಗಳನ್ನು ಪುಷ್ಟಿಪಡಿಸಿಕೊಳ್ಳಬೇಕು. ಆ ಎರಡು ಗುಣಗಳು ಯಾವುವೆಂದರೆ:—

(1) ದೇಶಭಕ್ತಿ, ಅರ್ಥಾತ್ ದೇಶೀಯರಾದವರೆಲ್ಲರಲ್ಲಿಯೂ ಸಹಜವಾದ ಪ್ರೇಮ ವಿಶ್ವಾಸಗಳು.

(2) ತ್ಯಾಗ, ಅರ್ಥಾತ್ ತನ್ನ ಕಾಲ, ಚೈತನ್ಯಗಳನ್ನು ಅರ್ಪಿಸುವುದಲ್ಲದೆ ಸ್ವಾರ್ಥಲಾಭ ಆಕಾಂಕ್ಷೆಗಳನ್ನೂ ದೇಶದ ಹಿತಕ್ಕಾಗಿ ತ್ಯಜಿಸುವುದು. ತನ್ನ ಸರ್ವಸ್ವವನ್ನೂ ದೇಶಕ್ಕಾಗಿ ಅರ್ಪಿಸುವುದು.

ತ್ಯಾಗಮಾಡಿದಷ್ಟೂ ಪುಣ್ಯಲಾಭವಾಗುವುದು, ಜನರ ವಿಶ್ವಾಸವೂ ಹೆಚ್ಚುವುದು. ಜನಸೇವೆಯೇ ದೇವರ ಸೇವೆಯೆಂಬ ತತ್ವವನ್ನು ಭಾರತೀಯರು ಆಚರಿಸಬೇಕು. ಪುಣ್ಯಪಾಪಗಳು ದೇಶಕಾರ್ಯಗಳಲ್ಲಿಯೂ ಪ್ರತ್ಯಕ್ಷವಾಗಿವೆಯೆಂಬುದನ್ನು ಕಾಣಬೇಕು. ಗೋಖಲೆಯವರು ಹೇಳಿಕೊಟ್ಟ ಮಂತ್ರವೆಂಬುದರ ಅರ್ಥವೇ ಇದು. ನೌರೋಜಿ, ರಾನಡೆ, ಗೋಖಲೆ ಮುಂತಾದವರ ಜೀವನವು ಈ ತತ್ವಕ್ಕೆ ನಿದರ್ಶನಸ್ವರೂಪಗಳಾಗಿದ್ದುದರಿಂದ ಸಾರ್ವಜನಿಕ ಕೆಲಸಕಾರ್ಯಗಳಲ್ಲಿ ಆದರ್ಶವು ಉತ್ತುಂಗವಾಗಿಯೇ ಇದೆ. ಆತ್ಮಗೌರವ ಪ್ರಜ್ಞೆಯು ಹೆಚ್ಚಿದ ಹಾಗೆಲ್ಲ ನೀಚತನವಾಗಲಿ ಅಯೋಗ್ಯತೆಯಾಗಲಿ ಅಕರ್ತವ್ಯವೆನಿಸುವುದು. ಆ ರೀತಿಯಲ್ಲಿ ಉಚ್ಚವಾದ ಆದರ್ಶಗಳನ್ನು ಧ್ಯಾನಿಸುತ್ತ ದೇಶಭಕ್ತಿಯಿಂದಲೂ ತ್ಯಾಗಸಿದ್ಧತೆಯಿಂದಲೂ ಕೂಡಿದ ಜನರಿದ್ದ ದೇಶವು ವಾಸ್ತವವಾಗಿ ಪುಣ್ಯಭೂಮಿಯೇ ಆಗುತ್ತದೆ.

ಭಾರತೀಯ ರಾಷ್ಟ್ರಭಕ್ತಿ

ಭಾರತೀಯರಿಗೆ ಅಪೂರ್ವವಾದ ಆದರ್ಶಸಿದ್ಧಿಯುಂಟು. ಭಾರತೀಯ ದೇಶಭಕ್ತಿಯೆಂಬುದು ಸಾಮಾನ್ಯವಾದುದಾಗಲಿ ಇತರ ದೇಶಗಳಲ್ಲಿರತಕ್ಕಂತಾಗಲಿ ಇಲ್ಲ. ಭಾರತೀಯ ದೇಶಭಕ್ತರಲ್ಲಿ ಅಗ್ರಗಣ್ಯನಾದಾತನು* ತನ್ನ ದೇಶಭಕ್ತಿಯನ್ನು ವಿವರಿಸುತ್ತ ಹೇಳಿರುವುದನ್ನು ಭಾರತೀಯರೆಲ್ಲರೂ ಪಠಿಸತಕ್ಕದ್ದಾಗಿಯೇ ಇದೆ:—

"ನನ್ನ ಧ್ಯೇಯವು ಭಾರತೀಯರಲ್ಲಿ ಮಾತ್ರ ಭ್ರಾತೃಭಾವಸಿದ್ಧಿಯಲ್ಲ. ಸದ್ಯದಲ್ಲಿ ನನ್ನ ಚೈತನ್ಯವೆಲ್ಲವನ್ನೂ ಕಾಲವೆಲ್ಲವನ್ನೂ ಬಯಸಿದ್ದಾಗ್ಗೂ ಭರತವರ್ಷದ ಮೋಕ್ಷ ಮಾತ್ರವೇ ನನ್ನ ಗುರಿಯಲ್ಲ. ಭಾರತೀಯರ ವಿಮೋಚನೆಯ ಮೂಲಕ ಇಡೀ ಮಾನವ ವರ್ಗದ ಸಹೋದರಭಾವಸಿದ್ಧಿಗಾಗಿ ಪ್ರಯತ್ನಿಸುವ ಉದ್ದೇಶವು ನನ್ನಲ್ಲಿದೆ. ನನ್ನ ದೇಶಭಕ್ತಿಯು ನಿಷೇಧಕವಾದುದಲ್ಲ. ಅದು ಎಲ್ಲವನ್ನೂ ಒಳಗೊಳ್ಳತಕ್ಕದ್ದು. ಇತರರ ಹೈನ್ಯತೆಯ ಮೇಲೇರಿ ಶೋಭಿಸತಕ್ಕ ದೇಶಭಕ್ತಿಯನ್ನು ನಾನೊಲ್ಲೆ. ಯಾವ ಕಾಲದಲ್ಲಿಯಾಗಲಿ ಯಾವ ಅಂಶದಲ್ಲಿಯಾಗಲಿ ವಿಶಾಲವಾದ ಮಾನವವರ್ಗದ ಮೇಲ್ಮೆಗೆ ಎಳ್ಳಷ್ಟು ವಿರೋಧವನ್ನು ತೋರುವುದಾದರೂ ಆ ದೇಶಭಕ್ತಿಯು ಶೂನ್ಯಸಮಾನ. ಅಷ್ಟೇ ಅಲ್ಲದೆ ನನ್ನ ದೇಶಭಕ್ತಿಗೆ ಆಧಾರಭೂತವಾದ ನನ್ನ ಧರ್ಮದಲ್ಲಿ ಎಲ್ಲ ಜೀವರಾಶಿಗಳ ಹಿತಚಿಂತನೆಯುಂಟು. ಮಾನವರೆಂದು ಹೆಸರಾದ ಜೀವಿಗಳೊಂದಿಗೆ ಏಕೀಭಾವವನ್ನು ಪಡೆಯಲು ಮಾತ್ರವೇ ಅಲ್ಲ, ನೆಲದ ಮೇಲೆ ದೇಕಿಕೊಂಡುಹೋಗುವ ಕ್ರಿಮಿಗಳನ್ನೂ ಸೇರಿಸಿಕೊಂಡು ಸಮಸ್ತ ಜೀವಿಗಳೊಂದಿಗೂ ಏಕೀಭಾವವನ್ನು ಪಡೆಯಲು ನಾನು ತವಕವುಳ್ಳವನಾಗಿರುವೆನು. ಏಕೆಂದರೆ ನಾವೆಲ್ಲರೂ ಒಬ್ಬನೇ ಆದ ಭಗವಂತನಿಂದ ಸೃಷ್ಟರಾದವರು ; ಜೀವವೆಂಬುದು ಯಾವ ರೂಪದಲ್ಲಿದ್ದಾಗ್ಗೂ ಒಂದೇ."

ಭಾರತೀಯ ದೃಷ್ಟಿ

ಧರ್ಮಬದ್ಧರಾದ ಭಾರತೀಯರು ನ್ಯಾಯಾನ್ಯಾಯಗಳಲ್ಲಿ ಪುಣ್ಯಪಾಪಗಳನ್ನು ಕಾಣಬಲ್ಲವರಾದ ಕಾರಣದಿಂದ ಸುಲಭವಾಗಿಯೇ ಆತ್ಮಗೌರವವನ್ನು ಭದ್ರಪಡಿಸಿಕೊಳ್ಳಬಲ್ಲವರು. ಕೋಮಲವೂ ಸೂಕ್ಷ್ಮವೂ ಆದ ಅಂತಃಕರಣವನ್ನು ಪೂರ್ವಾರ್ಜಿತ ನಿಧಿರೂಪದಲ್ಲಿ ಪಡೆದಿರುವ

---

* ಮಹಾತ್ಮಾ ಗಾಂಧೀಜಿ.

ಈ ವಿವರವು ಹಿಂದೂ ಜನರ ನಿತ್ಯಪ್ರಾರ್ಥನೆಯ ವ್ಯಾಖ್ಯಾನದಂತೆಯೇ ಇದೆ:

ಸರ್ವೇ ಚ ಸುಖಿನಸ್ಸಂತು ಸರ್ವೇ ಸಂತು ನಿರಾಮಯಾಃ।
ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ದುಃಖ ಭಾಗ್ಭವೇತ್ ॥

ಭಾರತೀಯರಿಗೆ ರಾಷ್ಟ್ರಧರ್ಮದ ಸೂಕ್ಷ್ಮಗಳೂ ಪಾಪಪುಣ್ಯಗಳೂ ಸುಲಭವಾಗಿ ತಿಳಿಯತಕ್ಕವು. ಇತರ ದೇಶಗಳಲ್ಲಿ ತೋರಿಕೊಂಡ ದುರ್ನೀತಿಗೆ ಎಡೆಕೊಡದಿರುವುದೇ ಅಲ್ಲದೆ, ಉದಾತ್ತವಾದ ಆದರ್ಶಗಳನ್ನು ಧ್ಯಾನಿಸುತ್ತ ಸಾರ್ವಜನಿಕ ಕ್ಷೇತ್ರದಲ್ಲಿ ಕರ್ತವ್ಯನಿರ್ವಾಹವನ್ನು ಮಾಡುತ್ತ ಭಾರತೀಯ ಪೌರರು ಇತರ ದೇಶದವರಿಗೆ ಮಾರ್ಗದರ್ಶಿಗಳಾಗಲೂ ಬಹುದು. ದಾಕ್ಷಿಣ್ಯವನ್ನೇ ಅತಿಯಾಗಿ ಬೆಳೆಸಿಕೊಂಡ ಭಾರತೀಯ ಜನರು ದೇಶಭಕ್ತಿಯನ್ನೂ ತ್ಯಾಗಸಿದ್ಧತೆಯನ್ನೂ ವೃದ್ಧಿಪಡಿಸಿಕೊಳ್ಳುವುದಲ್ಲದೆ ತಕ್ಕಷ್ಟು ಕಾಠಿಣ್ಯವನ್ನೂ ಸಂಪಾದಿಸಿಕೊಳ್ಳಬೇಕು. ಆತ್ಮ, ಗೃಹ, ಸ್ಥಲ, ದೇಶ ಮತ್ತು ಜಗತ್ತೆಂಬ ಪಂಚಕ್ಷೇತ್ರಗಳಿಗೆ ಅನುಗುಣವಾಗಿ ಪಂಚಯಜ್ಞಗಳನ್ನು ನಡೆಸುತ್ತ "ತ್ಯಜೇತ್ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್। ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್॥" ಎಂಬ ಆರ್ಯೋಕ್ತಿಯನ್ನು ಪ್ರತಿ ಕಾರ್ಯದಲ್ಲಿಯೂ ಸ್ಮರಿಸುತ್ತಲಿರಬೇಕು. ಏಕಂದರೆ ಭಾರತೀಯ ಪೌರರ ಮುಂದಿರುವ ಕರ್ತವ್ಯವು ಅಮೋಘವಾದುದು, ಸಮಸ್ಯೆಗಳು ವಿಷಮವಾದವು, ಭಾರತೀಯರ ಸರ್ವಶಕ್ತಿಯನ್ನೂ ಬಯಸತಕ್ಕವು.



## ಈಚಿನ ಇತಿಹಾಸ

ಬ್ರಿಟಿಷರ ಆಳ್ವಿಕೆ, ಸಂಸ್ಕೃತಿ ಘರ್ಷಣೆ, ರಾಜಾ ರಾಮಮೋಹನ ರಾಯ. ಬ್ರಹ್ಮ ಸಮಾಜ, ಶ್ರೀ ರಾಮಕೃಷ್ಣ ಪರಮಹಂಸ, ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ, ದೇಶಭಾಷಾ ಸಾಹಿತ್ಯಗಳು, ದಾದಾಭಾಯಿ ನೌರೋಜಿ, ಆಳ್ವಿಕೆಯ ಪರಿಣಾಮ, ಆರ್ಥಿಕ ಪರಿಣಾಮ, ನಷ್ಟಚೈತನ್ಯ, ರಾಷ್ಟ್ರೀಯ ಪ್ರಜ್ಞೆ, ಅಖಿಲ ಭಾರತದ ಕಾಂಗ್ರೆಸ್, ಬಾಲ ಗಂಗಾಧರ ತಿಲಕ, ಪಕ್ಷವಿಪಕ್ಷಗಳು, ಸೂರತ್ ಕಾಂಗ್ರೆಸ್, ಮುಸ್ಲಿಂ ಲೀಗ್, ಗೋಖಲೆ, ಹೊರಗಿನ ಭಾರತೀಯರು, ಘೋರ ಯುದ್ಧಕಾಲ, ಆನಿಬೆಸೆಂಟ್, ಗಾಂಧೀಜಿ, ಸುಧಾರಣೆಯ ಪ್ರಯತ್ನ, ರೌಲತ್ ಮಸೂದೆಗಳು, ಪಂಜಾಬಿನ ಅತ್ಯಾಚಾರ, ವಿಚಾರಣೆ, ಖಿಲಾಫತ್ತಿನ ಸಮಸ್ಯೆ, ನಾಗಪುರದ ಕಾಂಗ್ರೆಸ್, ಅಸಹಕಾರ, ಸುಧಾರಣೆಗಳ ಪ್ರಾರಂಭ, ಯುವರಾಜರ ಸಂಚಾರ, ಅಹಮದಾಬಾದ್ ಕಾಂಗ್ರೆಸ್, ಗಾಂಧೀಜಿಯವರ ನಿರ್ಬಂಧ, ಸ್ವರಾಜ್ ಪಕ್ಷ, ಕೋಮು ಕಲಹ, ಸ್ವರಾಜ್ ಪಕ್ಷದ ಸಾಧನೆ, ನೆಹರು ವರದಿ, ಇತ್ತೀಚಿನ ಸಂಗತಿಗಳು, ಸ್ವರಾಜ್ಯ ಧ್ಯೇಯ.

ಬ್ರಿಟಿಷರ ಆಳ್ವಿಕೆ

ಇಂದಿನ ಭಾರತೀಯ ಸಮಸ್ಯೆಗಳನ್ನು ಯಥಾಯೋಗ್ಯವಾಗಿ ಗ್ರಹಿಸಲು ದೇಶದ ಸ್ಥಿತಿಗತಿಗಳ ಪೂರ್ವೋತ್ತರ ಪರಿಚಯವು ಅತ್ಯವಶ್ಯಕ. ಬ್ರಿಟಿಷರು ದೇಶವನ್ನು ಸ್ವಾಧೀನಪಡಿಸಿಕೊಂಡ ಸಂಗತಿಯಿಂದ ತಲೆದೋರಿದ ಹಲಕೆಲವು ವಿಷಯಗಳನ್ನು ಹಿಂದೆಯೇ ಕಂಡೆವು. **ರಾಷ್ಟ್ರದ ಐಕ್ಯತಾ ಸಿದ್ಧಿ**ಗಿಂತಲೂ **ಆರ್ಥಿಕ ಪರಿಣಾಮ**ಕ್ಕಿಂತಲೂ ಫಲಿತಾಂಶಗಳಲ್ಲಿ **ಸಾಂಸ್ಕೃತಿಕ ಘರ್ಷಣೆ**ಯೆಂಬುದು ಪ್ರಾಯಶಃ ಮಹತ್ತರವಾದುದು. ಪಾಶ್ಚಾತ್ಯ ಸಂಸ್ಕೃತಿ ಸಭ್ಯತೆಗಳಿಗೂ ಪೌರಸ್ತ್ಯ ಸಂಸ್ಕೃತಿ ಸಭ್ಯತೆಗಳಿಗೂ ಪರಸ್ಪರವಾದ ಸಂಧಿ ಸಂಘರ್ಷಣಗಳು ಭಾರತದೇಶದಲ್ಲಿಯೇ ಒದಗಿವೆ. ಇವುಗಳ ಪರಿಣಾಮವಾಗಿ ರಾಷ್ಟ್ರಭಕ್ತಿಯು ಉಜ್ವಲವಾಗಿ ಪರಿಣಮಿಸಿ ರಾಷ್ಟ್ರಸ್ಥಿತಿಯಲ್ಲಿ ಸುಧಾರಣೆಗಳೂ ಆಂದೋಲನಗಳೂ ಕಾಣುತ್ತವೆ. ನಾವು ಮುಖ್ಯ ಸಮಸ್ಯೆಗಳನ್ನೂ ತೊಡಕುಗಳನ್ನೂ ಕಾಣುವ ಮೊದಲು ಇವುಗಳ ವೃತ್ತಾಂತವನ್ನು ಸಂಕ್ಷೇಪವಾಗಿಯಾದರೂ ತಿಳಿಯತಕ್ಕದ್ದು.

ಸಂಸ್ಕೃತಿ ಘರ್ಷಣೆ

ಬಂಗಾಳ ಪ್ರಾಂತವು ಬ್ರಿಟಿಷರ ಸ್ವಾಧೀನವಾದ ಕಾಲದಲ್ಲಿ ಹಲ ಕೆಲವರು ಬ್ರಿಟಿಷರಿಗೆ ಫ್ರಾನ್ಸಿನಷ್ಟು ವಿಶಾಲವಾದುದೂ ಅತಿ ಫಲವತ್ತಾದುದೂ ಆದ ಕ್ಷೇತ್ರವನ್ನು ಆಳುವ ಕರ್ತವ್ಯಭಾರವು ಒದಗಿತು. ಅವರಲ್ಲಿ ಕೆಲವರಿಗೆ ದೇಶೀಯರ ನಡೆ ನುಡಿಗಳನ್ನೂ ಆಚಾರ ವ್ಯವಹಾರಗಳನ್ನೂ ತಕ್ಕಮಟ್ಟಿಗೆ ವ್ಯಾಸಂಗಮಾಡಿ ತಿಳಿದುಕೊಳ್ಳುವ ಆವಶ್ಯಕತೆಯು ತೋರಿತು. ವಾರನ್ ಹೇಸ್ಟಿಂಗ್ಸ್ ಎಂಬಾತನು ಭೋಗಾಧಿಪತಿಯಾಗಿದ್ದ ಕಾಲದಲ್ಲಿಯೇ ಏಷ್ಯಾಟಿಕ್ ಸೊಸೈಟಿ (Asiatic Society) ಯೆಂಬ ಸಂಘವು ಆ ಉದ್ದೇಶ ಸಾಧನೆಗಾಗಿ ಏರ್ಪಟ್ಟಿತು. ಫರಂಗಿ ಜನರಲ್ಲಿ ಕೆಲವರು ಸಂಸ್ಕೃತ ಫಾರಸೀ ಗ್ರಂಥಗಳನ್ನು ಔತ್ಸುಕ್ಯದಿಂದ ಓದಲಾರಂಭಿಸಿದರು ; ಆದರೆ ಬಹು ಭಾಗದವರು ತಟಸ್ಥರಾಗಿಯೇ ಇದ್ದು ತಮ್ಮ ಆಚಾರ ವ್ಯವಹಾರಗಳೇ ಶ್ರೇಷ್ಠವಾದುವೆಂಬ ಹೆಮ್ಮೆಯಿಂದ ಇದ್ದರು. ಹಿಂದೂ ಜನರಲ್ಲಿ ಸನಾತನ ಧರ್ಮನಿಷ್ಠೆಯುಳ್ಳವರು ಫರಂಗಿ ಜನರು ರಾಜ್ಯಲಾಭಪಡೆದ ವಿಷಯದಲ್ಲಿ ಅಪ್ರತಿಭರಾಗಿದ್ದು, ತಮ್ಮ ಮತಗ್ರಂಥಗಳನ್ನೂ ಶಾಸ್ತ್ರಗ್ರಂಥಗಳನ್ನೂ ಫರಂಗಿಯವರು ವ್ಯಾಸಂಗಮಾಡಲಾರಂಭಿಸಿದಾಗ ತಳ್ಳಂಕಗೊಂಡರು. ಹಿಂದೂಗಳಲ್ಲಿ ಕೆಲವರು ಕಾರಣಾಂತರಗಳಿಂದ ಇಂಗ್ಲೀಷ್ ಭಾಷೆಯನ್ನು ಕಲಿತು ಕಂಪೆನಿಯ ನೌಕರರಾದರು. ಮುಸಲ್ಮಾನ ಮೌಲ್ವಿಗಳಿಗೂ ಈ ಮುಗ್ಧತೆಯೇ ಪ್ರಾಪ್ತವಾಗಿ ಇಂಗ್ಲೀಷ್ ಭಾಷೆಯನ್ನು ಕಲಿತ ಮಾತ್ರದಿಂದಲೇ ತಮ್ಮ ಮತಾಚರಣೆಗಳಿಗೆ ಲೋಪ ತೋರುವುದೆಂದು ಶಂಕೆಪಟ್ಟರು. ಇಂತಹ ಸ್ಥಿತಿಯಲ್ಲಿ ಫರಂಗಿಯವರಲ್ಲಿ ಮತಪ್ರಚಾರಕರಾದವರೂ ಇತರರೂ ಹಿಂದೂ ಮತವು ಮೌಢ್ಯವೇ ತುಂಬಿದ ಗುಹಾಂತರ ಪ್ರದೇಶವೆಂದು ಹೇಳುತ್ತ, ಭಾರತೀಯರಿಗೆ ಸಭ್ಯತೆಯನ್ನು ಕಲಿಸಿಕೊಡುವುದು ತಮ್ಮ ಸುಯೋಗವೂ ಕರ್ತವ್ಯವೂ ಆದುದೆಂದು ಪ್ರಕಟಪಡಿಸುತ್ತಿದ್ದರು. ಭಾರತೀಯರಲ್ಲಿ ಸಮಾಜದ ಮುಂದಾಳುಗಳಾದವರು ಮೂಲೆಗಳಲ್ಲಿ ಅಡಗಿದರು ; ಪಾಶ್ಚಾತ್ಯರ ಸಂಪರ್ಕವನ್ನು ಪಡೆದು ಇಂಗ್ಲಿಷ್ ಭಾಷೆಯನ್ನು ಕಲಿತ ಕೆಲವರು ಭಾರತೀಯರು ತಮ್ಮ ಸಮಾಜನೀತಿಯನ್ನೂ ಆಚಾರ ವ್ಯವಹಾರಗಳನ್ನೂ ಅಲ್ಲಗಳೆಯಲು ಪ್ರಾರಂಭಿಸಿದರು.

ಪಾಶ್ಚಾತ್ಯ ಪದ್ಧತಿಗಳೇ ಉತ್ಕೃಷ್ಟವೆಂದು ನಂಬಿದ್ದ ಕೆಲವರು ತರುಣರು ಗೋಮಾಂಸ ನಿಷೇಧವು ದುಷ್ಟವೆಂದು ತಿಳಿದು ಒಂದಾನೊಂದು ಸಂದರ್ಭದಲ್ಲಿ ಶ್ರೋತ್ರಿಯರೂ ಆಚಾರನಿಷ್ಠರೂ ಆಗಿದ್ದವರ ಮನೆಗಳ ಮುಂದೆ ಗೋಮಾಂಸವನ್ನು ತಂದು ಚಲ್ಲುವುದಕ್ಕೂ ಹಿಂದೆಗೆಯುಲಿಲ್ಲ. ಸುಶಿಕ್ಷಿತ ವರ್ಗಗಳ ಜನರು ಈ ರೀತಿ ತಳಮಳಗೊಳ್ಳುತ್ತಿದ್ದಾಗ ಸಾಮಾನ್ಯ ಜನರಲ್ಲಿ ಭ್ರಾಂತಿಯೂ ಇತಿಕರ್ತವ್ಯ ಮೌಢ್ಯವೂ ಹೆಚ್ಚಿದವು. ಅಧಿಕಾರಬಲವುಳ್ಳ ಪಾಶ್ಚಾತ್ಯ ಸಂಸ್ಕೃತಿಯ ಉಪಾಸಕರ ಹೆಮ್ಮೆಯೂ ಹೆಚ್ಚುತ್ತಿತ್ತು.

**ರಾಜಾ ರಾಮ ಮೋಹನ ರಾಯ**

ರಾಜಾ ರಾಮಮೋಹನ ರಾಯನ ಜೀವನ ಚರಿತ್ರೆಯಲ್ಲಿ ಈ ಆಂದೋಲನಗಳು ಪೂರ್ತಿಯಾಗಿ ತೋರಿಕೊಳ್ಳುವುವು. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ವ್ಯಾಪ್ತಿಗೊಂಡ ಮುದ್ರಣ ಸೌಕರ್ಯದಿಂದ ಪಕ್ಷ ವಿಪಕ್ಷಗಳವರು ಪುಸ್ತಕಗಳನ್ನು ಬರೆಯುತ್ತ ವಾದ ವಿವಾದಗಳಲ್ಲಿ ತೊಡಗಿದರು. ರಾಮಮೋಹನನು 1774ರಲ್ಲಿ ಶ್ರೋತ್ರಿಯರಾದ ಬ್ರಾಹ್ಮಣರ ಮನೆಯಲ್ಲಿ ಹುಟ್ಟಿ, ಜನ್ಮಸಿದ್ಧ ತೇಜಸ್ಸಿನಿಂದ ಬಾಲ್ಯದಲ್ಲಿಯೇ ವಿದ್ಯಾವಂತನಾದನು. ಪಾಟ್ನ ನಗರದಲ್ಲಿ ಫಾರಸೀ ಅರಬ್ಬೀ ಭಾಷಾ ಸಾಹಿತ್ಯಗಳ ವ್ಯಾಸಂಗವನ್ನೂ ವಾರಣಾಸಿಯಲ್ಲಿ ಸಂಸ್ಕೃತ ಭಾಷೆಯ ವ್ಯಾಸಂಗವನ್ನೂ ಹದಿನೈದನೆಯ ವರ್ಷದೊಳಗಾಗಿಯೇ ಮಾಡಿದನು. ಬೌದ್ಧಮತದ ತತ್ವಗಳನ್ನೂ ಆಚಾರ ಸಂಪತ್ತಿಯನ್ನೂ ಪ್ರತ್ಯಕ್ಷವಾಗಿ ಕಂಡು ತಿಳಿದುಕೊಳ್ಳಲು ಅದೇ ವಯಸ್ಸಿನಲ್ಲಿಯೇ ಟಿಬ್ಬತ್ತಿಗೆ ಪ್ರಯಾಣ ಮಾಡಿ ಸಾಹಸವನ್ನು ತೋರಿದನು. ಅನತಿ ಕಾಲದಲ್ಲಿಯೇ ಈತನಿಗೂ ಈತನ ತಂದೆಗೂ ವಾಗ್ವಾದಗಳು ಪ್ರಾರಂಭವಾದವು. ಮೂರ್ತಿಪೂಜೆಯು ಮೂಢವೆಂದು ವಾದಿಸಿ ಆಚಾರನಿಷ್ಠರೊಡನೆ ಪ್ರಬಲವಾದ ವಿರೋಧವನ್ನು ಕಟ್ಟಿಕೊಂಡ ರಾಮಮೋಹನನಿಗೂ ಆತನ ತಂದೆಗೂ ಜಗಳವೇ ನಡೆಯಿತು. ಹುಟ್ಟಿದ ಮನೆಯನ್ನೂ ಬಿಟ್ಟು ರಾಮಮೋಹನನು ಕಂಪೆನಿಯ ನೌಕರಿಯನ್ನು ಸಂಪಾದಿಸಿಕೊಂಡು ಕಂಪೆನಿಯ ಉದ್ಯೋಗಸ್ಥರನ್ನು ತನ್ನ ಪ್ರಾಮಾಣಿಕತೆಯಿಂದಲೂ ಮೇಧಾಶಕ್ತಿಯಿಂದಲೂ ಮೆಚ್ಚಿಸಿದನು. ಈ ಕಾಲದಲ್ಲೆಲ್ಲ ರಾಮಮೋಹನನು ಧರ್ಮಗ್ರಂಥಗಳ ವ್ಯಾಸಂಗವನ್ನು

ಮಾಡುತ್ತಲೇ ಇದ್ದು ಅತ್ಯುನ್ನತ ತತ್ವಗಳನ್ನೊಳಗೊಂಡ ಉಪನಿಷದ್ಗ್ರಂಥ ಗಳ ಪರಿಚಯವನ್ನು ಪಡೆದು ವಿಸ್ಮಿತನೇ ಆದನು. ಅವುಗಳನ್ನು ಓದಿದ ತರುವಾಯ ಹಿಂದೂ ಮತದಲ್ಲಿ ಅಮೋಘವಾದ ತತ್ವರಾಶಿಯು ಅಡಗಿರುವು ದೆಂದೂ, ಆ ತತ್ವಗಳು ಮಾಲಿನ್ಯಕ್ಕೆ ಗುರಿಯಾಗಿ ಆಚಾರ ಸಂಪ್ರದಾಯಗಳಲ್ಲಿ ಮೌಢ್ಯವು ಜನರ ಮನಸ್ಸನ್ನು ಗ್ರಹಿಸಿರುವುದೆಂದೂ ನಿರ್ಧರಮಾಡಿಕೊಂಡು, ಹಿಂದೂ ಜನರ ಆಚಾರ ಸಂಪ್ರದಾಯಗಳನ್ನು ದೋಷಹದಗೊಳಿಸತಕ್ಕುದೆಂಬ ಸಂಕಲ್ಪಮಾಡಿಕೊಂಡನು.

ಬ್ರಹ್ಮ ಸಮಾಜ

ಸುಧಾರಣೆಯ ಕಾರ್ಯವನ್ನು ತನ್ನ ಸರ್ವಶಕ್ತಿಯಿಂದ ನಡೆಸಲು ಉತ್ಸುಕನಾದ ರಾಮಮೋಹನನು ಪೂರ್ವ ಸಂಪ್ರದಾಯನಿಷ್ಠರಾದವರ ಆಗ್ರಹಕ್ಕೆ ಗುರಿಯಾಗಿ, 1814ರಲ್ಲಿ ತನ್ನ ನೌಕರಿಯನ್ನು ತ್ಯಜಿಸಿ, ವಾದ ವನ್ನು ನಡೆಸಲು ಕಲಕತ್ತೆಯಲ್ಲಿಯೇ ನೆಲೆಸಿದನು. ಭಾರತೀಯರು ಇಂಗ್ಲೀಷು ಭಾಷೆಯನ್ನು ಕಲಿತು ಪಾಶ್ಚಾತ್ಯ ಸಭ್ಯತೆಯನ್ನು ಚನ್ನಾಗಿ ತಿಳಿಯತಕ್ಕುದು ಅವಶ್ಯಕವೆಂದು ನಿಶ್ಚಯಮಾಡಿಕೊಂಡು ಆತನೇ ಹಿಂದೂ ಕಾಲೇಜ್ ಎಂಬ ಇಂಗ್ಲೀಷ್ ಶಾಲೆಯನ್ನು ಸ್ಥಾಪಿಸಿದನು. ಆ ಸಂಸ್ಥೆಯೇ ವೃದ್ಧಿಗೊಂಡು ಈಗ ಕಲ್ಕತ್ತೆಯ ಪ್ರೆಸಿಡೆನ್ಸಿ ಕಾಲೇಜಾಗಿ ಪರಿಣಮಿಸಿದೆ. ತಾನೂ ತನ್ನೊಡನೆ ಸೇರಿದ ಗೆಳೆಯರೂ ಸೇರಿಕೊಂಡು ಅವಿಶ್ರಾಂತರಾಗಿ ಹಿಂದೂ ಧರ್ಮದ ಮೌಢ್ಯ ಖಂಡನೆಯನ್ನು ಮಾಡುವು ದಕ್ಕೂ ಧರ್ಮಶುದ್ಧಿಗೂ ಯತ್ನಶೀಲರಾದರು. ಸಹಗಮನ ಪದ್ಧತಿಯನ್ನು ನಿಷೇಧಿಸಲು ಆತನೇ ಪ್ರಯತ್ನವನ್ನು ನಡೆಸಿದನು; ಅದರೊಂದಿಗೆ ಬಾಲ್ಯ ವಿವಾಹ ವೈಧವ್ಯಗಳನ್ನೂ ಖಂಡಿಸಿ ಸಾಮಾಜಿಕ ಸುಧಾರಣೆಗೆ ವಿಶೇಷ ವಾದ ಲಕ್ಷ್ಯವನ್ನು ಕೊಟ್ಟನು. ಹಿಂದೂ ಧರ್ಮದ ಮೌಢ್ಯವನ್ನಲ್ಲದೆ ಇತರ ಮತಗಳಲ್ಲಿ ತೋರಿಬಂದ ಮೌಢ್ಯವನ್ನೂ ನಿರ್ದಾಕ್ಷಿಣ್ಯವಾಗಿ ಖಂಡಿ ಸುತ್ತಲಿದ್ದ ರಾಮಮೋಹನನು 1828ರಲ್ಲಿ ಸ್ನೇಹಿತರೊಡಗೂಡಿ ಬ್ರಹ್ಮ ಸಮಾಜವನ್ನು ಸ್ಥಾಪಿಸಿದನು. 1830ರಲ್ಲಿ ಮೊದಲನೆಯ ಪ್ರಾರ್ಥನಾ ಮಂದಿರವು ರೂಪವೆತ್ತಿತು. ಅದೇ ವರ್ಷದಲ್ಲಿಯೇ ಮುಘಲ್ ಬಾದಷಹನ ಪರವಾಗಿ ಪಾರ್ಲಿಮೆಂಟಿನಲ್ಲಿ ನ್ಯಾಯವಾದವನ್ನು ನಡೆಸಲು ಒಪ್ಪಿಕೊಂಡು

ಇಂಗ್ಲಂಡಿಗೆ ಪ್ರಯಾಣಮಾಡಿದನು. 1832ರಲ್ಲಿ ಬ್ರಿಸ್ಟಲ್ ಪಟ್ಟಣ ದಲ್ಲಿ ಕಾಲಾಧೀನನಾದನು.

ಬ್ರಹ್ಮ ಸಮಾಜದಲ್ಲಿ ಜಾತಿಭೇದವೆಂಬುದು ಇರಲಿಲ್ಲ; ಎಲ್ಲರಿಗೂ ಪ್ರವೇಶವಿತ್ತು. ಮೂರ್ತಿಪೂಜೆಯೂ ಬಾಲ್ಯ ವಿವಾಹವೂ ನಿಷಿದ್ಧವಾಗಿತ್ತು. ದೇವಾಲಯಗಳಲ್ಲಿ ಮೂರ್ತಿಪೂಜೆಮಾಡುವುದು ಅಜ್ಞಾನವೆಂದೂ ಅಯುಕ್ತ ವೆಂದೂ ನಿಷ್ಕೃಷ್ಟವಾಗಿ, ನಿರಾಕಾರ ಬ್ರಹ್ಮನನ್ನೇ ಆರಾಧಿಸಬೇಕೆಂದು ಬ್ರಹ್ಮ ಸಮಾಜದವರು ಸಂಕಲ್ಪಮಾಡಿಕೊಂಡರು. ರಾಮಮೋಹನನ ತರುವಾಯ ಮಹರ್ಷಿಯೆಂದೆನಿಸಿದ **ದೇವೇಂದ್ರನಾಥ ಠಾಕೂರ**ೆಂಬಾತ ನಿಗೂ **ಕೇಶವಚಂದ್ರಸೇನ**ನೆಂಬಾತನಿಗೂ ಭೇದವು ತೋರಿಕೊಂಡು ಸಮಾಜದಲ್ಲಿ ಶಾಖೆಗಳು ಹುಟ್ಟಿಕೊಂಡವು. ಬಂಗಾಳದಲ್ಲಿ ಅನೇಕರು ಈ ಸಮಾಜಕ್ಕೆ ಸೇರಿದರು. ಬಂಗಾಳದ ಹೊರಗಡೆ ಕೇಶವಚಂದ್ರಸೇನನ ಪ್ರಯತ್ನದಿಂದ ಮದರಾಸಿನಲ್ಲಿ **ವೇದ ಸಮಾಜ**ವೆಂಬುದೂ ಮುಂಬಯಿ ಯಲ್ಲಿ **ಪ್ರಾರ್ಥನಾ ಸಮಾಜ**ವೆಂಬುದೂ ತೋರಿಕೊಂಡಾಗ್ಯೂ ಪ್ರಾಬಲ್ಯ ವನ್ನು ಪಡೆಯದಾದವು. ಇಂಗ್ಲಿಷ್ ಭಾಷೆಯ ವ್ಯಾಸಂಗವನ್ನು ಪ್ರೋತ್ಸಾ ಹಿಸುತ್ತಲೂ ಪಾಶ್ಚಾತ್ಯರ ಸಮಾಜ ಲಕ್ಷಣಗಳನ್ನು ಅನುಕರಿಸುತ್ತಲೂ ಇದ್ದಕಾರಣದಿಂದ ಜನಸಾಮಾನ್ಯರಿಗೆ ಬ್ರಹ್ಮ ಸಮಾಜವು ಒಪ್ಪಲಿಲ್ಲ. ಈ ಮಧ್ಯೆ 1875ರಲ್ಲಿ ಕೇಶವಚಂದ್ರಸೇನನೇ ಶ್ರೀ ರಾಮಕೃಷ್ಣ ಪರಮಹಂಸ ರನ್ನು ಕಂಡ ಬಳಿಕ ತನ್ನ ಅಭಿಮತಗಳನ್ನು ಬದಲಾಯಿಸುವಂತಾಯಿತು.

**ಶ್ರೀ ರಾಮಕೃಷ್ಣ ಪರಮಹಂಸ**

ಬಂಗಾಳದಲ್ಲಿ ಒಂದಾನೊಂದು ಗ್ರಾಮದಲ್ಲಿ ಆಚಾರಸಂಪನ್ನರಾದ ಬ್ರಾಹ್ಮಣರ ಮನೆಯಲ್ಲಿಯೇ ಯುಗಪ್ರವರ್ತಕ ನೆನ್ನಬಹುದಾದ ಈ ಮಹಾಪುರುಷನು ಜನಿಸಿ **ಗದಾಧರ**ನೆಂಬ ಹೆಸರಿನಿಂದ ಬಾಲ್ಯವನ್ನು ಕಳೆದನು. ಬಾಲ್ಯದಿಂದಲೂ ಈತನಲ್ಲಿ ದೈವಭಕ್ತಿಯೊಂದೇ ಸರ್ವಸ್ವವಾಗಿತ್ತು; ದೇವರನ್ನು ಕಾಣುವ ಈತನ ಅಭೀಷ್ಟವು ಇತರರಿಗೆ ಹುಚ್ಚಿನಂತೆಯೇ ತೋರಿತು. ಈ ಮಹಾತ್ಮನ ಜೀವನ ಚರಿತ್ರೆಯನ್ನು ಭಾರತೀಯರೆಲ್ಲರೂ ವಿವರವಾಗಿ ತಿಳಿಯತಕ್ಕದ್ದು. ಯೋಗಾಭ್ಯಾಸ ನಿರತನಾದ ಈತನು ತೋತಾಪುರಿಯೆಂಬ ಸಂನ್ಯಾಸಿಯನ್ನು ಗುರುವಾಗಿ

ಪಡೆದು ಯೋಗಸಿದ್ಧಿಯನ್ನು ಪಡೆದುದಲ್ಲದೆ ಭಿನ್ನ ಭಿನ್ನ ಮತಗಳನ್ನು ಕ್ರಮವಾಗಿ ಅನುಷ್ಠಿಸಿ ಧರ್ಮ ಸಮನ್ವಯವನ್ನು ನೆರವೇರಿಸಿದನು. ಇಂಗ್ಲೀಷ್ ಭಾಷೆಯೇ ಈತನಿಗೆ ಒರುತ್ತಿರಲಿಲ್ಲ. ಆದರೂ ದಕ್ಷಿಣೇಶ್ವರದ ಕಾಳಿಕಾ ಮಂದಿರದಲ್ಲಿ ಈತನು ನಿಂತಾಗ ಯೋಗಿಗಳೂ ಭಕ್ತರೂ ಗುಂಪು ಗುಂಪಾಗಿ ಈತನನ್ನು ಕಾಣುವುದಕ್ಕೂ ಈತನ ಉಪದೇಶವನ್ನು ಪಡೆಯು ವುದಕ್ಕೂ ಒಂದು ಈತನ ಮಹಿಮೆಯನ್ನು ಕಂಡು ಅಚ್ಚರಿಗೊಳ್ಳುತ್ತಿದ್ದರು. ಈತನನ್ನು ಕಂಡವರೆಲ್ಲರೂ ದಿವ್ಯ ಜ್ಯೋತಿಯನ್ನು ಕಂಡಂತೆ ದೈವತ್ವವನ್ನು ಮಾನವನು ಪಡೆಯುವ ಅದ್ಭುತವನ್ನು ಪ್ರತ್ಯಕ್ಷವಾಗಿ ಕಂಡರು. ಹೊಸದಾಗಿ ಮತಸ್ಥಾಪನೆಯನ್ನು ಮಾಡುವ ಪ್ರಯತ್ನವನ್ನು ಈತನು ನಡೆಸಲಿಲ್ಲ. ಹಿಂದೂ ಮತದ ಘನತೆಯನ್ನು ತನ್ನ ಸ್ವಂತ ಜೀವನದಲ್ಲಿ ನಿದರ್ಶನಗೊಳಿಸಿ ಎಲ್ಲರಲ್ಲಿಯೂ ಕವಿದಿದ್ದ ಭ್ರಾಂತಿಯನ್ನು ಸುಲಭವಾಗಿ ಹೋಗಲಾಡಿಸಿದನು. ಈತನ ಉಪದೇಶದ ಪ್ರಭಾವವು ಈತನ ಜೀವಿತ ಕಾಲದಲ್ಲಿ ಬಂಗಾಳದ ಹೊರಗಡೆ ತೋರಿಕೊಳ್ಳಲಿಲ್ಲ. 1886ರಲ್ಲಿ ಕಲ್ಕತ್ತೆ ಯಲ್ಲಿ ಈತನ ಐಹಿಕ ಲೀಲೆಯು ಕೊನೆಗಂಡಮೇಲೆ ಶಿಷ್ಯವರ್ಗದವರಿಂದ ಈತನ ಉಪದೇಶವು ಪ್ರಚಾರವಾಗಬೇಕಾಯಿತು.

**ದಯಾನಂದ ಸರಸ್ವತಿ**

ಇದೇ ಕಾಲದಲ್ಲಿಯೇ ಬೇರೊಂದು ಸುಧಾರಣಾ ಪ್ರಯತ್ನವು ಪಂಜನದ ಪ್ರಾಂತದಲ್ಲಿ ಬಲಗೊಂಡಿತು. ಮಹರ್ಷಿ ಯೆನಿಸಿದ ದಯಾನಂದ ಸರಸ್ವತಿಯು 1824ರಲ್ಲಿ ಕಾಥ್ಯವಾಡದಲ್ಲಿ ಮೋರ್ವಿಯೆಂಬ ಊರಿನಲ್ಲಿ ಸದಾಚಾರ ಸಂಪನ್ನರಾದ ಬ್ರಾಹ್ಮಣರ ಮನೆಯಲ್ಲಿ ಹುಟ್ಟಿ **ಮೂಲ ಶಂಕರ**ನೆಂಬ ಹೆಸರಿನಿಂದ ಬೆಳೆದಾತನು. ಬಾಲ್ಯದಲ್ಲಿ ಈತನಿಗೂ ಮೂರ್ತಿ ಪೂಜೆಯ ವಿಷಯದಲ್ಲಿ ಸಂದೇಹ ತೋರಿತು; ಸಾಧು ಸಂನ್ಯಾಸಿಗಳನ್ನು ಸೇರುತ್ತ, ವಿವಾಹವನ್ನೊಲ್ಲೆನೆಂದು ಮುಷ್ಕರವನ್ನು ಮಾಡಿ ಮನೆ ಬಿಟ್ಟು ಎಲ್ಲಿಗೋ ಹೊರಟನು. ಸಂನ್ಯಾಸವನ್ನು ಸ್ವೀಕರಿಸಿ ನರ್ಮದಾ ಪ್ರಾಂತದಲ್ಲಿ ಅಲೆದಾಡಿ, ಕಡೆಗೆ ಮಥುರಾ ನಗರದಲ್ಲಿ ವೇದವಿಶಾರದನೆಂದು ಪ್ರಸಿದ್ಧ ನಾಗಿದ್ದ **ವಿರಜಾನಂದ ಸರಸ್ವತಿ**ಯೆಂಬ ಗುರುವಿನ ಬಳಿ ವೇದಾಭ್ಯಾಸ ವನ್ನು ನಡೆಸಿದನು. ವಿರಜಾನಂದ ಸರಸ್ವತಿಯು ವೇದಗಳಲ್ಲಿ

ಅಸಾಧಾರಣವಾದ ಪಾಂಡಿತ್ಯವನ್ನು ಪಡೆದವನಾಗಿದ್ದುದಲ್ಲದೆ ನಿಷ್ಠುರ ನಾಗಿಯೂ ಇದ್ದಾತನು. ದಯಾನಂದ ಸರಸ್ವತಿಗೆ ಅಭ್ಯಾಸ ಮುಗಿದ ಕೂಡಲೆ ಗುರುವು ಶುದ್ಧ ವೈದಿಕಮತವನ್ನುದ್ಧಾರಮಾಡುವ ಕರ್ತವ್ಯವನ್ನು (ಶಿಷ್ಯನಿಗೆ) ನಿಯಮಿಸಿದನು. ಆ ತರುವಾಯ ದಯಾನಂದ ಸರಸ್ವತಿಯು ಕಾಶಿ, ಪ್ರಯಾಗ ಮುಂತಾದ ಸ್ಥಲಗಳಲ್ಲಿ ವಿದ್ವಾಂಸರೊಡನೆ ವಾದ ವಿವಾದ ಗಳನ್ನು ನಡೆಸುತ್ತ ಪ್ರಚಂಡವಾದ ಪಾಂಡಿತ್ಯವನ್ನು ಪ್ರದರ್ಶಿಸಿದನು. ಈತನ ಜೊತೆಯಲ್ಲಿ ವಾದಿಸಿದವರೆಲ್ಲರೂ ಅಪ್ರತಿಭರಾದರು. ಮೂಢಾಚಾರ ವಿಚಾರಗಳನ್ನು ಈತನು ಖಂಡಿಸುತ್ತಿದ್ದ ವಿವರವು ಅಮೆರಿಕ ದೇಶದಲ್ಲಿ ಶ್ರುತವಾಗಿ ಅಲ್ಲಿಯ ಒಂದಾನೊಂದು ಸಮಾಜದವರು ಈತನನ್ನು ಮೆಚ್ಚುತ್ತ ಈತನ ಸಹಾನುಭೂತಿಯಿಂದ ತಮ್ಮ ಸಮಾಜವನ್ನು ಬಲ ಪಡಿಸುವ ಉದ್ದೇಶದಿಂದ ಪತ್ರವ್ಯವಹಾರವನ್ನು ನಡೆಸಿದರು. ಬ್ರಹ್ಮ ಜ್ಞಾನ ಸಮಾಜವೆಂಬ ಆ ಸಂಘದ ತತ್ವಗಳು ದಯಾನಂದ ಸ್ವಾಮಿಗೆ ಒಪ್ಪಲಿಲ್ಲ. 1875ರಲ್ಲಿ ಮುಂಬಯಿಯಲ್ಲಿ ದಯಾನಂದ ಸ್ವಾಮಿಯ ಇಷ್ಟದಂತೆ **ಆರ್ಯ ಸಮಾಜ**ವೆಂಬುದು ಸ್ಥಾಪಿತವಾಯಿತು. ಮುಂಬಯಿಯಲ್ಲಿ ಸ್ಥಾಪಿತವಾದಾಗ್ಗೂ ಆರ್ಯ ಸಮಾಜವು ಬಲಗೊಂಡುದು ಪಂಜಾಬಿನಲ್ಲಿ. 1877ರಲ್ಲಿ ಲಾಹೋರಿನಲ್ಲಿ ಸಮಾಜವು ರೂಪಗೊಂಡಿತು. **ಲಾಲಾ ಲಜಪತ ರಾಯ್** ಮತ್ತು **ಲಾಲಾ ಮುನ್ಷೀರಾಮ್** (ಸ್ವಾಮಿ ಶ್ರದ್ಧಾನಂದ) ಎಂಬವರೇ ಮೊದಲ್ಗೊಂಡು ಅನೇಕರು ಸಮಾಜಕ್ಕೆ ಬೆಂಬಲ ವನ್ನು ಕೊಟ್ಟು ಸಮಾಜದ ಕರ್ತವ್ಯಗಳನ್ನು ಮುಂದರಿಸುವವರಾದರು. 1883ರಲ್ಲಿ ದಯಾನಂದ ಸ್ವಾಮಿಯು ಕಾಲಾಧೀನರಾಗುವ ವೇಳೆಗೆ ಆರ್ಯ ಸಮಾಜವು ವಾಯವ್ಯ ಭಾಗಗಳಲ್ಲಿ ಬಲಗೊಂಡಿತ್ತು.

ಶುದ್ಧ ವೈದಿಕ ಮತವನ್ನೇ ಸ್ಥಾಪನೆಮಾಡಲು ಬಯಸಿದ ದಯಾನಂದ ಸ್ವಾಮಿಯ ಉಪದೇಶದಲ್ಲಿ ವರ್ಣವಿಭೇದಗಳು ಗುಣಕ್ಕನುಸಾರವಾಗಿರ ತಕ್ಕುದೆಂದೂ ವೇದಗಳೇ ಪರಮ ಪ್ರಮಾಣವಾಗಿರತಕ್ಕುದೆಂದೂ ಪ್ರಧಾನ ವಾದ ಅಂಶಗಳು. ವೇದಗಳಿಗೆ ಸಾಯಣಾಚಾರ್ಯರ ಭಾಷ್ಯವೇ ಲಭ್ಯ ವಾಗಿರುವುದು ; ಸಾಧಾರಣವಾಗಿ ಎಲ್ಲರೂ ಆ ಭಾಷ್ಯವನ್ನೇ ಒಪ್ಪಿಕೊಳ್ಳು ವರು. ದಯಾನಂದ ಸ್ವಾಮಿಗಳಾದರೋ ಸ್ವತಂತ್ರವಾದ ವ್ಯಾಖ್ಯಾನ

ಗಳನ್ನು ವಿಸ್ತರಿಸಿ ವೇದಗಳಿಗೆ ವಿರುದ್ಧವಾದುದೆಲ್ಲವೂ ಖಂಡನೀಯವೆಂದು ನಿಷ್ಕರ್ಷಿಸಿ, ಹಿಂದೂಗಳು ವೈದಿಕ ಮತದ ಶುದ್ಧ ರೂಪವನ್ನೇ ಅವಲಂಬಿಸ ತಕ್ಕುದೆಂದು ಉಪದೇಶಮಾಡಿದರು. ಮೂರ್ತಿಪೂಜೆಯನ್ನು ಇವರು ಒಪ್ಪಲಿಲ್ಲ; ಬಾಲ್ಯವಿವಾಹ ವೈಧವ್ಯಗಳನ್ನು ಸಹಿಸಲಿಲ್ಲ. ಬ್ರಹ್ಮಚರ್ಯೆ ಯನ್ನೂ ಯಜ್ಞ ಹೋಮಗಳನ್ನೂ ವಿಧಿಸಿದರು. ಬ್ರಹ್ಮ ಸಮಾಜಕ್ಕೂ ಆರ್ಯ ಸಮಾಜಕ್ಕೂ ಪ್ರಬಲವಾಗಿದ್ದ ಭೇದವನ್ನು ಗಮನಿಸತಕ್ಕುದು. ಆರ್ಯ ಸಮಾಜದಲ್ಲಿ ಪರಕೀಯ ಅಥವಾ ವಿದೇಶೀಯ ಎನ್ನಬಹುದಾದ ಲಕ್ಷಣದ ಸುಳಿವೇ ಇಲ್ಲ; ಬ್ರಹ್ಮ ಸಮಾಜದಲ್ಲಿ ಪಾಶ್ಚಾತ್ಯರ ಅನುಕರಣ ವೆಂದು ತೋರಬಹುದಾದ ಲಕ್ಷಣಗಳುಂಟು. ಹಿಂದೂ ಮತಕ್ಕೆ ಆಧಾರ ಭೂತವಾದ ವೇದಗಳೇ ಶ್ರೇಷ್ಠತಮ ಪ್ರಮಾಣವೆಂದೂ, ಹಿಂದೂಗಳೆಲ್ಲರೂ ಪರಮೋತ್ಕೃಷ್ಟವಾದ ಜ್ಞಾನರಾಶಿಯನ್ನು ಪಡೆದವರಾದುದರಿಂದ ಇತರ ರನ್ನು ಕಂಡು ಖಿನ್ನರಾಗಲು ಕಾರಣವಿಲ್ಲವೆಂದೂ ಆರ್ಯ ಸಮಾಜದ ಪ್ರಚಾರ ಕಾರ್ಯದಿಂದಲೇ ಸಿದ್ಧಿಸಿತು. ದಯಾನಂದ ಸ್ವಾಮಿಯ ಜೀವನ ಚರಿತ್ರೆಯನ್ನು ಓದಿದರೆ ಆತನು ಎಂತಹ ಧೈರ್ಯಮೇರುವಾಗಿದ್ದನೆಂಬುದು ತಿಳಿಯುವುದು. ಸ್ವಾವಲಂಬನವನ್ನು ಭಾರತೀಯರಿಗೆ ಉಪದೇಶ ಮಾಡಿದ ಆತನಿಂದ ಬೊಗ್ಗಿದ್ದ ಬೆನ್ನುಮೂಳೆಯು ನೆಟ್ಟಗಾಗಿ ಹಿಂದೂ ಜನರು ತಲೆಯನ್ನೆತ್ತಿಕೊಂಡು ನಡೆಯುವಂತೆ ಪರಿಣಮಿಸಿತು. ದೇಶ ಭಕ್ತಿಯನ್ನೂ ದಾರ್ಢ್ಯವನ್ನೂ ಭಾರತೀಯರಿಗೆ ಎರೆದುದು ಆರ್ಯ ಸಮಾಜವೇ.

ಸ್ವಾಮಿ ವಿವೇಕಾನಂದ

ಅತ್ತ ಶ್ರೀ ರಾಮಕೃಷ್ಣ ಪರಮಹಂಸರ ತರುವಾಯ ಅವರ ಶಿಷ್ಯ ವರ್ಗದಲ್ಲಿ ಮುಖಂಡರಾದ ಶ್ರೀ ಸ್ವಾಮಿ ವಿವೇಕಾ ನಂದರು 1893ರಲ್ಲಿ ಜಗತ್ತನ್ನೇ ಬೆರಗುಗೊಳಿಸಿದರು. 1862ರಲ್ಲಿ ಜನಿಸಿ **ನರೇಂದ್ರನಾಥ ದತ್ತ**ನೆಂದು ಕಲಕತ್ತೆಯ ವಿದ್ಯಾರ್ಥಿ ಮಂಡಲಿಗಳಲ್ಲಿ ಪ್ರಚಂಡನಾಗಿ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದಿದ್ದಾತನು ಶ್ರೀ ರಾಮಕೃಷ್ಣ ಪರಮಹಂಸರ ಪಟ್ಟಶಿಷ್ಯನಾದನು. ಗುರುಗಳ ನಿರ್ಯಾಣದ ತರುವಾಯ ಪರಮಹಂಸರ ಉಪದೇಶವನ್ನು ಲೋಕಕ್ಕೆ ಎರೆಯುವ ಕರ್ತವ್ಯವನ್ನು ವಹಿಸಿ, ಭಾರತ

ಭೂಮಿಯಲ್ಲಿ ಸಂಚಾರಮಾಡುತ್ತಿದ್ದು 1893ನೆ ಇಸವಿಯಲ್ಲಿ ಅಮೆರಿಕದ ಷಿಕಾಗೋ ನಗರದಲ್ಲಿ ಸಕಲಧರ್ಮ ಸಮ್ಮೇಳನವಾದಾಗ ಅಲ್ಲಿಗೆ ಹೊರಟು ಹಿಂದೂ ಮತದ ಮಹತ್ವವನ್ನು ವಿವರಿಸಿ ಕೀರ್ತಿವಂತನಾದನು. ಈತನ ಭಾಷಣಗಳು ಇಂಗ್ಲಿಷ್ ಭಾಷೆಯಲ್ಲಿಯೇ ನಡೆದವಾದ ಕಾರಣದಿಂದ ಎಲ್ಲೆಲ್ಲಿಯೂ ವಿಶ್ರುತವಾಗಿ ಇಂಗ್ಲಿಷ್ ಭಾಷೆಯನ್ನು ಕಲಿತು ಪಾಶ್ಚಾತ್ಯ ಸಂಸ್ಕೃತಿಯನ್ನು ಮೆಚ್ಚುತ್ತಿದ್ದ ಭಾರತೀಯರು ಚಕಿತರಾದರು. ಹಿಂತಿರುಗಿ ಸ್ವಾಮಿ ವಿವೇಕಾನಂದರು ಬಂದ ಕೂಡಲೆ ವಿದ್ಯಾವಂತರು ಚಾತಕಪಕ್ಷಿಗಳಂತೆ ಆತನನ್ನೆದುರುನೋಡಿದರು. ಪಾಶ್ಚಾತ್ಯ ಶಿಕ್ಷಣವನ್ನು ಪಡೆದಿದ್ದ ಅನೇಕರು ಆತನ ಉಜ್ವಲ ಭಾಷಣಗಳ ಜಂಝಾಮಾರುತಕ್ಕೆ ಸಿಕ್ಕಿದ ತರಗೆಲೆಗಳಂತೆಯೇ ಆದರು. ಆತನ ವಾಣಿಯು ಸಿಂಹಗರ್ಜನೆಯೇ ಆಗಿತ್ತು. ಪರಿಣಾಮವಾಗಿ ಪೂರ್ವಕಥೆಯಲ್ಲಿ ಕುರಿಗಳ ಮಂದೆಯಲ್ಲಿ ಬೆಳೆದು ಕುರಿಯಂತೆಯೇ ಇದ್ದ ಸಿಂಹಕಿಶೋರಕ್ಕೆ ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ತೋರಿದಂತೆಯೇ ಸಂಭವಿಸಿತು. ವಿವೇಕಾನಂದ ಸ್ವಾಮಿಯ ಜೀವನ ಚರಿತ್ರೆಯೂ ಭಾಷಣಗಳೂ ಭಾರತೀಯರಿಗೆ ಕೊಟ್ಟ ಉತ್ತೇಜನವನ್ನು ಮತ್ತೆ ಯಾವುದೂ ಕೊಡದಾಯಿತು. ವಿವೇಕಾನಂದರಲ್ಲಿ ದೇಶಭಕ್ತಿಯು ಪ್ರಜ್ವಲಿಸುವ ಶಕ್ತಿಮತ್ತಾಗಿತ್ತು. ಆದ್ದರಿಂದ ಭಾರತೀಯರ ರಾಷ್ಟ್ರಭಕ್ತಿಯನ್ನೂ ತೇಜಸ್ಸನ್ನೂ ಆತನೇ ಮೊದಲು ಮೂರ್ತಿಗೊಳಿಸಿದಾತನು.

ಈ ಆಂದೋಲನಗಳು ತೋರಿಕೊಂಡ ಕಾಲದಲ್ಲಿಯೇ ಪಾಶ್ಚಾತ್ಯರಲ್ಲಿಯೂ ಭಾರತೀಯ ಸಂಸ್ಕೃತಿಯ ಪರಿಚಯವುಂಟಾಗಿ ಅದರ ಪ್ರಭಾವವು ಅಲ್ಲಲ್ಲಿ ತೋರಲು ಮೊದಲಾಯಿತು. ಏಷ್ಯಾಟಿಕ್ ಸೊಸೈಟಿಯ ಕಾರ್ಯವು ವಿಸ್ತಾರವಾಗುತ್ತ ಜರ್ಮನಿ, ಫ್ರಾನ್ಸ್ ಮತ್ತು ಇಂಗ್ಲಂಡು ದೇಶಗಳಲ್ಲಿ ಸಂಸ್ಕೃತ ಭಾಷಾ ವ್ಯಾಸಂಗವು ಬೇರೂರಿತು. ಆ ದೇಶಗಳ ಸಾಹಿತ್ಯಗಳಲ್ಲಿ ವೇದಾಂತ ತತ್ವಗಳ ಮಹಿಮೆಯು ತೋರಿಕೊಂಡಿತು. ಗೆಥೆ, ಷಿಲ್ಲರ್, ಕಾರ್ಲೈಲ್, ರಸ್ಕಿನ್, ಎಮರ್ಸನ್ ಮುಂತಾದ ಪ್ರಸಿದ್ಧ ಲೇಖಕರು ವೇದಾಂತ ತತ್ವಗಳನ್ನನುಸರಿಸಿ ಬರೆದರು. ಸಾಹಿತ್ಯಕ್ಷೇತ್ರದಲ್ಲಿ ಮಾತ್ರವೇ ಅಲ್ಲದೆ ಆಧ್ಯಾತ್ಮಿಕ ಪ್ರಯತ್ನಗಳ ರಂಗದಲ್ಲಿಯೂ ಪಾಶ್ಚಾತ್ಯರು ಕೆಲವರು

ಭಾರತೀಯ ಭಂಡಾರವನ್ನು ಶೋಧಿಸಲು ಮನಸ್ಸುಳ್ಳವರಾದರು. 1875ರಲ್ಲಿಯೇ ನ್ಯೂಯಾರ್ಕ್ ಪಟ್ಟಣದಲ್ಲಿ ಬ್ಲಾವಟ್ಸ್ಕಿ ಎಂಬ ಸಾಧ್ವೀಮಣಿಯೂ ಆಲ್ಕಾಟೆಂಬ ಗೃಹಸ್ಥನೂ ಸೇರಿ **ಬ್ರಹ್ಮಜ್ಞಾನ ಸಮಾಜ**ವೆಂಬುದನ್ನು ಸ್ಥಾಪಿಸಿದ್ದರು. 1882ರಲ್ಲಿ ಈ ಸಮಾಜದ ಮುಖ್ಯಸ್ಥಾನವು ಮದರಾಸಿನ ಬಳಿಯಲ್ಲಿ ವ್ಯವಸ್ಥೆಯಾಯಿತು. 1893ರಲ್ಲಿ **ಆನಿಬೆಸೆಂಟ್** ಎಂಬ ಐರಿಷ್ ಮಹಿಳೆಯು ಭಾರತಭೂಮಿಗೆ ಬಂದು ಭರತವರ್ಷವನ್ನೇ ಸ್ವದೇಶವಾಗಿ ಸ್ವೀಕಾರಮಾಡಿದಳು. ಕಾಶೀಕ್ಷೇತ್ರದಲ್ಲಿ ಸೆಂಟ್ರಲ್ ಹಿಂದೂ ಕಾಲೇಜೆಂಬ ಪಾಠಶಾಲೆಯನ್ನು ನಡೆಸುತ್ತ ಈಕೆಯು ಹಿಂದೂ ಮತಸಂಬಂಧವಾದ ತತ್ವಗಳ ಪ್ರಚಾರವನ್ನು ನಡೆಸಿದಳು. ಬ್ರಹ್ಮಜ್ಞಾನ ಸಮಾಜಕ್ಕೆ ನಾನಾದೇಶಸ್ಥರು ಸೇರಿದ್ದರು; ಫರಂಗಿಯವರಾಗಿದ್ದವರು ಭರತವರ್ಷದಲ್ಲಿಯೇ ಇದ್ದುಕೊಂಡು ಭಾರತೀಯರಿಗೆ ತಮ್ಮ ಮತತತ್ವಗಳೇ ಅನೋಘವೆಂದು ಹೇಳಿದಾಗ ಭಾರತೀಯರ ಧೈರ್ಯಸ್ಥೈರ್ಯಗಳು ಸಹಜವಾಗಿ ಹೆಚ್ಚಿದವು. ವಿವೇಕಾನಂದ ಸ್ವಾಮಿಯನ್ನೊಪ್ಪಿಕೊಂಡ **ಸಿಸ್ಟರ್ ನಿವೇದಿತಾ** ಎಂಬ ಸಾಧ್ವೀಮಣಿಯ ಜೀವಿತದಿಂದಲೂ ಇಂತಹ ಪರಿಣಾಮವೇ ತೋರಿತು.

ಧರ್ಮವೆಂಬುದು ಭಾರತೀಯರಲ್ಲಿ ಸರ್ವವ್ಯಾಪಕವಾದುದು; ಇತರ ಜನರಲ್ಲಾದರೆ ಮತವೆಂಬುದು ಜೀವಿತದ ಒಂದು ಭಾಗ. ಭಾರತೀಯರಿಗೆ ಉಸಿರಾಡುವುದು ಕೂಡ ಧರ್ಮಾನುಸಾರವಾಗಿ ನಡೆಯತಕ್ಕುದು; ಆದ್ದರಿಂದ ಭಾರತೀಯ ಸಂಸ್ಕೃತಿಗೂ ಚೈತನ್ಯಕ್ಕೂ ಧರ್ಮವೇ ಮೂಲ, ಆಸ್ತಿಭಾರ. ಪಾಶ್ಚಾತ್ಯ ಸಂಸ್ಕೃತಿ ಸಂಪರ್ಕದಿಂದ ಹಿಂದೂ ಧರ್ಮದಲ್ಲಿ ತೋರಿಕೊಂಡ ಜಾಗೃತಿಯು ಇಸ್ಲಾಮೀ ಧರ್ಮದ ಘರ್ಷಣೆಯಿಂದಲೂ ನಡೆಯಲಿಲ್ಲ. ನಡೆದ ಪ್ರಯತ್ನಗಳಲ್ಲಿ ಬ್ರಹ್ಮ ಸಮಾಜ ಬ್ರಹ್ಮಜ್ಞಾನ ಸಮಾಜಗಳಿಗಿಂತಲೂ ಹಿಂದೂ ಜನರಿಗೆ ಹೆಚ್ಚಾಗಿ ಚೈತನ್ಯಪ್ರದಾನ ಮಾಡಿದುದು **ಆರ್ಯ ಸಮಾಜ** ಮತ್ತು **ಶ್ರೀರಾಮಕೃಷ್ಣ ವಿವೇಕಾನಂದರುಗಳ ಸಂದೇಶ.** ಸಂನ್ಯಾಸಿ ವರ್ಗದಿಂದಲೇ ಧರ್ಮೋದ್ಧಾರ ಕಾರ್ಯವು ಕೈಗೂಡುವುದು ಭಾರತೀಯ ಲಕ್ಷಣ.

ಮುದ್ರಣ ಸೌಕರ್ಯದಿಂದ ಧರ್ಮಪ್ರಚಾರ ಕಾರ್ಯವು ಕ್ಷಿಪ್ರತೆಯಿಂದ ನಡೆಯಿತು. ಧರ್ಮಪ್ರಚಾರ ಮಾತ್ರವೇ ಅಲ್ಲದೆ ಮುದ್ರಣ ಸಹಾಯದಿಂದ ದೇಶಭಾಷೆಗಳ ಸಾಹಿತ್ಯವೂ ಪುಷ್ಟಿಪಡೆಯಿತು. ರಾಜಾ ರಾಮ ಮೋಹನರಾಯನೇ ಬಂಗಾಳಿ ಭಾಷೆಯಲ್ಲಿ ಗ್ರಂಥ ರಚನೆಯನ್ನು ಮಾಡಿ ಬಂಗಾಳಿ ಭಾಷೆಯ ಸಾಹಿತ್ಯಕ್ಕೆ ಪುಷ್ಟಿಯನ್ನುಂಟು ಮಾಡಿದನು. ಆತನ ತರುವಾಯ **ತೋರುದತ್, ಮಧುಸೂದನ ದತ್, ರಮೇಶಚಂದ್ರ ದತ್** ಮುಂತಾದವರು ಇಂಗ್ಲೀಷ್ ಭಾಷೆಯಲ್ಲಿಯೇ ಗ್ರಂಥ ರಚನೆಯನ್ನು ಮಾಡಿದಾಗ್ಯೂ ದೇಶಭಾಷೆಯಲ್ಲಿ **ಬಂಕಿಂಚಂದ್ರ, ಗಿರೀಶಚಂದ್ರ ಘೋಷ, ದ್ವಿಜೇಂದ್ರ ಲಾಲ ರಾಯ, ರಬೀಂದ್ರನಾಥ ಠಾಕೂರ್** ಮುಂತಾದವರು ನವಚೈತನ್ಯವನ್ನು ತೋರಿ ಗ್ರಂಥಗಳನ್ನು ರಚಿಸಿದರು. ಬಂಗಾಳ ಪ್ರಾಂತದಲ್ಲಿ ನಡೆದಂತೆಯೇ ಇತರ ಪ್ರಾಂತಗಳಲ್ಲಿಯೂ ನಡೆದು ಸಾಹಿತ್ಯರಂಗದಲ್ಲಿಯೂ ಕಲಾರಂಗದಲ್ಲಿಯೂ ಸ್ವಾವಲಂಬನವು ಗುರಿಯಾಯಿತು. ದೇಶಭಾಷೆಗಳಲ್ಲಿ ವೃತ್ತಪತ್ರಿಕೆಗಳೂ ಹೆಚ್ಚಿದವು. ಸಿಪಾಹಿ ದಂಗೆಯೆಂಬುದು ರೇಗುವುದಕ್ಕೆ ಮೊದಲೇ ಬಂಗಾಳ ಪ್ರಾಂತದ ಜನರಿಗೂ ಆಗ್ರಾ ಅಯೋಧ್ಯಾ ಪ್ರಾಂತಗಳ ಜನರಿಗೂ ಇದ್ದ ಅಭಿಪ್ರಾಯ ಭೇದವನ್ನು ಟ್ರೆವೆಲ್ಯನ್ನೆಂಬ ಇಂಗ್ಲಿಷ್ ಅಧಿಕಾರಿಯು ಕಂಡು ಗುರುತುಮಾಡಿಟ್ಟನು. ಇಂಗ್ಲಿಷರ ರಾಜ್ಯಭಾರವು ದೀರ್ಘಕಾಲದಿಂದ ನಡೆದು ಪಾಶ್ಚಾತ್ಯ ವಿದ್ಯಾಪರಿಶ್ರಮವುಳ್ಳವರಾದ ಬಂಗಾಳದ ಜನರು ಇಂಗ್ಲೀಷರನ್ನು ಗುರುಸ್ಥಾನದಲ್ಲಿಟ್ಟು ತಾವು ಐರೋಪ್ಯದೇಶಗಳ ಜನರಂತೆಯೇ ಪ್ರಾತಿನಿಧ್ಯತತ್ವಗಳನ್ನಾಚರಿಸತಕ್ಕುದೆಂದು ತಿಳಿದಿದ್ದರು; ಅಯೋಧ್ಯಾ ಆಗ್ರಾ ಭಾಗಗಳಲ್ಲಿ ಜನರು ಸ್ವದೇಶದಿಂದ ಫರಂಗಿಯವರನ್ನು ತೊಲಗಿಸುವುದೇ ಸರಿಯೆಂದು ತಿಳಿದಿದ್ದರು. ಸಿಪಾಹಿ ದಂಗೆಯು ರೇಗಿ ಅಡಗಿದ ತರುವಾಯ ಇಂಗ್ಲೀಷರ ರಾಜ್ಯಭಾರವು ಸುರೂಢವಾದುದಲ್ಲದೆ ಪಾಶ್ಚಾತ್ಯ ವಿದ್ಯಾಭ್ಯಾಸವೂ ವಿಸ್ತಾರವಾಯಿತು. ರಾಷ್ಟ್ರಪದ್ಧತಿಗಳಲ್ಲಿ ಇಂಗ್ಲಂಡಿನ ಆಚಾರವಿಶೇಷವೇ ಪರಮೋತ್ತಮವೆಂದು ಪಾಶ್ಚಾತ್ಯ ರೀತಿಯ ಶಿಕ್ಷಣವನ್ನು ಪಡೆದವರೆಲ್ಲರಿಗೂ ಮನಸ್ಸಿನಲ್ಲಿ ತೋರಿತು. ಮುಖ್ಯ ಪಟ್ಟಣಗಳಾದ ಕಲ್ಕತ್ತೆ, ಬೊಂಬಾಯಿ

ದೇಶಭಾಷಾ ಸಾಹಿತ್ಯಗಳು

ಮತ್ತು ಮದರಾಸುಗಳಲ್ಲಿ ಪಾಶ್ಚಾತ್ಯ ಶಿಕ್ಷಣವನ್ನು ಪಡೆದವರು ರಾಷ್ಟ್ರ ಸುಧಾರಣೆಗೆ ಮನಸಕೊಟ್ಟು, ಪೂರ್ವಭಾವಿಯಾಗಿ ಸಾಮಾನ್ಯ ಜನರಲ್ಲಿ ರಾಷ್ಟ್ರಜ್ಞಾನವನ್ನುಂಟುಮಾಡುವ ಉದ್ದೇಶದಿಂದ ಸಂಘಗಳನ್ನು ಸ್ಥಾಪಿಸಿ ಕೊಂಡರು. ರಾಷ್ಟ್ರೀಯವಾದ ಉದ್ಯಮದಲ್ಲಿ ಈ ಸಭೆಗಳು ತೋರಿಕೊಳ್ಳು ವುದಕ್ಕೆ ಮೊದಲೇ ಪ್ರಯತ್ನಶೀಲನಾದಾತನು **'ವೃದ್ಧ ಪಿತಾಮಹ'** ನೆನಿಸಿದ **ದಾದಾಭಾಯಿ ನೌರೋಜಿ.**

**ದಾದಾಭಾಯಿ ನೌರೋಜಿ**

ದಾದಾಭಾಯಿಯು ಹುಟ್ಟಿದ್ದು 1825ರಲ್ಲಿ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡು ಈತನು ತಾಯಿಯ ರಕ್ಷಣೆಯಲ್ಲಿ ಬೆಳೆದು ಬೊಂಬಾಯಿಯಲ್ಲಿ ಎಲ್ಫಿನ್‌ಸ್ಟನ್ ಪಾಠಶಾಲೆಯಲ್ಲಿ ಶಿಕ್ಷಣವನ್ನು ಪಡೆದನು. ಚಿಕ್ಕ ವಯಸ್ಸಿನಲ್ಲಿಯೇ ಪರೀಕ್ಷೆಗಳಲ್ಲಿ ಉತ್ತೀರ್ಣನಾಗಿ ತಾನು ಓದಿದ ವಿದ್ಯಾನಿಲಯದಲ್ಲಿಯೇ ಅಧ್ಯಾಪಕನಾದನು. ಇಂಗ್ಲಂಡಿಗೆ ಕಳುಹಿಸಬೇಕೆಂಬ ಯೋಜನೆಯು ಕೆಲವರಿಗಿದ್ದಾಗ್ಯೂ ಪಾರ್ಸೀಕುಲಸ್ಥರಲ್ಲಿ ಸಂಪ್ರದಾಯವಂತರು ಅದಕ್ಕೆ ವಿರೋಧವನ್ನು ತೋರಿದ ಕಾರಣದಿಂದ ದಾದಾಭಾಯಿ ತನ್ನ ಯೌವನವನ್ನು ಬೊಂಬಾಯಿ ಯಲ್ಲಿಯೇ ಕಳೆದನು. 1844ರಿಂದ 1856ರ ವರೆಗೆ ದಾದಾಭಾಯಿಯು ಬೊಂಬಾಯಿಯಲ್ಲಿ ಜನರ ಮೇಲ್ಮೆಗಾಗಿ ನಡೆಸಿದ ಪ್ರಯತ್ನಗಳು ಅನೇಕಾನೇಕವಾಗಿದ್ದವು. ಮುಖ್ಯವಾಗಿ ವ್ಯಾಯಾಮ ಸಾಧನೆ, ಸ್ತ್ರೀ ಶಿಕ್ಷಣ, ವಿದ್ಯಾರ್ಥಿಗಳ ಉತ್ತೇಜನ, ಜ್ಞಾನಪ್ರಸಾರ, ವಿಧವಾ ವಿವಾಹ ಮುಂತಾದ ಕೆಲಸಗಳನ್ನೇ ನಡೆಸುತ್ತಿದ್ದು, 1856ರಲ್ಲಿ ಅಧ್ಯಾಪಕನ ಉದ್ಯೋಗವನ್ನು ಬಿಟ್ಟು ವರ್ತಕತನದಲ್ಲಿ ತೊಡಗಿ ಆ ಸಂಬಂಧದಲ್ಲಿಯೇ ಇಂಗ್ಲಂಡಿಗೆ ಹೊರಟನು. ಇಂಗ್ಲಂಡಿನಲ್ಲಿ ಪ್ರಾಮಾಣಿಕ ತನದಿಂದ ವರ್ತಿಸಿ ವಿಶ್ವಾಸಪಾತ್ರನಾದನು.

ಅದೇ ವೇಳೆಯಲ್ಲಿಯೇ ಒಬ್ಬಾನೊಬ್ಬ ಪಾರ್ಸೀ ಯುವಕನು ತೇಜಸ್ವಿ ಯಾಗಿ ಪರೀಕ್ಷೆಗಳಲ್ಲಿ ಮೊದಲನೆ ವರ್ಗದಲ್ಲಿ ತೇರ್ಗಡೆಯಾಗಿದ್ದಾಗ್ಯೂ ಆತನಿಗೆ ಇಂಡಿಯನ್ ಸಿವಿಲ್ ಸರ್ವಿಸ್ ಎಂಬ ಅಧಿಕಾರಿವರ್ಗದ ಪರೀಕ್ಷೆಗೆ ಪ್ರವೇಶವೇ ದೊರಕದಾಯಿತು. ಈ ವಿಷಯವನ್ನು ಹಿಡಿದು ದಾದಾಭಾಯಿ

ಇಂಗ್ಲಂಡಿನಲ್ಲಿಯೇ ಭಾರತೀಯರ ಪರವಾಗಿ ವಾದಮಾಡಲು ಪ್ರಾರಂಭಿಸಿದನು. ಇಂಗ್ಲಂಡಿನ ಜನರಲ್ಲಿ ಭರತವರ್ಷದ ಸ್ಥಿತಿಗತಿಗಳ ವಿಚಾರವಾಗಿ ಅರಿವೇ ಇಲ್ಲದಿದ್ದುದನ್ನು ಕಂಡು ಭಾರತೀಯ ಪರಿಸ್ಥಿತಿಯ ತಿಳುವಳಿಕೆಯನ್ನು ಅಲ್ಲಿಯ ಜನರಿಗೆ ಉಂಟುಮಾಡುವ ಉದ್ದೇಶದಿಂದ ಲಂಡನ್ನಿನಲ್ಲಿ ಪ್ರಚಾರ ಸಂಘಗಳನ್ನು ಸ್ಥಾಪಿಸಿದನು. ಆ ಕಾಲದಿಂದ ದಾದಾಭಾಯಿಯು ಅವಿರತನಾಗಿ ಭರತವರ್ಷದ ಹೀನಸ್ಥಿತಿಯನ್ನು ವಿವರಿಸುತ್ತ ಭಾರತೀಯರ ದಾರಿದ್ರ್ಯವನ್ನು ಕುರಿತು ಪ್ರಸ್ತಾಪಿಸುತ್ತಲೇ ಇರುತ್ತಿದ್ದನು. 1869ರಲ್ಲಿ ಬೊಂಬಾಯಿಗೆ ಆತನು ಬಂದಾಗ ಅಲ್ಲಿಯ ಜನರು ಆತನನ್ನು ಅತ್ಯಾದರದಿಂದ ಬರಮಾಡಿಕೊಂಡರು. ಎರಡು ವರ್ಷಕಾಲ ಬರೋಡ ಸಂಸ್ಥಾನದಲ್ಲಿ ದಿವಾನ ಕೆಲಸದಲ್ಲಿದ್ದು ಆ ತರುವಾಯ ಬೊಂಬಾಯಿ ನಗರ ನಿರ್ವಾಹ ಸಭೆಯಲ್ಲಿಯೂ ಶಾಸಕ ಸಭೆಯಲ್ಲಿಯೂ ಘನತೆಯಿಂದ ವರ್ತಿಸಿ, 1885ರಲ್ಲಿ **ಕಾಂಗ್ರೆಸ್** ಎಂಬ ಅಖಿಲ ಭಾರತ ರಾಷ್ಟ್ರೀಯ ಸಭೆಯ ಸ್ಥಾಪನೆಯಲ್ಲಿ ಭಾಗಿಯಾದನು. ಆದರೂ ಇಂಗ್ಲಂಡಿನ ಜನರಲ್ಲಿಯೇ ಪ್ರಚಾರ ಕಾರ್ಯವು ಸಮರ್ಪಕವಾಗಿ ನಡೆಯಬೇಕೆಂದೂ ಪಾರ್ಲಿಮೆಂಟಿನಲ್ಲಿ ಭಾರತೀಯರ ಪರವಾಗಿ ವಾದಿಸಬೇಕೆಂದೂ ಈತನು ಸಾಹಸಪಟ್ಟು ಫಿನ್ಸ್‌ಬೆರಿಯಿಂಬೆಡೆಯಲ್ಲಿ ನೆಲೆಸಿದನು. 1892ರಲ್ಲಿ ಅಲ್ಲಿಯ ನಿವಾಸಿಗಳನ್ನೇ ಮೆಚ್ಚಿಸಿ ಪರಣಪ್ರಾಪ್ತಿ ಹೊಂದಿ ಕಾಮನ್ಸ್ ಸಭೆಯ ಸದಸ್ಯನೇ ಆದನು. ಈತನು ಮೂರು ಬಾರಿ ಕಾಂಗ್ರೆಸ್ಸಿನ ಅಧ್ಯಕ್ಷಪದವಿಗೆ ವೃತನಾಗಿ, ವೃದ್ಧಪಿತಾಮಹನೆನಿಸಿ ರಾಷ್ಟ್ರೀಯವಾದ ಉದ್ಯಮಗಳಿಗೆ ಋಷಿಸ್ಥಾನದಲ್ಲಿರತಕ್ಕವನೆನಿಸಿದ್ದನು. ಈತನಿಗಿಂತಲೂ ವಯಸ್ಸಿನಲ್ಲಿ ಕಿರಿಯರಾಗಿ ದೇಶದ ಆಡಳಿತದಲ್ಲಿ ಸುಧಾರಣೆಗೆ ಆಸೆಪಟ್ಟ ಇತರರೂ ಇದ್ದರು.

**ಆಳ್ವಿಕೆಯ ಪರಿಣಾಮ**

ಸೂಯೆಸ್ ಕಾಲುವೆಯು ಸಾಧಿತವಾದಮೇಲೆ ಬ್ರಿಟಿಷರ ಆಳ್ವಿಕೆಯು ಭರತವರ್ಷದಲ್ಲಿ ಇನ್ನೂ ದೃಢವಾಗಿ ಮುಂದೆ ಜರುಗಿತು. ಬ್ರಿಟಿಷರ ಸಂಪರ್ಕ ಪ್ರಭಾವದಿಂದ ಏಕರಾಷ್ಟ್ರಸಿದ್ಧಿಯಾದುದೇ ಅಲ್ಲದೆ ಪೃಥ್ವಿಯ ಎಲ್ಲ ದೇಶಗಳ ಪರಸ್ಪರ ಸಂಬಂಧ ವ್ಯವಹಾರಗಳಲ್ಲಿ ಭಾರತರಾಷ್ಟ್ರವು ಹೆಚ್ಚು

ಹೆಚ್ಚಾಗಿ ಭಾಗವನ್ನು ಪಡೆಯುವಂತಾಯಿತು. ಒಳಾಡಳಿತದಲ್ಲಿ ಶಾಂತಿ ಕ್ಷೇಮಗಳ ಸ್ಥಾಪನೆಯು ನೆರವೇರಿತು. ಮುಘಲ್ ಬಾದಷಾಹಿಯನ್ನು ಧ್ವಂಸಗೊಳಿಸಿದ ಮರಾಟಿಯವರು ತಮ್ಮ ರಾಜ್ಯವನ್ನು ಭದ್ರವಾಗಿ ರಚಿಸಿಕೊಳ್ಳದಿದ್ದ ಕಾಲದಲ್ಲಿ ದೇಶದಲ್ಲಿ ಎಲ್ಲೆಲ್ಲಿಯೂ ನಡೆಯುತ್ತಿದ್ದ ಯುದ್ಧಗಳೂ ಕದನಗಳೂ ಬ್ರಿಟಿಷರ ಆಡಳಿತದಲ್ಲಿ ನಿಂತುಹೋದುದಲ್ಲದೆ ಅಸಾಧಾರಣ ಪ್ರಾಬಲ್ಯವನ್ನೇ ಪಡೆದಿದ್ದ ಕಳ್ಳತನ ದರೋಡೆಗಳು ಅಡಗಿದವು. ವ್ಯಕ್ತಿಯ ಇಷ್ಟಾನಿಷ್ಟಗಳನ್ನನುಸರಿಸಿ ನಡೆಯುವ ಸರ್ಕಾರಕ್ಕೆ ಬದಲಾಗಿ ವ್ಯೂಹಬದ್ಧವಾಗಿ ಕ್ರಮವಾಗಿ ನಡೆಯುವ ಸರ್ಕಾರವು ರೂಪಗೊಂಡು ವಿಪುಲವಾದ ಕರ್ತವ್ಯ ನಿರ್ವಾಹಕ್ಕೆ ತೊಡಗಿತು. ಹೊರದೇಶದ ವ್ಯಾಪಾರವನ್ನು ವಿಶೇಷವಾಗಿ ಪ್ರೋತ್ಸಾಹಿಸಿದ ಬ್ರಿಟಿಷರ ಆಡಳಿತದಲ್ಲಿ ನಗರಗಳೂ ಬಂದರುಗಳೂ ಅಭಿವೃದ್ಧಿಗೊಂಡುದಲ್ಲದೆ ಅಂಚೆ, ತಂತಿ, ರಸ್ತೆ, ರೈಲ್ವಾರಿ ಮುಂತಾದ ವಾಹಕ ಸೌಕರ್ಯಗಳು ವೃದ್ಧಿ ಪಡೆದವು. ಕಾಡುಗಳು ನೆಲಸಮವಾಗಿ ಸಾಗುವಳಿಯ ಭೂಮಿಯು ವಿಸ್ತಾರಗೊಂಡಿತು; ರಫ್ತಿಗಾಗಿ ಧಾನ್ಯದ ಕೃಷಿಯು ಹೆಚ್ಚಿತು. ಹೊರಗಿನ ವ್ಯಾಪಾರವು ಅತಿಶಯವಾಗಿ ವೃದ್ಧಿಯಾದುದಲ್ಲದೆ ಅದೇ ಸಮಯದಲ್ಲಿ ನೂತನವಾದ ಉದ್ಯೋಗಗಳೂ ತೋರಿಕೊಂಡವು. ಪಾಶ್ಚಾತ್ಯ ವಿದ್ಯಾಭ್ಯಾಸವು ಮೊದಮೊದಲು ಕ್ರೈಸ್ತಮತ ಪ್ರಚಾರಕರಿಂದಲೂ ತರುವಾಯ ಸರ್ಕಾರದವರಿಂದಲೂ ನಡೆದು ಭಾರತೀಯರಿಗೆ ಪಾಶ್ಚಾತ್ಯ ಸಂಸ್ಕೃತಿಯ ಪರಿಚಯವು ಲಭಿಸಿತು.

ಇತರ ಪರಿಣಾಮಗಳು ಸೌಭಾಗ್ಯಪ್ರದಗಳಾಗಲಿಲ್ಲ. ಶಾಂತಿಸ್ಥಾಪನೆಯೊಂದಿಗೆ ಭಾರತೀಯರು ನಿರಾಯುಧರಾದರು.

**ಆರ್ಥಿಕ ಪರಿಣಾಮ**

ಬ್ರಿಟಿಷರ ಸ್ವಾಧೀನದಲ್ಲಿಯೇ ರಾಜ್ಯಾಧಿಕಾರವು ನಡೆಯುತ್ತಿದ್ದುದರಿಂದ ಭಾರತೀಯರು ಬ್ರಿಟಿಷರ ಅಧಿಕಾರಿಗಳನ್ನೇ ಅವಲಂಬಿಸುತ್ತ ಸ್ವಾವಲಂಬನ ಗುಣವನ್ನು ನೀಗಿದರು. ಧೈರ್ಯ ಪೌರುಷ ಗುಣಗಳು ಅಸ್ತಮಿಸಿದ್ದಲ್ಲದೆ ದೇಶದಲ್ಲಿ ನಿರುದ್ಯೋಗವೂ ಬಡತನವೂ ಹೆಚ್ಚಿದವು. ಪೂರ್ವಕಾಲದಿಂದ ನಡೆದುಬಂದಿದ್ದ ಕೈಗಾರಿಕೆಗಳು ಮಾಯವಾದವು; ನೂತನವಾಗಿ ತೋರಿಕೊಂಡ ಕೈಗಾರಿಕೆಗಳಲ್ಲಿ ವಿದೇಶೀ ವರ್ತಕರ ಬಂಡವಾಳವೇ ಮೂಲವಾಯಿತು; ಹಿಂದಿನ ವಾಹಕ

ವ್ಯಾಪಾರಗಳು ನಷ್ಟವಾದವು. ಬಹು ಜನರು ತಮ್ಮ ಉಪಜೀವನಗಳನ್ನು ಕಳೆದುಕೊಂಡು ಹಳ್ಳಿಗಳಲ್ಲಿ ನೆಲೆಸಲು ಯತ್ನಿಸಿ ಭೂವ್ಯವಸಾಯಕ್ಕೆ ಭಾರವಾದರು. ಬ್ರಿಟಿಷರ ಆಡಳಿತವು ಇಂಗ್ಲಂಡಿನ ಸಂಬಂಧವನ್ನು ಬಿಡದೆ ರಾಷ್ಟ್ರಾದಾಯದ ಒಂದು ಪಾಲನ್ನು ಇಂಗ್ಲಂಡಿನಲ್ಲಿಯೇ ವೆಚ್ಚಗೊಳಿಸುತ್ತಿದ್ದುದರಿಂದ ಕಂಪೆನಿಯವರ ಆಡಳಿತದಲ್ಲಿ ದೇಶಕ್ಕೆ ಆದಾಯ ನಷ್ಟವಾಗುತ್ತಿದ್ದ ಲಕ್ಷಣವೇ ರೂಪಾಂತರವನ್ನು ತಾಳಿ ಸ್ಥಿರವಾಯಿತು. ಆಡಳಿತದ ವೆಚ್ಚವು ಕ್ರಮವಾಗಿ ಏರುತ್ತಲಿದ್ದುದರಿಂದ ಕಂದಾಯ ತೆರಿಗೆಗಳ ಭಾರವು ಜನರಿಗೆ ಹೆಚ್ಚುತ್ತಲೇ ಇತ್ತು. ಹೊರದೇಶ ವ್ಯಾಪಾರದ ಅಭಿವೃದ್ಧಿಯ ದೆಸೆಯಿಂದ ಧಾರಣೆವಾಸಿಗಳು ಹೆಚ್ಚಾಗಿ ಏರಿದವು. ಈ ರೀತಿಯಲ್ಲಿ ಉದ್ಯೋಗ ನಷ್ಟವಾದುದಲ್ಲದೆ ಬಡತನವು ಹೆಚ್ಚುತ್ತಲಿದ್ದುದರಿಂದ ಕ್ಷಾಮಡಾಮರಗಳು ತೋರಿಕೊಂಡಾಗ ಹಿಂದೆಂದೂ ಅನುಭವಿಸದಿದ್ದ ಕಷ್ಟಗಳನ್ನು ಜನರು ಅನುಭವಿಸಬೇಕಾಯಿತು. ಕ್ಷಾಮಗಳು ಪದೇ ಪದೇ ತೋರಿಕೊಂಡುದಲ್ಲದೆ ಸಾಂಕ್ರಾಮಿಕ ರೋಗಗಳೂ ಪ್ರಬಲಗೊಳ್ಳಲು ಭಾರತೀಯ ಜನಸಮೂಹದಲ್ಲಿ ಮರಣಗಳು ಭಯಂಕರವಾದವು. ಹಿಂದಿನ ಕಾಲದಲ್ಲಿ ದೇಶಕ್ಕೆ ಕೀರ್ತಿಯನ್ನೂ ಜನರಿಗೆ ಉಲ್ಲಾಸವನ್ನೂ ಉಂಟುಮಾಡಿದ್ದ ಕುಶಲಕಲೆಗಳಲ್ಲದೆ ಲಲಿತ ಕಲೆಗಳೂ ಪೋಷಣೆ ಪ್ರೋತ್ಸಾಹಗಳಿಲ್ಲದೆ ನಷ್ಟವಾಗಬೇಕಾಗಿ ಬಂತು.

ನಷ್ಟಚೈತನ್ಯ

ಈ ಸಂಗತಿಗಳ ಪರಿಣಾಮವು ಸಮಾಜದಲ್ಲಿ ವಿಶೇಷ ರೂಪದಲ್ಲಿಯೇ ತೋರಿತು. ದಾರಿದ್ರ್ಯದ ದೆಸೆಯಿಂದ ಜಾತಿಧರ್ಮದ ಬಂಧವು ಸಡಲಿತು; ಅವಿಭಕ್ತಕುಟುಂಬದ ಮತ್ತು ಜಾತಿ ಕುಲಗಳ ಕರ್ತವ್ಯಪಾಲನೆಯು ಕಾಲಕ್ರಮದಲ್ಲಿ ಕಷ್ಟತರವಾಗಿ ತೋರಿ ಸಮಾಜದ ಬಿಗಿಯೇ ತಪ್ಪುವಂತೆ ನಾನಾ ಕಾರಣಗಳಿಂದ ನಡೆಯಿತು. ಹೊಸದಾಗಿ ತೋರಿಕೊಂಡ ಕಂದಾಯದ ಶಿಸ್ತು ನಿಬಂಧನೆಗಳ ಮಧ್ಯೆ ಗ್ರಾಮಗಳ ಸಮುದಾಯ ವ್ಯವಸ್ಥೆಗಳ ಆಚಾರವು ಶಿಥಿಲವಾಯಿತು; ಆರ್ಥಿಕಜೀವನದಲ್ಲಿ ಗ್ರಾಮಗಳಿಗಿದ್ದ ಸ್ವಾವಲಂಬನ ಪೂರ್ಣತೆಯು ನಷ್ಟವಾಯಿತು. ಪೂರ್ವಕಾಲದಲ್ಲಿ ಜಹಗೀರ್ದಾರರಾಗಿಯೋ ಶ್ರೀಮಂತರಾಗಿಯೋ ಇದ್ದು ಬಡಬಗ್ಗರನ್ನೂ

ಗ್ರಾಮಸ್ಥರನ್ನೂ ತಮ್ಮ ರೀತಿಯಲ್ಲಿ ಸಂರಕ್ಷಣೆಮಾಡುತ್ತಿದ್ದ ವರ್ಗವು ಇಲ್ಲದಂತಾದುದರಿಂದ ಗ್ರಾಮಗಳ ಜೀವನ ಸೌಭಾಗ್ಯವು ಅದೃಶ್ಯವಾಯಿತು. ಗ್ರಾಮಗಳಲ್ಲಿಯೇ ಬದುಕನ್ನು ಕಳೆಯುವ ಭಾರತೀಯ ಜನರಿಗೆ ಉಲ್ಲಾಸ ಚೈತನ್ಯಗಳು ಮಾಯವಾದವು. ಇವುಗಳ ಮಧ್ಯೆ ಭಾರತೀಯ ಸಂಸ್ಕೃತಿ ನಾಗರಿಕತೆಗಳು ಹೀನವಾದವೆಂಬ ವಾದವು ಬೇರೆ ತಲೆಯೆತ್ತಿತು. ಪಾಶ್ಚಾತ್ಯ ವಿದ್ಯಾಭ್ಯಾಸವನ್ನು ಪಡೆದ ಭಾರತೀಯರು ಪಾಶ್ಚಾತ್ಯ ಸಂಸ್ಕೃತಿಯನ್ನು ಮೆಚ್ಚುತ್ತ ಪ್ರಾಚೀನ ಸಂಪ್ರದಾಯಗಳನ್ನು ಅಲ್ಲಗಳೆಯುತ್ತ ಇದ್ದುದರಿಂದ ಸಾಮಾನ್ಯ ಜನರಲ್ಲಿ ಕಿಂಕರ್ತವ್ಯತಾ ಮೌಢ್ಯವು ಬೇರೂರಿತು.

**ರಾಷ್ಟ್ರೀಯ ಪ್ರಜ್ಞೆ**

ಪಾಶ್ಚಾತ್ಯ ಶಿಕ್ಷಣವನ್ನು ಪಡೆದ ವರ್ಗದವರಿಗೆ ಪಾಶ್ಚಾತ್ಯ ಪದ್ಧತಿಗಳಲ್ಲಿ ಮೆಚ್ಚುಗೆಯು ಹೆಚ್ಚಿದಂತೆಯೇ ಎರಡು ಮಾರ್ಗಗಳಲ್ಲಿ ಪ್ರತಿಬಂಧಕಗಳು ತೋರಿಕೊಂಡವು. ಯೋಗ್ಯತೆಗೆ ತಕ್ಕಂತೆ ಪುರಸ್ಕಾರವು ದೊರೆಯದಿದ್ದುದೊಂದು; ಎಂತೆಂತಹ ಪರೀಕ್ಷೆಗಳಲ್ಲಿ ಉತ್ತೀರ್ಣರಾದಾಗ್ಯೂ ಶ್ರೇಷ್ಠವರ್ಗದ ಅಧಿಕಾರವಾಗಲಿ ಹುದ್ದೆಯಾಗಲಿ ಅವರಿಗೆ ದೊರಕಲಿಲ್ಲ. ಮತ್ತು ಭಾರತದೇಶದಲ್ಲಿ ಬಿಳಿಯ ಜಾತಿಗೆ ಸೇರಿದವರ ಹೆಮ್ಮೆಯು ಅವರಿಗೆ ಸಹಿಸದಾಯಿತು. ಕೆಲವೇಳೆ ಬಿಳಿಯರು ಅತ್ಯಾಚಾರಗಳನ್ನು ನಡೆಸುತ್ತಿದ್ದು ನ್ಯಾಯನೀತಿಯನ್ನು ಅಲಕ್ಷ್ಯದಿಂದ ಭಂಗಪಡಿಸಿ ಔದ್ಧತ್ಯವನ್ನು ತೋರುತ್ತಿದ್ದುದು ವಿಷಮಯವಾಗಿಯೇ ಇತ್ತು. ಈ ಕಾರಣಗಳಿಂದ ಅಸಮಾಧಾನಗೊಂಡ ಅಕ್ಷರಸ್ಥ ವರ್ಗದವರಲ್ಲಿ ಆಂದೋಲನಗಳು ಮೊದಲಾದವು. ರಾಜಕೀಯರಂಗದಲ್ಲಿ ಪ್ರಾತಿನಿಧ್ಯತತ್ವವನ್ನಾಚರಿಸುತ್ತ ಜನರ ಅಭೀಷ್ಟವನ್ನು ತಿಳಿದು ಸರ್ಕಾರವು ವರ್ತಿಸುತ್ತಿದ್ದರೆ ಎಲ್ಲ ವಿಷಯಗಳಿಗೂ ಮೇಲಾಗುವುದೆಂದು ಈ ವರ್ಗದವರು ದೃಢವಾಗಿ ನಂಬಿದರು. ಬಂಗಾಳದಲ್ಲಿಯೂ ಅಯೋಧ್ಯಾ ಪ್ರಾಂತದಲ್ಲಿಯೂ ಸಾಮಾನ್ಯ ಜನರಲ್ಲಿ ರಾಜಕೀಯ ಸ್ಥಿತಿಗತಿಗಳ ಪ್ರಜ್ಞೆಯನ್ನುಂಟುಮಾಡಲು ಪಾಶ್ಚಾತ್ಯ ಶಿಕ್ಷಣವನ್ನು ಪಡೆದಿದ್ದವರಲ್ಲಿ ಕೆಲವರು ಪ್ರಯತ್ನಪಟ್ಟರು. ಅಜ್ಞಾನದಲ್ಲಿಯೇ ಬದುಕನ್ನು ಕಳೆಯುತ್ತಿದ್ದ ಸಾಮಾನ್ಯ ಜನರಲ್ಲಿ ವಿದ್ಯಾಪ್ರಚಾರಮಾಡುವುದೇ ಇವರಿಗೆ ಮುಖ್ಯಕರ್ತವ್ಯವಾಗಿ ಕಂಡುಬಂದಿತು. ದಾದಾಭಾಯಿ ನೌರೋಜಿಯು ಈ ಗುಂಪಿಗೆ ಅಗ್ರಗಣ್ಯನಾಗಿದ್ದನು.

**ಲಾರ್ಡ್ ಲಿಟ್ಟನ್** ಎಂಬ ಭೋಗಾಧಿಪತಿಯ ಕಾಲದಲ್ಲಿ ಸಂಭವಿಸಿದ ಕೆಲವು ಸಂಗತಿಗಳು ಈ ಆಂದೋಲನವನ್ನು ಬಲಪಡಿಸಿದವು. ಆ ಕಾಲದಲ್ಲಿ ಭಯಾವಹವಾದ ಕ್ಷಾಮವು ದೇಶದಲ್ಲಿ ರೇಗಿ ಅನೇಕ ಜನರನ್ನು ಮೃತ್ಯುವಿನ ಬಾಯಿಗೆ ಒಡ್ಡಿತು. ಅದೇ ಸಮಯದಲ್ಲಿಯೇ ಭೋಗಾಧಿಪತಿಯು ಅತಿಶಯವಾಗಿ ವೆಚ್ಚಗೊಳಿಸಿ ಒಂದು ಆಫ್ಘಾನ ಯುದ್ಧವನ್ನು ನಡೆಸುತ್ತಿದ್ದು ದಿಲ್ಲಿಯಲ್ಲಿ ಆಟ್ಟಹಾಸದ ದರ್ಬಾರನ್ನು ನಡೆಸಿದನು. ಜನರ ಸುಖದುಃಖಗಳಿಗೆ ತಕ್ಕ ಗಮನವನ್ನು ಆಡಳಿತದವರು ಕೊಡುತ್ತಿರಲಿಲ್ಲವೆಂದು ಖಿನ್ನರಾದ ಶಿಕ್ಷಿತ ಭಾರತೀಯರಿಗೆ ವಿಷಮಯವಾದ ಸಂದರ್ಭವು ಮತ್ತೊಂದು ಒದಗಿತು. ಲಿಟ್ಟನಾ ತರುವಾಯ ಭೋಗಾಧಿಪತಿಯಾದ **ಲಾರ್ಡ್ ರಿಪನ್** ಎಂಬಾತನು ಲಿಬರಲ್ ಪಕ್ಷದವನಾಗಿದ್ದು ಭಾರತೀಯರ ಸುಖದುಃಖಗಳಲ್ಲಿ ಸಹಾನುಭೂತಿಯನ್ನು ತೋರಿ, ಸ್ಥಳೀಯ ನಿರ್ವಾಹದಲ್ಲಿ ಉತ್ತಮವಾದ ಏರ್ಪಾಟನ್ನು ನಡೆಸಿದ್ದನು. ಆದರೆ ಆತನು ಕ್ರಿಮಿನಲ್ ವಿಧಾನದ ವಿಷಯದಲ್ಲಿ ಬಿಳಿಯರು ಅಪಾದಿತರಾದ ಪಕ್ಷದಲ್ಲಿ ದೇಶೀಯರಂತೆಯೇ ಅವರೂ ವಿಚಾರಣೆಗೂ ಶಿಕ್ಷೆಗೂ ಒಳಗಾಗತಕ್ಕುದೆಂಬ ಒಂದು ವಿಧಿ (Ilbert Bill) ಯನ್ನು ಸ್ಥಾಪಿಸುವ ಯೋಚನೆಮಾಡಿದಾಗ ಬಂಗಾಳದಲ್ಲಿದ್ದ ಬಿಳಿಯ ಗುಂಪಿನವರು ಗುಲ್ಲೆಬ್ಬಿಸಿದರು. ಆ ವಿಧಿರಚನೆಯ ಪ್ರಯತ್ನವನ್ನು ಬಿಡಬೇಕಾಗಿ ಬಂತು. ಭಾರತೀಯ ನ್ಯಾಯಾಧಿಕಾರಿಗಳು ಎಷ್ಟು ಯೋಗ್ಯತೆಯುಳ್ಳವರಾದರೂ ಬಿಳಿಯರನ್ನು ದಂಡಿಸಲು ಅಯೋಗ್ಯರೆಂದೇ ಏರ್ಪಟ್ಟಿತು. ಈ ಸಂಭವದಿಂದ ಶಿಕ್ಷಿತ ಭಾರತೀಯರ ಖಿನ್ನತೆಯು ಇಮ್ಮಡಿಯಾಯಿತು. ಆದರೆ ಇದೇ ಸಮಯದಲ್ಲಿ ಅವರಲ್ಲಿ ಅನುಕಂಪವನ್ನು ತೋರಿ ಬಿಳಿಯವರಲ್ಲಿಯೇ ಲಿಬರಲ್ ಪಕ್ಷದವರಾಗಿದ್ದವರು ಮುಂದಿನ ಕರ್ತವ್ಯವನ್ನು ಸೂಚಿಸಿ ಬೆಂಬಲವನ್ನು ಕೊಟ್ಟರು. **ಹ್ಯೂಮ್, ಫಾಸೆಟ್, ವೆಡ್ಡರ್ಬರ್ನ್** ಮುಂತಾದವರು ಈ ರೀತಿಯಲ್ಲಿ ಭಾರತೀಯರ ಕೃತಜ್ಞತೆಗೆ ಪಾತ್ರರಾದರು. ಭಾರತೀಯರಲ್ಲಿ ಪಾಶ್ಚಾತ್ಯ ಶಿಕ್ಷಣವನ್ನು ಪಡೆದಿದ್ದವರಲ್ಲಿ ಕೆಲವರು ಅವರ ಸೂಚನೆಯನ್ನು ಅನುಸರಿಸಿ, ವಾರ್ಷಿಕ ಸಮ್ಮೇಳನವೊಂದನ್ನು ನಡೆಸಿ ಆಡಳಿತದಲ್ಲಿ ತಮಗೆ ಅವಶ್ಯವೆಂದು ತೋರಿದ ಅಂಶಗಳನ್ನು ಆಡಳಿತದವರ ಚಿತ್ತಕ್ಕೆ ನಿವೇದನಮಾಡಲು ಸಿದ್ಧರಾದರು. ಅವರಲ್ಲಿ ಕೆಲವರು 1884ರಲ್ಲಿ

ಮದರಾಸಿನಲ್ಲಿ ವಾರ್ಷಿಕ ಸಮ್ಮೇಳನದ ಯೋಚನೆಯನ್ನು ನಡೆಸಿ ಅದಕ್ಕೆ ಸನ್ನಾಹಪಟ್ಟರು.

ಅಖಿಲ ಭಾರತದ ಕಾಂಗ್ರೆಸ್

ಈ ರೀತಿಯಲ್ಲಿ 1885ರಲ್ಲಿ ಬೊಂಬಾಯಿ ಪಟ್ಟಣದಲ್ಲಿ 72 ಸಭಿಕರು ನೆರೆದು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಎಂಬ ಅಖಿಲ ಭಾರತ ರಾಷ್ಟ್ರೀಯ ಸಭೆಯನ್ನು ಆರಂಭಮಾಡಿದರು. **ಉಮೇಶಚಂದ್ರ ಬಾನರ್ಜಿ** ಯೆಂಬಾತನು ಅಧ್ಯಕ್ಷನಾಗಿ ಉತ್ತಮವಾದ ಭಾಷಣವನ್ನೊಪ್ಪಿಸಿದನು. 1886ರಲ್ಲಿ ಕಲ್ಕತ್ತೆಯಲ್ಲಿ **ದಾದಾಭಾಯಿ ನೌರೋಜಿಯ** ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ 500 ಸಭಿಕರಿಂದ ಕೂಡಿ ನಡೆಯಿತು. ಮೂರನೆಯ ಅಧಿವೇಶನವು ಮದರಾಸಿನಲ್ಲಿ **ಬದರುದ್ದೀನ್ ತಯ್ಯಬ್ಜಿ**ಯೆಂಬಾತನ ಅಧ್ಯಕ್ಷತೆಯಲ್ಲಿ ನಡೆದು ಆ ಪ್ರಾಂತದ ಭೋಗಪತಿಯಾಗಿದ್ದ ಲಾರ್ಡ್ ಕಾನಿಮಾರ ಎಂಬಾತನ ಸತ್ಕಾರವನ್ನೂ ಪಡೆಯಿತು. ಮುಂದಿನ ವರ್ಷ ಇಲಾಹಾಬಾದಿನಲ್ಲಿ ಕಾಂಗ್ರೆಸ್ ನೆರೆಯುವ ವೇಳೆಗೆ ಅಧಿಕಾರಸ್ಥರು ಕಾಂಗ್ರೆಸ್ಸಿನಲ್ಲಿ ಕರ್ತವ್ಯಪರರಾಗುವುದು ನ್ಯಾಯವಲ್ಲವೆಂದು ಯಥಾರೀತಿಯಲ್ಲಿಯೇ ಸರ್ಕಾರದವರು ತೀರ್ಮಾನಿಸಿದರು. ಕಾಂಗ್ರೆಸ್ ಎಂಬುದು ಶುದ್ಧವಾಗಿ ರಾಷ್ಟ್ರಸುಧಾರಣೆಗಾಗಿ ಪ್ರಯತ್ನಿಸತಕ್ಕ ಸಂಸ್ಥೆಯೇ ಆಗಿ ಪರಿಣಮಿಸಿತು. ಪ್ರತಿವರ್ಷವೂ ಮಾರ್ಗಶಿರ ಪುಷ್ಯ ಕಾಲದಲ್ಲಿ ಯಾವುದಾದರೂ ಒಂದು ಪಟ್ಟಣದಲ್ಲಿ ಸಭೆ ಸೇರಿ, ವರ್ಷದ ಆಡಳಿತದ ವಿಮರ್ಶೆಯನ್ನು ಜನತೆಯ ದೃಷ್ಟಿಯಿಂದ ನಡೆಸಿ ತಮಗೆ ಅವಶ್ಯವೆಂದು ತೋರಿದ ತಿದ್ದುಪಾಟುಗಳನ್ನು ನಡೆಸಬೇಕೆಂದು ಸರ್ಕಾರದವರಲ್ಲಿ ಕೇಳುತ್ತಿದ್ದರು. ಈ ರೀತಿ ಕಾಂಗ್ರೆಸ್ಸಿನ ವಿಮರ್ಶೆಗೊಳಗಾದ ವಿಷಯಗಳಲ್ಲಿ ಆಯುಧ ವಿಧಿಯ ಬದಲಾವಣೆ, ಶಿಕ್ಷಣದ ವಿಸ್ತಾರ, ನ್ಯಾಯಾಧಿಕಾರದ ಪ್ರತ್ಯೇಕತೆ, ಇಂಡಿಯಾ ಸಭೆಯ ತಿದ್ದುಪಡಿ, ಕಂದಾಯದ ಶಿಸ್ತಿನ ಸುಧಾರಣೆ, ಸುಶಿಕ್ಷಿತರಾದ ಭಾರತೀಯರಿಗೆ ಶ್ರೇಷ್ಠ ಉದ್ಯೋಗಪ್ರಾಪ್ತಿ, ಮುಂತಾದವುಗಳು ಮುಖ್ಯವಾಗಿದ್ದವು. ಆ ಕಾಲದ ಕಾಂಗ್ರೆಸ್ಸುಗಳಲ್ಲಿ **ಸುರೇಂದ್ರನಾಥ ಬಾನರ್ಜಿ, ಸರ್ ಫಿರೂಸ್ ಷಾ ಮಹೆತಾ, ಆನಂದಾಚಾರ್ಲು, ಸಯಾನಿ, ವಾಚಾ, ಶಂಕರನ್ ನಾಯರ್** ಮುಂತಾದವರು ಅಗ್ರಗಣ್ಯರಾಗಿದ್ದರು.

**ಬಾಲಗಂಗಾಧರ ತಿಲಕ**

1890ನೆ ಇಸವಿಯು ಕಳೆದ ತರುವಾಯ ಮಹಾರಾಷ್ಟ್ರ ಪ್ರಮುಖ ಬಾಲಗಂಗಾಧರ ತಿಲಕನೆಂಬಾತನು ರಾಷ್ಟ್ರರಂಗದಲ್ಲಿ ಪ್ರವೇಶಮಾಡಿದನು. ಅಂದಿನಿಂದ ರಾಷ್ಟ್ರೀಯ ಸುಧಾರಣೆಯ ಉದ್ಯಮದಲ್ಲಿ ನವಚೈತನ್ಯವು ತೋರಿಕೊಂಡಿತು. ತಿಲಕ, ಆಗರ್ಕರ್, ಆಪಟೆ ಮುಂತಾದವರು ಇತರರಂತೆ ಶಿಕ್ಷಣದ ಕಾರ್ಯವನ್ನೇ ಆರಂಭಿಸಿದ್ದರು. ಮಹಾರಾಷ್ಟ್ರದಲ್ಲಿ **ವಿಷ್ಣು ಶಾಸ್ತ್ರಿ ಚಿಪಲೂಣ್ಕರ್** ಎಂಬಾತನು 'ನಿಬಂಧಮಾಲಾ' ಎಂಬ ಪ್ರಕಟನೆಗಳಲ್ಲಿ ಅನೇಕಾನೇಕ ವಿಷಯಗಳನ್ನು ದೇಶಭಾಷೆಯಲ್ಲಿಯೇ ಸಮರ್ಥಿಸಿದ್ದನು; ಆತನ ಅನುಯಾಯಿಯಾಗಿಯೇ ತಿಲಕನು ಸ್ವಧರ್ಮನಿಷ್ಠನಾಗಿ ಕೆಲಕಾಲ ಅಧ್ಯಾಪಕನಾಗಿದ್ದು ತರುವಾಯ 'ಕೇಸರಿ' ಮತ್ತು 'ಮರಾಟಾ' ಪತ್ರಿಕೆಗಳಿಗೆ ಸಂಪಾದಕನಾದನು. ಸಮಾಜ ಸುಧಾರಣೆಯ ವಿಚಾರದಲ್ಲಿ ಪುಣೆಯಲ್ಲಿ **ರಾನಡೆ**ಯವರ ಗುಂಪಿಗೂ ಈತನ ಗುಂಪಿಗೂ ವಿರೋಧವು ಪ್ರಬಲವಾಗಿ ಲೇಗಿತು. ತಿಲಕನು ಸಂಸ್ಕೃತ ಭಾಷೆಯಲ್ಲಿ ಪಂಡಿತನಾಗಿದ್ದುದಲ್ಲದೆ ಆಚಾರನಿಷ್ಠನಾಗಿದ್ದು ಸಾಮಾನ್ಯ ಜನರ ಪ್ರೀತಿಗೆ ಪಾತ್ರನಾಗಿದ್ದನು. ಪಾಶ್ಚಾತ್ಯ ಶಿಕ್ಷಣ ಪಡೆದ ಇತರ ಭಾರತೀಯರು ವೇಷಭೂಷಗಳಲ್ಲಿಯೂ ಆಚಾರ ಸಂಪ್ರದಾಯಗಳಲ್ಲಿಯೂ ಪಾಶ್ಚಾತ್ಯರಂತೆಯೇ ಇದ್ದುದರಿಂದ ಸಾಮಾನ್ಯ ಜನರಿಗೆ ದೂರ ಬಂಧುಗಳಂತೆಯೇ ಇದ್ದರು. ಇದಲ್ಲದೆ ತಿಲಕನು ಆ ವೇಳೆಗೆ ಕಾರಾಗೃಹವಾಸವನ್ನು ಅನುಭವಿಸಿದ್ದನು. ಆತನು ಕಾಂಗ್ರೆಸ್ಸಿನಲ್ಲಿ ಪ್ರವೇಶಿಸಿದ ಸಮಯದಲ್ಲಿಯೇ ಬೊಂಬಾಯಿ ಪ್ರಾಂತದಲ್ಲಿ ಪ್ಲೇಗ್ ಜಾಡ್ಯವು ಪ್ರಬಲವಾಗಿ ಹರಡಿತು; ಕ್ಷಿಪ್ರತೆಯಿಂದ ಅದನ್ನು ಅಡಗಿಸುವ ಪ್ರಯತ್ನದಲ್ಲಿ ಸರ್ಕಾರದವರು ಸೈನ್ಯಾಧಿಕಾರಿಗಳನ್ನು ನಿಯಮಿಸಿದರು. ನಿವಾರಣಾ ವಿಧಾನವು ಜನರಿಗೆ ರುಚಿಸಲಿಲ್ಲ. ಹಲ ಕೆಲವರು ಉದ್ರಿಕ್ತರಾಗಿ ಹಿಂದು ಮುಂದು ಆಲೋಚನೆಮಾಡದೆ ರೋಷಾವೇಶದಿಂದ ಹತ್ಯಗಳನ್ನೇ ಮಾಡಿಬಿಟ್ಟರು. ರ್ಯಾಂಡ್ ಎಂಬ ಕಮಿಷನರೂ ಆತನ ಸಹಾಯಾಧಿಕಾರಿಯಾಗಿದ್ದ ಆಯರ್ಸ್ಟ್ ಎಂಬಾತನೂ ಅನ್ಯಾಯವಾಗಿ ದುರ್ಮರಣಕ್ಕೆ ತುತ್ತಾದರು. ಇವುಗಳನ್ನಡಗಿಸಲು ಬದ್ಧರಾದ ಸರ್ಕಾರದವರು ನಿಷ್ಠುರ ರೀತಿಯಲ್ಲಿ ವರ್ತಿಸಬೇಕಾಯಿತು. ತಿಲಕನು

ಅಪಾದಿತನಾಗಿ ಪುನಃ ಶಿಕ್ಷೆಯನ್ನು ಅನುಭವಿಸಬೇಕಾಯಿತು. 1897ರಲ್ಲಿ ಬೊಂಬಾಯಿ ಹೈಕೋರ್ಟಿನಲ್ಲಿ ವಿಚಾರಣೆಯು ನಡೆದು 18 ತಿಂಗಳ ಕಠಿಣ ಶಿಕ್ಷೆಗೆ ಗುರಿಯಾಗಿ ತಿಲಕನು ಯರವಾಡಾ ಸೆರೆಮನೆಯಲ್ಲಿ ಬಂಧಿಸಲ್ಪಟ್ಟನು.

ಪಕ್ಷ ವಿಪಕ್ಷಗಳು

ಕಾಂಗ್ರೆಸ್ಸಿನಲ್ಲಿ ನಾಯಕರಾಗಿದ್ದ ಫಿರೂಸ್ ಷಾ ಮಹೆತಾ, ಗೋಖಲೆ, ಬಾನರ್ಜಿ ಮುಂತಾದವರು ಈ ಸಂಗತಿಗಳನ್ನು ಕಂಡು ಹಾಹಾಕಾರಪಟ್ಟರು. ವಿಧಿವಿರುದ್ಧವಾಗಿ ಕಾಂಗ್ರೆಸ್ ನಡೆಯತಕ್ಕುದಲ್ಲವೆಂಬ ಅಂಶವನ್ನು ಸರ್ಕಾರದವರೆದುರಿನಲ್ಲಿ ಸ್ಥಾಪಿಸುವ ಭಾರವು ಅವರದಾಗಿತ್ತು. ಹತ್ಯಾಚಾರಗಳನ್ನು ಇವರೆಲ್ಲರೂ ಖಂಡಿಸಿದರು. ತಿಲಕನ ಮತ್ತು ಆತನ ಅನುಯಾಯಿಗಳ ಮಾತುಗಳನ್ನು ಒಪ್ಪದಾದರು. ಹೀಗಿದ್ದ ಸಮಯದಲ್ಲಿ **ಲಾರ್ಡ್ ಕರ್ಸನ್ನೆಂ**ಬಾತನು ಭೋಗಾಧಿಪತಿಯಾಗಿ ಅತಿದಕ್ಷತೆಯನ್ನು ತೋರಿ ಕೆಲವೇಳೆಗಳಲ್ಲಿ ದರ್ಪಿಷ್ಠನೆನಿಸಿದ್ದಲ್ಲದೆ ಆಡಳಿತದಲ್ಲಿ ಭಾರತೀಯರಿಗೆ ಅಹಿತವೆಂದು ತೋರಿದ ಕೆಲಸಕಾರ್ಯಗಳನ್ನು ನಡೆಸಿದನು. ಸ್ಥಳೀಯ ನಿರ್ವಾಹದ ವರಣವಿಚಾರದಲ್ಲಿ, ವಿಶ್ವವಿದ್ಯಾನಿಲಯಗಳ ವ್ಯವಸ್ಥೆಯಲ್ಲಿ, ಆತನು ನಡೆಸಿದ ತಿದ್ದುಪಾಟುಗಳು ಭಾರತೀಯರೆಲ್ಲರಿಗೂ ಅಯುಕ್ತವೆಂದು ತೋರಿದವು. ತರುವಾಯ ಆಡಳಿತದ ಸೌಲಭ್ಯಕ್ಕಾಗಿ ಬಂಗಾಳ ಪ್ರಾಂತವೆಂಬುದನ್ನು ಎರಡು ಭಾಗವಾಗಿ ರಚಿಸುವ ಪ್ರಯತ್ನವನ್ನು ಆತನು ಕೈಕೊಂಡಾಗ ಎಲ್ಲ ಭಾರತೀಯರೂ ತಮಗೆ ಅದು ಅನಿಷ್ಟವೆಂದು ಕಂಠೋಕ್ತವಾಗಿ ಹೇಳಿದರು. ಕರ್ಸನ್ ಇವರನ್ನು ಲೆಕ್ಕಿಸಲಿಲ್ಲ. ಆತನ ಅಲಕ್ಷ್ಯವು ನಿಮಿತ್ತವಾಗಿ ಪರಿಣಮಿಸಿ ಬಂಗಾಳ ಪ್ರಾಂತದಲ್ಲಿಯೂ ಆತುರತೆಯು ಕೆಲವರಲ್ಲಿ ಮೂಡಿತು. ಮಹಾರಾಷ್ಟ್ರದಲ್ಲಿ ತಿಲಕನಂತೆಯೇ ಬಂಗಾಳದಲ್ಲಿ **ಅಶ್ವಿನಿಕುಮಾರ ದತ್ತ, ಅರವಿಂದ ಘೋಷ** ಮುಂತಾದವರು ರಾಷ್ಟ್ರಾಭಿಮಾನವನ್ನು ಉಜ್ವಲರೀತಿಯಲ್ಲಿ ತೋರಿದರು. ಉದ್ರಿಕ್ತರಾಗಿ ಮತಿವೈಕಲ್ಯವನ್ನೇ ಪಡೆದ ಕೆಲವರು ಹತ್ಯಗಳನ್ನೂ ನಡೆಸಿಬಿಟ್ಟರು. ಒಟ್ಟು ಭಾರತೀಯರ ಇಷ್ಟವನ್ನು ಅಸಡ್ಡೆಮಾಡಿದುದಕ್ಕಾಗಿ ತಿಲಕ, ಅರವಿಂದ ಘೋಷ, ಲಾಲಾ ಲಜಪತರಾಯ ಮುಂತಾದವರು

**ಸ್ವದೇಶೀ** ಎಂಬ ಆಂದೋಲನವನ್ನು ಪ್ರಾರಂಭಿಸಿದರು. ಪರದೇಶೀ ಸಾಮಾನನ್ನು ಬಹಿಷ್ಕರಿಸಿ ಸ್ವದೇಶೀ ಕೈಗಾರಿಕೆಗಳನ್ನು ಸ್ಥಾಪಿಸುವುದೂ, ದೇಶೀಯವಾದ ಶಿಕ್ಷಣವನ್ನೊದಗಿಸುವ ಶಾಲೆಗಳನ್ನು ತೆರೆಯುವುದೂ ಇವರು ಕರ್ತವ್ಯಗಳನ್ನಾಗಿ ಎಣಿಸಿದರು. ಇವರ ಸ್ವದೇಶೀ ಎನ್ನುವುದು ರಾಜಕೀಯ ದೃಷ್ಟಿಯಿಂದಲೇ ಬೆಳೆದದ್ದು; ಆರ್ಥಿಕ ದೃಷ್ಟಿಯಿಂದಲ್ಲ. ಆರ್ಥಿಕ ರೀತಿಯಲ್ಲಿ ಪರದೇಶೀ ಬಹಿಷ್ಕಾರವೆನ್ನುವುದು ಅಸಾಧ್ಯವಾಗಿಯೇ ಇತ್ತು. ಮಹೆತಾ, ಬಾನರ್ಜಿ, ಗೋಖಲೆ ಮುಂತಾದವರು ನಿದಾನಸ್ಥರಾಗಿ ಈ ಅಸಾಧ್ಯತೆಯ ಅಂಶವನ್ನು ಬಿಚ್ಚಿಹೇಳಿದರು; ವೀರಪಕ್ಷದವರ ಆಗ್ರಹವನ್ನು ತಡೆಯಲು ಯತ್ನಿಸಿದರು. ಸರ್ಕಾರದವರ ವಿರೋಧವನ್ನು ಕಟ್ಟಿಕೊಳ್ಳುವುದು ಅನುಚಿತವೆಂದು ಮಹೆತಾ, ಗೋಖಲೆ ಮುಂತಾದವರು ತಾವು **ನಿದಾನಸ್ಥ** (Moderates) ರೆಂದು ಹೆಸರಿಟ್ಟುಕೊಂಡರು, ಇತರರನ್ನು ಅತ್ಯಾತುರರೆಂದು ಕರೆದರು.

ಕಾಂಗ್ರೆಸ್ಸಿನ ಪ್ರಾರಂಭದಲ್ಲಿ ಭಾರತೀಯರಿಗೆ ಬೆಂಬಲವನ್ನು ಕೊಟ್ಟ ಲಿಬರಲ್ ಪಕ್ಷದ ಬ್ರಿಟಿಷರು ನಿದಾನಸ್ಥರನ್ನು ಮೆಚ್ಚಿದರು. ಆಡಳಿತದಲ್ಲಿ ಹೆಚ್ಚು ಹೆಚ್ಚಾದ ಅಧಿಕಾರವು ಭಾರತೀಯರಿಗೆ ಲಭಿಸಬೇಕೆಂಬ ವಾದವನ್ನು ಲಿಬರಲ್ ಪಕ್ಷದವರು ಒಪ್ಪಿಕೊಂಡು, ವಿಧಿಬದ್ಧರಾಗಿಯೇ ಭಾರತೀಯರು ವರ್ತಿಸುತ್ತಿದ್ದ ಪಕ್ಷದಲ್ಲಿ ನ್ಯಾಯಪಕ್ಷಪಾತಿಗಳಾದ ಬ್ರಿಟಿಷ್ ಜನರು ಕಾಲಕ್ರಮದಲ್ಲಿ ಭಾರತೀಯರ ಇಷ್ಟಾರ್ಥವನ್ನು ಪೂರ್ತಿಗೊಳಿಸುವರೆಂದು ನಂಬಿ, ಅದೇ ನಂಬಿಗೆಯನ್ನೇ ಭಾರತೀಯರಲ್ಲಿಯೂ ಉಂಟುಮಾಡಲು ಪ್ರಯತ್ನಿಸಿದರು. ಬ್ರಿಟಿಷ್ ಜನರಲ್ಲಿ ಮುಖಂಡರಾದವರೆಲ್ಲರೂ ಭಾರತೀಯರು ಅಧಿಕಾರಯೋಗ್ಯರಲ್ಲವೆಂದು ಪ್ರಾಯಕವಾಗಿ ವಾದಿಸುತ್ತಿದ್ದರು. ಭಾರತೀಯರು ಸದ್ಯದಲ್ಲಿ ಅಯೋಗ್ಯರಾಗಿದ್ದಾಗ್ಯೂ ಅಧಿಕಾರಪ್ರಾಪ್ತಿಯಿಂದಲೇ ಯೋಗ್ಯತೆಯನ್ನು ಪಡೆಯತಕ್ಕವರೆಂದು **ಗೋಖಲೆ** ಮುಂತಾದವರು ಸಮಾಧಾನ ಹೇಳುತ್ತಲಿದ್ದರು. ಕರ್ಸನ್ ತರುವಾಯ ಭೋಗಾಧಿಪತಿಯಾದ **ಲಾರ್ಡ್ ಮಿಂಟೋ** ಮತ್ತು ಭಾರತೀಯ ಕಾರ್ಯದರ್ಶಿಯಾದ **ಲಾರ್ಡ್ ಮಾರ್ಲೆ** ಎಂಬಿಬ್ಬರೂ ಭಾರತೀಯರನ್ನು ಎಷ್ಟು ಮಾತ್ರ ಆಡಳಿತದಲ್ಲಿ ಸೇರಿಸಿಕೊಳ್ಳಬಹುದೆಂಬ ಯೋಚನೆಯನ್ನು

ತಮ್ಮಲ್ಲಿಯೇ ನಡೆಸುತ್ತಿದ್ದರು. ನಿದಾನಸ್ಥ ಪಕ್ಷದವರು ಈ ಸಂದರ್ಭವನ್ನು ಕಂಡುಕೊಂಡು ಸಾಧ್ಯವಾದಷ್ಟು ಅಧಿಕಾರ ಪ್ರಾಪ್ತಿಯನ್ನೂ ಪ್ರತಿನಿಧಿ ನಿಯೋಗವನ್ನೂ ಪಡೆಯುವ ಸಂಧಾನವನ್ನು ನಡೆಸುವ ಯೋಚನೆಯಲ್ಲಿದ್ದರು.

**ಸೂರತ್ ಕಾಂಗ್ರೆಸ್**

ಭಾರತೀಯರಲ್ಲಿ ಯೋಗ್ಯತೆಯಿಲ್ಲವೆಂಬ ವಾದವನ್ನು ಕೇಳಿದಾಗ ವೀರಪಕ್ಷದವರು ಆಗ್ರಹವನ್ನೇ ತೋರುತ್ತಿದ್ದರು. ತಿಲಕನೇ ಆ ಪಕ್ಷಕ್ಕೆ ಮುಂದಾಳಾಗಿದ್ದು ಸ್ವರಾಜ್ಯವು ಜನ್ಮಸಿದ್ಧ ಹಕ್ಕೆಂದೂ ಯೋಗ್ಯತಾಯೋಗ್ಯತೆಗಳ ವಿಚಾರವು ಅನವಶ್ಯವೆಂದೂ ಸೂಚಿಸಿಬಿಟ್ಟನು. ಈ ಪಕ್ಷದವರ ಪ್ರಾಬಲ್ಯವು ಹೆಚ್ಚುತ್ತಿತ್ತು. 1905ರ ವೇಳೆಗೆ ಪರದೇಶೀ ಸಾಮಾನು ಬಹಿಷ್ಕಾರ, ಸ್ವದೇಶೀ ಮತ್ತು ದೇಶೀಯ ಶಿಕ್ಷಣಗಳಲ್ಲಿ ಇವರು ಕರ್ತವ್ಯನಿರತರಾಗಿದ್ದರು. 1906ರಲ್ಲಿ ಎರಡು ಪಕ್ಷಗಳ ವಿರೋಧವು ಒಡಕಾಗಿ ಪರಿಣಮಿಸದಂತೆ ಸಂಧಾನ ನಡೆದು ವೃದ್ಧ ಪಿತಾಮಹ ದಾದಾಭಾಯಿ ನೌರೋಜಿಯೇ ಅಧ್ಯಕ್ಷನಾದನು; ಆದರೆ ಆತನು ಯಾವ ಪಕ್ಷದಲ್ಲಿಯೂ ಹೆಚ್ಚು ಪಕ್ಷಪಾತವನ್ನು ತೋರದೆ ಕಾಂಗ್ರೆಸ್ಸಿನ ಲಕ್ಷ್ಯವು ಸ್ವರಾಜ್ಯ ಸಾಧನೆಯೆಂದು ಕಂಠೋಕ್ತವಾಗಿ ಹೇಳಿಬಿಟ್ಟನು. ವೀರಪಕ್ಷದವರು ಕರ್ತವ್ಯವೆಂದು ನಿರ್ಧರಿಸಿದ್ದ ಅಂಶಗಳಿಗೆ ಕಾಂಗ್ರೆಸ್ಸಿನ ಬೆಂಬಲವೂ ದೊರಕಿತು. ಹೀಗಾದುದು ಅತಿಯಾಯಿತೆಂದು ನಿದಾನಸ್ಥರು ಚಿಂತೆಗೊಳಗಾದರು. ಮುಂದಿನ ವರ್ಷ ಕಾಂಗ್ರೆಸ್ ಸಭೆಯು ಸೂರತ್ ನಗರದಲ್ಲಿ ನೆರೆಯಬೇಕಾಗಿತ್ತು; **ರಸವಿಹಾರಿ ಘೋಷ**ನೆಂಬ ಪ್ರಸಿದ್ಧ ವಕೀಲನನ್ನು ಅಧ್ಯಕ್ಷನಾಗಿ ನಿದಾನಸ್ಥ ಪಕ್ಷದವರೇ ಏರ್ಪಡಿಸಿದರು. ಹಿಂದಿನ ಹೆಜ್ಜೆ ಹಾಕಿಯಾರೆಂಬ ಶಂಕೆಯು ವೀರಪಕ್ಷದವರಿಗೆ ಬಲವಾಗಿ ತೋರಿ ಕಾಂಗ್ರೆಸ್ ಮೊದಲಾಗುವ ಸಮಯದಲ್ಲಿಯೇ ಎರಡು ಪಕ್ಷಗಳಿಗೂ ವೈಷಮ್ಯವೇರಿತು. ವೀರಪಕ್ಷದವರ ಪರವಾಗಿ ತಿಲಕನು ಮುಂದಾಳಾಗಿ ಹಿಂದಿನ ವರ್ಷದ ನಿರ್ಣಯಗಳನ್ನು ಬದಲಾಯಿಸಲು ಪ್ರಯತ್ನ ನಡೆಯುವುದಿಲ್ಲವೆಂಬ ಭರವಸೆಯನ್ನು ಬೇಡಿ, ಆ ಭರವಸೆಯು ಬಾರದಿರಲು ಅಧ್ಯಕ್ಷರ ವರಣವನ್ನು ವಿರೋಧಿಸಲು ನಿಶ್ಚಯಮಾಡಿ

ಕೊಂಡು ವೇದಿಕೆಯನ್ನು ಹತ್ತಿದನು. ಆಗಲೇ ಗಲಾಟೆಗೆ ಪ್ರಾರಂಭವಾಗಿ ಸಭೆಯು ಭಂಗವಾಯಿತು. ಆ ವರ್ಷದ ಕಾಂಗ್ರೆಸ್ ನಡೆಯಲೇ ಇಲ್ಲ.

ಸರ್ಕಾರದವರು ವೀರಪಕ್ಷದವರನ್ನು ಶಿಕ್ಷೆಗೆ ಗುರಿಮಾಡುವ ಸಂದರ್ಭ ವೊದಗಿತು. ಹತ್ಯಾಚಾರವನ್ನೇ ಹಿಡಿದಿದ್ದ ಉನ್ಮತ್ತರ ಪಿತೂರಿಗಳು ವಂಗ ವಿಭಜನೆಯಾದ ತರುವಾಯ ಪ್ರಬಲವಾದವು; ಭೋಗಾಧಿಪತಿಗೇ ಕ್ಷೇಮ ವಿರಲಿಲ್ಲ. ಸರ್ಕಾರದವರು ಆ ಪಿತೂರಿಗಳನ್ನು ನಿಷ್ಠುರ ರೀತಿಯಿಂದ ಅಡಗಿಸಿ, ಅವುಗಳಿಗೆ ವೀರಪಕ್ಷದವರು ಬೆಂಬಲವನ್ನು ಕೊಡುತ್ತಿದ್ದರೆಂದು ಭಾವಿಸಿ ವೀರಪಕ್ಷದವರ ಮುಖಂಡರಾಗಿದ್ದ **ತಿಲಕ, ಲಾಲಾಜಿ, ಅರವಿಂದ ಘೋಷ** ಮುಂತಾದವರನ್ನು ರಾಷ್ಟ್ರದ್ರೋಹದ ಅಪರಾಧಕ್ಕೆ ಗುರಿಮಾಡಿ ವಿಚಾರಣೆಮಾಡಿಸಿದರು. ದೀರ್ಘಕಾಲದ ಶಿಕ್ಷೆಯೇ ಆ ಮುಖಂಡರಿಗೆ ವಿಧಿತವಾಯಿತು. 1908ರಿಂದ ವೀರಪಕ್ಷದವರು ದುರ್ಬಲರಾದರು. ವಾಸ್ತವವಾಗಿ ಅವರ ಕರ್ತವ್ಯರಾಶಿಯನ್ನು ಪರೀಕ್ಷಿಸಿದಲ್ಲಿ ಹಟವೇ ಅವರಲ್ಲಿ ಹೆಚ್ಚಾಗಿ ಕಾಣುವುದು. ಆರ್ಥಿಕ ಸ್ಥಿತಿಗತಿಗಳ ಪರೀಕ್ಷೆಯನ್ನು ಸಾಕಾದಷ್ಟು ನಡೆಸದೆ ಪರದೇಶಿ ಸರಕಿನ ಬಹಿಷ್ಕಾರ ಸ್ವದೇಶೀಗಳಿಗೆ ಮೊದಲಿಟ್ಟಿದ್ದರು; ಅವು ದೀರ್ಘ ವಿಚಾರಕ್ಕೊಳಗಾಗಿರಲೂ ಇಲ್ಲ, ಯೋಚಿಸಿದಂತೆ ಸಾಧ್ಯ ವಾದುದೂ ಆಗಿರಲಿಲ್ಲ. ದೇಶಭಕ್ತಿಯು ಮಾತ್ರ ಉಜ್ವಲವಾಗಿತ್ತು. ದೇಶಕ್ಕಾಗಿ ದುಃಖಿಗಳನ್ನು ಅನುಭವಿಸಲು ಅವರು ಸಿದ್ಧರಾಗಿದ್ದು ಕಾರಾಗೃಹವಾಸವನ್ನು ಕಟ್ಟಿಕೊಂಡರು. ಇವರು ದಂಡನೆಗೊಳಗಾದ ವೇಳೆ ಯಲ್ಲಿಯೇ ಗೋಖಲೆ ಮುಂತಾದವರ ಸನ್ನಾಹವು ಫಲಿಸಿ ಮಿಂಟೋ ಮಾರ್ಲೆ ಸುಧಾರಣೆಗಳೆಂಬವು 1909ರಲ್ಲಿ ಸಿದ್ಧವಾದವು.

ಮುಸ್ಲಿಂ ಲೀಗ್

ಮುಸಲ್ಮಾನ ಜನರಲ್ಲಿ ಬಹು ಭಾಗದವರು ಅಶಿಕ್ಷಿತರಾಗಿಯೇ ಇದ್ದವರು. ಸುಶಿಕ್ಷಿತರಾಗಿದ್ದವರಲ್ಲಿ ಕೆಲವರು ಹಿಂದೂ ಜನರೊಡನೆ ಸೇರಿ ಕಾಂಗ್ರೆಸ್ಸಿನಲ್ಲಿ ಸಹೋದ್ಯೋಗಿಗಳಾಗಿದ್ದರು. ಆದರೆ ಅವರಲ್ಲಿ ಕೆಲವರಿಗೆ ಶಿಕ್ಷಣವಿಸ್ತಾರವೇ ಅತಿಮುಖ್ಯವೆಂದು ತೋರಿತು. **ಸರ್ ಸಯ್ಯಿದ್ ಅಹಮ್ಮದ್** ಎಂಬ ಅವರ ಮುಖಂಡನು ಶಿಕ್ಷಣಕ್ಕೇ ಹೆಚ್ಚು ಗಮನಕೊಟ್ಟು ಆಲಿಘಡದಲ್ಲಿ ಒಂದು ವಿದ್ಯಾನಿಲಯವನ್ನು ಸ್ಥಾಪಿಸಿದ್ದನು;

ಅದೇ ಈಗ ಆಲಿಘಡದ ವಿಶ್ವವಿದ್ಯಾಪೀಠವಾಗಿದೆ. ಮಿಂಟೋ ಮಾರ್ಲೆ ಸುಧಾರಣೆಗಳು ತೋರುವ ಸಮಯದಲ್ಲಿ ಮುಸಲ್ಮಾನರು ತಾವು ಬಲಹೀನ ರೆಂದೂ ತಮ್ಮ ವೈಶಿಷ್ಟ್ಯವನ್ನು ಕಾಪಾಡಲು ಪ್ರತ್ಯೇಕವಾದ ಪ್ರಯತ್ನ ವನ್ನೇ ನಡೆಸಬೇಕೆಂದೂ ಚಿಂತಿಸಿ, 1906ರಲ್ಲಿ ಮುಸ್ಲಿಂ ಲೀಗೆಂಬ ಸಂಸ್ಥೆಯನ್ನು ಸ್ಥಾಪಿಸಿಕೊಂಡರು. 1913ರ ವರೆಗೆ ಈ ಸಂಸ್ಥೆಯು ರಾಜಕೀಯ ರಂಗದಲ್ಲಿ ವಿಶೇಷವಾಗಿ ಪ್ರವೇಶವನ್ನು ಮಾಡಲಿಲ್ಲ- ಸಾಮಾಜಿಕ ಅಭಿವೃದ್ಧಿಗಾಗಿಯೇ ಕೆಲಸಮಾಡುತ್ತಿತ್ತು.

ಗೋಖಲೆ

ಸುಧಾರಣೆಗಳು ಆಚರಣೆಯಲ್ಲಿ ಸಿದ್ಧವಾದ ತರುವಾಯ ಲಭಿಸಿದ ಅವಕಾಶದಲ್ಲಿ ಭಾರತೀಯರು ತಮ್ಮ ಯೋಗ್ಯತೆ ಯನ್ನು ತೋರಬೇಕೆಂದು ಗೋಖಲೆ ಮುಂತಾದ ವರು ಬಯಸಿದರು. ಶಾಸಕ ಸಭೆಗಳಲ್ಲಿ ಪ್ರವೇಶ ಮಾಡಿ, ದೇಶಹಿತಸಾಧಕವಾದ ವಿಷಯಗಳಲ್ಲಿ ಯೋಗ್ಯ ರೀತಿಯಿಂದ ವಾದಮಾಡಿ ಆಡಳಿತದ ಸೂಕ್ಷ್ಮಗಳನ್ನು ವಿಚಕ್ಷಣೆಯಿಂದ ಸಮರ್ಥಿಸುವ ಕಾಲವೊದಗಿತೆಂದು ಗೋಖಲೆ **ಭಾರತ ಸೇವಾ ಸಂಘ**ವೆಂಬುದನ್ನು ಸ್ಥಾಪಿಸಿದನು. ಅಲ್ಲಿಗೆ ಬುದ್ಧಿವಂತರೂ ಸದ್ಗುಣಿಗಳೂ ಸೇರಿ ವ್ರತಬದ್ಧರಾಗಿ ಬಡತನದಿಂದಲೇ ವರ್ತಿಸುತ್ತ ಆಡಳಿತದ ಅಂಶಗಳ ವಿಚಾರವನ್ನು ಯೋಗ್ಯ ರೀತಿಯಿಂದ ಕೂಲಂಕಷವಾಗಿ ತಿಳಿದು ಅಧಿಕಾರಸ್ಥರೊಡನೆ ಸರಿದೂಗುವಂತೆ ವಾದಿಸುವ ಸಾಮರ್ಥ್ಯವನ್ನು ಸಂಪಾದಿಸತಕ್ಕುದೆಂದೂ, ಸಮಯವೊದಗಿ ದಂತೆ ಸಮಾಜ ಸೇವೆಯನ್ನು ನಡೆಸಬೇಕೆಂದೂ ಆತನು ನಿಯಮಗಳನ್ನು ರಚಿಸಿ ತಾನೇ ಆ ಸಂಸ್ಥೆಯ ಸದಸ್ಯರಲ್ಲಿ ಅಗ್ರಗಣ್ಯನಾದನು. ಇದೇ ಹೆಸರು ವಾಸಿಯಾದ ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿಯೆಂಬುದು. ಶಾಸಕ ಸಭೆಗೆ ಪ್ರವೇಶಮಾಡಿದ ಈತನು ಅಸಾಧಾರಣವಾದ ಮೇಧಾಶಕ್ತಿಯನ್ನು ತೋರಿ ಅಧಿಕಾರ ವರ್ಗದವರನ್ನೂ ಬ್ರಿಟಿಷರನ್ನೂ ಮೆಚ್ಚಿಸಿದನು. ಪಾರ್ಲಿಮೆಂಟರಿ ಪದ್ಧತಿ ಸಂಪ್ರದಾಯಗಳನ್ನು ಉತ್ತಮ ರೀತಿಯಿಂದ ಪಾಲಿಸಿ, ಅವಕಾಶವಿದ್ದಲ್ಲಿ ಭಾರತೀಯರು ಪಾರ್ಲಿಮೆಂಟರಿ ಪದ್ಧತಿಗಳನ್ನು ಆಚರಿಸುವುದರಲ್ಲಿ ಯಾರಿಗೂ ಹಿಂದೆ ಬೀಳತಕ್ಕವರಲ್ಲವೆಂಬುದನ್ನು ಪ್ರತ್ಯಕ್ಷ ಗೊಳಿಸಿದನು. ಲಾರ್ಡ್ ಮಿಂಟೋ ತರುವಾಯ ಭೋಗಾಧಿಪತಿಯಾದ

**ಲಾರ್ಡ್ ಹಾರ್ಡಿಂಜ್** ಮೊದಲಾಗಿ ಎಲ್ಲರೂ ಗೋಖಲೆಯವರ ಗುಣ ಸಾಮರ್ಥ್ಯಗಳನ್ನು ಶ್ಲಾಘಿಸಿ ಗೌರವಿಸಿದರು.

ಹೊರಗಿನ ಭಾರತೀಯರು

ಈ ಮಧ್ಯೆ ಸ್ವದೇಶದ ಹೊರಗಿದ್ದ ಭಾರತೀಯರ ಸುಖದುಃಖಗಳ ವಿಚಾರವು ಪ್ರಬಲವಾಗುತ್ತಿತ್ತು. ದಕ್ಷಿಣ ಆಫ್ರಿಕದಲ್ಲಿ ಕರಾರಿನಂತೆ ಹೋಗಿ ನೆಲೆಸಿದ್ದ ಭಾರತೀಯರಿಗೆ ಕರಾರು ಕಾಲ ಕಳೆಯುವುದೇ ಪ್ರಯಾಸವಾಗಿತ್ತು; ಆ ಕಾಲ ಕಳೆದ ತರುವಾಯ ಚಿಲ್ಲರೆ ಅಂಗಡಿಗಳನ್ನು ತೆರೆದುಕೊಂಡು ವ್ಯಾಪಾರವನ್ನು ಮಾಡಲು ಬಯಸಿದವರಿಗೂ ನೆಲೆಮಾಡುವ ಅಪೇಕ್ಷೆಯಿದ್ದವರಿಗೂ ನಾನಾ ಅಡ್ಡಿಗಳನ್ನು ಅಲ್ಲಿಯ ಸರ್ಕಾರದವರು ಒಡ್ಡಿದರು. ಔದ್ಯೋಗಿಕ ಕ್ಷೇತ್ರದಲ್ಲಿ ಭಾರತೀಯರು ತಮ್ಮೊಡನೆ ಸ್ಪರ್ಧಿಸಿದ್ದೇ ಆದರೆ ತಮ್ಮ ಸರ್ವನಾಶವಾಗುವುದೆಂದು ಅಲ್ಲಿಯ ಬಿಳಿಯರು ಚಿಂತಿಸಿ ಭಾರತೀಯರು ಭಾಗ್ಯವಂತರಾಗದಿರುವಂತೆ ನೆರವೇರಿಸಲು ಅನೇಕಾನೇಕ ನಿಬಂಧನೆಗಳನ್ನೂ ತೆರಿಗೆಗಳನ್ನೂ ವಿಧಿಸಿದರು. ವರ್ಣಭೇದದ ಸಮಸ್ಯೆಯು ಪ್ರಬಲವಾಗಿ ತೋರಿಕೊಂಡು, ಸುಶಿಕ್ಷಿತನಾಗಿ ಯೋಗ್ಯನಾಗಿದ್ದರೂ ಭಾರತೀಯನು ಎಲ್ಲೆಲ್ಲಿಯೂ ಅವಮಾನಕ್ಕೂ ತಿರಸ್ಕಾರಕ್ಕೂ ಪಾತ್ರನಾಗಬೇಕಾಗಿತ್ತು. ಕೆಲವು ಕ್ಷೇತ್ರಗಳಲ್ಲಿ ಭಾರತೀಯರಿಗೆ ಪ್ರವೇಶವೇ ಇಲ್ಲವಾಯಿತು; ನ್ಯಾಯಸ್ಥಾನಗಳಲ್ಲಿ ನ್ಯಾಯ ದೊರಕದಾಯಿತು; ಪೌರ ಪದವಿಯೇ ಇಲ್ಲದಾಯಿತು. ಇವುಗಳಲ್ಲದೆ ತಲೆತೆರಿಗೆಯೂ ನಿರ್ಮಿತವಾಯಿತು. ವಕೀಲೀ ಮಾಡಲು ಅಲ್ಲಿಗೆ 1893ರಲ್ಲಿ ಹೊರಟಿದ್ದ **ಗಾಂಧೀಜಿ**ಯವರು ಅಲ್ಲಿಯ ಸ್ಥಿತಿಗತಿಗಳನ್ನು ಕಂಡು ಸ್ವಂತವಾಗಿ ಅನುಭವಿಸಿ, ಭಾರತೀಯರ ಪರವಾಗಿ ವಾದ ವಿವಾದಗಳನ್ನು ನಡೆಸಿದ್ದಲ್ಲದೆ ಅವರೆಲ್ಲರಿಗೂ ಸಂಘಬಲವನ್ನುಂಟುಮಾಡಿ ಯೂನಿಯನ್ ಸರ್ಕಾರದೊಂದಿಗೆ ವ್ಯವಹರಿಸುತ್ತ ನ್ಯಾಯಸ್ಥಾಪನೆಗಾಗಿ ಸೋಜಿಗವಾದ ರೀತಿಯಲ್ಲಿ ಕೃತಕೃತ್ಯರಾಗುತ್ತಿದ್ದರು. ದುರ್ಬಲರೂ ಅಸಹಾಯರೂ ಆದ ಭಾರತೀಯರಿಗಾಗಿ ನಡೆದ ಆತನ ಕಾರ್ಯವಿವರವನ್ನು ಬೇರೆಡೆಯಲ್ಲಿ ಅವಶ್ಯವಾಗಿ ಕಾಣಬೇಕು. 1908ರ ತರುವಾಯ ಕಾಂಗ್ರೆಸ್ಸನ್ನು ನಡೆಸುತ್ತಿದ್ದ ಗೋಖಲೆ ಮುಂತಾದವರು ಗಾಂಧೀಜಿಯವರನ್ನು ಕಂಡು ಆತನ ಸಾಹಸದ

ರೀತಿಯನ್ನು ಕೇಳಿ ಪರಮಾಶ್ಚರ್ಯಪಟ್ಟರು. ಶಾಸಕ ಸಭೆಯಲ್ಲಿಯೂ ಸಭೆಯ ಹೊರಗಡೆಯೂ ಗೋಖಲೆ ಈ ವಿಷಯವನ್ನು ಪ್ರಸ್ತಾಪಿಸಿ, ಗಾಂಧೀಜಿಗೆ ಸಹಾಯನಾಗಿ ತಾನೇ ದಕ್ಷಿಣ ಆಫ್ರಿಕಕ್ಕೆ ಹೋಗಿ ಬಂದು ಸ್ಥಿತಿಗತಿಗಳನ್ನು ವಿವರಿಸಿದನು. ಅತ್ತ ಗಾಂಧೀಜಿ ಸತ್ಯಾಗ್ರಹವನ್ನು ಆ ಕ್ಷೇತ್ರದಲ್ಲಿ ನಡೆಸುತ್ತ 1914ರಲ್ಲಿ ಅಲ್ಲಿಯ ಪ್ರಧಾನ ಮಂತ್ರಿ **ಸ್ಮಟ್ಸ್** ಎಂಬಾತನೊಡನೆ ಕರಾರನ್ನು ನಡೆಸಿ ಸ್ವದೇಶಕ್ಕೆ ಹಿಂತಿರುಗಿದರು. ದಕ್ಷಿಣ ಆಫ್ರಿಕದಲ್ಲಿ ಆತನು ನಡೆಸಿದ ಶಾಂತಯುದ್ಧದ ವಿವರವು ಜಗತ್ತಿಗೇ ಹೊಸದಾಯಿತು. ಗಾಂಧೀಜಿಯವರು ವಿಚಿತ್ರ ಮತ್ತು ಅದ್ಭುತ ವ್ಯಕ್ತಿಯಾಗಿ ತೋರಿಕೊಂಡರು. ಗೋಖಲೆಯ ಒತ್ತಾಯದಿಂದ ಇಲ್ಲಿಯೂ ಇಂಡೆಂಚರ್ ಎಂಬ ಕೂಲಿಜನರ ಕರಾರಿನ ಅನ್ಯಾಯವು ನಿಲ್ಲುವಂತಾಯಿತು.

ಬ್ರಿಟಿಷ್ ಸಾಮ್ರಾಜ್ಯದ ಇತರ ಕ್ಷೇತ್ರಗಳಲ್ಲಿಯೂ ಭಾರತೀಯರಿಗೆ ವಿರೋಧವು ಬ್ರಿಟಿಷರಿಂದಲೇ ತೋರಿತು. ಕೆನಡಾ ಡುಮಿನಿಯನ್ನಿನಲ್ಲಿ ನೆಲೆಸಬೇಕೆಂದು ಕೆಲವರು ಸಿಕ್ಖರು **ಗುರುದಿತ್ ಸಿಂಗೆಂ**ಬಾತನ ನಾಯಕತ್ವದಲ್ಲಿ ಒಂದು ಜಪಾನೀ ಹಡಗನ್ನು ಗೊತ್ತುಮಾಡಿಕೊಂಡು (ಕೊಮಗಟಮಾರು) ಹೊರಟು ಕೊಲಂಬಿಯ ಪ್ರದೇಶವನ್ನು ಸಮೀಪಿಸಿದಾಗ ಬಂದರು ಪ್ರವೇಶವೇ ಕಷ್ಟವಾಗಿ ಹಿಂತಿರುಗಿಬಂದು ದಂಡನೆಗೆ ಗುರಿಯಾದರು. ಇಂತಹ ಸಂಗತಿಗಳಿಂದ ಭಾರತೀಯರು ಉದ್ರೇಕಗೊಳ್ಳುತ್ತಿದ್ದರು. ಕಾಂಗ್ರೆಸ್ಸಿನಲ್ಲಿ ಮುಖಂಡರಾಗಿದ್ದ **ಗೋಖಲೆ, ಸುರೇಂದ್ರನಾಥ ಬಾನರ್ಜಿ, ಸರ್ ಸತ್ಯೇಂದ್ರ ಪ್ರಸನ್ನ ಸಿಂಹ** ಮುಂತಾದವರು ತಾಳ್ಮೆಯನ್ನು ವಹಿಸಿ, ಉತ್ತರೋತ್ತರ ಉತ್ತಮ ಸ್ಥಿತಿಯೊದಗುವುದೆಂದು ನಂಬಿದ್ದರು. ಹೀಗಿರುವಾಗಲೇ 1914ರಲ್ಲಿ ತಿಲಕನು ಬಿಡುಗಡೆಯಾಗಿ ಮಾಂಡಲೆಯಿಂದ ಹಿಂತಿರುಗಿ ಬಂದನು. ಗಾಂಧೀಜಿ ಸ್ವದೇಶದಲ್ಲಿಯೇ ನೆಲೆಸುವವರಾದರು. ಮತ್ತು ಇಂಗ್ಲಂಡಿಗೂ ಜರ್ಮನಿಗೂ ಘೋರಯುದ್ಧವು ಮೊದಲಾಯಿತು. 1915ರಲ್ಲಿ ಗೋಖಲೆ ಕಾಲಾಧೀನನಾದನು. ಆತನ ಸಾಹಸದಿಂದಲೇ ಭಾರತೀಯರಿಗೆ ಅಧಿಕಾರ ಯೋಗ್ಯತೆಯನ್ನು ನಿರ್ಣಯಿಸುವ ಪಬ್ಲಿಕ್ ಸರ್ವಿಸಸ್ ಕಮಿಷನ್ (ಇಸ್ಲಿಂಗ್ಟನ್ ಕಮಿಷನ್) ಎಂಬುದು ನಿರ್ಮಿತವಾಗಿ

ನಡೆಯುತ್ತಿತ್ತು. ತಿಲಕರಿಗೆ ವಿಶ್ರಾಂತಿ ಬೇಕಾಗಿತ್ತು. ಗಾಂಧೀಜಿಯವರು ಒಂದು ವರ್ಷ ಮೌನವನ್ನು ತಾಳಿದಂತೆಯೇ ಇದ್ದು ದೇಶದ ಸ್ಥಿತಿಗಳನ್ನು ಕಣ್ಣಾರೆ ಕಂಡು ತಿಳಿಯುತ್ತಿದ್ದರು. ವೃದ್ಧ ಪಿತಾಮಹ ದಾದಾಭಾಯಿಯು 1917ರಲ್ಲಿ ತೀರಿಹೋದನು.

ಘೋರಯುದ್ಧ ಕಾಲ

ಎಲ್ಲರ ದೃಷ್ಟಿಯೂ ಘೋರಯುದ್ಧದ ಸ್ಥಿತಿಗತಿಗಳಲ್ಲಿ ನಟ್ಟಿತು. ಇಂಗ್ಲಂಡಿಗೆ ಕಷ್ಟಕಾಲವೊದಗಿತು. ಆ ಸಮಯದಲ್ಲಿ ಭಾರತಭೂಮಿಯಲ್ಲಿ ತೊಂದರೆ ಕೊಡಬಾರದೆಂದು ಎಲ್ಲ ಪಕ್ಷದವರೂ ಒಪ್ಪಿದರು. ಇದಲ್ಲದೆ ಇಂಗ್ಲಂಡ್, ಫ್ರಾನ್ಸ್ ದೇಶಗಳು ಯುದ್ಧವನ್ನು ನಡೆಸುವುದು ನಾಗರಿಕತೆಯ ರಕ್ಷಣಾರ್ಥವಾಗಿಯೂ, ಜಗತ್ತಿನಲ್ಲಿ ಜನಸ್ವಾಮ್ಯವೂ ದೇಶ ವಿದೇಶಗಳ ಸ್ವಾತಂತ್ರ್ಯವೂ ಕ್ಷೇಮವಾಗಿರುವಂತೆ ನೆರವೇರುವುದಕ್ಕಾಗಿಯೂ ಆಗಿಯೇ ಎಂದು ಪ್ರಕಟಿಸಿದವು. ಆದ್ದರಿಂದ ಯುದ್ಧದಲ್ಲಿ ಸಹಾಯಮಾಡಲು ಭಾರತೀಯರು ಆತುರರಾದರು. ಆಪತ್ಕಾಲದಲ್ಲಿ ನೆರವಾದುದಕ್ಕೆ ಪ್ರತಿಫಲವಾಗಿ ಇಂಗ್ಲಿಷ್ ಜನರು ಭಾರತೀಯರ ಆಡಳಿತವನ್ನು ಭಾರತೀಯರಿಗೇ ಒಪ್ಪಿಸಿಬಿಟ್ಟಾರೆಂದು ನಿರೀಕ್ಷಿಸಿದರು. ಯುದ್ಧದಲ್ಲಿ ಸೈನಿಕರಾಗುವುದಕ್ಕೆ ಅನೇಕರು ಮುಂದಾದರು. ಜನಭಾಗದವರೂ ಸಂಸ್ಥಾನಾಧಿಪತಿಗಳೂ ವಿಶೇಷವಾದ ಧನಸಹಾಯವನ್ನೊದಗಿಸಿದರು. ಒಟ್ಟು 200 ಕೋಟಿಗಳಷ್ಟು ದ್ರವ್ಯವನ್ನು ಇಂಗ್ಲಂಡಿಗೆ ಭಾರತವರ್ಷವು ಉಚಿತವಾಗಿಯೇ ಒದಗಿಸಿತು. ಗಾಂಧೀಜಿಯವರೇ ಸ್ವತಃ ಹೊರಟು ಸೈನಿಕರನ್ನೂ ಹಣವನ್ನೂ ಒದಗಿಸಲು ಪ್ರಯತ್ನಪಟ್ಟರು. 1916ರಲ್ಲಿ **ಲಖನೌ** ನಗರದಲ್ಲಿ ಕಾಂಗ್ರೆಸ್ ನೆರೆದಾಗ ತಿಲಕ ಪಕ್ಷದವರು ಭಾಗಿಗಳಾದರು. ಯುದ್ಧ ಮುಗಿದ ತರುವಾಯ ಸ್ವರಾಜ್ಯ ಪ್ರಾಪ್ತಿಯು ಹೇಗಾದೀತೋ ಅದನ್ನು ಮೊದಲೇ ವಾಗ್ದಾನ ರೂಪದಲ್ಲಿ ಬ್ರಿಟಿಷರು ವ್ಯಕ್ತಪಡಿಸಬೇಕೆಂದು ಎಲ್ಲರೂ ಅಭಿಪ್ರಾಯಪಟ್ಟರು. 1916ರಲ್ಲಿ ಅದೇ ಲಖನೌ ಪಟ್ಟಣದಲ್ಲಿ ಸೇರಿದ ಮುಸ್ಲಿಂಲೀಗ್ ಸಭೆಯವರು ಕಾಂಗ್ರೆಸ್ಸಿನ ಧ್ಯೇಯಗಳನ್ನೊಪ್ಪಿಕೊಂಡು ಏಕೀಭವಿಸಲು ನಿಶ್ಚಯಮಾಡಿಕೊಂಡರು. ನಿದಾನಸ್ಥ ಪಕ್ಷದವರು ಆ ವರ್ಷದಿಂದ ತಾವೇ ಬೇರೆಯಾಗಿ ಲಿಬರಲ್ ಎಂಬ ಹೆಸರನ್ನು ತಾಳಿ ಬೇರೆ ಸಭೆಯನ್ನು ಏರ್ಪಡಿಸಿಕೊಂಡರು.

ಮದರಾಸಿನಲ್ಲಿ ನೆಲೆಸಿದ್ದ ಬ್ರಹ್ಮಜ್ಞಾನ ಸಮಾಜದಲ್ಲಿ ಮುಖ್ಯಳಾಗಿದ್ದ ಆನಿಬೆಸೆಂಟೆಂಬಾಕೆಯು ಇದೇ ಸಮಯದಲ್ಲಿಯೇ ರಾಜಕೀಯ ರಂಗದಲ್ಲಿ ಪ್ರವೇಶಿಸಿ ಹೋಂರೂಲ್ ಲೀಗೆಂಬ ಸಂಸ್ಥೆಯನ್ನು ಪ್ರಾರಂಭಿಸಿ ತಿಲಕರ

ಆನಿಬೆಸೆಂಟ್

ಬೆಂಬಲವನ್ನು ಪಡೆದಳು. ಈಕೆಯು ಬರೀ ಒಣ ನಿರೀಕ್ಷೆಯಿಂದಲೇ ಕಾರ್ಯವು ಕೈಗೂಡತಕ್ಕದ್ದಲ್ಲವೆಂದು ಹೇಳಿ, ಇಂಗ್ಲಂಡಿನಿಂದ ನಿರೀಕ್ಷ್ಯವಾದುದನ್ನು ಸ್ಪಷ್ಟವಾಗಿ ಪತ್ರರೂಪದಲ್ಲಿ ಸಿದ್ಧಗೊಳಿಸಬೇಕೆಂದು ಅಭಿಪ್ರಾಯಪಟ್ಟು, "ಕಾಮನ್ವೆಲ್ತ್ ಆಫ್ ಇಂಡಿಯ ಬಿಲ್" ಎಂಬ ಮಸೂದೆಯನ್ನು ಸಿದ್ಧಗೊಳಿಸಿದಳು. ಈಕೆಯ ಆಂದೋಲನವು ಮದರಾಸ್ ಪ್ರದೇಶದಲ್ಲಿ ಪ್ರಬಲವಾಗಿ ನಡೆಯಿತು. ಅಲ್ಲಿಯ ಅಧಿಕಾರಿವರ್ಗದವರು ಆಂದೋಲನವು ಮಿತಿಮೀರಿತೆಂದು ಭಾವಿಸಿ ಆಕೆಯನ್ನು ಕೆಲಕಾಲ ನಿರ್ಬಂಧದಲ್ಲಿಟ್ಟರು. ಬಿಡುಗಡೆಯಾದಮೇಲೆ ಆಕೆಗೇ 1917ನೆ ವರ್ಷದ ಕಾಂಗ್ರೆಸ್ಸಿನ ಅಧ್ಯಕ್ಷಪದವಿಯು ಸಂದಿತು. ಇಂಗ್ಲಂಡಿನಲ್ಲಿಯೂ ಮಂತ್ರಿವರ್ಗದವರು ಭಾರತೀಯ ಆಡಳಿತ ವಿಚಾರಕ್ಕೆ ಮನಸಕೊಟ್ಟರು; ಕಾರ್ಯದರ್ಶಿಯಾಗಿದ್ದ **ಮಾಂಟೆಗ್ಯೂ** ಎಂಬಾತನು ಕ್ರಮವಾಗಿ ಭಾರತೀಯರು ತಮ್ಮ ಆಡಳಿತವನ್ನು ತಾವೇ ನಿರ್ವಾಹ ಮಾಡಿಕೊಳ್ಳುವಂತೆ ಏರ್ಪಡಿಸುವುದು ಬ್ರಿಟಿಷರ ಗುರಿಯೆಂಬುದಾಗಿ **ಪಾರ್ಲಿಮೆಂಟಿನಲ್ಲಿ 1917ನೇ ಆಗಸ್ಟ್** ತಿಂಗಳಲ್ಲಿ ಪ್ರಕಟಿಸಿದನು. ಈ **ಪ್ರಕಟನೆ**ಯಿಂದ ಭಾರತೀಯರು ಸಮಾಧಾನಪಟ್ಟು ಯುದ್ಧ ಮುಗಿಯುವುದನ್ನೇ ಎದುರುನೋಡುತ್ತಿದ್ದರು. ಮಾಂಟೆಗ್ಯೂ ತಾನೇ ಭಾರತವರ್ಷದಲ್ಲಿ ಪ್ರಯಾಣಮಾಡಿ ಸ್ಥಿತಿಗತಿಗಳನ್ನು ಪರೀಕ್ಷಿಸಬೇಕೆಂದು ಇಂಗ್ಲಂಡಿನಿಂದ ಈ ದೇಶಕ್ಕೆ ಹೊರಟನು.

ಭಾರತೀಯರ ನಾಯಕರಲ್ಲಿ ತಿಲಕ–ಗಾಂಧೀಜಿಯವರು ಜನರ ಮೆಚ್ಚುಗೆಗೆ ಪಾತ್ರರಾದಂತೆ ಮತ್ತಾರೂ ಆಗಲಿಲ್ಲ. ತಿಲಕನ ಜೀವನವು ಸಂಪ್ರದಾಯಬದ್ಧವಾಗಿ ನಡೆಯುತ್ತಿದ್ದುದಲ್ಲದೆ ದೇಶಕ್ಕಾಗಿ ನಾನಾ ಕಷ್ಟ

ಗಾಂಧೀಜಿ

ಗಳನ್ನು ಆತನು ಅನುಭವಿಸಿದ್ದುದರಿಂದ ಜನರು ಆತನನ್ನು ಕಂಡಾಗ ಭಕ್ತಿಯನ್ನು ತೋರುತ್ತಿದ್ದರು. ಗಾಂಧೀಜಿಯವರು ಮೊದಲು ಬಂದಾಗ

ಗೋಖಲೆ ಆತನು ಅಸಾಧಾರಣ ಪುರುಷನೆಂದೂ ಜೇಡಿಮಣ್ಣಿನಲ್ಲಿ ಕೂಡ ಚೈತನ್ಯವನ್ನೂ ವೀರ್ಯದ ಉಸಿರನ್ನೂ ಉಂಟುಮಾಡತಕ್ಕಾತನೆಂದೂ ಹೇಳುತ್ತಿದ್ದನು ; ಪ್ರಹ್ಲಾದ, ಧ್ರುವ, ಹರಿಶ್ಚಂದ್ರರ ರಾಶಿಗೆ ಗಾಂಧೀಜಿಯವರು ಸೇರಿದವರೆಂದು ಇತರರು ವರ್ಣಿಸಿದರು. ಕಠಿನವಾದ ವ್ರತಗಳನ್ನು ಆಚರಿಸುತ್ತಿದ್ದರೂ ಅತಿಸರಳವೂ ಸುಲಭವೂ ಆದ ರೀತಿಯಲ್ಲಿ ಹಸುಳೆಯಂತೆ ವರ್ತಿಸುತ್ತಿದ್ದ ಗಾಂಧೀಜಿಯವರು ಅಹಮ್ಮದಾಬಾದ್ ಗಿರಣಿಯ ಮಾಲೀಕರಿಗೂ ಶ್ರಮಜೀವಿಗಳಿಗೂ ನ್ಯಾಯಮಾಡುವುದರಲ್ಲಿ, ಚಂಪಾರಣ್ಯದ ಬಡಜನರ ದುಸ್ಥಿತಿಯನ್ನು ಕೊನೆಗಾಣಿಸುವುದರಲ್ಲಿ, ಅಸ್ಪೃಶ್ಯತಾ ನಿವಾರಣೆಯಲ್ಲಿ ಮತ್ತು ರೈಲುಬಂಡಿಗಳಲ್ಲಿ ಪ್ರಯಾಣಮಾಡುವ ಸಾಮಾನ್ಯ ಜನರ ಅನುಕೂಲದ ವಿಷಯದಲ್ಲಿ ಕರ್ತವ್ಯನಿರತರಾಗಿರುತ್ತಿದ್ದರು. ಮಾಂಟೆಗ್ಯೂ ಬಂದ ಕಾಲದಲ್ಲಿ ಸ್ವರಾಜ್ಯಾಭಿಲಾಷೆಯು ಸರ್ವತ್ರ ಭರತವರ್ಷದಲ್ಲಿ ನೆಲೆಸಿರುವ ಸಂಗತಿಯನ್ನು ವಿಶದಪಡಿಸಬೇಕೆಂಬ ಯೋಚನೆಯು ಇವರದೇ ಆಗಿ ಮಾನ್ಸ್ಟರ್ ಪಿಟಿಷನ್ ಅಥವಾ ಸಮಸ್ತ ಜನರ ಅರ್ಜಿಯೆಂಬುದು ಸಿದ್ಧವಾಯಿತು. ಮಾಂಟೆಗ್ಯೂ ಮತ್ತು ಭೋಗಾಧಿಪತಿ ಚೆಲ್ಮ್ಸ್‌ಫರ್ಡ್ ಇಬ್ಬರೂ ಸಂಭಾಷಣೆಗಳನ್ನು ನಡೆಸಿದ ತರುವಾಯ ಮಾಂಟೆಗ್ಯೂ ಇಂಗ್ಲೆಂಡಿಗೆ ಹಿಂತಿರುಗಿದನು. ಯುದ್ಧವು ನಿಲ್ಲುವ ಸೂಚನೆಯೂ ಸಮೀಪವಾಗುತ್ತ ಬಂತು. ಶಾಸಕ ಸಭೆಯಲ್ಲಿದ್ದ ನಿದಾನಸ್ಥಪಕ್ಷದವರು ಮುಂದೆ ಹೇಗೆ ನಡೆಯತಕ್ಕದೆಂದು ವಿಚಾರಮಾಡಿ, 19 ಮಂದಿ ಸದಸ್ಯರು ಒಂದು ಟಿಪ್ಪಣಿಯನ್ನು ಸಿದ್ಧಗೊಳಿಸಿದರು. ಕಾಂಗ್ರೆಸ್ಸಿನವರೂ ಮುಸ್ಲಿಂ ಲೀಗಿನವರೂ ಒಟ್ಟುಗೂಡಿ

ಸುಧಾರಣೆಯ ಪ್ರಯತ್ನ

ಹೇಗಿರತಕ್ಕುದೆಂಬುದನ್ನು ತಮ್ಮ ತೋರಿಕೆಯೊಂದರಲ್ಲಿ ರೂಪಗೊಳಿಸಿದರು. ಅದೇ ವೇಳೆಯಲ್ಲಿಯೇ ಬ್ರಿಟಿಷ್ ಆಡಳಿತದವರು ಒಂದು ವರದಿಯನ್ನು ಪ್ರಕಟಗೊಳಿಸಿದ ಬಳಿಕ ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ತಕ್ಕ ಶಾಸನವು ರಚಿತವಾಗುವುದಕ್ಕೆ ಪೂರ್ವಭಾವಿಯಾಗಿ ಕಾಮನ್ಸ್ ಮತ್ತು ಲಾರ್ಡ್ಸ್ ಸಭೆಗಳೆರಡರಿಂದಲೂ ಆರಿಸಿದ ಸದಸ್ಯರುಳ್ಳ ಜಾಯಿಂಟ್ ಕಮಿಟಿಯೆಂಬುದು ಸಿದ್ಧವಾಯಿತು. ಆ ಸಭೆಯ ಆಲೋಚನಾ ಸಮಯದಲ್ಲಿ ತಮ್ಮ

ಇಷ್ಟಗಳನ್ನು ಇಂಗ್ಲಂಡಿನ ಜನರಿಗೆ ತಿಳಿಯಪಡಿಸಲು ಅನೇಕ ಮುಖಂಡರು ಹೊರಟರು. ಕಾಂಗ್ರೆಸ್ ಪರವಾಗಿ ತಿಲಕನೂ ಹೊರಟನು.

**ರೌಲತ್ ಮಸೂದೆಗಳು**

ಇದೇ ವೇಳೆಯಲ್ಲಿ ವಿಷಮಯವಾದ ಸಂಗತಿಗಳು ಕೆಲವು ದೇಶದಲ್ಲಿ ಸಂಭವಿಸಿದವು. ಯುದ್ಧವೇಳೆಯಲ್ಲಿ ರಾಷ್ಟ್ರ ರಕ್ಷಣೆಗಾಗಿ ಸರ್ಕಾರದವರು ಅಸಾಧಾರಣವಾದ ಅಧಿಕಾರಬಲವನ್ನು ಪ್ರಯೋಗಿಸಿ ವಾರಂಟಿಲ್ಲದೆ ದಸ್ತಗಿರಿಯನ್ನೂ, ವಿಚಾರಣೆಯಿಲ್ಲದೆ ಸೆರೆಯ ನಿರ್ಬಂಧವನ್ನೂ ಉಂಟು ಮಾಡುತ್ತಿದ್ದರು. ಅತ್ತ ಇಂಗ್ಲಂಡಿನಲ್ಲಿ ಸುಧಾರಣೆಯ ಸನ್ನಾಹಗಳು ನಡೆಯುತ್ತಿದ್ದಾಗಲೇ ಇಲ್ಲಿಯ ಸರ್ಕಾರದವರು ಕ್ರಾಂತಿಕಾರೀ ಪಕ್ಷದವರು ಪ್ರಬಲರಾಗುತ್ತಿರುವರೆಂದು ಅದರ ಪರೀಕ್ಷೆಯನ್ನು ನಡೆಸಿ ಉಚಿತ ಕರ್ತವ್ಯವನ್ನು ಸೂಚಿಸಲು ಒಂದು ಉಪಸಭೆಯನ್ನು ನಿರ್ಮಿಸಿದರು. ಅದೇ ಪ್ರಸಿದ್ಧವಾದ **ರೌಲತ್ ಸಭೆ.** ಯುದ್ಧ ಮುಗಿದ ಮೇಲೂ ಅಧಿಕಾರಿ ವರ್ಗದವರಿಗೆ ಅಸಾಧಾರಣವಾದ ಅಧಿಕಾರಬಲವಿರತಕ್ಕುದು ಅಯುಕ್ತವೆಂದೆನಿಸಿತ್ತು. ಈ ರೌಲತ್ ಸಭೆಯ ವರದಿಯು 1919ರಲ್ಲಿ ಪ್ರಕಟವಾಯಿತು; ಅಧಿಕಾರಿವರ್ಗದವರಿಗೆ ಅಸಾಧಾರಣವಾದ ಅಧಿಕಾರವೇ ಮುಂದೆಯೂ ಇರತಕ್ಕುದೆಂಬ ಸೂಚನೆಯು ಅದರಲ್ಲಿತ್ತು. ಸರ್ಕಾರದ ಪಕ್ಷದವರು ಅದನ್ನು ಸ್ವೀಕರಿಸಿ ಆಗಿನ ಶಾಸಕ ಸಭೆಯಲ್ಲಿ ಅದಕ್ಕನುಸಾರವಾಗಿ ಮಸೂದೆಯನ್ನು ರಚಿಸಿದರು. ಭಾರತೀಯರೆಲ್ಲರೂ ಅದನ್ನು ಏಕಕಂಠವಾಗಿ ಆಕ್ಷೇಪಿಸಿದರು. ಆದಾಗ್ಗೂ ಭಾರತೀಯರ ಆಕ್ಷೇಪಕ್ಕೆ ಲಕ್ಷ್ಯಕೊಡದೆ ಅಧಿಕಾರಿವರ್ಗದವರು ಮಸೂದೆಯನ್ನು ತಮ್ಮ ಸಂಖ್ಯಾಬಲದಿಂದ ಮುಂದರಿಸಿದರು. 1919ನೆ ಇಸವಿಯ ಫೆಬ್ರವರಿ ತಿಂಗಳಲ್ಲಿ ದೇಶದಲ್ಲೆಲ್ಲೆಲ್ಲಿಯೂ ಭಾರತೀಯರು ಸಭೆಗೂಡಿ ಮಸೂದೆಯನ್ನು ಖಂಡಿಸಿದರು. ಆದಾಗ್ಗೂ ಮಸೂದೆಯು ವಿಧಿರೂಪವನ್ನು ತಾಳಿತು. ಇದು ಗಾಂಧೀಜಿಯವರಿಗೆ ಅಸಹ್ಯವಾಗಿ ಮಾರ್ಚಿ 23ನೆ ದಿನ ಅವರು **ಸತ್ಯಾಗ್ರಹ ವ್ರತ**ವನ್ನು ಕೈಕೊಂಡರು. ಅನ್ಯಾಯವಾದ ವಿಧಿಯನ್ನು ಭಂಗಪಡಿಸತಕ್ಕದ್ದು ಕರ್ತವ್ಯವೆಂದು ಪ್ರಕಟಿಸಿದರು. ಏಪ್ರಿಲ್ 6ನೆ ದಿನ ಇದರ ಸ್ಮಾರಕವಾಗಿ, ಎಲ್ಲೆಲ್ಲಿಯೂ ಹರತಲನ್ನು ಆಚರಿಸತಕ್ಕುದೆಂದು ಅಭಿಪ್ರಾಯ

ಸೂಚಿಸಿದರು ; ಅದರಂತೆಯೇ ಎಲ್ಲ ಪಟ್ಟಣಗಳಲ್ಲಿಯೂ ಹರತಲ ನಡೆಯಿತು. ದಿಲ್ಲಿಯಲ್ಲಿಯೂ ಪಂಜಾಬಿನಲ್ಲಿಯೂ ಇದು ವಿಶೇಷವಾಗಿಯೇ ನಡೆದು ಅಲ್ಲಿಯ ಜನರು ಗಾಂಧೀಜಿಯವರನ್ನು ತಮ್ಮ ಸ್ಥಲಕ್ಕೆ ಕರೆದರು. ಬೊಂಬಾಯಿಯಿಂದ ಗಾಂಧೀಜಿಯವರು ಹೊರಡುವ ಸಮಯದಲ್ಲಿ ದಿಲ್ಲಿಯ ಅಧಿಕಾರಿಯೂ ಪಂಜಾಬಿನ ಭೋಗಪತಿಯೂ ಇಬ್ಬರೂ ತಮ್ಮ ಅಧಿಕಾರ ಕ್ಷೇತ್ರದಲ್ಲಿ ಗಾಂಧೀಜಿಯವರು ಕಾಲಿಡಲಾಗದೆಂದು ನಿಷೇಧಾಜ್ಞೆಗಳನ್ನು ಕೊಡಿಸಿದರು. ಅಕ್ರಮವಾದ ಆಜ್ಞೆಯನ್ನು ಶಾಂತರೀತಿಯಲ್ಲಿ ಉಲ್ಲಂಘಿಸಿ ಅದರ ಶಿಕ್ಷೆಯನ್ನು ಅನುಭವಿಸುವುದೇ ಸತ್ಯಾಗ್ರಹಿಯ ಕರ್ತವ್ಯವೆಂದು ಗಾಂಧೀಜಿಯವರು ಪ್ರಯಾಣವನ್ನು ನಿಲ್ಲಿಸದೆ ರೈಲು ಹತ್ತಿದರು. ದಿಲ್ಲಿಯ ಸಮೀಪಕ್ಕೆ ಬರುತ್ತಲೆ ಪೋಲೀಸ್ ಅಧಿಕಾರಿಗಳು ಗಾಂಧೀಜಿಯವರನ್ನು ಹಿಡಿದು ಬೊಂಬಾಯಿಗೆ ಪುನಃ ಪ್ರಯಾಣಮಾಡಿಸಿದರು. ಈ ಸಂಗತಿಯ ಪ್ರಭಾವವು ಹಿಂದೆ ನಡೆದ ಯಾವ ಸಂಗತಿಗೂ ಇಲ್ಲವೆನಿಸುವಂತೆ ತೋರಿತು. ಕಾಡ್ಗಿಚ್ಚಿನಂತೆ ಹರಡಿತು. ಬೇಗಬೇಗನೆ ಸಂಗತಿಗಳು ಘಟಿಸಿದವು.

ಪಂಜಾಬಿನ ಅತ್ಯಾಚಾರ

ಪಂಜಾಬಿನಲ್ಲಿ ಜನರು ನಾಲ್ಕೈದು ವರ್ಷಗಳಿಂದ ಹಿಂಸೆಗೊಳಗಾಗಿದ್ದರು. ಭೋಗಪತಿಯಾಗಿದ್ದ **ಸರ್ ಮೈಕೇಲ್ ಒಡ್ವಯರ್** ಎಂಬಾತನು ತನ್ನ ಪ್ರದೇಶದಿಂದ ಸೈನಿಕರೂ ಯುದ್ಧದ ಹಣವೂ ಹೆಚ್ಚಾಗಿ ಒದಗುವಂತೆ ನೆರವೇರಿಸಲು ಅಧಿಕಾರಸ್ಥರಿಗೆ ಆಜ್ಞೆಮಾಡಿದ್ದನು. ಅಧಿಕಾರಿಗಳಲ್ಲಿ ಅನೇಕರು ಆ ಆಜ್ಞೆಗಳನ್ನು ನಡೆಸುವುದರಲ್ಲಿ ತಮ್ಮ ಮಿತಿಯನ್ನು ಮೀರಿ ಸಾಮಾನ್ಯ ಜನರನ್ನು ಹಿಂಸೆಪಡಿಸಿದ್ದರು. ಪಂಜಾಬಿನಲ್ಲಿಯೂ ಸ್ವರಾಜ್ಯದ ಆಂದೋಲನವು ನಡೆಯುತ್ತಿತ್ತು. ರೌಲತ್ ಕಾನೂನು ಪ್ರಾರಂಭವಾದಾಗ ಲಾಹೋರಿನಲ್ಲಿಯೂ ಇತರ ಪಟ್ಟಣಗಳಲ್ಲಿಯೂ ಜನರು ಸಭೆ ಸೇರಿ ಅದನ್ನು ಖಂಡಿಸಲು ಪ್ರಯತ್ನಿಸಿದರು. ಗಾಂಧೀಜಿಯವರನ್ನು ತಡೆದ ಕಾಲದಲ್ಲಿ ಜನರ ಹಾಹಾಕಾರಕ್ಕೂ ದುಃಖಕ್ಕೂ ಮಿತಿಯಿಲ್ಲದಾಯಿತು. ಅಧಿಕಾರಿವರ್ಗದವರು ಜನರ ಮುಖಂಡರನ್ನು ನಿರ್ಬಂಧದಲ್ಲಿಟ್ಟರೆ ಕ್ಷೇಮವೆಂದು ಚಿಂತಿಸಿ, ಸತ್ಯಪಾಲ, ಕಿಚಲೂ ಎಂಬ ನಾಯಕರನ್ನು ದಸ್ತಗಿರಿ

ಮಾಡಿದರು. ಇದರಿಂದ ಜನರಿಗೆ ಎಚ್ಚರವೇ ತಪ್ಪಿತು. ಅಲ್ಲಲ್ಲಿ ಉನ್ಮತ್ತರಂತೆ ವರ್ತಿಸಲು ಮೊದಲಿಟ್ಟು, ಕಚೇರಿಗಳಿಗೆ ಬೆಂಕಿಯಿಡುವುದಕ್ಕೂ ಬ್ಯಾಂಕುಗಳನ್ನು ದೋಚುವುದಕ್ಕೂ ತೊಡಗಿ, ಸುದ್ದಿಯ ತಂತಿಗಳನ್ನು ಕತ್ತರಿಸಿದರು. ಒಂದರಹಿಂದೊಂದು ಅಕೃತ್ಯಗಳು ನಡೆಯುತ್ತಿರಲು ಭೋಗಪತಿಯು ಕ್ರುದ್ಧನಾಗಿ ಸೈನ್ಯಾಧಿಕಾರಿಗಳನ್ನು ಕರೆಸಿ ಪ್ರಾಂತ ರಕ್ಷಣೆಯನ್ನು ಅವರಿಗೆ ಒಪ್ಪಿಸಿಬಿಟ್ಟನು. ಜನರಲ್ ಡಯರ್, ಕರ್ನಲ್ ಬಾಸ್ವರ್ತ್ ಸ್ಮಿತ್, ಜಾನ್ಸನ್ ಮುಂತಾದ ಸೈನ್ಯಾಧಿಕಾರಿಗಳು ಬೇರೆ ಬೇರೆ ಪಟ್ಟಣಗಳಲ್ಲಿ ಯುದ್ಧಕಾಲದ ಆಡಳಿತವನ್ನು ಹೂಡಿ ಜನರಲ್ಲಿ ಭಯವನ್ನುಂಟುಮಾಡಲು ತೊಡಗಿದರು. ನಡೆದ ಸಂಗತಿಗಳಲ್ಲಿ ನಿಶ್ಯಸ್ತ್ರರಾದವರಮೇಲೆ ಶಸ್ತ್ರಪ್ರಯೋಗವಾದುದಲ್ಲದೆ ನಿರಪರಾಧಿಗಳಾದ ಜನರು ವರ್ಣನಾತೀತವಾದ ಕಷ್ಟಗಳಿಗೆ ಸಿಕ್ಕಿದರು. ಅಮೃತಸರದಲ್ಲಿ ಡಯರ್ ಬಂದು ಆಕ್ರಮಿಸಿದ ಕೂಡಲೆ 13ನೆ ಏಪ್ರಿಲ್ ದಿನ ಜನರು **ಜಲಿಯಾನ್‌ವಾಲಾಬಾಗ್**ಎಂಬೆಡೆಯಲ್ಲಿ ಸಭೆ ಸೇರಿರುವರೆಂದು ತಿಳಿದು ಅಲ್ಲಿಗೆ ಸೈನ್ಯಭಾಗವನ್ನು ತೆಗೆಸಿಕೊಂಡು ಹೊರಟನು. ಅಲ್ಲಿ ಸ್ತ್ರೀಬಾಲವೃದ್ಧರು ನೆರೆದಿದ್ದರು; ಎಲ್ಲರೂ ನಿರಾಯುಧರಾಗಿಯೇ ಇದ್ದರು. ದಳಪತಿಯು ಭಯೋತ್ಪಾದನೆಮಾಡಬೇಕೆಂಬ ಒಂದು ಉದ್ದೇಶದಿಂದಲೇ ಜನರ ಮೇಲೆ ಗುಂಡು ಹಾರಿಸಿದನು. ನೂರಾರು ಜನ ಸತ್ತು ಸಾವಿರಾರು ಜನ ಗಾಯಪಟ್ಟು ನರಳಿದರು. ಇದೇ ಜಲಿಯಾನ್ವಾಲಾಬಾಗಿನ ಕೊಲೆಯೆಂಬುದು. ಆ ತರುವಾಯ ಡಯರ್ ಮುಂತಾದ ಅಧಿಕಾರಿಗಳು ಬಾಲಕರನ್ನು ಬಾರುಕೋಲಿನಿಂದ ಹೊಡೆಸುವುದು, ಸ್ತ್ರೀಯರನ್ನು ಅವಮಾನಪಡಿಸುವುದು, ದರ್ಪವನ್ನು ತೋರುವುದು ಮುಂತಾದ ಕೃತ್ಯಗಳಿಂದ ಭಯವನ್ನುಂಟುಮಾಡಲು ತೊಡಗಿದರು. ಅಮೃತಸರದಲ್ಲಿಯೇ ಒಂದಾನೊಂದು ಓಣಿಯಲ್ಲಿ ಮಿಸ್ ಷೆರ್ವುಡ್ಡೆಂಬ ಇಂಗ್ಲೀಷ್ ಸ್ತ್ರೀಯನ್ನು ಅಪಹಾಸ್ಯಮಾಡಿದ್ದರೆಂದು ರೋಷಗೊಂಡು ಡಯರ್ ಆ ಓಣಿಯಲ್ಲಿ ಓಡಾಡುವವರೆಲ್ಲರೂ ಕ್ರಿಮಿಗಳಂತೆ ದೇಕಿಕೊಂಡೇ ಹೋಗಬೇಕೆಂದು ಆಜ್ಞೆ ಮಾಡಿದನು. ಈ ವಿಷಯವನ್ನು ಸ್ಮರಿಸಿದಾಗಲೆಲ್ಲ ಗಾಂಧೀಜಿಯವರು ಈ ದೇಕುವ ಆಜ್ಞೆಯನ್ನು ನೆನಸಿಕೊಂಡು ಸಂಕಟಪಡುವಷ್ಟು ಮತ್ತಾವುದರಿಂದಲೂ ಸಂಕಟಪಡುವುದಿಲ್ಲವೆಂದು ಪದೇ ಪದೇ ಹೇಳಿದ್ದಾರೆ.

ಪಂಜಾಬಿನ ಅತ್ಯಾಚಾರವು ನಡೆದಾಗ ವಿವರವು ಹೊರಗಡೆ ತಿಳಿಯ ಲಿಲ್ಲ. ಅಲ್ಪಸ್ವಲ್ಪವಾದ ವಿವರವು ಹೊರಬಿತ್ತು; ನಡೆದ ಸಂಗತಿಗಳ ವಿಚಾರಣೆಯಾಗತಕ್ಕುದೆಂದು ಎಲ್ಲರೂ ಕೇಳಿದರು. ಸರ್ಕಾರದವರು ಅದಕ್ಕಾಗಿ ಒಂದು ಉಪಸಭೆಯನ್ನು ಗೊತ್ತುಮಾಡಿ **ಲಾರ್ಡ್ ಹಂಟರೆಂ**ಬಾತನನ್ನು ಅಧ್ಯಕ್ಷನನ್ನಾಗಿ ನಿಯಮಿಸಿದರು. ಪಂಜಾಬಿನ ಸಿಂಹನೆಂದು ಹೆಸರಾಗಿದ್ದ ಲಾಲಾಜೀಯವರು ಸುಮಾರು ಇದೇ ವೇಳೆಗೆ ಸ್ವದೇಶಕ್ಕೆ ಹಿಂತಿರುಗಿ ಬಂದಿದ್ದರು; ಕಾಂಗ್ರೆಸ್ಸಿನವರು ಪಂಜಾಬಿನ ಅತ್ಯಾಚಾರ ವಿಚಾರಣೆಗಾಗಿಯೇ ಒಂದು ಅಸಾಧಾರಣವಾದ ಅಧಿವೇಶನವನ್ನು ನಡೆಸಿ ಲಾಲಾಜೀಯವರನ್ನು ಅಧ್ಯಕ್ಷರಾಗಿ ಮಾಡಿದರು. ಹಂಟರ್ ಸಭೆಯ ವಿಚಾರಣೆಯು ಸರ್ವಸಮರ್ಪಕವಾಗಿರಲಾರದೆಂದು ಕಾಂಗ್ರೆಸ್ಸಿನವರೇ ಒಂದು ವಿಚಾರಣಾ ಸಮಿತಿಯನ್ನು ಗೊತ್ತುಮಾಡಿದರು. ವಿಚಾರಣೆಗಳು ನಡೆಯುತ್ತ ಹಾಹಾಕಾರವು ಹೆಚ್ಚಿತು. ಸರ್ಕಾರದವರು ತಮ್ಮ ಅಧಿಕಾರಸ್ಥರಿಗೆ ಶಿಕ್ಷೆಯಾಗದಂತೆ ಇದೇ ವೇಳೆಯಲ್ಲಿಯೇ ಆತುರದಿಂದ ಒಂದು ಶಾಸನವನ್ನು ರಚಿಸಿಕೊಂಡರು. 1919ರಲ್ಲಿ ಅಮೃತಸರದಲ್ಲಿ ಕಾಂಗ್ರೆಸ್ ಸಭೆಯು ನೆರೆದಾಗ ಗಾಂಧೀಜಿಯವರೇ ಮುಂದಾಗಿ **ಅಸಹಕಾರ**ವೆಂಬ ನೀತಿಯನ್ನು ಅನುಸರಿಸತಕ್ಕುದೆಂದು ಸೂಚಿಸಿ, ಆ ನೀತಿಯ ಕರ್ತವ್ಯಭಾಗವನ್ನು ಒಂದು ಪಟ್ಟಿಯಲ್ಲಿ ವ್ಯಕ್ತಗೊಳಿಸಿದರು.

ವಿಚಾರಣೆ

ಭಾರತೀಯ ಮುಸಲ್ಮಾನರಿಗೆ ಮತ್ತೊಂದು ವಿಷಯದಲ್ಲಿ ಅಸಮಾಧಾನವು ತೋರಿತು. ತುರ್ಕಿಯ ಸುಲ್ತಾನನೇ ಅವರಿಗೆ **ಖಲೀಫಾ** ಅಥವಾ ಮತಗುರುವಾಗಿದ್ದುದು. ಯುದ್ಧ ನಡೆಯುತ್ತಿದ್ದಾಗ ಸುಲ್ತಾನನು ಇಂಗ್ಲಂಡಿಗೆ ವಿರೋಧಪಕ್ಷವನ್ನು ಆರಿಸಿಕೊಂಡು ಸೇರಿದನು. ಆಗ ಭಾರತೀಯ ಮುಸಲ್ಮಾನರಿಗೆ ಧರ್ಮಸಂಕಟವೊದಗಿತು. ಬ್ರಿಟಿಷರನ್ನು ಬಿಡುವುದಕ್ಕೂ ಇಲ್ಲ, ಸುಲ್ತಾನನನ್ನು ಬಿಡುವುದಕ್ಕೂ ಇಲ್ಲ. ಇಂತಹ ವಿಷಮಸಮಯದಲ್ಲಿ ಅವರು ಬ್ರಿಟಿಷರಲ್ಲಿ ಭಕ್ತಿಯುತರಾಗಿಯೇ ಇದ್ದು ಯುದ್ಧಾಂತ್ಯದಲ್ಲಿ ತುರ್ಕಿಯ ಭಂಗವಾಗದಂತೆ ಭದ್ರಪಡಿಸಬೇಕೆಂದು

ಖಿಲಾಫತ್ತಿನ ಸಮಸ್ಯೆ

ಎಲ್ಲರಲ್ಲಿಯೂ ಬೇಡಿದ್ದರು. ಅವರ ಬಿನ್ನಹವನ್ನು ಗೌರವಿಸಿ ಇಂಗ್ಲಂಡಿನ ಮಂತ್ರಿವರ್ಗದವರು ತುರ್ಕಿಯು ಭಂಗವಾಗುವುದಿಲ್ಲವೆಂದು ವಚನ ಕೊಟ್ಟಿದ್ದರು. ಆದರೆ ಯುದ್ಧವು ಮುಗಿದು ತುರ್ಕಿಯು ಅವ್ಯವಸ್ಥೆಗೊಳಗಾಗಿದ್ದಾಗ ಗ್ರೀಸ್ ದೇಶದವರು ತಮಗೆ ತುರ್ಕಿಯ ಭಾಗಗಳು ಸಲ್ಲತಕ್ಕದ್ದೆಂದು ವಾದಿಸಿ, **ಸೆವರ್ಸ್ ಕರಾರೆಂ**ಬುದರಲ್ಲಿ ತುರ್ಕಿಯ ಆಧಿಪತ್ಯವನ್ನು ಕಿರಿದಾಗಿಯೇ ಮಾಡಿಬಿಟ್ಟರು ; ಇದಕ್ಕೆ ಇಂಗ್ಲಂಡಿನವರು ಒಪ್ಪಿದರು. ಇದೇ ಖಿಲಾಫತ್ ಭಂಗವೆಂಬುದು. ಈ ಭಂಗವು ಸಂಭವಿಸಿದಾಗ ಭಾರತೀಯ ಮುಸಲ್ಮಾನರು ಸಂಕಟಕ್ಕೊಳಗಾಗಿ ಖಿಲಾಫತ್ ಕಮಿಟಿಯೆಂಬ ಸಭೆಯನ್ನು ಮಾಡಿಕೊಂಡು, ತುರ್ಕಿಯ ಗೌರವವು ಪುನಃ ಪ್ರತಿಷ್ಠಿತವಾಗುವಂತೆ ಸನ್ನಾಹಪಡಲು ಸಂಕಲ್ಪಮಾಡಿಕೊಂಡರು. ಸೋದರರ ತೊಂದರೆಯು ನಮ್ಮ ತೊಂದರೆಯೇ ಎಂದು ಗಾಂಧೀಜಿಯವರು ಈ ಆಂದೋಲನಕ್ಕೆ ತಮ್ಮ ಬೆಂಬಲವನ್ನು ಕೊಟ್ಟರು. ರೌಲತ್ ಕಾನೂನು, ಪಂಜಾಬಿನ ಅತ್ಯಾಚಾರ, ಖಿಲಾಫತ್ ಭಂಗವೆಂಬವು ಸರಿಸುಮಾರು ಏಕಕಾಲದಲ್ಲಿಯೇ ಘಟಿಸಿದವು. ಗಾಂಧೀಜಿಯವರು ತೋರಿದ ಅಸಹಕಾರನೀತಿಯನ್ನು ಬಹು ಜನರು ಒಪ್ಪುವಹಾಗೆ ನಡೆಯಿತು.

ನಾಗಪುರದ ಕಾಂಗ್ರೆಸ್

1920ನೆ ಇಸವಿಯು ಅನೇಕ ವಿಧಗಳಲ್ಲಿ ಸ್ಮರಣಾರ್ಹವಾದುದು. ಲೋಕಮಾನ್ಯನೆನಿಸಿದ್ದ ತಿಲಕನು ಆ ವರ್ಷದಲ್ಲಿ ಕಾಲಾಧೀನನಾದನು ; ಆತನ ಮರಣದಿಂದ ಎಲ್ಲರಿಗೂ ದುಃಖವುಂಟಾಯಿತು. ಆ ದುಃಖವು ಕಾರ್ಯರೂಪದಲ್ಲಿ ಪರಿಣಮಿಸುವಂತೆ ಗಾಂಧೀಜಿಯವರು ಪ್ರಚಂಡವಾದ ಕರ್ತವ್ಯವನ್ನೇ ವಿಧಿಸಿಕೊಂಡರು. ಅಸಹಕಾರ ಕರ್ತವ್ಯವನ್ನು ಉಚಿತವಾಗಿ ನಡೆಸಲು **ತಿಲಕ ಸ್ವರಾಜ್ಯ ನಿಧಿ**ಯೆಂಬ ಹೆಸರಿನಿಂದ ಒಂದು ಕೋಟಿ ರೂಪಾಯನ್ನು ಶೇಖರಿಸತಕ್ಕುದೆಂದೂ, ಕಾಂಗ್ರೆಸ್ಸಿಗೆ ಒಂದು ಕೋಟಿ ಭಾರತೀಯರನ್ನು ಸದಸ್ಯರನ್ನಾಗಿ ಕೂಡಿಸಬೇಕೆಂದೂ ನಿಯಮಿಸಿಕೊಂಡರು. ಆದೇ ಕರ್ತವ್ಯವಾಗಿ ದೇಶದಲ್ಲಿ ವೇಗವಾಗಿ ಸಂಚರಿಸುತ್ತ ಹೋದೆಡೆಯಲ್ಲೆಲ್ಲ ಸಭೆಗಳಲ್ಲಿ ಭಾಷಣಮಾಡುತ್ತ ನಿಧಿಯನ್ನೂ ಸದಸ್ಯರನ್ನೂ ನಿಯಮಿತ ಅವಧಿಯೊಳಗಾಗಿ ಕೂಡಿಸಿಯೂ ಕೂಡಿಸಿಬಿಟ್ಟರು. 1920ರಲ್ಲಿ ನಾಗಪುರ

ದಲ್ಲಿ ನೆರೆದ ಕಾಂಗ್ರೆಸ್ ಸಭೆಯೂ ಸ್ಮರಣಾರ್ಹವಾದುದು. ಆ ವರ್ಷ ಕಾಂಗ್ರೆಸ್ಸಿನ ಉದ್ಯಮದ ಲಕ್ಷ್ಯವು ಸ್ಪಷ್ಟಪಟ್ಟಿತು; ಅಂದಿನವರೆಗೂ ಆಡಳಿತದ ಪಾಲಿಗಾಗಿ ಬ್ರಿಟಿಷರೊಡನೆ ವಿಧಿಬದ್ಧವಾಗಿಯೇ ವಾದಿಸುವ ಕರ್ತವ್ಯವು ಮುಖ್ಯವಾಗಿತ್ತು. ಅಂದಿನಿಂದ ಕಾಂಗ್ರೆಸ್ಸಿನ ಲಕ್ಷ್ಯವು, ಸಾಧ್ಯವಾದಲ್ಲಿ ಬ್ರಿಟಿಷ್ ಸಾಮ್ರಾಜ್ಯ ಭಾಗವಾಗಿ ಸ್ವರಾಜ್ಯವನ್ನು ಪಡೆಯ ತಕ್ಕುದೆಂದೂ ಪ್ರಯತ್ನವು ಶಾಂತತೆಯಿಂದಲೂ ನ್ಯಾಯದಿಂದಲೂ ಕೂಡಿರ ತಕ್ಕುದೆಂದೂ ವಿವರವಾಯಿತು. ಕಾಂಗ್ರೆಸ್ಸಿನ ರಚನೆಯಲ್ಲಿ ದೇಶವು ಭಾಷಾನುಸಾರವಾದ ಪ್ರಾಂತ ವಿಭಜನೆಗೊಳಗಾಗಿ ಪ್ರತಿ ಪ್ರಾಂತದಲ್ಲಿಯೂ ಗ್ರಾಮ, ಪಟ್ಟಣ, ಜಿಲ್ಲಾ ಸಭೆಗಳಿದ್ದು ಒಟ್ಟುಗೂಡಿ ಪ್ರಾಂತಿಕ ಸಭೆಯಿರುವ ಅಂಶವೂ, ವರ್ಷಕ್ಕೊಮ್ಮೆ ಜಾತ್ರೆ ಸೇರಿದಂತೆ ದೊಡ್ಡ ಸಮ್ಮೇಳನವನ್ನು ನಡೆಸುವುದಲ್ಲದೆ ಪ್ರತಿದಿನವೂ ಕಾಂಗ್ರೆಸ್ಸಿನ ಕರ್ತವ್ಯವು ನಡೆಯುವಂತೆ ಮಂತ್ರಾಲೋಚಕ ಸಭೆಯಾದ A. I. C. C. ಎಂಬುದೂ, ಕಾರ್ಯ ನಿರ್ವಾಹಕ ಸಭೆಯೂ ಏರ್ಪಟ್ಟವು. ಈ ಅಂಶಗಳಿಗಿಂತ ಹೆಚ್ಚಿನದಾಗಿ 1920ನೆ ವರ್ಷವನ್ನು ದೊಡ್ಡದೆನಿಸುವ ಸಂಗತಿಯುಂಟು. ಏನೆಂದರೆ ರಾಷ್ಟ್ರೀಯ ಉದ್ಯಮದಲ್ಲಿ ಗಾಂಧೀಜಿಯವರು ಮುಂದಾದುದು. 1920ನೆ ವರುಷದಿಂದ ಗಾಂಧೀಜಿಯವರ ಜೀವನವೇ ರಾಷ್ಟ್ರೀಯ ಇತಿಹಾಸವಾಗಿ ಏರ್ಪಡುತ್ತದೆ.

ಅಸಹಕಾರ

ಅಸಹಕಾರ ಕರ್ತವ್ಯದ ಅಂಶಗಳನ್ನು ಒಂದೊಂದಾಗಿ ವಿವರಿಸಿ ಗಾಂಧೀಜಿಯವರು ಚೈತನ್ಯವರ್ಧಕವಾದ ಅಂಶಗಳನ್ನೂ ನಿರೋಧಕಾಂಶಗಳನ್ನೂ ಬೇರ್ಪಡಿಸಿ ಮುಳುಗುತ್ತಿರುವ ಹಡಗನ್ನು ಉಳಿಸಿಕೊಳ್ಳಲು ಹಡಗಿನಲ್ಲಿರುವವರೆಲ್ಲರೂ ಹೇಗೆ ಪ್ರಯತ್ನಶೀಲರಾಗುವರೋ ಹಾಗೆಯೇ ರಾಷ್ಟ್ರೋದ್ಯಮದಲ್ಲಿ ಸಮಸ್ತರೂ ಕರ್ತವ್ಯನಿರತರಾಗತಕ್ಕುದೆಂದು ವಿವರಿಸಿ ಒಂದು ವರ್ಷದ ಅವಧಿಯಲ್ಲಿ ಸ್ವರಾಜ್ಯ ಸಾಧನೆಯು ನೆರವೇರೀತೆಂದು ಪ್ರಕಟಿಸಿದರು. ಸರ್ಕಾರದಿಂದ ದತ್ತವಾದ ಬಿರುದು ಬಿಲ್ಲೆಗಳನ್ನು ಬೇಡವೆನ್ನುವುದು, ಸಭೆಗಳಿಗೆ ನಿಯಮಿತರಾದ ಪೌರವರ್ಗದವರು ತಮ್ಮ ಸ್ಥಾನಗಳಿಗೆ ರಾಜೀನಾಮೆ ಕೊಡುವುದು, ಸರ್ಕಾರದವರು ನಡೆಸಿದ ಸಭೆಗಳಿಗೆ

ಹೋಗದೆ ಇರುವುದು, ಸರ್ಕಾರೀ ಶಾಲೆಗಳಿಗೆ ಹುಡುಗರನ್ನು ಕಳುಹಿಸದಿರುವುದು, ನ್ಯಾಯಸ್ಥಾನಗಳನ್ನೂ ಶಾಸಕ ಸಭೆಗಳನ್ನೂ ಬಹಿಷ್ಕರಿಸುವುದು, ವಿದೇಶೀ ವಸ್ತ್ರವನ್ನು ಬಹಿಷ್ಕರಿಸುವುದು ಮೊದಲು ತೋರಿದ ನಿರೋಧಕಾಂಶಗಳು. ಚೈತನ್ಯವರ್ಧಕವಾಗಿ ಖದ್ದರ್ ವಸ್ತ್ರಗಳನ್ನೇ ಉಡುವ ವ್ರತವನ್ನು ಪಾಲಿಸುತ್ತ ಅರಳೆಯ ನೂಲನ್ನು ಕೈರಾಟೆಯಿಂದ ತೆಗೆಯುವುದು, ರಾಷ್ಟ್ರೀಯ ಶಾಲೆಗಳನ್ನು ಸ್ಥಾಪಿಸುವುದು, ಅಸ್ಪೃಶ್ಯತಾ ಮದ್ಯಸೇವನೆಗಳನ್ನು ನಿವಾರಿಸುವುದು, ಹಿಂದೂ ಮುಸ್ಲಿಂ ಪಾರ್ಸೀ ಮುಂತಾದವರೆಲ್ಲರ ಐಕ್ಯತೆಯನ್ನು ರಕ್ಷಿಸುವುದು ಮುಖ್ಯವೆನಿಸಿದವು. ಈ ವಿವರವನ್ನು ಕಾಂಗ್ರೆಸ್ಸಿಗೆ ಸೇರದೆ ಇದ್ದವರೂ ತಕ್ಕಮಟ್ಟಿಗೆ ಅನುಸರಿಸಲಾರಂಭಿಸಿದರು. ನೋಬೆಲ್ ಬಹುಮಾನವನ್ನು ಪಡೆದು ಜಗದ್ವಿಖ್ಯಾತರಾದ **ರವೀಂದ್ರನಾಥ ಠಾಕೂರ**ರು ತಮ್ಮ ನೈಟ್ಹುಡ್ ಪದವಿಯ ಸೂಚಕವಾದ ಅಲಂಕಾರವನ್ನು ವೈಸ್ರಾಯಿಗೆ ಹಿಂದಕ್ಕೆ ಕಳುಹಿಸಿಬಿಟ್ಟರು. ಸಿಕ್ಖ ಜನರು ತಮ್ಮ ಕುಲಸ್ಥರ ಉದ್ಧಾರ ಸಾಧನೆಗಾಗಿಯೇ ಶಿರೋಮಣಿ ಗುರುದ್ವಾರ ಪ್ರಬಂಧಕ ಕಮಿಟಿಯೆಂಬ ಸಂಸ್ಥೆಯನ್ನು ಸ್ಥಾಪಿಸಿಕೊಂಡು ತಮ್ಮ ಉದ್ದೇಶಕ್ಕಾಗಿ ಸತ್ಯಾಗ್ರಹ ವ್ರತವನ್ನೇ ಆಚರಿಸಲು ಮೊದಲಿಟ್ಟರು.

**ಸುಧಾರಣೆಗಳ ಪ್ರಾರಂಭ**

ಅತ್ತ ಸರ್ಕಾರದವರು ವಿಧಿರೂಪಗೊಂಡಿದ್ದ ಸುಧಾರಣೆಗಳನ್ನು ಆಚರಣೆಯಲ್ಲಿ ಪ್ರಾರಂಭಿಸಲು **ಡ್ಯೂಕ್ ಆಫ್ ಕನ್ನಾಟೆಂ**ಬ ರಾಜಬಂಧುವನ್ನು ಇಂಗ್ಲಂಡಿನಿಂದ ಬರಮಾಡಿಕೊಂಡು ಮೆರೆವಣಿಗೆಯುತ್ಸವಗಳನ್ನು ನಡೆಸಿದರು. ಹೊಸದಾಗಿ ರೂಪಗೊಂಡ ಶಾಸಕ ಸಭೆಗಳಿಗೆ ವರಣ ಪ್ರಯತ್ನಗಳು ಆರಂಭವಾದವು. ಕಾಂಗ್ರೆಸ್ಸಿನ ಪಕ್ಷದವರು ಸುಧಾರಣೆಗಳು ಬಹು ಅತೃಪ್ತಿಕರವೆಂದು ಅಭಿಪ್ರಾಯಪಟ್ಟು ಅವುಗಳಿಗೆ ಬಹಿಷ್ಕಾರವನ್ನು ಹಾಕಿ ಯಾರೂ ವರಣಭಾಗಿಗಳಾಗಬಾರದೆಂದು ಎಚ್ಚರಿಕೆ ಕೊಡುತ್ತಿದ್ದರು. ಮಾಡರೇಟ್ ಅಥವಾ ಲಿಬರಲ್ ಪಕ್ಷದವರು ಕಾಂಗ್ರೆಸ್ಸಿಗೆ ವಿರುದ್ಧವಾದ ಅಭಿಪ್ರಾಯವನ್ನೇ ಪಟ್ಟು ವರಣಾರ್ಥಿಗಳಾಗಿ ನಿಂತರು. ಸಾಧಾರಣವಾಗಿ ಎಲ್ಲ ಸಭೆಗಳಿಗೂ ಸದಸ್ಯರ ಸಂಖ್ಯಾ ಪೂರ್ತಿಯಾಯಿತು. ಶಾಸಕ ಸಭೆಗಳೂ ನೆರೆದವು. ಆದರೂ ಜನಸಾಮಾನ್ಯರಲ್ಲಿ ಅತೃಪ್ತಿಯೇ

ಹೆಚ್ಚಾಗಿತ್ತು; ಅವರನ್ನು ಮೆಚ್ಚಿಸಿ ರಾಜಭಕ್ತಿಯನ್ನು ಬಲಪಡಿಸಬೇಕೆಂದು ಉದ್ದೇಶಪಟ್ಟು ಇಂಗ್ಲಂಡಿನ ಮಂತ್ರಿಮಂಡಲಿಯವರು ಇಂಗ್ಲಂಡಿನ **ಯುವರಾಜರ ಸಂಚಾರ**ವನ್ನು ಏರ್ಪಡಿಸಿದರು. ಈ ಏರ್ಪಾಟು ಕಾಂಗ್ರೆಸ್ಸಿನವರಿಗೂ ಗಾಂಧೀಜಿಯವರಿಗೂ ಪರೋಕ್ಷರೀತಿಯಲ್ಲಿ ಬಲವನ್ನು ಕೊಡುವಂತಾಯಿತು.

**ಯುವರಾಜರ ಸಂಚಾರ 1921**

ಲಿಬರಲ್ ಮುಂತಾದ ಪಕ್ಷಗಳವರು ಕಾಂಗ್ರೆಸ್ಸಿನ ಅಸಹಕಾರ ಪ್ರಯತ್ನಕ್ಕೆ ವಿರೋಧವಾಗಿದ್ದಾಗ್ಗೂ ಗಾಂಧೀಜಿಯವರ ಪ್ರಭಾವದಿಂದ ಎಲ್ಲ ಪ್ರದೇಶಗಳಲ್ಲಿಯೂ ಕಾಂಗ್ರೆಸ್ಸಿನ ಪಕ್ಷವು ಬಲವಾಯಿತು. **ಪಂಡಿತ ಮೋತಿಲಾಲ ನೆಹರು, ಚಿತ್ತರಂಜನದಾಸ, ಶ್ರೀನಿವಾಸಯ್ಯಂಗಾರ್, ಮಹಮ್ಮದ್ ಆಲಿ, ಅಬುಲ್ ಕಲಂ ಆಸಾದ್** ಮುಂತಾದ ಅನೇಕ ಪ್ರಮುಖರು ಅವರ ನಾಯಕತ್ವವನ್ನು ಒಪ್ಪಿದರು. ಬ್ರಿಟಿಷ್ ಯುವರಾಜರ ಸಂಚಾರೋತ್ಸವದಿಂದ ಜನರನ್ನು ಮೋಹಗೊಳಿಸಲು ಸರ್ಕಾರದವರು ಪ್ರಯತ್ನಿಸುತ್ತಾರೆಂದು ಇವರೆಲ್ಲರೂ ಅಭಿಪ್ರಾಯಪಟ್ಟು ಅದನ್ನು ವಿರೋಧಿಸಿ ಬಹಿಷ್ಕರಿಸಲು ಸಂಕಲ್ಪ ಮಾಡಿದರು. ಕಾಂಗ್ರೆಸ್ಸಿನ ಆಂದೋಲನವು ದಿನೇದಿನೇ ಪ್ರಬಲವಾಗುತ್ತಿತ್ತು. ಆ ಸಮಯದಲ್ಲಿ ಭೋಗಾಧಿಪತಿಯಾಗಿದ್ದ **ಲಾರ್ಡ್ ರೆಡಿಂಗ್** (Reading) ಎಂಬಾತನು ಗಾಂಧೀಜಿಯವರೊಡನೆ ಗೋಪ್ಯವಾದ ಸಂಭಾಷಣೆ ನಡೆಸಿದನು. ಕಾಂಗ್ರೆಸ್ಸಿನವರ ಕರ್ತವ್ಯವೇನೂ ಅದರಿಂದ ಬದಲಾಗಲಿಲ್ಲ; ಯುವರಾಜರ ಸಂಚಾರ ಸಮಯದಲ್ಲಿ ಹರತಲವನ್ನಾಚರಿಸುವುದಲ್ಲದೆ ಕ್ರಮವಾಗಿ ಅಸಹಕಾರದ ಕರ್ತವ್ಯವನ್ನು ಮುಂದುವರಿಸಿ, ತೆರಿಗೆಗಳನ್ನು ಸಲ್ಲಿಸದೆ ಇರುವ ಅಂಶವನ್ನೂ ಸಾಧ್ಯವಾದಲ್ಲಿ ಪಾಲಿಸತಕ್ಕುದೆಂಬ ತೀರ್ಮಾನವೇ ನಡೆಯಿತು. ಸರ್ಕಾರದವರು ಸಮಯವನ್ನು ಕಾದಿದ್ದು ಮಹಮ್ಮದ್ ಆಲಿಯನ್ನು ದಸ್ತಗಿರಿಮಾಡಿ ದಂಡನೆಗೆ ಗುರಿಮಾಡಿಸಿ, ತರುವಾಯ ಮೋತಿಲಾಲ ನೆಹರು, ದಾಸ, ಆಸಾದ್ ಮುಂತಾದವರನ್ನೂ ನಿರ್ಬಂಧದಲ್ಲಿಡಿಸಿದರು. 17ನೆ ನವಂಬರ್ ದಿನ ಯುವರಾಜರು ಬೊಂಬಾಯಿಯಲ್ಲಿ ಹಡಗಿನಿಂದ ಇಳಿದಾಗ

ಆ ನಗರದಲ್ಲಿ ಕೋಲಾಹಲವು ಅತಿಯಾಗಿ ಬೀದಿಗಳಲ್ಲಿ ಅಕೃತ್ಯಗಳು ನಡೆದವು; ಶಾಂತರೀತಿಯ ಪ್ರವರ್ತನೆಯೂ ಪ್ರಧಾನವಾಗಿರಲಿಲ್ಲ. ಈ ಅಕೃತ್ಯಗಳು ನಡೆದ ಸಂಭವವನ್ನು ಕಂಡು ಗಾಂಧೀಜಿಯವರು ಮನನೊಂದು 5 ದಿವಸಗಳ ಉಪವಾಸವನ್ನು ತಾಳಿದರು; ಜನರು ಕೋಪಕ್ಕೊಳಗಾಗಿ ಎಚ್ಚರಗೆಡುವುದು ಸತ್ಯಾಗ್ರಹವೇ ಅಲ್ಲವೆಂದು ಪುನಃ ಪುನಃ ಹೇಳಿದರು. ಕಾಂಗ್ರೆಸ್ ಆ ವರ್ಷ ಅಹಮದಾಬಾದಿನಲ್ಲಿ ನೆರೆಯಿತು; ನಡೆದ ಆಲೋಚನೆಯಲ್ಲಿ ಗಾಂಧೀಜಿಯವರಿಗೆ ಸರ್ವಾಧಿಕಾರವನ್ನೇ ಒಪ್ಪಿಸಿದರು.

**ಅಹಮದಾಬಾದ್ ಕಾಂಗ್ರೆಸ್**

ಅಸಹಕಾರದ ಕರ್ತವ್ಯಾಂಶಗಳಲ್ಲಿ ಪ್ರತಿಯೊಂದನ್ನೂ ತಕ್ಕಮಟ್ಟಿಗೆ ಪಾಲಿಸಲು ಅಲ್ಲಲ್ಲಿ ಪ್ರಯತ್ನ ನಡೆದಿತ್ತು. ಕೆಲವು ಶಾಲೆಗಳಲ್ಲಿ ಹುಡುಗರು ಮುಷ್ಕರಮಾಡಿದರು. ಕೆಲವು ಜಿಲ್ಲೆಗಳಲ್ಲಿ ಮದ್ಯಪಾನ ನಿರೋಧವು ಪ್ರಬಲವಾಗಿ ನಡೆದು ಶೇಂದಿಯ ಹರಾಜಿಗೆ ಕೂಗುವವರೇ ಇಲ್ಲದಂತಾಯಿತು. ಕೆಲವು ಜಿಲ್ಲೆಗಳಲ್ಲಿ ಗ್ರಾಮಸ್ಥರು ಗಾಂಧೀಜಿಯವರ ಭಕ್ತರಾಗಿ ಕಾಂಗ್ರೆಸ್ಸುಗಳನ್ನು ಸ್ಥಾಪಿಸಿಕೊಂಡು ಅಸಹಕಾರವನ್ನು ಮೊದಲುಮಾಡಿದರು. ಗುಜರಾಥ ಮತ್ತು ಆಂಧ್ರ ನಾಡುಗಳ ಗ್ರಾಮಸ್ಥರಲ್ಲಿ ಈ ವಿಧವಾದ ಆಂದೋಲನವು ಹೆಚ್ಚಿತ್ತು. ಇತರ ವಿಧಗಳಲ್ಲಿ ಕಾಂಗ್ರೆಸ್ ಪಂಥವನ್ನು ಹಿಡಿದು 25,000 ಮಂದಿ ನಿರ್ಬಂಧವನ್ನು ಸ್ವೀಕರಿಸಿದರು. ಗಾಂಧೀಜಿಯವರು 1922ರಲ್ಲಿ ಸ್ಥಿತಿಗತಿಗಳನ್ನು ನೋಡಿಕೊಂಡು ಗುಜರಾಥಿನ **ಬರ್ದೋಲಿ** ಎಂಬ ತಾಲೂಕಿನಲ್ಲಿ ಕರ ನಿರಾಕರಣವನ್ನು ಆರಂಭಿಸುವ ನಿಶ್ಚಯಮಾಡಿಕೊಂಡು, ಅದರಂತೆ ವೈಸ್ರಾಯಿಗೆ ಸೂಚನೆಯನ್ನು ಕೊಡಲು ಒಂದು ವೀರಪತ್ರವನ್ನು ಬರೆದರು. ಅದನ್ನು ಬರೆದ ಹಲಕೆಲ ದಿನಗಳಲ್ಲಿಯೇ ಚೌರಿಚೌರ ಎಂಬೆಡೆಯಲ್ಲಿ ಅತ್ಯಾಚಾರಗಳು ರೇಗಿದವು; ಅವುಗಳಿಂದ ವ್ಯಸ್ತರಾಗಿ ಗಾಂಧೀಜಿಯವರು ತಮ್ಮ ವೀರಪತ್ರದಲ್ಲಿ ವಿವರಿಸಿದಂತೆ ನಡೆಯಲಾಗುವುದಿಲ್ಲವೆಂದು ನಿಶ್ಚಯಮಾಡಿಬಿಟ್ಟರು. ಅದೇ ಸುಸಮಯವೆಂದು ಸರ್ಕಾರದವರು

**ಗಾಂಧೀಜಿಯವರ ನಿರ್ಬಂಧ**

ಅವರನ್ನು ದಸ್ತಗಿರಿಮಾಡಿ ವಿಚಾರಣೆಗೆ ಗುರಿಮಾಡಿಸಿದರು; **ಬ್ರೂಂ ಫೀಲ್ಡ್** ಎಂಬ ಸೆಷನ್ಸ್ ಜಡ್ಜಿಯ ಎದುರಿಗೆ ವಿಚಾರಣೆ ನಡೆಯಿತು. ಆರು ವರ್ಷ ಕಾಲದ ಕಾರಾಗೃಹವಾಸವು ವಿಧಿತವಾಯಿತು. ಗಾಂಧೀಜಿಯವರನ್ನು ಈ ರೀತಿಯಲ್ಲಿ ಶಿಕ್ಷಿಸಿದ ಕಾಲದಲ್ಲಿ ಜನಸಾಮಾನ್ಯರು ಎಚ್ಚರತಪ್ಪಿ ನಡೆಯ ದಿದ್ದುದು ಒಂದು ಸೋಜಿಗವಾಗಿಯೇ ಇತ್ತು. ಅದಕ್ಕೆ ಗಾಂಧೀಜಿ ಯವರೇ ಕಾರಣರಾಗಿದ್ದರು.

ಸ್ವರಾಜ್ ಪಕ್ಷ

ಗಾಂಧೀಜಿಯವರು ನಿರ್ಬಂಧಿತರಾದಾಗ ಕರನಿಷೇಧವು ನಡೆಯ ತಕ್ಕುದರ ವಿಚಾರವನ್ನು ನಡೆಸಲು ಕಾಂಗ್ರೆಸ್ಸಿನ ಒಂದು ಉಪಸಭೆಯು ಗೊತ್ತಾಗಿತ್ತು. ಆ ಉಪ ಸಭೆಯ ವರದಿಯು ಸಿದ್ಧವಾಯಿತು; ಎಲ್ಲೆಡೆ ಗಳಲ್ಲಿಯೂ ಸಮಾನವಾದ ಸಿದ್ಧತೆಯು ಕಾಣಲಿಲ್ಲ. ಅಲ್ಲದೆ ಮುಖಂಡರಲ್ಲಿ ಬಹುಭಾಗದವರು ಸೆರೆಮನೆಗಳಲ್ಲಿದ್ದರು. ಇಂತಹ ಸ್ಥಿತಿಯಲ್ಲಿ ನಿರ್ಬಂಧ ದಿಂದ ಮುಕ್ತರಾಗಿ ಹೊರಗೆ ಬಂದಿದ್ದ ಪಂಡಿತ ನೆಹರು ಮತ್ತು ಚಿತ್ತರಂಜನ ದಾಸರಿಬ್ಬರೂ ಕಾಂಗ್ರೆಸ್ಸಿನ ಕರ್ತವ್ಯದಲ್ಲಿ ಬದಲಾಗಬೇಕೆಂದು ಅಭಿಪ್ರಾಯ ಪಟ್ಟರು. ಅಸಹಕಾರವನ್ನು ಶಾಸಕ ಸಭೆಗಳಲ್ಲಿಯೇ ಕಾಂಗ್ರೆಸ್ ಪಕ್ಷ ದವರು ತೋರತಕ್ಕುದೆಂದು ವಾದಿಸಿದರು. ಹೀಗೆ ಹುಟ್ಟಿದುದೇ ಸ್ವರಾಜ್ ಪಕ್ಷವೆಂಬುದು. 1923–24ರಲ್ಲಿ ಸ್ವರಾಜ್ ಪಕ್ಷದವರೆಂದೂ ಪೂರ್ವ ಪಕ್ಷದವರೆಂದೂ ಕಾಂಗ್ರೆಸ್ಸಿನಲ್ಲಿ ಎರಡು ಪಕ್ಷಗಳು ಏರ್ಪಟ್ಟವು.

ಕೋಮು ಕಲಹ

1924ನೆ ಇಸವಿಯ ಆದಿಯಲ್ಲಿ ಸೆರೆಮನೆಯಲ್ಲಿ ಗಾಂಧೀಜಿ ಯವರಿಗೆ ಅಸ್ವಸ್ಥತೆಯು ತೋರಿ ಶಸ್ತ್ರಚಿಕಿತ್ಸೆಯು ನಡೆಯಬೇಕಾಯಿತು. ಚಿಕಿತ್ಸೆಯು ನಡೆದ ತರುವಾಯ ಸರ್ಕಾರದವರು ಬಿಡುಗಡೆಯನ್ನೂ ಮಾಡಿದರು. ಆ ವೇಳೆಗೆ ಖಿಲಾಫತ್ ಆಂದೋಲನವು ತಣ್ಣಗೇ ಆಗಿತ್ತು. ಖಿಲಾಫತ್ ಸಭೆಯು ಪ್ರಬಲವಾಗಿದ್ದಾಗ ಮೂಲೆಯಲ್ಲಿ ಅಡಗಿದ್ದ ಮುಸ್ಲಿಂ ಲೀಗೆಂಬುದು 1923ರಲ್ಲಿ ಪುನಃ ತಲೆಯೆತ್ತಿತು. ಇದಕ್ಕೆ ಕಾರಣ ಹೊರಗೆ ನಡೆದಿತ್ತು. ಸೆವರ್ಸ್ ಕರಾರಿನಂತೆ ಗ್ರೀಸ್ ದೇಶದವರು ಅನಟೋಲಿಯ ಪ್ರಾಂತವನ್ನು ಸಾಧಿಸಲು ಯತ್ನಶೀಲರಾದಾಗ ತುರ್ಕಿಯಲ್ಲಿ

ರಾಷ್ಟ್ರರೂಪವೇ ಬದಲಾಯಿತು. ತುರ್ಕಿಯವರೇ ಖಿಲಾಫತ್ತನ್ನು ಕೊನೆಗಾಣಿಸಿಬಿಟ್ಟು **ಅಂಗೋರ** ಎಂಬೆಡೆಯಲ್ಲಿ ರಾಷ್ಟ್ರೀಯವಾದ ಸರ್ಕಾರವನ್ನು ಸ್ಥಾಪಿಸಿಕೊಂಡು ಗ್ರೀಕರೊಡನೆ ಯುದ್ಧವನ್ನು ನಡೆಸಿ ಅವರನ್ನು ಸೋಲಿಸಿಯೇ ಬಿಟ್ಟರು. ಈ ಸಂಗತಿಗಳಿಂದ ಖಿಲಾಫತ್ ಆಂದೋಲನವೇ ಅನವಶ್ಯವೆನಿಸಿತು. ಈ ರೀತಿಯಲ್ಲಿ ಮುಂದಾದ ಮುಸ್ಲಿಂ ಲೀಗೆಂಬುದು ಶಾಸಕ ಸಭೆಗಳನ್ನು ಪ್ರವೇಶಿಸತಕ್ಕುದೆಂದು ಅಭಿಪ್ರಾಯ ಪಟ್ಟಿತ್ತು. ಬೇರೆ ಕಾರಣಗಳಿಂದ ಪಂಜಾಬ್, ಬಂಗಾಳ, ಅಯೋಧ್ಯಾ ಮುಂತಾದ ಪ್ರದೇಶಗಳಲ್ಲಿ ಹಿಂದೂಗಳಿಗೂ ಮುಸಲ್ಮಾನರಿಗೂ ವಿರೋಧ ತೋರಿಕೊಂಡು ದಿನೇ ದಿನೇ ವಿಷಮಸ್ಥಿತಿಯೊದಗುತ್ತಿತ್ತು. ಇಂತಹ ಸ್ಥಿತಿಯಲ್ಲಿ ಗಾಂಧೀಜಿಯವರು ಗುಣಪಡೆದು ದಿಲ್ಲಿಯಲ್ಲಿದ್ದಾಗ ಕೋಮು ವಾರು ಕಲಹಗಳನ್ನು ಸಹಿಸದೆ ತಾವೇ ಅದಕ್ಕಾಗಿ 21 ದಿವಸಗಳ ಘೋರೋಪವಾಸ ವ್ರತವನ್ನು ಕೈಕೊಂಡರು. ಉಪವಾಸವು ನಡೆಯಿತು. ಕೆಲಕಾಲನುಟ್ಟಿಗೆ ಎಲ್ಲ ಪಕ್ಷಗಳೂ ಐಕ್ಯತೆಯನ್ನು ಪಡೆದವು. ಆದರೆ 1920ರಲ್ಲಿದ್ದ ಸ್ಥಿತಿಯು ಮಾಯವಾಗಿತ್ತು.

ಗಾಂಧೀಜಿ ಸೆರೆಮನೆಯಿಂದ ಹೊರಗೆ ಬಂದ ತರುವಾಯ ಕಾಂಗ್ರೆಸ್ಸಿನ ಮಂತ್ರಾಲೋಚಕ ಸಭೆಯಲ್ಲಿ ಸ್ವರಾಜ್ ಪಕ್ಷದವರ ವಾದವು ಬಲವಾಗಿ ನಡೆಯಿತು. ಬಹುಪಕ್ಷದವರು ಗಾಂಧೀಜಿಯವರ ಅಭಿಮತಕ್ಕೆ ಬೆಂಬಲ ವನ್ನು ಕೊಟ್ಟರೂ ಗಾಂಧೀಜಿಯವರು ತಮಗೆ ಅನುಕೂಲವೇ ಆಗಿದ್ದ ಬಹುಮತ ನಿಷ್ಕರ್ಷೆಯನ್ನೊಪ್ಪದೆ ಸ್ವರಾಜ್ ಪಕ್ಷದವರಿಗೆ ನಿರಾತಂಕವಾದ ಮಾರ್ಗವನ್ನು ಕಲ್ಪಿಸಿಕೊಡತಕ್ಕುದೆಂದು ತಮ್ಮ ಅನುಯಾಯಿಗಳಿಗೆ ಹೇಳಿಬಿಟ್ಟರು. ಬೆಳಗಾಂವಿಯಲ್ಲಿ ಕಾಂಗ್ರೆಸ್ ವಾರ್ಷಿಕ ಸಮ್ಮೇಳನವು ನಡೆದಾಗ ಈ ನಿಶ್ಚಯದಂತೆಯೇ ನಡೆಯಿತು. ಗಾಂಧೀಜಿಯವರು ತಾವು ಅಸಹಕಾರ ಧರ್ಮದಲ್ಲಿ ಚೈತನ್ಯವರ್ಧಕ ಕರ್ತವ್ಯಗಳಾದ ಖದ್ದರ್, ರಾಷ್ಟ್ರೀಯ ಶಿಕ್ಷಣ, ಐಕ್ಯತೆ, ಅಸ್ಪೃಶ್ಯತಾ ನಿವಾರಣೆ, ಮದ್ಯಪಾನ ನಿರೋಧಗಳಲ್ಲಿಯೇ ತೊಡಗುವುದಾಗಿ ಸಂಕಲ್ಪಮಾಡಿಕೊಂಡರು. ಖದ್ದರ್ ಪ್ರಚಾರವು ದೇಶದ ಉದ್ಧಾರಕ್ಕೆ ಮೂಲವೆಂದು ತೋರಿಬಂದ ಕಾರಣದಿಂದ ಅದಕ್ಕಾಗಿಯೇ ಪ್ರತ್ಯೇಕವಾದ ಸಂಘ (A. I. S. A.) ವೊಂದು ಸ್ಥಾಪಿತ ವಾಯಿತು.

ಸ್ವರಾಜ್ ಪಕ್ಷದವರ ಸಾಧನೆ

1924ರಲ್ಲಿ ಸ್ವರಾಜ್ ಪಕ್ಷದವರು ಪ್ರಾದೇಶಿಕ ಸಭೆಗಳಿಗೂ ಕೇಂದ್ರ ಶಾಸಕ ಸಭೆಗಳಿಗೂ ವರಣಾರ್ಥಿಗಳಾಗಿ ನಿಂತರು. ಎಲ್ಲೆಡೆಗಳಲ್ಲಿಯೂ ಇವರಿಗೆ ಸಮಾನವಾದ ಜಯವು ದೊರಕಲಿಲ್ಲ. ಬಂಗಾಳದಲ್ಲಿಯೂ ಮಧ್ಯಪ್ರಾಂತದಲ್ಲಿಯೂ ಬಲಶಾಲಿಗಳಾಗಿದ್ದು ಮಂತ್ರಿಗಳಾಗತಕ್ಕವರು ಹಟವನ್ನು ಹಿಡಿದು ಭೋಗಪತಿಯು ನಿರಂಕುಶಾಧಿಕಾರವನ್ನು ತೋರುವಂತೆ ಮಾಡಿದರು. ದಿಲ್ಲಿಯ ಅಸೆಂಬ್ಲಿಯಲ್ಲಿ **ಪಂಡಿತ ಮೋತಿಲಾಲ ನೆಹರು, ವಿಟ್ಠಲಭಾಯಿ ಪಟೇಲ್** ಮುಂತಾದ ನಾಯಕರಿಂದೊಡಗೂಡಿ ವ್ಯೂಹದಂತೆ ಪ್ರವರ್ತಿಸುತ್ತ ಸರ್ಕಾರದವರ ಪಕ್ಷವನ್ನು ಪ್ರಬಲವಾಗಿ ವಿರೋಧಿಸಿದರು. ಕೆಲವು ಶಾಸನಗಳನ್ನು ನಡೆಸುವುದೇ ಸರ್ಕಾರ ಪಕ್ಷದವರಿಗೆ ಕಷ್ಟಸಾಧ್ಯವಾಯಿತು. ವಿಟ್ಠಲಭಾಯಿ ಪಟೇಲರು ಅಧ್ಯಕ್ಷರೂ ಆಗಿ ದರ್ಪದಿಂದ ಸಭಾಕ್ರಮವನ್ನು ಜರುಗಿಸಿದರು. 1925ರಲ್ಲಿ **ದೇಶಬಂಧುವೆಂದು** ಖ್ಯಾತರಾಗಿದ್ದ **ಚಿತ್ತರಂಜನ ದಾಸರು** ಅಕಾಲ ಮರಣಕ್ಕೆ ತುತ್ತಾಗಿದ್ದರು. ಸ್ವರಾಜ್ ಪಕ್ಷಕ್ಕೆ ಇದರಿಂದ ದೌರ್ಬಲ್ಯವೇ ಉಂಟಾಯಿತು. ಆದರೂ ಪಂಡಿತ ಮೋತಿಲಾಲರು ಧೀರರಾಗಿ ಆ ಪಕ್ಷದ ಕರ್ತವ್ಯವನ್ನು ನೆರವೇರಿಸುತ್ತಿದ್ದರು. ಈ ಮಧ್ಯೆ ಹಿಂದೂ ಮುಸ್ಲಿಂ ವಿರೋಧಗಳು ಹೆಚ್ಚಾಗಿ ಆರ್ಯ ಸಮಾಜದ ಮುಖಂಡರಾಗಿದ್ದ ಶ್ರದ್ಧಾನಂದ ಸ್ವಾಮಿಗಳು ಖೂನಿಯಾದರು. ಗಾಂಧೀಜಿಯವರು ಖದ್ದರ್ ಪ್ರಚಾರವನ್ನು ಹಿಡಿದು ಎಲ್ಲ ಪ್ರಾಂತಗಳಲ್ಲಿಯೂ ಸಂಚರಿಸುತ್ತ ಕೈಯಿಂದ ಸೂಲುವ ಮತ್ತು ನೆಯ್ಯುವ ಉದ್ಯೋಗ ಸ್ಥಾಪನೆಯನ್ನು ಮುಂದರಿಸುತ್ತಲಿದ್ದರು.

ನೆಹರು ವರದಿ

ಕೇಂದ್ರ ಶಾಸಕ ಸಭೆಯಲ್ಲಿ ಪ್ರಚಂಡರಾಗಿಯೇ ವಾದಿಸುತ್ತಿದ್ದ ಸ್ವರಾಜ್ ಪಕ್ಷದವರು 1926ರಲ್ಲಿ ಒಂದು ನಿಮಿತ್ತವನ್ನು ಕಲ್ಪಿಸಿಕೊಂಡು ರಾಷ್ಟ್ರಸುಧಾರಣೆಯ ವಿಷಯವನ್ನೆತ್ತಿದ್ದರು. ಭಾರತೀಯ ಕಾರ್ಯದರ್ಶಿಯಾಗಿದ್ದ **ಲಾರ್ಡ್ ಬರ್ಕೆನ್ ಹೆಡ್ಡೆಂ**ಬಾತನು ಏಕಕಂಠವೆಂಬುದೇ ಇಲ್ಲದೆ ನಾನಾಕಂಠಗಳಿಂದ ನಾನಾವಿಧವಾಗಿಯೂ ಪರಸ್ಪರ ವಿರೋಧವಾಗಿಯೂ

ತೋರುವ ಭಾರತೀಯರ ವಾದದಲ್ಲಿ ಬಲವಿಲ್ಲವೆಂದು ಹೇಳಿಬಿಟ್ಟನು. 1919ರಲ್ಲಿ ನಡೆದ ವಿಧಿಗನುಸಾರವಾಗಿ ಮೂಡಿದ ಸುಧಾರಣೆಯ ಸಾಫಲ್ಯವನ್ನು ಪರೀಕ್ಷಿಸಿ ಮುಂದಿನ ಹೆಜ್ಜೆಯನ್ನು ಸೂಚಿಸುವ ಸಭೆಯೊಂದನ್ನು ಗೊತ್ತುಮಾಡತಕ್ಕದೆಂದು ಸರ್ಕಾರದವರು ನಿಶ್ಚಯಿಸಿ, ಅದರಂತೆಯೇ 1927ರಲ್ಲಿ ತಮ್ಮ ನಿಶ್ಚಯವನ್ನು ಪ್ರಕಟಿಸಿ **ಸೈಮನ್ ಕಮಿಷನ್ನೆಂ**ಬುದನ್ನು ನಿಯಮಿಸಿದರು. ಆ ಸಮಿತಿಯಲ್ಲಿ ಭಾರತೀಯನೊಬ್ಬನೂ ಸದಸ್ಯನಾಗಿರಲಿಲ್ಲ. ಇದರಿಂದ ಎಲ್ಲ ಪಕ್ಷದವರಿಗೂ ಆಗ್ರಹ ತೋರಿತು. ಲಾರ್ಡ್ ಬರ್ಕೆನ್ಹೆಡ್ಡಿಗೆ ಪ್ರತ್ಯುತ್ತರವಾಗಿ ಸರ್ವಪಕ್ಷಗಳೂ ನೆರೆದು ಒಂದು ಉಪಸಭೆಯು ಗೊತ್ತಾಗಿ **ಪಂಡಿತ ನೋತಿಲಾಲರ** ಅಧ್ಯಕ್ಷತೆಯಲ್ಲಿ ಕರ್ತವ್ಯವು ನಡೆದು ನೆಹರು ವರದಿಯೆಂಬುದು ಸಿದ್ಧವಾಯಿತು. ಮುಂದಿನ ಸ್ವರಾಜ್ಯದ ರಾಷ್ಟ್ರ ರಚನೆಯು ಹೇಗಿರಬೇಕೆಂಬುದು ಅದರಲ್ಲಿ ಸೂಚಿತವಾಗಿತ್ತು. ಆ ವರದಿಗೆ ಬ್ರಿಟಿಷರು ತಕ್ಕಷ್ಟು ಗೌರವವನ್ನು ಕೊಡಲಿಲ್ಲವೆಂದು ಎಲ್ಲರೂ ಅಭಿಪ್ರಾಯಪಟ್ಟರು. ಸೈಮನ್ ಸಮಿತಿಯನ್ನು ಸಹಿಸದಾದರು. ಕಾಂಗ್ರೆಸ್ 1927ರಲ್ಲಿ ಮದರಾಸಿನಲ್ಲಿ ನೆರೆದಾಗ ಸ್ವಾತಂತ್ರ್ಯವನ್ನೇ ಸಾಧಿಸತಕ್ಕುದೆಂಬ ವಾದವು ಮೊದಲಾಯಿತು.

**ಇತ್ತೀಚಿನ ಸಂಗತಿಗಳು**

1928ರಲ್ಲಿ ಸೈಮನ್ ಸಮಿತಿಯು ದೇಶದಲ್ಲಿ ಸಂಚಾರಮಾಡಿದಾಗ ಎಲ್ಲೆಲ್ಲಿಯೂ ಬಹಿಷ್ಕಾರವು ನಡೆಯಿತು. ಅಲ್ಲಿಂದ ಮೊದಲ್ಗೊಂಡು ಸರ್ಕಾರಕ್ಕೂ ಕಾಂಗ್ರೆಸ್ ಮುಂತಾದ ರಾಷ್ಟ್ರಭಕ್ತ ಪಕ್ಷಗಳಿಗೂ ವಿರೋಧವು ಪ್ರಬಲವಾಗಿ ರೇಗಿತು. ಕಾಂಗ್ರೆಸ್ಸಿನವರು ಸ್ವಾತಂತ್ರ್ಯವನ್ನೇ ಗುರಿಯಾಗಿಟ್ಟುಕೊಂಡು ಪುನಃ ಅಸಹಕಾರವನ್ನು ಪ್ರಬಲವಾದ ರೀತಿಯಿಂದ ನಡೆಸತಕ್ಕುದೆಂದು ನಿಶ್ಚಯಿಸಿ ಗಾಂಧೀಜಿಯವರನ್ನು ನಾಯಕರಾಗಿರತಕ್ಕುದೆಂದು ಬೇಡಿದರು. ಅತ್ತ ಇಂಗ್ಲಂಡಿನಲ್ಲಿ ಕನ್ಸರ್ವೆಟಿವ್ ಪಕ್ಷದ ಬಲವು ಕುಗ್ಗಿ ಲೇಬರ್ ಪಕ್ಷದವರೇ ಮಂತ್ರಿಪದವಿಗಳನ್ನು ಪಡೆದು ಸೈಮನ್ ಸಮಿತಿಯ ವರದಿಯು ಸಿದ್ಧವಾಗಿದ್ದಾಗ್ಗೂ ಭಾರತೀಯ ಪ್ರಮುಖರೂ ಬ್ರಿಟಿಷ್ ಪ್ರಮುಖರೂ ಸೇರಿದ **ಚಕ್ರಗೋಷ್ಠಿ**ಯಲ್ಲಿ ವಿಚಾರಣೆಯು ನಡೆಯತಕ್ಕುದೆಂದು ತೀರ್ಮಾನಿಸಿದರು. ಗಾಂಧೀಜಿ

ಯವರು ಅಂತಹ ಸಮ್ಮೇಳನಕ್ಕೆ ಪೂರ್ವಭಾವಿಯಾಗಿ ಸರ್ಕಾರದ ಪ್ರವರ್ತನೆಯಲ್ಲಿ ಕೆಲವಂಶಗಳು ಅತ್ಯಗತ್ಯವಾಗಿ ತೋರಿಕೊಳ್ಳತಕ್ಕುದೆಂದು ನಿಶ್ಚಯಿಸಿ ತಮ್ಮ ಅಭಿಮತವನ್ನು **ಲಾರ್ಡ್ ಇರ್ವಿನ್ನೆಂ**ಬ ಭೋಗಾಧಿಪತಿಗೆ ತಿಳಿಸಿದರು. ನಿಶ್ಚಿತವಾದ ಗಡುವು ದಾಟಿತು. ಆಗ ಗಾಂಧೀಜಿಯವರು ಉಪ್ಪಿನ ಕರವನ್ನು ಭಂಗಿಸತಕ್ಕುದೆಂದು ನಿಶ್ಚಯಿಸಿ 1930ನೆ ಇಸವಿಯಲ್ಲಿ **ದಾಂಡಿ**ಯ ಯಾತ್ರೆಯನ್ನು ಪ್ರಾರಂಭಿಸಿದರು. ಅಲ್ಲಿಂದ ನಡೆದ ಸಂಗತಿಗಳು ಇತ್ತೀಚಿನವಾದ್ದರಿಂದ ಇಲ್ಲಿ ಹೇಳತಕ್ಕುವಲ್ಲ. ಲಕ್ಷಾವಧಿ ಜನರು ಸೆರೆಮನೆಗಳಿಗೆ ಹೊರಟುದನ್ನೂ **ಗಾಂಧೀ ಇರ್ವಿನ್ ಒಪ್ಪಂದ**ವನ್ನೂ ಚಕ್ರಗೋಷ್ಠಿಗಳ ವೃತ್ತಾಂತವನ್ನೂ ಬೇರೆಡೆಗಳಲ್ಲಿ ವಿದ್ಯಾರ್ಥಿಗಳು ಸಂಗ್ರಹಿಸಿಕೊಳ್ಳಬೇಕು.

ಅತಿಸ್ಥೂಲವಾಗಿಯೂ ಸಂಕ್ಷೇಪವಾಗಿಯೂ ಭಾರತೀಯ ರಾಷ್ಟ್ರ ಜಾಗೃತಿಯನ್ನು ಅಥವಾ ಸ್ವರಾಜ್ಯ ಸಾಧನೆಯ ಪ್ರಯತ್ನವನ್ನು ಕಂಡುದಾಯಿತು. ಈ ವಿವರದಲ್ಲಿ ಲುಪ್ತವಾಗಿರುವ ಭಾಗವೇ ಹೆಚ್ಚಾಗಿರುತ್ತದೆ. ಯೋಗ್ಯರೀತಿಯಿಂದ ಸ್ಥಿತಿಗತಿಗಳನ್ನು ತಿಳಿಯಲು ಅಪೇಕ್ಷಿಸುವವರು ಇತರ ಗ್ರಂಥಗಳನ್ನು ಆಶ್ರಯಿಸಬೇಕು.

ಸ್ವರಾಜ್ಯ ಧ್ಯೇಯ

**ಸ್ವರಾಜ್ಯ** ಪ್ರಾಪ್ತಿಯೆಂದರೇನೆಂಬುದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳತಕ್ಕದ್ದು ಅವಶ್ಯಕ. ಮೊದಮೊದಲು ಕಾಂಗ್ರೆಸ್ ಪಕ್ಷದವರು ಪ್ರಾತಿನಿಧ್ಯ ತತ್ವಗಳ ಆಚರಣೆಯೇ ಮುಖ್ಯವೆಂದು ನಂಬಿ ಕೆಲಕಾಲದ ತರುವಾಯ ಆಡಳಿತದಲ್ಲಿ ಭಾಗವನ್ನು ಆಶಿಸಿದರು; ಹಿರಿಯ ಅಧಿಕಾರಿವರ್ಗದಲ್ಲಿ ಭಾರತೀಯರಿಗೆ ಪ್ರವೇಶವೂ ಭಾಗವೂ ಇರತಕ್ಕುದೆಂದು ವಾದಿಸುತ್ತಿದ್ದರು. ಆರ್ಥಿಕ ಸ್ಥಿತಿಗತಿಗಳ ತಿಳಿವು ಹೆಚ್ಚಾಗುತ್ತ ಲಕ್ಷ್ಯದಲ್ಲಿ ವಿಸ್ತಾರವೂ ತೋರಿಕೊಂಡಿತು. ಗೋಖಲೆಯವರು ವಿದ್ಯಾಪ್ರಚಾರವೇ ಮುಖ್ಯವೆಂದು ವಾದಿಸುತ್ತಲಿದ್ದರು. ಗಾಂಧೀಜಿಯವರು ತೋರಿಕೊಂಡ ತರುವಾಯ ಸ್ವರಾಜ್ಯ ಕಲ್ಪನೆಯಲ್ಲಿಯೇ ವಿಶೇಷವಾದ ಭೇದವು ತೋರಿತು. ರಾಷ್ಟ್ರ ಸ್ವರೂಪದಲ್ಲಿ ಮಾತ್ರ ಬದಲಾದರೆ ಸ್ವರಾಜ್ಯ ಪ್ರಾಪ್ತಿಯಲ್ಲ. ದೇಶೀಯರ ಆರ್ಥಿಕ ಸ್ಥಿತಿಗತಿಗಳನ್ನು ಉದ್ಧರಿಸಿ, ಭಾರತೀಯರ ವೈಶಿಷ್ಟ್ಯವನ್ನು ರಕ್ಷಿಸಿ

ಜಗತ್ತಿನಲ್ಲಿ ಭಾರತೀಯರು ಯೋಗ್ಯವಾದ ಸ್ಥಾನಪದವಿಗಳನ್ನು ಪಡೆಯ ತಕ್ಕುದು ಸ್ವರಾಜ್ಯವೆಂದೆನಿಸಿತು. ಭರತವರ್ಷದ ಸ್ವಾತಂತ್ರ್ಯ ಮಾತ್ರವಲ್ಲದೆ ಸುಸ್ಥಿತಿ ಅಥವಾ ಪೂರ್ಣವಿಕಾಸವು ಸ್ವರಾಜ್ಯ ಧ್ಯೇಯದಲ್ಲಿ ಅಡಗಿದೆ. ಪೌರಸ್ತ್ಯ ಹೃದಯವಾಗಿ ವಿಶಿಷ್ಟ ಸಂಸ್ಕೃತಿಯುಕ್ತವಾಗಿ ಪಾಶ್ಚಾತ್ಯ ಸಂಸ್ಕೃತಿಯೊಂದಿಗೆ ಭಾರತವರ್ಷವು ನಡೆಸುವ ಆತ್ಮವಿಕಾಸ ಪ್ರಯತ್ನವೂ ಅದರ ಭಾಗವಾಗಿದೆ. ಜಗತ್ತಿನಲ್ಲಿ ವಿಪ್ಲವಗಳನ್ನೂ ಅನರ್ಥಗಳನ್ನೂ ಉಂಟುಮಾಡುತ್ತಿರುವ ಪ್ರಬಲ ಸಮಸ್ಯೆಗಳ ಪೂರಣದಲ್ಲಿ ಭಾರತೀಯರು ಉಚಿತವಾದ ಕರ್ತವ್ಯಭಾಗವನ್ನು ವಹಿಸಿ, ಜಗತ್ತಿನಲ್ಲಿ ಯಥಾಯೋಗ್ಯವಾದ ಸ್ಥಾನವನ್ನೂ ಪದವಿಯನ್ನೂ ಪಡೆಯುವುದು ಸ್ವರಾಜ್ಯ ಪ್ರಾಪ್ತಿಯ ಕನಸಿನ ಭಾಗ.

ಪೂರ್ವಭಾವಿಯಾಗಿ ಈ ವೃತ್ತಾಂತವನ್ನು ತಿಳಿದ ತರುವಾಯವೇ ಭಾರತೀಯ ಸಮಸ್ಯೆಗಳನ್ನೂ ತೊಡಕುಗಳನ್ನೂ ಕಾಣುವ ಪ್ರಯತ್ನ ಮಾಡತಕ್ಕುದು. ಇನ್ನು ಮುಂದೆ ಮುಖ್ಯವಾದ ಕೆಲವು ವಿಷಯಗಳನ್ನು ಮಾತ್ರ ಸ್ಥೂಲ ರೀತಿಯಲ್ಲಿ ಕಾಣಲಾಗುವುದು.

# V. ಭಾರತೀಯ ಸಮಸ್ಯೆಗಳು

# 1. ಪೀಠಿಕೆ

**ತರುಣರ ಭಾಗ್ಯ; ಸಮಸ್ಯೆಗಳು ಮಹತ್ವದ್ದು, ಅನೇಕ, ದೇಶೋವಿಶಾಲ, ಅನ್ಯೋನ್ಯ; ಆತ್ಮಾವಲಂಬನೆ; ಕಾನೂನು ಕಟ್ಟಳೆಗಳ ಮೇರೆ; ಭಾರತೀಯ ವಿಧಾನ, ದುರ್ವಿದಗ್ಧತೆ.**

*ತರುಣರ ಸುಯೋಗ*

ಈಗಿರುವ ಸ್ಥಿತಿಯಲ್ಲಿ ಭರತವರ್ಷವು ಭಾರತೀಯರಿಗೆ ಮಾತ್ರವೇ ಅಲ್ಲದೆ ಬ್ರಿಟಿಷರಿಗೂ ಇತರರಿಗೂ ಘೋರವಾದ ಸಮಸ್ಯೆಯಾಗಿದೆ. ಭಾರತೀಯ ಜೀವನದಲ್ಲಿ ಪ್ರತ್ಯಂಶವೂ ಭಾರಿ ಸಮಸ್ಯೆಯಾಗಿ ಪರಿಣಮಿಸಿ ತ್ವರಿತವಾದ ಪರಿಹಾರವನ್ನೇ ಬಯಸುತ್ತದೆ. ಜನ್ಮಭೂಮಿಯ ಸೇವೆಯನ್ನು ಕೈಕೊಂಡು ವಿಷಮಸ್ಥಿತಿಯಿಂದ ದೇಶವನ್ನು ಉದ್ಧರಿಸುವ ಸುಯೋಗವು ಭಾರತೀಯ ತರುಣರಿಗೆ ಲಭಿಸಿದೆ. ಇಂದಿನ ತರುಣರೇ ನಾಳೆಯ ಪೌರರಾಗತಕ್ಕವರು, ರಾಷ್ಟ್ರಕರ್ತರಾಗಿ ರಾಷ್ಟ್ರವನ್ನು ಉದ್ಧರಿಸತಕ್ಕವರು. ಆದ್ದರಿಂದ ಅವರು ತಮ್ಮ ದೇಶದ ಸ್ಥಿತಿಗತಿಗಳನ್ನು ಶ್ರದ್ಧಾಭಕ್ತಿಗಳಿಂದ ತಿಳಿಯತಕ್ಕದ್ದಾಗಿದೆ.

*ಸಮಸ್ಯೆಗಳು ಮಹತ್ವದ್ದು*

ಮೊಟ್ಟಮೊದಲೇ ಭರತವರ್ಷದ ವಿಸ್ತಾರವನ್ನೂ ಭಾರತೀಯರ ಸಂಖ್ಯಾಬಲವನ್ನೂ ನೆನಪಿನಲ್ಲಿಟ್ಟುಕೊಳ್ಳಬೇಕು. ಇಟಲಿ, ಫ್ರಾನ್ಸ್, ಇಂಗ್ಲೆಂಡ್ ಮುಂತಾದ ದೇಶಗಳ ಮುಂದಿರುವ ತೊಡಕುಗಳಿಗೂ ಭಾರತೀಯ ತೊಡಕುಗಳಿಗೂ ಅಜಗಜಾಂತರವುಂಟು. ಭಾರತೀಯ ಸಮಸ್ಯೆಗಳಲ್ಲಿ ಬಲು ಕಿರಿದಾದುದೆಂಬುದು ಕೂಡ ಮಹಾವಿಶಾಲವಾದ ದೇಶಕ್ಕೂ ಮಾನವರಾಶಿಯ ಆರನೆಯ ಒಂದು ಪಾಲಿಗೂ ಸಂಬಂಧಿಸಿದ್ದರಿಂದ ಹಿರಿದೆಂದೇ ಎನ್ನಿಸತಕ್ಕುದು. ದೇಶದ ಪ್ರಾಕೃತಿಕ ಲಕ್ಷಣಗಳೂ ದೇಶೀಯರ ಸಂಸ್ಕೃತಿ ಸಂಪ್ರದಾಯ ಸಂಪತ್ತುಗಳೂ ಹಾಗೆಯೇ ಸದಾ ಸ್ಮರಣೆಯಲ್ಲಿರತಕ್ಕವು. ಏಕಂದರೆ ಭಾರತೀಯರು ಅನುಭವಿಸುವ ಕಷ್ಟಗಳು ನಿವಾರಣೆಯಾಗತಕ್ಕದ್ದು ಆ ಸ್ಥಿತಿಗತಿಗಳಿಗೂ ಆ ಸಂಪ್ರದಾಯಕ್ಕೂ ಅನುಸಾರವಾಗಿಯೇ. ಭಾರತೀಯ ಸಮಸ್ಯಾ

ಪೂರಣವು ಭಾರತೀಯ ರೀತಿನೀತಿಗಳಿಗೆ ಅನುಗುಣವಾಗಿಯೇ ನಡೆಯುತಕ್ಕುದು.

—ಅನೇಕ

ತೊಡಕುಗಳು ಅನೇಕಾನೇಕವಾಗಿವೆ; ಪ್ರತಿಯೊಂದರ ಪರಿಚಯಕ್ಕೂ ವಿಶೇಷವಾದ ಪರಿಜ್ಞಾನವೇ ಬೇಕು. ಮೊದಲು ಅವುಗಳನ್ನು ವೈಯಕ್ತಿಕ, ಸ್ಥಳೀಯ, ಪ್ರಾದೇಶಿಕ ಮತ್ತು ರಾಷ್ಟ್ರೀಯಗಳೆಂದು ನಮ್ಮ ಅನುಕೂಲಕ್ಕಾಗಿ ವಿಂಗಡಿಸಿಕೊಳ್ಳಬಹುದು. ಹಲಕೆಲವು ತೊಂದರೆಗಳು ಹಲಕೆಲವರ ಪ್ರಯತ್ನದಿಂದ ನಿವಾರಣೆಯಾಗಬಹುದು; ಆದರೆ ಬಹುಭಾಗವು ರಾಷ್ಟ್ರದಷ್ಟೇ ವಿಶಾಲವಾಗಿರುವುದರಿಂದ ಹಲಕೆಲವರ ಪ್ರಯತ್ನದಿಂದ ಸಾಧ್ಯವೇ ಅಲ್ಲ. ಆದ್ದರಿಂದ ಎಷ್ಟು ಭಾಗವನ್ನು ಪೌರರೇ ನಿರ್ವಹಿಸಬೇಕೆಂದೂ ಎಷ್ಟು ಭಾಗವನ್ನು ಆಡಳಿತದವರು ನಿರ್ವಹಿಸಬೇಕೆಂದೂ ವಿಚಾರ ಮಾಡಬೇಕು. ಸ್ವಲ್ಪ ದೂರ ಪರೀಕ್ಷೆ ಮಾಡುವಷ್ಟರಲ್ಲಿಯೇ ತೊಂದರೆಗಳು ಪರಸ್ಪರ ಸಂಬಂಧವನ್ನು ಪಡೆದಿರತಕ್ಕವೆಂದೂ ಯಾವುದೋ ಪ್ರಬಲವಾದ ಒಂದು ವ್ಯಾಧಿಯ ನಾನಾ ಲಕ್ಷಣಗಳೆಂದೂ ಭಾಸವಾಗುವುದು. ಅವು ಸ್ಥಳೀಯವಾಗಿಯೂ ಇರಬಹುದು, ಸಕಲ ರಾಷ್ಟ್ರೀಯವಾಗಿಯೂ ಇರಬಹುದು; ಆದ್ದರಿಂದ ನಿವಾರಣೋಪಾಯವೂ ಪ್ರಯತ್ನವೂ ಸ್ಥಳೀಯವಾಗಿಯೂ ಇರತಕ್ಕುದು, ರಾಷ್ಟ್ರೀಯವಾಗಿಯೂ ಇರತಕ್ಕುದು. ರಾಷ್ಟ್ರದೇಹದಲ್ಲಿ ಯಾವುದೋ ಒಂದು ಅಂಗವನ್ನಲ್ಲದೆ ಅಂಗಾಂಗಗಳನ್ನೂ ಗ್ರಹಿಸಿದ ವ್ಯಾಧಿಯು ತೋರಿದಾಗ ಅದಕ್ಕೆ ತಕ್ಕ ಚಿಕಿತ್ಸೆಯನ್ನು ದೇಹವೆಲ್ಲವೂ ಏಕವಾಗಿ ನಡೆಸಬೇಕು. ರಾಷ್ಟ್ರಮುಖವಾದ ಸರ್ಕಾರವೇ ನಿವಾರಣಭಾರದಲ್ಲಿ ವಿಶೇಷ ಭಾಗವನ್ನು ತಾಳಬೇಕಾಗುತ್ತದೆ.

—ದೇಶೋವಿಶಾಲ

—ಅನ್ಯೋನ್ಯ

ತೊಂದರೆ ತೊಡಕುಗಳು ವಿಶಾಲವಾಗಿ ಹರಡಿಕೊಂಡಿರುವುದು ಮಾತ್ರವೇ ಅಲ್ಲದೆ ಬೇರೂರಿ ಬಲಗೊಂಡು ಗಹನವೂ ಗಭೀರವೂ ಆಗಿವೆಯಾದ ಕಾರಣದಿಂದ ಸರ್ಕಾರ ಮಾತ್ರವೇ ಅಲ್ಲದೆ ರಾಷ್ಟ್ರದ ಪೌರರೆಲ್ಲರೂ ಉದ್ಧಾರಪ್ರಯತ್ನದಲ್ಲಿ ತ್ರಿಕರಣಶುದ್ಧಿಯಿಂದ ನಿರತರಾಗಬೇಕು. ಪೌರ

ಸಮೂಹದ ಸಹಕಾರವಿಲ್ಲದೆ ಸರ್ಕಾರದವರು ಕೃತಕೃತ್ಯರಾಗಲಾರರು; ಸರ್ಕಾರದವರ ಬೆಂಬಲವಿಲ್ಲದೆ ಪೌರರೂ ಕೃತಾರ್ಥರಾಗಲಾರರು. ಸರ್ಕಾರದ ಬಲಪ್ರಯೋಗದಿಂದ ನಡೆಯುವ ಸುಧಾರಣೆಯ ಪ್ರಯತ್ನಕ್ಕಾಗಲಿ ಅಸಹಾಯರಾದ ಪೌರರಿಂದ ನಡೆಯುವ ಸಂಸ್ಕಾರೋದ್ಯಮಕ್ಕಾಗಲಿ ಬಲವಿರುವುದಿಲ್ಲ; ಧ್ರುವಫಲವು ಲಭಿಸುವುದಿಲ್ಲ. ಬಂಡಿಯನ್ನೆಳೆಯುವ ಎತ್ತುಗಳು ಒಂದೊಂದು ಒಂದೊಂದು ಪಕ್ಕಕ್ಕೆ ಎಳೆಯುತ್ತಿದ್ದರೆ ಬಂಡಿಯು ಇದ್ದಲ್ಲಿಯೇ ಇರುವುದಲ್ಲದೆ ಮುರಿದೂ ಹೋಗಬಹುದು. ತೊಂದರೆಗಳನ್ನು ಸಮಗ್ರವಾಗಿ ಕಂಡಪಕ್ಷದಲ್ಲಿ ಸರ್ಕಾರದವರೂ ಪೌರರೂ ಅನ್ಯೋನ್ಯತೆಯಿಂದ ಕೂಡಿ ಕೃತಪ್ರಯತ್ನರಾದರೂ ನಿವಾರಣೆಯು ತೃಪ್ತಿಕರವಾಗಿ ಸಿದ್ಧಿಸುವುದೋ ಇಲ್ಲವೋ ಎಂಬ ಶಂಕೆಯು ತೋರುವುದು.

**ಆತ್ಮಾವಲಂಬನೆ**

ಪ್ರತಿ ಕರ್ತವ್ಯದ ಭಾರವನ್ನೂ ಸರ್ಕಾರಕ್ಕೆ ಒಪ್ಪಿಸಿ ಸರ್ಕಾರದವರಿಂದಲೇ ಅನುಕೂಲಪ್ರಾಪ್ತಿಯನ್ನು ನಿರೀಕ್ಷಿಸಿದಲ್ಲಿ ಪೌರಸಮೂಹದವರು ದೌರ್ಬಲ್ಯವನ್ನು ಕಟ್ಟಿಕೊಳ್ಳುವುದಲ್ಲದೆ ಆಡಳಿತದವರ ಕರ್ತವ್ಯಭಾರವು ವಿಪರೀತವಾಗಿ ಪರಿಣಮಿಸಿ ಬಂಡಿಗೆ ಮುಂಭಾರವೇರಿದಂತೆಯೇ ಆಗುವುದು. ಭಾರತೀಯ ಸಂಪ್ರದಾಯಕ್ಕೆ ಅನುಸಾರವಾಗಿ ಪೌರರು ತಮ್ಮ ಅನುಕೂಲಗಳನ್ನು ಸರ್ಕಾರದವರಿಂದ ನಿರೀಕ್ಷಿಸತಕ್ಕುದೇ ಅಲ್ಲ. ಪ್ರತಿ ಗ್ರಾಮದ ಗ್ರಾಮಸ್ಥರು ತಮ್ಮ ಸಮುದಾಯ ಸಂಸ್ಥೆಗಳಿಂದ ತಂತಮ್ಮ ಗ್ರಾಮಗಳ ಸುಸ್ಥಿತಿಯನ್ನು ಸಾಧಿಸಿಕೊಳ್ಳುತ್ತಲೂ, ಪ್ರತಿ ಜಾತಿಯವರು ತಂತಮ್ಮ ಜಾತಿ ಪಂಚಾಯತಿಗಳಿಂದ ತಮ್ಮ ಧರ್ಮವನ್ನು ಪಾಲಿಸುತ್ತಲೂ ಇದ್ದ ಕಾಲದಲ್ಲಿ ಸ್ವಕಾರ್ಯವನ್ನು ಇತರರಿಗೆ ಒಪ್ಪಿಸುವ ಆಚಾರವೇ ಇರಲಿಲ್ಲ. ಆತ್ಮಾವಲಂಬನೆಯೇ ಮೂಲತತ್ವವಾಗಿದ್ದಿತು; ಮೂಲತತ್ವವಾಗಿಯೇ ಇರತಕ್ಕುದು. "ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀರ್ದೈವೇನ ದೇಯಮಿತಿ ಕಾಪುರುಷಾ ವದಂತಿ" ಎಂಬುದು ಸುಪ್ರಸಿದ್ಧವಾದ ಆರ್ಯೋಕ್ತಿ. ವ್ಯಕ್ತಿ, ಕುಟುಂಬ, ಜಾತಿಗಳಲ್ಲಿ ಆತ್ಮಾವಲಂಬನವೇ ಭದ್ರಗೊಂಡಲ್ಲಿ ಒಟ್ಟು ಜನರಲ್ಲಿಯೇ ಧೈರ್ಯದಕ್ಷತೆಗಳು ಭದ್ರಗುಣಗಳಾಗಿ ಪರಿಣಮಿಸಿ ರಾಷ್ಟ್ರೋನ್ನತಿಗೆ ಮುಖ್ಯ ಸಾಧಕವು ಸಿದ್ಧವಾಗುವುದು.

ಪೂರಣವು ಭಾರತೀಯ ರೀತಿನೀತಿಗಳಿಗೆ ಅನುಗುಣವಾಗಿಯೇ ನಡೆಯು ತಕ್ಕುದು.

—ಅನೇಕ

ತೊಡಕುಗಳು ಅನೇಕಾನೇಕವಾಗಿವೆ; ಪ್ರತಿಯೊಂದರ ಪರಿಚಯಕ್ಕೂ ವಿಶೇಷವಾದ ಪರಿಜ್ಞಾನವೇ ಬೇಕು. ಮೊದಲು ಅವುಗಳನ್ನು ವೈಯಕ್ತಿಕ, ಸ್ಥಳೀಯ, ಪ್ರಾದೇಶಿಕ ಮತ್ತು ರಾಷ್ಟ್ರೀಯಗಳೆಂದು ನಮ್ಮ ಅನುಕೂಲಕ್ಕಾಗಿ ವಿಂಗಡಿಸಿಕೊಳ್ಳಬಹುದು. ಹಲಕೆಲವು ತೊಂದರೆಗಳು ಹಲಕೆಲವರ ಪ್ರಯತ್ನದಿಂದ ನಿವಾರಣೆಯಾಗಬಹುದು; ಆದರೆ ಬಹು ಭಾಗವು ರಾಷ್ಟ್ರದಷ್ಟೇ ವಿಶಾಲವಾಗಿರುವುದರಿಂದ ಹಲಕೆಲವರ ಪ್ರಯತ್ನ ದಿಂದ ಸಾಧ್ಯವೇ ಅಲ್ಲ. ಆದ್ದರಿಂದ ಎಷ್ಟು ಭಾಗವನ್ನು ಪೌರರೇ ನಿರ್ವಹಿಸ ಬೇಕೆಂದೂ ಎಷ್ಟು ಭಾಗವನ್ನು ಆಡಳಿತದವರು ನಿರ್ವಹಿಸಬೇಕೆಂದೂ ವಿಚಾರ ಮಾಡಬೇಕು. ಸ್ವಲ್ಪ ದೂರ ಪರೀಕ್ಷೆ ಮಾಡುವಷ್ಟರಲ್ಲಿಯೇ ತೊಂದರೆ ಗಳು ಪರಸ್ಪರ ಸಂಬಂಧವನ್ನು ಪಡೆದಿರತಕ್ಕವೆಂದೂ ಯಾವುದೋ ಪ್ರಬಲವಾದ ಒಂದು ವ್ಯಾಧಿಯ ನಾನಾ ಲಕ್ಷಣಗಳೆಂದೂ ಭಾಸವಾಗು ವುದು. ಅವು ಸ್ಥಳೀಯವಾಗಿಯೂ ಇರಬಹುದು, ಸಕಲ ರಾಷ್ಟ್ರೀಯ ವಾಗಿಯೂ ಇರಬಹುದು; ಆದ್ದರಿಂದ ನಿವಾರಣೋಪಾಯವೂ ಪ್ರಯತ್ನವೂ ಸ್ಥಳೀಯವಾಗಿಯೂ ಇರತಕ್ಕುದು, ರಾಷ್ಟ್ರೀಯವಾಗಿಯೂ ಇರ ತಕ್ಕುದು. ರಾಷ್ಟ್ರದೇಹದಲ್ಲಿ ಯಾವುದೋ ಒಂದು ಅಂಗವನ್ನಲ್ಲದೆ ಅಂಗಾಂಗಗಳನ್ನೂ ಗ್ರಹಿಸಿದ ವ್ಯಾಧಿಯು ತೋರಿದಾಗ ಅದಕ್ಕೆ ತಕ್ಕ ಚಿಕಿತ್ಸೆಯನ್ನು ದೇಹವೆಲ್ಲವೂ ಏಕವಾಗಿ ನಡೆಸಬೇಕು. ರಾಷ್ಟ್ರ ಮುಖವಾದ ಸರ್ಕಾರವೇ ನಿವಾರಣಭಾರದಲ್ಲಿ ವಿಶೇಷ ಭಾಗವನ್ನು ತಾಳ ಬೇಕಾಗುತ್ತದೆ.

—ದೇಶೋವಿಶಾಲ

—ಅನ್ಯೋನ್ಯ

ತೊಂದರೆ ತೊಡಕುಗಳು ವಿಶಾಲವಾಗಿ ಹರಡಿಕೊಂಡಿರುವುದು ಮಾತ್ರವೇ ಅಲ್ಲದೆ ಬೇರೂರಿ ಬಲಗೊಂಡು ಗಹನವೂ ಗಭೀರವೂ ಆಗಿವೆಯಾದ ಕಾರಣದಿಂದ ಸರ್ಕಾರ ಮಾತ್ರವೇ ಅಲ್ಲದೆ ರಾಷ್ಟ್ರದ ಪೌರರೆಲ್ಲರೂ ಉದ್ಧಾರಪ್ರಯತ್ನದಲ್ಲಿ ತ್ರಿಕರಣಶುದ್ಧಿಯಿಂದ ನಿರತರಾಗಬೇಕು. ಪೌರ

ಸಮೂಹದ ಸಹಕಾರವಿಲ್ಲದೆ ಸರ್ಕಾರದವರು ಕೃತಕೃತ್ಯರಾಗಲಾರರು; ಸರ್ಕಾರದವರ ಬೆಂಬಲವಿಲ್ಲದೆ ಪೌರರೂ ಕೃತಾರ್ಥರಾಗಲಾರರು. ಸರ್ಕಾರದ ಬಲಪ್ರಯೋಗದಿಂದ ನಡೆಯುವ ಸುಧಾರಣೆಯ ಪ್ರಯತ್ನಕ್ಕಾಗಲಿ ಅಸಹಾಯರಾದ ಪೌರರಿಂದ ನಡೆಯುವ ಸಂಸ್ಕಾರೋದ್ಯಮಕ್ಕಾಗಲಿ ಬಲವಿರುವುದಿಲ್ಲ; ಧ್ರುವಫಲವು ಲಭಿಸುವುದಿಲ್ಲ. ಬಂಡಿಯನ್ನೆಳೆಯುವ ಎತ್ತುಗಳು ಒಂದೊಂದು ಒಂದೊಂದು ಪಕ್ಕಕ್ಕೆ ಎಳೆಯುತ್ತಿದ್ದರೆ ಬಂಡಿಯು ಇದ್ದಲ್ಲಿಯೇ ಇರುವುದಲ್ಲದೆ ಮುರಿದೂ ಹೋಗಬಹುದು. ತೊಂದರೆಗಳನ್ನು ಸಮಗ್ರವಾಗಿ ಕಂಡಪಕ್ಷದಲ್ಲಿ ಸರ್ಕಾರದವರೂ ಪೌರರೂ ಅನ್ಯೋನ್ಯತೆಯಿಂದ ಕೂಡಿ ಕೃತಪ್ರಯತ್ನರಾದರೂ ನಿವಾರಣೆಯು ತೃಪ್ತಿಕರವಾಗಿ ಸಿದ್ಧಿಸುವುದೋ ಇಲ್ಲವೋ ಎಂಬ ಶಂಕೆಯು ತೋರುವುದು.

**ಆತ್ಮಾವಲಂಬನೆ**

ಪ್ರತಿ ಕರ್ತವ್ಯದ ಭಾರವನ್ನೂ ಸರ್ಕಾರಕ್ಕೆ ಒಪ್ಪಿಸಿ ಸರ್ಕಾರದವರಿಂದಲೇ ಅನುಕೂಲಪ್ರಾಪ್ತಿಯನ್ನು ನಿರೀಕ್ಷಿಸಿದಲ್ಲಿ ಪೌರಸಮೂಹದವರು ದೌರ್ಬಲ್ಯವನ್ನು ಕಟ್ಟಿಕೊಳ್ಳುವುದಲ್ಲದೆ ಆಡಳಿತದವರ ಕರ್ತವ್ಯಭಾರವು ವಿಪರೀತವಾಗಿ ಪರಿಣಮಿಸಿ ಬಂಡಿಗೆ ಮುಂಭಾರವೇರಿದಂತೆಯೇ ಆಗುವುದು. ಭಾರತೀಯ ಸಂಪ್ರದಾಯಕ್ಕೆ ಅನುಸಾರವಾಗಿ ಪೌರರು ತಮ್ಮ ಅನುಕೂಲಗಳನ್ನು ಸರ್ಕಾರದವರಿಂದ ನಿರೀಕ್ಷಿಸತಕ್ಕುದೇ ಅಲ್ಲ. ಪ್ರತಿ ಗ್ರಾಮದ ಗ್ರಾಮಸ್ಥರು ತಮ್ಮ ಸಮುದಾಯ ಸಂಸ್ಥೆಗಳಿಂದ ತಂತಮ್ಮ ಗ್ರಾಮಗಳ ಸುಸ್ಥಿತಿಯನ್ನು ಸಾಧಿಸಿಕೊಳ್ಳುತ್ತಲೂ, ಪ್ರತಿ ಜಾತಿಯವರು ತಂತಮ್ಮ ಜಾತಿ ಪಂಚಾಯತಿಗಳಿಂದ ತಮ್ಮ ಧರ್ಮವನ್ನು ಪಾಲಿಸುತ್ತಲೂ ಇದ್ದ ಕಾಲದಲ್ಲಿ ಸ್ವಕಾರ್ಯವನ್ನು ಇತರರಿಗೆ ಒಪ್ಪಿಸುವ ಆಚಾರವೇ ಇರಲಿಲ್ಲ. ಆತ್ಮಾವಲಂಬನೆಯೇ ಮೂಲತತ್ತ್ವವಾಗಿದ್ದಿತು; ಮೂಲತತ್ತ್ವವಾಗಿಯೇ ಇರತಕ್ಕುದು. "ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀರ್ದೈವೇನ ದೇಯಮಿತಿ ಕಾಪುರುಷಾ ವದಂತಿ" ಎಂಬುದು ಸುಪ್ರಸಿದ್ಧವಾದ ಆರ್ಯೋಕ್ತಿ. ವ್ಯಕ್ತಿ, ಕುಟುಂಬ, ಜಾತಿಗಳಲ್ಲಿ ಆತ್ಮಾವಲಂಬನವೇ ಭದ್ರಗೊಂಡಲ್ಲಿ ಒಟ್ಟು ಜನರಲ್ಲಿಯೇ ಧೈರ್ಯ ದಕ್ಷತೆಗಳು ಭದ್ರಗುಣಗಳಾಗಿ ಪರಿಣಮಿಸಿ ರಾಷ್ಟ್ರೋನ್ನತಿಗೆ ಮುಖ್ಯ ಸಾಧಕವು ಸಿದ್ಧವಾಗುವುದು.

ಕಾನೂನು ಕಟ್ಟಳೆಗಳ ಮೇರೆ

ಭಾರತೀಯ ನೀತಿಯ ಒಂದು ಲಕ್ಷಣವನ್ನು ನಾವು ಮರೆಯ ತಕ್ಕುದಲ್ಲ. ಭಾರತೀಯ ಜೀವನದಲ್ಲಿ ರಾಷ್ಟ್ರ ವಿಧಿಯಿಂದ ಸಾಧಿತವಾದ ಮೇಲ್ಮೆಯು ಜಾತಿ ಸಂಪ್ರದಾಯಗಳಿಂದ ಸಾಧಿತವಾದ ಮೇಲ್ಮೆಗಿಂತಲೂ ಕಡಿಮೆಯಾದುದು. ವಿಧಿ ನಿಬಂಧನೆಗಳನ್ನು ರೂಪಗೊಳಿಸಿದಾಗ ಅವುಗಳನ್ನು ಯಾರೂ ಅತಿಕ್ರಮಿಸದಂತೆ ಪಾಲಿಸಲು ವರ್ಷೇ ವರ್ಷೇ ರಾಷ್ಟ್ರಾದಾಯ ಭಾಗವನ್ನು ವೆಚ್ಚಗೊಳಿಸಿ ನ್ಯಾಯಸ್ಥಾನಗಳನ್ನೂ ಕಂಟಕಗ್ರಾಹಿಗಳನ್ನೂ ಪೋಷಿಸುತ್ತಿರಬೇಕು. ಜಾತ್ಯಾಚಾರಗಳಾಗಿ ನೆಲೆಸಿದಪಕ್ಷದಲ್ಲಿ ಪಾಲನೆಯು ಸುಲಭವಾಗಿ ನೆರವೇರುವುದು. ಇದಲ್ಲದೆ ನಮ್ಮ ದೇಶದಲ್ಲಿ ರಾಷ್ಟ್ರದ ಕಾನೂನು ನಿಬಂಧನೆಗಳನ್ನು ಉಲ್ಲಂಘಿಸಿದಂತೆ ಜಾತಿಪದ್ಧತಿ ಸಂಪ್ರದಾಯಗಳನ್ನು ಅತಿಕ್ರಮಿಸಲಾಗುವುದಿಲ್ಲ. ಉದಾಹರಣೆಗೆ ಬೀಡಿ ಸೇದುವುದು ಕೆಟ್ಟದ್ದೆಂದು ಶಾಸಕ ಸಭೆಗಳಲ್ಲಿ ಚರ್ಚೆಯಾಗಿ ಅದನ್ನು ನಿಷೇಧಿಸುವ ನಿಬಂಧನೆಯು ರಚಿತವಾದಲ್ಲಿ ಕಳ್ಳತನದಿಂದ ಬೀಡಿ ಸೇದುವುದೇ ಹೆಚ್ಚಾಗುತ್ತದೆ, ಬೀಡಿಗಳ ಬೆಲೆಯೂ ಏರುತ್ತದೆ. ನಿಬಂಧನೆಯನ್ನು ತಪ್ಪಿಸಿಕೊಳ್ಳಲು ವಿಧವಿಧವಾಗಿ ಪ್ರಯತ್ನ ನಡೆಯುತ್ತದೆ. ಆಗ ಉಪನಿಬಂಧನೆಗಳೂ ಇತರ ನಿಬಂಧನೆಗಳೂ ರಚಿತವಾಗಬೇಕಾಗುತ್ತದೆ; ಬೀಡಿ ನಿಬಂಧನೆಯೆಂಬುದು ವಿಸ್ತಾರವಾದ ಗ್ರಂಥವಾಗಿ ಪರಿಣಮಿಸುತ್ತದೆ. ಅವುಗಳನ್ನು ಪಾಲಿಸುವುದು ಶ್ರಮಸಾಧ್ಯವೋ ದುಸ್ಸಾಧ್ಯವೋ ಆಗುತ್ತದೆ. ಅದೇ ನಿಷೇಧವು ಜಾತಿ ಸಂಪ್ರದಾಯರೂಪವನ್ನು ಪಡೆದಲ್ಲಿ ಅದನ್ನು ತಪ್ಪಿಸಿಕೊಳ್ಳುವುದು ಸುಲಭವೇ ಆಗುವುದಿಲ್ಲ. ಭಾರತೀಯರಿಗೆ ಸೆರೆಮನೆ ಮುಂತಾದ ಶಿಕ್ಷೆಗಳಿಗಿಂತಲೂ ಜಾತಿಭ್ರಷ್ಟತೆಯೆಂಬುದು ಘೋರವಾದುದು; ಪ್ರಾಣವನ್ನಾದರೂ ಕೊಟ್ಟಾರು, ಜಾತಿಗೌರವವನ್ನು ನೀಗುವುದಿಲ್ಲ. ಹೀಗಿರುವುದರಿಂದ ಸಮಾಜದ ಸ್ಥಿತಿಗತಿಗಳನ್ನು ಹೊಂದಿಕೊಂಡಿರತಕ್ಕ ಉಪಾಯಗಳನ್ನು ಹುಡುಕಿ ಸುಧಾರಣೆಯ ಪ್ರಯತ್ನವನ್ನು ನಡೆಸುವುದರಲ್ಲಿ ಫಲಸಿದ್ಧಿಯು ಸುಲಭವಾಗಿಯೂ, ಕ್ಷಿಪ್ರವಾಗಿಯೂ, ಸ್ಥಿರವಾಗಿಯೂ ಒಡಗೂಡುವುದು.

ಆದ್ದರಿಂದ ಎಲ್ಲ ವಿಚಾರಗಳಲ್ಲಿಯೂ ಸರ್ಕಾರದ ಶಾಸನವನ್ನು ಮೊದಲಿಸಲ್ಲಿಯೇ ಬಯುಸತಕ್ಕುದಲ್ಲ. ಜನರ ಇಷ್ಟಾನಿಷ್ಟಗಳನ್ನು ಗಮನಿಸದೆ ಆಡಳಿತದವರು ಮುಂದಾಗಿ ಶಾಸನವನ್ನು ಸಿದ್ಧಪಡಿಸಿದರೆ ಮೇಲ್ಮೆಗೆ ಬದಲಾಗಿ ಕೇಡೇ ಸಂಭವಿಸಬಹುದು. ಸರ್ಕಾರದವರೇ ಎಲ್ಲ ವಿಷಯಗಳನ್ನೂ ಕಟ್ಟಿಕೊಂಡು ಶಾಸನಗಳನ್ನು ರಚಿಸುತ್ತ ಪಾಲಿಸುತ್ತ ಲಿರುವುದು ಅವಶ್ಯವೂ ಅಲ್ಲ, ಅಪೇಕ್ಷಣೀಯವೂ ಅಲ್ಲ. ಮೊದಲೇ ವಿಧಿ ರೂಪವನ್ನು ಕೊಟ್ಟು ಬಲವಂತದಿಂದ ಅದನ್ನು ಆಚರಿಸುವಂತೆ ಪ್ರಯತ್ನಿಸು ವುದಕ್ಕಿಂತಲೂ ಜನರಿಗೆ ಉತ್ತಮವೆಂದು ತೋರಿಬಂದು ಸಂಪ್ರದಾಯವಾಗಿ ನೆಲೆಗೊಂಡ ಆಚರಣೆಯನ್ನು ವಿಧಿರೂಪದಲ್ಲಿ ಸಿದ್ಧಗೊಳಿಸುವುದು ಸಹಸ್ರ ಪಾಲು ಮೇಲು.

ಆದ್ದರಿಂದ ಭಾರತೀಯ ಪೌರನಾಗತಕ್ಕವನು ಭಾರತೀಯ ಸಮಸ್ಯೆ ಗಳನ್ನು ಕುರಿತು

(1) ಸಮಸ್ಯೆಗಳು ದೇಶೋವಿಶಾಲವಾದವು,

(2) ನಿವಾರಣೆ ಪ್ರಯತ್ನಗಳು ಭಾರತೀಯವಾಗಿಯೇ ಇರಬೇಕು,

(3) ಪೌರರು ಆತ್ಮಾವಲಂಬಿಗಳಾಗಿಯೇ ನಿರ್ವಹಿಸಬೇಕು

ಎಂಬ ಮೂರಂಶಗಳನ್ನು ಮನಸ್ಸಿನಲ್ಲಿಟ್ಟುಕೊಂಡಿರಬೇಕು.

**ದುರ್ವಿದಗ್ಧತೆ**

ಅತಿಮುಖ್ಯವಾದ ಈ ವಿಷಯಗಳನ್ನು ಆಮೂಲಾಗ್ರವಾಗಿ ತಿಳಿಯಲು ದೀರ್ಘಕಾಲದ ವ್ಯಾಸಂಗವೂ ಚರ್ಚೆಯೂ ಅವಶ್ಯ. ನಿಷ್ಕೃಷ್ಟವಾದ ಪರಿಜ್ಞಾನವು ಸುಲಭವಲ್ಲ. ಸ್ಥೂಲರೀತಿಯಲ್ಲಿ ಅಥವಾ ಸಂಕ್ಷೇಪವಾಗಿ ವಿಷಯ ಪರಿಚಯಮಾಡಿಕೊಳ್ಳುವ ಪ್ರಯತ್ನದಲ್ಲಿ ಬಲವತ್ತರವಾದ ವಿಪತ್ತು ತೋರಿಕೊಳ್ಳಬಹುದು. ಇದುವರೆಗೆ ಅನೇಕರು ಭಾರತೀಯರ ಕಷ್ಟ ಗಳನ್ನು ಪರೀಕ್ಷೆಗೆ ಗುರಿಮಾಡಿದ್ದಾಗ್ಯೂ ಅನೇಕಾನೇಕ ಅಂಶಗಳಲ್ಲಿ ಭಿನ್ನಾಭಿಪ್ರಾಯಗಳು ಹೇರಳ. ತೊಡಕಿಗೆ ಸಿಕ್ಕದೆ ಇರುವಂತೆ ಮೊದಲೇ ನಾವು ಅಭಿಪ್ರಾಯ, ಅಭಿಮತಗಳೆಂಬುವನ್ನು ವಸ್ತುಸ್ಥಿತಿಗತಿಗಳ ಅಂಶ ಗಳಿಂದ ಅಥವಾ ಸಂಗತಿಗಳಿಂದ ಬೇರ್ಪಡಿಸಿಕೊಳ್ಳಬೇಕು. ವ್ಯಕ್ತಿಗಳು

ಅಭಿಪ್ರಾಯಗಳನ್ನು ಆಗಾಗ್ಗೆ ಬದಲಾಯಿಸಬಹುದಾದ ರೀತಿಯಲ್ಲಿ ಸಂಗತಿಗಳು ಬದಲಾಗುವುದಿಲ್ಲ. ಅಭಿಪ್ರಾಯ ನಿಶ್ಚಯವನ್ನು ಮಾಡಿ ಕೊಳ್ಳುವ ಮೊದಲು, ಯಾರಾದರೂ ಸರಿಯೆ, ಸ್ಥಿತಿಗತಿಗಳನ್ನು ಆಮೂಲಾಗ್ರ ವಾಗಿಯೂ ವಿವರವಾಗಿಯೂ ತಿಳಿದು, ಕಾರ್ಯಕಾರಣ ಸಂಬಂಧಗಳನ್ನು ಶಾಸ್ತ್ರೀಯವಾಗಿ ನಿಷ್ಕರ್ಷೆಮಾಡಿ, ಅನಂತರ ಅಭಿಪ್ರಾಯವನ್ನು ಕಟ್ಟಲು ಸಿದ್ಧನಾಗಬೇಕು. ಕೂಲಂಕಷ ವಿಚಾರವಿಲ್ಲದೆ ಆತುರತೆಯಿಂದಲೋ ಆಗ್ರಹದಿಂದಲೋ ನಿಶ್ಚಯಮಾಡುವುದು ಹಾನಿಕಾರಕವಾದುದು. ಅರ್ಧಂಬರ್ಧವಾಗಿ ವಿಷಯಪರಿಚಯವನ್ನು ಪಡೆದು, ಭರ್ತೃಹರಿಯು ವಿವರಿಸಿದ 'ಜ್ಞಾನಲವದುರ್ವಿದಗ್ಧ'ರಲ್ಲಿ ಗಣ್ಯರಾಗುವುದಕ್ಕಿಂತ ಅಜ್ಞ ರಾಗಿರುವುದೇ ಮೇಲು.

ಇನ್ನು ಮುಂದೆ ಭಾರತೀಯ ಜೀವನದಲ್ಲಿ ಮುಖ್ಯವಾದ ಸಮಸ್ಯೆ ಗಳನ್ನು ಮಾತ್ರ ಸ್ಥೂಲವಾಗಿಯೂ ಸಂಕ್ಷೇಪವಾಗಿಯೂ ಕಾಣುವೆವು. ಇಲ್ಲಿ ದೊರಕುವ ವಿವರದಿಂದ ದಿಗ್ದರ್ಶನ ಮಾತ್ರ ಉಂಟಾದೀತೇ ವಿನಾ ಯಾವ ವಿಷಯದಲ್ಲಿಯೂ ಪರಿಶ್ರಮವೆಂಬುದು ಲಭಿಸಲಾರದು. ಅಂತಹ ಪರಿಶ್ರಮವನ್ನು ಪಡೆಯುವುದಕ್ಕೆ ಸಾಧಕವಾಗಬಹುದಾದಷ್ಟು ತಿಳಿವನ್ನು ಮಾತ್ರ ಪಡೆಯಬಹುದು. ಪರಿಶ್ರಮವನ್ನು ಸಂಪಾದಿಸುವುದಕ್ಕೆ ಒಂದೊಂದನ್ನಾಗಿ ಸಮಸ್ಯೆಗಳನ್ನು ಆರಿಸಿಕೊಂಡು ತತ್ಸಂಬಂಧವಾದ ಗ್ರಂಥಗಳನ್ನು ಓದಬೇಕು, ತರುವಾಯ ಸಾವಧಾನವಾಗಿ ವಿಮರ್ಶೆಯನ್ನೂ ಸಮಾಲೋಚನೆಯನ್ನೂ ನಡೆಸಬೇಕು. ಇಲ್ಲಿ ನಾವು ಮೊದಲು ಆರೋಗ್ಯ, ಶಿಕ್ಷಣ, ನೆಮ್ಮದಿಗಳ ವಿಚಾರಗಳನ್ನು ಕಂಡು ಅನಂತರ ಇತರ ವಿಚಾರ ಗಳನ್ನು ಕಾಣುವೆವು.

## 2. ಆಯುರಾರೋಗ್ಯಗಳು

ಜನವೇ ಪರಮಭಾಗ್ಯ, ನೈರ್ಮಲ್ಯಸಿದ್ಧಿ, ಮೃತ್ಯುಭೂಮಿ—ನಮ್ಮ ಆಯುಷ್ಯ, ಜೀವಶ್ರವಗಳು, ಆಚಾರಶಿಷ್ಟಿ: ಗ್ರಾಮಗಳಲ್ಲಿ, ನಗರಗಳಲ್ಲಿ; ನಗರನಿರ್ವಾಹ, ಜಿಲ್ಲಾ ನಿರ್ವಾಹ, ಸ್ಥಲ ಸಂಸ್ಥೆಗಳ ಕರ್ತವ್ಯ—ಸಂತಾನಶುದ್ಧಿ, ವಿವಾಹನೀತಿ—ಪೌರಕರ್ತವ್ಯ, ಪ್ರಬಲ ವಿಘ್ನಗಳು—ಆಯುರ್ವೇದ.

ಜನವೇ ಪರಮಭಾಗ್ಯ

ಯಾವ ರಾಷ್ಟ್ರವಾದರೂ ರಾಷ್ಟ್ರಕ್ಕೆ ಆಧಾರಭೂತವಾದುದು ಜನಸಮುದಾಯ. ಜನರು ಅರೋಗ ದೃಢಕಾಯರಾಗಿರುವುದಲ್ಲದೆ ಸಂಖ್ಯಾವೃದ್ಧಿಯನ್ನು ಪಡೆಯುತ್ತಲಿರುವುದು ರಾಷ್ಟ್ರದಲ್ಲಿ ಪ್ರಥಮ ಲಕ್ಷ್ಯವಾಗಿರತಕ್ಕುದು. ಮಯೂರಸಿಂಹಾಸನಕ್ಕಿಂತಲೂ ಗೋಲಕೊಂಡದ ಪ್ರಖ್ಯಾತ ವಜ್ರಖನಿಗಳಿಗಿಂತಲೂ ರಾಷ್ಟ್ರಕ್ಕೆ ಜನತೆಯ ಆರೋಗ್ಯಸಿದ್ಧಿಯು ಐಶ್ವರ್ಯಪ್ರದವಾದುದು. ಜನರಾಶಿಯಲ್ಲಿ ಪ್ರತಿವ್ಯಕ್ತಿಯೂ ಆರೋಗ್ಯವಂತನಾಗಿ ಮಾತ್ರವಲ್ಲದೆ ದೀರ್ಘಾಯುವಾಗಿಯೂ ದೃಢಾಂಗಿಯಾಗಿಯೂ ಇರತಕ್ಕುದು.

ಆರೋಗ್ಯ ದೀರ್ಘಾಯುಷ್ಯಗಳು ಸಿದ್ಧಿಸುವುದು ಅನೇಕಾನೇಕ ಕಾರಣಗಳಿಂದ. ರೋಗಗಳಿಗೆ ಪ್ರವೇಶವಿಲ್ಲದಂತೆ ಮಾಡಿ ಆರೋಗ್ಯ ಸ್ಥಿತಿಯನ್ನು ಕಾಪಾಡುವುದಕ್ಕೆ ನೈರ್ಮಲ್ಯಸಿದ್ಧಿಯೆಂಬುದು ಮೂಲವಾದುದರಿಂದ ನೈರ್ಮಲ್ಯ ರಕ್ಷಣೆಯು ಪ್ರಧಾನವಾದ ವಿಷಯ. ವ್ಯಕ್ತಿಯು ತನ್ನ ದೇಹದಲ್ಲಿ, ವಸ್ತ್ರಗಳಲ್ಲಿ, ವಾಸಸ್ಥಳದಲ್ಲಿ, ಅಭ್ಯಾಸ ಹವ್ಯಾಸಗಳಲ್ಲಿ ನಿಷ್ಕಲ್ಮಷನಾಗಿರಬೇಕು; ಅಂದರೆ ವಾಸಸ್ಥಳವು ನಿರ್ಮಲವಾಗಿದ್ದು ಗ್ರಾಮವೋ ಪಟ್ಟಣವೋ ನಿರ್ಮಲವಾಗಿಯೂ ಇರಬೇಕು.

ನೈರ್ಮಲ್ಯ ಸಿದ್ಧಿ

ಉಷ್ಣದೇಶವಾದುದರಿಂದ ನಮ್ಮ ದೇಶದಲ್ಲಿ ಇತರ ದೇಶಗಳಿಗಿಂತ ಬೆವರುವುದು ಹೆಚ್ಚು; ಆದ್ದರಿಂದ ನಿತ್ಯ ಸ್ನಾನವಲ್ಲದೆ ನಿತ್ಯವೂ ಬಟ್ಟೆಗಳನ್ನು ಒಗೆಯುವುದು ಅನಿವಾರ್ಯವಾದ ಕರ್ತವ್ಯಗಳು. ದೇಹವೋ ವಸ್ತ್ರವೋ ಕಶ್ಮಲ ಯುಕ್ತವಾಗಿದ್ದರೆ ರೋಗರುಜನಗಳಿಗೆ ಔತಣವನ್ನೊದಗಿಸಿ ಕರೆದ

ಹಾಗೆಯೇ. ಸ್ನಾನಮಾಡುವುದಕ್ಕೆ ಮತ್ತು ಬಟ್ಟೆಗಳನ್ನು ಶುದ್ಧಿಗೊಳಿಸುವುದಕ್ಕೆ ಬೇಕಾದ ಅನುಕೂಲ್ಯಗಳು ದೇಶದ ಜನರಲ್ಲಿ ಪ್ರತಿಯೊಬ್ಬನಿಗೂ ಸುಲಭವಾಗಿ ಒದಗುವಂತಿರಬೇಕು. ಪ್ರತಿ ಮನೆಯಲ್ಲಿಯೂ ನಿರ್ಮಲವಾದ ಗಾಳಿ, ಸ್ವಚ್ಛವಾದ ನೀರು, ಸಾಕಾದಷ್ಟು ಬೆಳಕು ಸಮೃದ್ಧಿಯಾಗಿರುವುದು ಮಾತ್ರವಲ್ಲದೆ ಕೆಟ್ಟಗಾಳಿಯಾಗಲಿ ಕತ್ತಲೆಯಾಗಲಿ ಎಲ್ಲಿಯೂ ಅಡಗಿಕೊಳ್ಳದಂತೆ ಮನೆಗಳನ್ನು ಕಟ್ಟಿರಬೇಕು. ಮನೆಯ ಅಕ್ಕಪಕ್ಕವು ನಿರ್ಮಲವಾಗಿರಬೇಕು. ಬೀದಿಯಲ್ಲಿಯೂ ಕೇರಿಯಲ್ಲಿಯೂ ಹೊಲಸು ಇರಬಾರದು. ಎಲ್ಲ ಬೀದಿಗಳೂ ನಿಷ್ಕಲ್ಮಷವಾಗಿರುವುದೆಂದರೆ ಒಟ್ಟು ಊರೇ ನಿರ್ಮಲವಾಗಿರತಕ್ಕದ್ದು. ಈ ರೀತಿ ಇರುವುದಕ್ಕಾಗಿ ಗೃಹ ನಿರ್ಮಾಣ ನಗರನಿರ್ಮಾಣಗಳು ಶಾಸ್ತ್ರಗಳಾಗಿ ಪರಿಣಮಿಸಿರುವುವು; ಆ ಶಾಸ್ತ್ರಗಳ ವಿಧಾನಗಳು ಪುಸ್ತಕಗಳಲ್ಲಿರುವುದಲ್ಲದೆ ಆಚರಣೆಯಲ್ಲಿರಬೇಕು. ಈ ಕರ್ತವ್ಯನಿರ್ವಾಹದಲ್ಲಿ ರಾಷ್ಟ್ರವು ನೆರವಾಗಬೇಕು. ಗ್ರಾಮನಿರ್ವಾಹ, ನಗರನಿರ್ವಾಹ ಸಭೆಗಳು ಶಾಸ್ತ್ರೋಕ್ತವಾಗಿ ನಗರಗಳನ್ನು ಬೆಳೆಸುವುದಲ್ಲದೆ ನಗರ ಭಾಗಗಳನ್ನು ಸುಧಾರಿಸಿ ಮನೆಗಳನ್ನು ಕಟ್ಟುವುದರಲ್ಲಿ ನಿಬಂಧನೆಗಳನ್ನು ಬಲವಂತಗೊಳಿಸಬೇಕಾಗುತ್ತದೆ. ಆದರೆ ಆಡಳಿತದಲ್ಲಿ ಎಷ್ಟು ಶ್ಲಾಘ್ಯವಾದ ಪ್ರಯತ್ನಗಳು ನಡೆಯುತ್ತಿದ್ದರೂ ಜನರಲ್ಲಿ ಶುದ್ಧವಾದ ಆಚಾರಗಳಿಲ್ಲದೆ ಇದ್ದ ಪಕ್ಷದಲ್ಲಿ ಅವೆಲ್ಲವೂ ವ್ಯರ್ಥವಾಗಿಯೇ ಪರಿಣಮಿಸುವುವು. ಆಚಾರ ಶುದ್ಧಿಯು ಜನರಲ್ಲಿಲ್ಲದೆ ಇರುವುದಕ್ಕೆ ಕಾರಣವಾದರೂ ಏನು? ಅಜ್ಞಾನದಿಂದ ಜನರು ಅನಾರೋಗ್ಯಕ್ಕೆಡೆಗೊಡುವಂತೆ ಜೀವಿಸುತ್ತಿರಬಹುದು. ಅಥವಾ ಜ್ಞಾನವಿದ್ದರೂ ಜಡತನದಿಂದ ಶುದ್ಧವಾದ ಆಚಾರಗಳನ್ನು ನಡೆಸದೆ ಇರಬಹುದು. ಅಥವಾ ಬೇರೆ ಆತಂಕಗಳು ಇರಬಹುದು. ಇವುಗಳಲ್ಲಿ ಅಜ್ಞಾನ ದಾರಿದ್ರ್ಯಗಳೇ ಘೋರವಾದವುಗಳು. ಅಜ್ಞಾನವನ್ನು ತೊಲಗಿಸಲು ಜನಶಿಕ್ಷಣವನ್ನೂ, ದಾರಿದ್ರ್ಯವನ್ನು ತೊಲಗಿಸಲು ಆರ್ಥಿಕ ಸುಧಾರಣೆಗಳನ್ನೂ ನಡೆಸಬೇಕಾಗುವುದು. ಹೀಗೆ ಒಂದಕ್ಕೊಂದು ಹೆಣೆದುಕೊಂಡಿರುವುದರಿಂದ ಆರೋಗ್ಯಸಿದ್ಧಿಗಾಗಿ ಬಹುಮುಖವಾದ ಪ್ರಯತ್ನಗಳು ನಡೆಯಬೇಕು.

**ಮೃತ್ಯುಭೂಮಿ**

ಭಾರತೀಯ ಜನತೆಯ ಆರೋಗ್ಯಸ್ಥಿತಿಯು ಹೇಗಿದೆಯೆಂದು ಸ್ವಲ್ಪ ಪರೀಕ್ಷಿಸುವುದರಲ್ಲಿಯೇ ಘೋರವಾದ ಸ್ಥಿತಿಯು ಗೋಚರವಾಗುತ್ತದೆ. ಸ್ಥಿತಿಯು ವಾಸ್ತವವಾಗಿ ಭಯಾವಹವಾಗಿಯೇ ಇದೆ. ಹುಟ್ಟಿದ ಮಕ್ಕಳಲ್ಲಿ ಐದರಲ್ಲೊಂದು ಮಗುವು ಒಂದು ವರ್ಷ ಕಳೆಯುವುದರೊಳಗಾಗಿ ಮೃತ್ಯುಮುಖವಾಗುತ್ತದೆ. ಒಟ್ಟು ಸಾವುಗಳಲ್ಲಿ ಐದನೆಯ ಅಂಶವು ಮಕ್ಕಳ ಸಾವೇ ಆಗಿರುತ್ತದೆ. ಹುಟ್ಟುವುದೇ ಸಾಯುವುದಕ್ಕಾದರೆ ಜನಸಂಖ್ಯೆಯ ಗತಿಯೇನು? ಮಕ್ಕಳೇ ಸತ್ತರೆ ಹೇಗೆ? ಸಹಜವಾಗಿ ಸಾಯಬೇಕಾದವರು ಮುದುಕರು, ಆಯುಷ್ಯತೀರಿದವರು. ಹುಟ್ಟಿದ ಕೂಡಲೆ ಸತ್ತರೆ ವಿಷಮಸ್ಥಿತಿಯೇ ನೆಲೆಸಿರಬೇಕು. ಮಕ್ಕಳನ್ನು ಸಾವಿಗೆ ಅರ್ಪಿಸುವುದರಲ್ಲಿ ಭರತವರ್ಷವು ಎಲ್ಲ ದೇಶಗಳಿಗಿಂತಲೂ ಮುಂದು. ಭಾರತೀಯ ಶಿಶು ಮರಣಪ್ರಮಾಣವು ಸಂಯುಕ್ತರಾಜ್ಯ, ಡೆನ್ಮಾರ್ಕ್ ಮತ್ತು ಜಪಾನುಗಳ ಎರಡರಷ್ಟು, ನಾರ್ವೆ ಸ್ವೀಡೆನ್ನುಗಳ ಮೂರರಷ್ಟು, ಹಾಲೆಂಡು ಅಮೆರಿಕಗಳ ಐದರಷ್ಟು, ನ್ಯೂಸೀಲೆಂಡಿನ ಒಂಬತ್ತರಷ್ಟು. ಶಿಶುಮರಣಗಳು ಪಟ್ಟಣಗಳಲ್ಲಿ ವಿಶೇಷ. ಬೊಂಬಾಯಿ ಪಟ್ಟಣದಲ್ಲಿ ಹುಟ್ಟಿದ 2 ಮಕ್ಕಳಲ್ಲಿ ಒಂದು ಮಗುವು ವರ್ಷದೊಳಗಾಗಿ ಸಾಯುತ್ತದೆಯೆಂದು ಹೇಳಬಹುದು. ಸಾವಿರಕ್ಕೆಷ್ಟು ಮರಣಗಳೆಂದು ಗಣನೆ ಮಾಡಿದರೆ ನ್ಯೂಸೀಲೆಂಡಿನಲ್ಲಿ 32, ಹಾಲೆಂಡಿನಲ್ಲಿ 50, ಅಮೆರಿಕದಲ್ಲಿ 58, ನಾರ್ವೆ ಸ್ವೀಡೆನ್ನುಗಳಲ್ಲಿ 102, ಡೆನ್ಮಾರ್ಕಿನಲ್ಲಿ 135, ಐರ್ಲೆಂಡಿನಲ್ಲಿ 123, ಸ್ಕಾಟ್ಲೆಂಡಿನಲ್ಲಿ 145, ಇಂಗ್ಲೆಂಡು ವೇಲ್ಸುಗಳಲ್ಲಿ 172, ಭಾರತವರ್ಷದಲ್ಲಾದರೆ 260. ಲಂಡನ್ನಿನಲ್ಲಿ 1,000ಕ್ಕೆ 60 ಮಾತ್ರ ಸಾವುಗಳು; ಬೊಂಬಾಯಿಯಲ್ಲಿ 1,000ಕ್ಕೆ 556 ಸಾವುಗಳು! ಶಿಶುಮರಣಗಳಷ್ಟೇ ಘೋರವಾದುದು ಹೆತ್ತ ತಾಯಂದಿರ ಸಾವುಗಳು. ಚನ್ನಾಗಿ ದೀರ್ಘಕಾಲ ಬದುಕಬೇಕಾದವರ ಗತಿ ಹೀಗೆ. ಒಟ್ಟು ಲೆಕ್ಕವನ್ನು ಅಂದರೆ ಆಬಾಲವೃದ್ಧರ ಮರಣ ಸಂಖ್ಯೆಯ ಪ್ರಮಾಣವೆಷ್ಟೆಂದು ನೋಡಿದಾಗ ನ್ಯೂಸೀಲೆಂಡಿನಲ್ಲಿ 1,000ಕ್ಕೆ 9, ಸಂಯುಕ್ತ ರಾಜ್ಯದಲ್ಲಿ 1,000ಕ್ಕೆ 14 ಆಗಿರುವಲ್ಲಿ ಭರತವರ್ಷದಲ್ಲಿ ಅದೇ ಸಾವಿರಕ್ಕೆ 38 ಆಗಿರುತ್ತದೆ.

ನಮ್ಮ ಆಯುಷ್ಯ

ಈ ದುಸ್ಥಿತಿಯ ಪರಿಣಾಮವಾಗಿ ಭಾರತೀಯರ ಸರಾಸರಿ ಆಯುಷ್ಯವೆಷ್ಟೆಂದು ನೋಡಿದಲ್ಲಿ ಎಲ್ಲ ದೇಶಗಳಿಗಿಂತಲೂ ಭಾರತೀಯರೇ ಅಲ್ಪಾಯುಗಳಾಗಿ ಕಾಣುವುದು. ಹುಟ್ಟಿದವರು ಎಷ್ಟು ಕಾಲ ಬದುಕಬಹುದೆಂದು ಲೆಕ್ಕಮಾಡಿ ನೋಡಿದರೆ ಇಟಲಿಯಲ್ಲಿ 46, ಫ್ರಾನ್ಸಿನಲ್ಲಿ 45, ಸ್ವಿಟ್ಸರ್ಲೆಂಡಿನಲ್ಲಿ 49, ಬೆಲ್ಜಿಯಮ್ಮಿನಲ್ಲಿ 45, ಸ್ಕಾಟ್ಲೆಂಡಿನಲ್ಲಿ 50, ಇಂಗ್ಲೆಂಡಿನಲ್ಲಿ 51, ಫಿನ್ಲಂಡಿನಲ್ಲಿ 45, ಡೆನ್ಮಾರ್ಕಿನಲ್ಲಿ 54, ನಾರ್ವೆಯಲ್ಲಿ 54, ಸ್ವೀಡನ್ನಿನಲ್ಲಿ 54, ಆಸ್ಟ್ರಿಯದಲ್ಲಿ 40, ಜರ್ಮನಿಯಲ್ಲಿ 47 ಆಗಿರುವಲ್ಲಿ ಭಾರತವರ್ಷದಲ್ಲಿ ಮಾತ್ರ 22. ಸರಾಸರಿ 22 ವರ್ಷವಾದ ಮೇಲೆ ಆ ವಯಸ್ಸನ್ನು ದಾಟಿ ಜೀವಂತರಾಗಿರುವ ಭಾರತೀಯರೆಲ್ಲರೂ ದೀರ್ಘಾಯುಗಳೆನಿಸುವರು. ಏಕೆಂದರೆ ಸರಾಸರಿ 22 ಆಗಿರಬೇಕಾದರೆ ಅರ್ಧಪಾಲು ಆ ವಯಸ್ಸಿಗೆ ಮೊದಲೇ ಸಾಯುತ್ತಲಿರುವರು. ಹುಟ್ಟಿದವರು 22 ವರ್ಷ ಜೀವಂತರಾಗಿದ್ದರೆ, ಅದೇ ಹೆಚ್ಚೆಂದು ಭಾವಿಸತಕ್ಕದ್ದಾಗಿದೆ.

ಜೀವಶ್ರವಗಳು

ಪ್ಲೇಗ್, ಕಾಲರಾ, ಇನ್‌ಫ್ಲೂಯೆಂಜಾ ಮುಂತಾದ ಪ್ರಬಲ ವ್ಯಾಧಿಗಳು ಸಾಂಕ್ರಾಮಿಕವಾಗಿ ರೇಗಿದಾಗ ಭಾರತೀಯರು ಲಕ್ಷಗಟ್ಟಲೆಯಾಗಿ ಸಾಯುವರು, ಸಾವಿರಗಟ್ಟಲೆಯಾಗಿ ಅಲ್ಲ. ಕ್ಷಾಮಗಳು ತಲೆದೋರಿದರೂ ಹೀಗೆಯೇ ಕೋಟ್ಯಾಂತರ ಸಾವುಗಳು ಸಿದ್ಧ. ಇತರ ದೇಶಗಳಲ್ಲಿ ಯುದ್ಧಗಳಿಂದ ಆಗುವ ಮರಣಗಳಿಗಿಂತಲೂ ಭಾರತೀಯರಲ್ಲಿ ಕ್ಷಾಮಡಾಮರಗಳಿಂದ ಹೆಚ್ಚು ಮರಣಗಳು ಸಂಭವಿಸುತ್ತವೆ. ಇದಲ್ಲದೆ ಸಾವಿಗಿಂತಲೂ ಬದುಕೇ ಘೋರವಾಗಿರುವ ವಿಷಮಸ್ಥಿತಿಯೂ ಉಂಟು. ಇತರ ದೇಶಗಳ ಜನರೊಂದಿಗೆ ಹೋಲಿಸಿದಲ್ಲಿ ಭಾರತೀಯರು ಚೈತನ್ಯಹೀನರಾಗಿಯೇ ಕಾಣುತ್ತಾರೆ. ಇದಕ್ಕೆ ಮೂಲಕಾರಣ ಆಹಾರದ ಅಭಾವ. ಕೋಟ್ಯಾಂತರ ಜನರಿಗೆ ಸಾಕಾದಷ್ಟು ಆಹಾರ ದೊರಕದಿರುವುದು ಮಾತ್ರವೇ ಅಲ್ಲ; ಸಿಕ್ಕುವ ಆಹಾರವು ಪುಷ್ಟಿಕಾರಕವೇ ಅಲ್ಲ. ನಿರಾಹಾರವೇ ಅಲ್ಲದೆ ಅಪಾಹಾರವೇ ಅನೇಕರ ಗತಿಯಾಗಿರುವುದರಿಂದ ಭಾರತೀಯರಲ್ಲಿ ಅನೇಕರು

ಸಾಮಾನ್ಯ ರೋಗಗಳಲ್ಲಿ ಪ್ರಾಣವನ್ನೇ ಒಪ್ಪಿಸುತ್ತಾರೆ. ಅತಿದುರ್ಬಲ ಸ್ಥಿತಿಯಲ್ಲಿರುವುದರಿಂದ ಎಂತಹ ಅಲ್ಪ ರೋಗವಾದರೂ ಜಯಭೇರಿಯನ್ನು ಹೊಡೆಯುತ್ತದೆ. ಇತರರ ಹತ್ತಿರಕ್ಕೆ ಸುಳಿಯಲು ಭಯಪಡುವ ರೋಗ ರುಜನಗಳು ಭಾರತೀಯರ ಬಳಿ ನಿರ್ಭಯವಾಗಿ ಸುಳಿಯುವುದು ಮಾತ್ರವೇ ಅಲ್ಲದೆ ಗ್ರಾಸಗೊಂಡು ಅವರ ಜೀವವನ್ನು ಹೀರಿಬಿಡುತ್ತವೆ. ನಿವಾರಣೆ ಯಾಗಬಹುದಾದ ರೋಗಗಳಿಂದ ಭಾರತೀಯರು ಸತ್ತೇಬಿಡುವರು ; ಒಂದು ವೇಳೆ ಸಾಯದಿದ್ದರೂ ಸಾಯಲಾರದ ಹೆಣಗಳಂತೆಯೇ ಇರುವರು. ಸಾವಿಗಿಂತಲೂ ಬದುಕು ಕಷ್ಟತರವಾಗಿ ಭಾರತೀಯರಲ್ಲಿ ಕೋಟ್ಯಾವಧಿ ಜನರು ಮಲೇರಿಯಾ ಮುಂತಾದ ರೋಗ ಪೀಡಿತರಾಗಿ ಜೀವಶ್ರವ ಗಳಂತೆಯೇ ಇರುವರು.

ಅಖಿಲ ಭಾರತವರ್ಷದ ವೈದ್ಯರು ಸಮ್ಮೇಳನಗಳಲ್ಲಿ ಸೇರಿ ದುಸ್ಥಿತಿ ಯನ್ನು ಈ ಬಗೆಯಾಗಿ ವರ್ಣಿಸಿದರು :—

"ಸುಲಭವಾಗಿ ಗುಣವಾಗಬಹುದಾದ ರೋಗಗಳಿಂದ ವರ್ಷವೊಂದಕ್ಕೆ ಸರಿ ಸುಮಾರಾಗಿ 50—60 ಲಕ್ಷ ಮಂದಿ ಸಾಯುತ್ತಿದಾರೆ ; ಆ ಕಾರಣದಿಂದಲೇ ಶ್ರಮಜೀವಿಗಳಿಗೆ ಸರಿಸುಮಾರಾಗಿ ವರ್ಷದಲ್ಲಿ 15—22 ದಿನಗಳು ನಷ್ಟವಾಗುತ್ತವೆ. ಅಪಾಹಾರ ಮತ್ತು ವ್ಯಾಧಿಗಳ ದೆಸೆಯಿಂದ ಜನರ ಸಾಮರ್ಥ್ಯ ಶಕ್ತಿಗಳಲ್ಲಿ ಸರಿಸುಮಾರಾಗಿ ಸೇಕಡ 20 ಪಾಲು ನಷ್ಟವಾಗುತ್ತಿದೆ. ಹುಟ್ಟಿದ ನೂರು ಮಕ್ಕಳಲ್ಲಿ 50 ಮಕ್ಕಳು ಮಾತ್ರ ಸಂಪಾದನೆಯ ವಯಸ್ಸನ್ನು ಪಡೆಯುತ್ತವೆ ; ಉಳಿದ 50 ಮಕ್ಕಳು ಚಿಕ್ಕತನದಲ್ಲಿಯೇ ಮೃತ್ಯುಮುಖ ವಾಗುತ್ತವೆ. ಸುಲಭವಾಗಿ 80—90 ಪಾಲನ್ನು ಬದುಕಿಸಿ ಉಳಿಸಬಹುದಾಗಿದೆ. ಗುಣ ವಾಗಬಹುದಾದ ವ್ಯಾಧಿಗಳಿಂದ ಮಾತ್ರ ದೇಶಕ್ಕೆ ಪ್ರತಿ ವರ್ಷವೂ ನೂರಾರು ಕೋಟಿ ರೂಪಾಯಿಗಳಷ್ಟು ನಷ್ಟವಾಗುವುದೆಂದು ಅತ್ಯುಕ್ತಿ ದೋಷ ಲೇಶವೂ ಇಲ್ಲದೆ ಹೇಳಬಹುದು. ನಷ್ಟ ಮಾತ್ರವೇ ಶೋಚನೀಯವಾದುದಲ್ಲ ; ಅದರ ಜತೆಗೆ ನಿವಾರ್ಯವಾಗಬಹುದಾದರೂ ಜನರು ಅನುಭವಿಸುವ ದುಃಖ ಸಂಕಟಗಳನ್ನು ಸೇರಿಸಬೇಕು."

ಆಚಾರಶಿಷ್ಟಿ

ಭಯಾನಕವಾದ ಈ ಸ್ಥಿತಿಯು ಈಚಿನ ಕಾಲದಲ್ಲಿ ಮತ್ತಷ್ಟು ಭಯಾವಹವಾಗುತ್ತಲಿರುವುದಕ್ಕೆ ನಾನಾಕಾರಣ ಗಳುಂಟು. ನೈರ್ಮಲ್ಯದ ಶೂನ್ಯತೆಯೊಂದೇ ಈ ದುರವಸ್ಥೆಗೆ ಕಾರಣವಲ್ಲ. ಹಿಂದಿನ ಕಾಲದಲ್ಲಿ ನೈರ್ಮಲ್ಯ ರಕ್ಷಣೆಯನ್ನು ಆಡಳಿತಮಾಡಿದವರು ತಮ್ಮ ಅವಶ್ಯ ಕರ್ತವ್ಯ

ಗಳಲ್ಲೊಂದಾಗಿ ಭಾವಿಸಿ ನಿರಂತರ ಪ್ರಯತ್ನ ಶೀಲರಾಗಿರಲಿಲ್ಲ; ಗ್ರಾಮಸ್ಥರೇ ಗ್ರಾಮನೈರ್ಮಲ್ಯವನ್ನು ತಮ್ಮ ಕಾಲಸ್ಥಿತಿಗೆ ತಕ್ಕಂತೆ ರಕ್ಷಿಸಿಕೊಳ್ಳುತ್ತಿದ್ದರು. ನಗರಗಳೆಂಬುವು ಆಧುನಿಕ ಕಾಲದಲ್ಲಿ ವೃದ್ಧಿಗೊಂಡವು; ಅವುಗಳಲ್ಲಿ ಜನಸಾಂದ್ರತೆಯು ಹೆಚ್ಚಾದ ಕಾರಣದಿಂದ ಅನಾರೋಗ್ಯಸಂಭವವೂ ಹೆಚ್ಚು. ಪ್ರಾಚೀನಕಾಲದ ಭಾರತೀಯರು ದೇಹ, ಆಹಾರ, ವಸ್ತ್ರ, ಆಚಾರಗಳಲ್ಲಿ ಅತಿನಿರ್ಮಲರೆಂದು ಪ್ರಸಿದ್ಧರಾಗಿದ್ದರು. ಮೆಗಾಸ್ಥನೀಸನಿಂದ ಮೊದಲ್ಗೊಂಡು ವಿದೇಶೀ ಪರ್ಯಟಕರು ಭಾರತೀಯರ ಆಚಾರ ಶುದ್ಧಿಯನ್ನು ಕೊಂಡಾಡಿದ್ದಾರೆ. ನಿತ್ಯಾಚಾರ ಶುದ್ಧಿಯಿದ್ದುದಲ್ಲದೆ ಪೂರ್ವಕಾಲದಲ್ಲಿ ಭಾರತೀಯ ಗ್ರಾಮಸ್ಥರು ಮನೆಯ ಹೊರಗೇ ಬಹುಕಾಲವನ್ನು ಕಳೆಯುತ್ತಲಿದ್ದು ರೋಗಗಳು ಹತ್ತಿರ ಸುಳಿಯದಂತೆ ದಾರ್ಢ್ಯವನ್ನು ಪಡೆದಿದ್ದರು. ಎಂಜಲೆನ್ನುವುದು, ಸಂಪರ್ಕ ನಿಷೇಧವೆನ್ನುವುದು, ಆಹಾರ ನಿಯಮಗಳೆನ್ನುವುವು, ಕೈಕಾಲು ತೊಳೆಯುವುದು, ಬೇವಿನ ಕಡ್ಡಿಯಿಂದಲೋ ಮಾವಿನೆಲೆಯಿಂದಲೋ ಹಲ್ಲನ್ನು ಉಜ್ಜುವುದು, ವಾರಕ್ಕೊಮ್ಮೆ ತೈಲಸ್ನಾನಮಾಡುವುದು, ಮನೆ ಮುಂದೆ ತುಲಸೀಗಿಡವನ್ನು ನೆಡುವುದು ಮುಂತಾದವುಗಳನ್ನು ಕೂಲಂಕಷವಾಗಿ ವಿಚಾರಮಾಡಿದಲ್ಲಿ ಅವೆಲ್ಲವೂ ಆರೋಗ್ಯ ರಕ್ಷಣೆಯ ಉದ್ದೇಶಕ್ಕಾಗಿಯೇ ರೂಪಗೊಂಡ ಅಂಶವು ತಿಳಿಯುವುದು. ನೈರ್ಮಲ್ಯ ರಕ್ಷಣೆಯ ವಿಧಾನಗಳೂ ಅಭ್ಯಾಸಗಳೂ ಭರತವರ್ಷದಲ್ಲಿ ಹೊಸದಾಗಿ ತೋರತಕ್ಕವುಗಳಲ್ಲ. ಶಿಷ್ಟಾಚಾರ ಸಂಪತ್ತು ಭಾರತೀಯರಿಗೆ ಯಥೇಚ್ಛವಾಗಿ ಉಂಟು. ಅವುಗಳಲ್ಲಿ ನೈರ್ಮಲ್ಯ ರಕ್ಷಕವಾದವುಗಳು ಮೊದಮೊದಲು ವಿಚಿತ್ರವಾಗಿ ಕಾಣಬಹುದಾದರೂ ಪರೀಕ್ಷೆಮಾಡಿ ತಿಳಿದ ತರುವಾಯ ದೇಶಕಾಲ ಸ್ಥಿತಿಗತಿಗಳಿಗನುಸಾರವಾಗಿ ರೂಪಗೊಂಡ ಆಚಾರಗಳೆಂದು ತೀರ್ಮಾನವಾಗುವುದು. ಅವುಗಳನ್ನು ತ್ಯಜಿಸಿಬಿಟ್ಟು ಹೊಸ ರೀತಿಯನ್ನು ಸಂಪೂರ್ಣವಾಗಿ ಕಲಿತುಕೊಳ್ಳಬೇಕೆಂಬುದು ಸೂಕ್ತವೇ ಅಲ್ಲ. ಪೂರ್ವಾಚಾರ ಸಂಪ್ರದಾಯಗಳಲ್ಲಿ ಯೋಗ್ಯವಾದುವನ್ನು ಕಳೆದುಕೊಳ್ಳದೆ ರಕ್ಷಿಸಿಕೊಂಡು, ನೂತನವಾದ ಆಚರಣೆಯು ಎಷ್ಟು ಅವಶ್ಯವೋ ಅಷ್ಟನ್ನು ಹೊಸದಾಗಿ ಅವಲಂಬಿಸಬೇಕು. ಈ ರೀತಿಯೇ ಸುಲಭವೂ ಸಹಜವೂ ಆದುದು.

ಗ್ರಾಮಗಳಲ್ಲಿ

ಭಾರತೀಯರು ತಮ್ಮ ನೆರೆಹೊರೆಯ ಸ್ಥಿತಿಯನ್ನು ಸಮಾಲೋಚಿಸುವಾಗ ಹಲ ಕೆಲವು ಪ್ರಶ್ನೆಗಳಿಗೇನು ಸಮಾಧಾನವೆಂದು ಕಾಣಬೇಕು. ದೃಷ್ಟಾಂತಕ್ಕೆ—ನೆರೆಯಲ್ಲಿರುವ ಜನರು ತಮ್ಮ ದೇಹಪೋಷಣೆಗೆ ತಕ್ಕಷ್ಟು ಒಳ್ಳೆಯ ಆಹಾರವನ್ನು ಸೇವಿಸುವರೆ? ಅವರು ಬಟ್ಟೆಗಳನ್ನು ಶುಭ್ರವಾಗಿಟ್ಟುಕೊಳ್ಳುವರೆ? ಆರೋಗ್ಯ ನಿಯಮಗಳನ್ನು ಅವರು ಬಲ್ಲರೆ? ಸ್ನಾನಕ್ಕೆ, ಪಾತ್ರೆ ತೊಳೆಯುವುದಕ್ಕೆ, ಬಟ್ಟೆಗಳನ್ನೊಗೆಯುವುದಕ್ಕೆ ಎಲ್ಲರಿಗೂ ಅನುಕೂಲವಿದೆಯೇ?

ಮನೆಗಳನ್ನು ಚೊಕ್ಕಟವಾಗಿ ಗಾಳಿ ಬೆಳಕು ತುಂಬಿರುವಂತೆ ಕಟ್ಟಿದೆಯೇ? ಮನೆಗಳ ಸಮೀಪದಲ್ಲಿ ತುಲಸಿ, ಬೇವು, ಯೂಕಲಿಪ್ಟಸ್ ಮುಂತಾದ ಆರೋಗ್ಯದಾಯಕ ವೃಕ್ಷಗಳಿವೆಯೇ?

ಬೀದಿಗಳಲ್ಲಿ ಚೊಕ್ಕಟವಾಗಿರುತ್ತದೆಯೇ? ಬಿದ್ದ ಕಶ್ಮಲವು ಬೇಗನೆ ಸಾಗಿಹೋಗುವ ಏರ್ಪಾಟಿದೆಯೇ? ಬೀದಿಗಳಲ್ಲಿ ಚರಂಡಿಗಳು, ತೊಟ್ಟಿಗಳು ಇವೆಯೇ? ಚರಂಡಿಯ ನೀರು ಎಲ್ಲಿಗೆ ಹೋಗುತ್ತದೆ? ತಿಪ್ಪೆಗುಂಡಿಗಳೆಲ್ಲಿವೆ? ಇಟ್ಟಿಗೆ ಗೂಡುಗಳೂ ಸುಣ್ಣದ ಗೂಡುಗಳೂ ಎಲ್ಲಿವೆ? ಚಾವಡಿಯು ನಿರ್ಮಲವಾಗಿದೆಯೆ? ದೇವಸ್ಥಾನದ ಒಳಗೂ ಹೊರಗೂ ಸ್ವಚ್ಛವಾಗಿದೆಯೇ?

ನೀರಿನ ವಸತಿ ಹೇಗಿದೆ? ಪ್ರತಿ ಮನೆಗೂ ಬಾವಿ ಇದೆಯೇ? ಸೀನೀರಿನ ಬಾವಿಗಳೆಷ್ಟಿವೆ? ನಲ್ಲಿಗಳಿವೆಯೇ? ಹೊರಗಿರುವ ಬಾವಿಗಳಲ್ಲಿ ಎಲ್ಲ ಜನರೂ ನೀರು ಸೇದಬಹುದೇ? ಬಾವಿಗಳ ಅಥವಾ ನಲ್ಲಿಗಳ ಹತ್ತಿರ ರೊಚ್ಚೆಲ್ಲವೇ?

ಸಮೀಪದಲ್ಲಿ ಜಾತ್ರೆ ಯಾವುದಾದರೂ ನಡೆಯುತ್ತದೆಯೇ? ಜಾತ್ರೆಯ ವೇಳೆಯಲ್ಲಿ ನೈರ್ಮಲ್ಯ ರಕ್ಷಣೆಗೇನು ಏರ್ಪಾಟು ನಡೆಯುವುದು?

ಗ್ರಾಮದ ಸುತ್ತಮುತ್ತಲೂ ಹೇಗಿದೆ? ಬೇವಿನ ಮರಗಳು ಬೇಕಾದಷ್ಟಿವೆಯೇ? ಗ್ರಾಮದ ದನಕರುಗಳ ಸ್ಥಿತಿ ಹೇಗಿದೆ? ಪ್ರತಿ ಮನೆಗೂ ಸಾಕಾದಷ್ಟು ಹಾಲನ್ನು ಕರೆಯುವಷ್ಟು ಹಸುಗಳಿವೆಯೇ? ಹಾಲು, ಮೊಸರು, ಬೆಣ್ಣೆ, ತುಪ್ಪಗಳ ವ್ಯಾಪಾರವಾಗುತ್ತದೆಯೇ? ಅವುಗಳಲ್ಲಿ ಮೋಸವೇನೂ ನಡೆಯುವುದಿಲ್ಲವೇ?

ಗ್ರಾಮದಲ್ಲಿ ಗರಡಿಮನೆಗಳಿವೆಯೇ? ಹುಡುಗರಿಗೂ ದೊಡ್ಡವರಿಗೂ ಆಟಗಳನ್ನಾಡಲು ಮೈದಾನಗಳಿವೆಯೇ? ಚಿಕ್ಕ ಮಕ್ಕಳು ಓಡಾಡಿ ಆಟವಾಡಲು ಸ್ಥಳವಿದೆಯೇ? ಮಕ್ಕಳಿಗೇ ವಿಶೇಷವೆನಿಸುವ ಏರ್ಪಾಟೇನಾದರೂ ಇದೆಯೇ?

ಗ್ರಾಮದಲ್ಲಿ ವೈದ್ಯನಾದಾತನಿದ್ದಾನೆಯೇ? ಆಸ್ಪತ್ರೆಯಿದೆಯೇ? ಸೂಲಗಿತ್ತಿ ಇದ್ದಾಳೆಯೇ? ಪಶುಚಿಕಿತ್ಸೆಯು ಹೇಗೆ ನಡೆಯುತ್ತದೆ? ಸ್ಮಶಾನಗಳೆಲ್ಲಿವೆ?

ಜನರಲ್ಲಿ ದುರಭ್ಯಾಸಗಳು ಇವೆಯೇ? ಮಾದಕಪದಾರ್ಥಗಳನ್ನು ಸೇವಿಸುತ್ತಾರೆಯೇ? ಸಾರಾಯನ್ನು ಕುಡಿಯುವುದುಂಟೇ? ಮದ್ಯಪಾನ ನಿರೋಧ ಪ್ರಯತ್ನವೇನಾದರೂ ನಡೆಯುತ್ತದೆಯೇ? ಬಡಬಗ್ಗರೂ ಅನಾಥರೂ ಇರುವರೇ? ಇವರಿಗೆ ಸ್ಥಳವೇನಾದರೂ ಇದೆಯೇ?

ನಗರಗಳಲ್ಲಿ

ಪಟ್ಟಣಿಗರ ಆರೋಗ್ಯಪಾಲನೆಯಲ್ಲಿ ಎಷ್ಟು ಎಚ್ಚರವಿದ್ದರೂ ಸಾಲದು. ಏಕೆಂದರೆ ಜನಸಾಂದ್ರತೆಯು ನಗರಗಳಲ್ಲಿ ಹೆಚ್ಚು. ರೋಗರುಜನಗಳು ಪ್ರಬಲವಾಗಿ ಹರಡಿಕೊಳ್ಳಲು ಅನೇಕ ವೇಳೆ ಜನರ ಅಭ್ಯಾಸಗಳೇ ಮುಖ್ಯ ಕಾರಣಗಳಾಗಿರುತ್ತವೆ. ಹತ್ತಾರು ವರ್ಷ ದೊಡ್ಡ ಪಟ್ಟಣವೊಂದರ ನಗರನಿರ್ವಾಹ ಸಭೆಗೆ ಅಧ್ಯಕ್ಷನಾಗಿದ್ದು ದೇಶಭಕ್ತಾಗ್ರಗಣ್ಯರಲ್ಲಿ ಎಣಿಕೆಯಾದಾತನು* ಭಾರತೀಯ ಜನರ ಪದ್ಧತಿಗಳನ್ನೂ ಆಚಾರಗಳನ್ನೂ ಕುರಿತು ಈ ರೀತಿ ಹೇಳಿದನು:—

"ನಮ್ಮ ಪಟ್ಟಣ ನಿವಾಸಿಗಳಿಗೆ ಪಟ್ಟಣವಾಸವೇನೆಂಬುದರ ಪರಿಜ್ಞಾನವೇ ಇರುವುದಿಲ್ಲ. ಅನೇಕ ಮನೆಗಳಿಗೆ ಕಕ್ಕಸುಗಳೇ ಇರುವುದಿಲ್ಲ. ಜನಸಂದಣಿಯ ಮಧ್ಯೆ ಜೀವಿಸುತ್ತಿದ್ದಾಗ್ಯೂ ತಮ್ಮ ದನಕರುಗಳನ್ನು ಹೇಗೆಂದರೆ ಹಾಗೆಯೇ ಸಾಕುತ್ತಾರೆ. ಕವಾಡಿಗರು ಮುಂತಾದವರು ತಮ್ಮ ದನಕರುಗಳನ್ನು ಸ್ವಲ್ಪವೂ ಲಕ್ಷ್ಯವಿಲ್ಲದೆ ಪಟ್ಟಣದ ಮಧ್ಯದಲ್ಲಿ ಕಟ್ಟಿಹಾಕುತ್ತಾರೆ. ಆರೋಗ್ಯ ಮತ್ತು ನೈರ್ಮಲ್ಯಕ್ಕೆ ಸಂಬಂಧಪಟ್ಟ ನಿಯಮಗಳನ್ನು ನಮ್ಮ ಜನರು ಲೆಕ್ಕಿಸುವುದೇ ಇಲ್ಲ. ತಮ್ಮ ಕ್ಷೇಮಕ್ಕಾಗಿಯಾಗಲಿ ತಮ್ಮ ನೆರೆಯವರ ಕ್ಷೇಮಕ್ಕಾಗಿಯಾಗಲಿ ಆ ನಿಯಮಗಳನ್ನು ಪಾಲಿಸಬೇಕೆಂಬ ಪ್ರಜ್ಞೆಯೇ ಅವರಿಗೆ

* ಸರದಾರ್ ವಲ್ಲಭಭಾಯಿ ಪಟೇಲರು.

ಇರುವುದಿಲ್ಲ. ತಮ್ಮ ಮನೆಯ ಕಸವನ್ನು ನೆರೆಮನೆಯ ಹಿತ್ತಿಲಿಗೆಸೆಯುವ ಪದ್ಧತಿಯು ಸಾಮಾನ್ಯ. ಬೀದಿಯಲ್ಲಿ ಜನರು ಓಡಾಡುತ್ತಿರಬಹುದೆಂಬ ಯೋಚನೆಯಿಲ್ಲದೆ ಕಸವನ್ನೋ ಕೊಳಕು ನೀರನ್ನೋ ಎರಚಿಬಿಡುವರು. ಎಲ್ಲಂದರಲ್ಲಿ ಉಗುಳುವುದರಲ್ಲಿ, ಎಲ್ಲಂದರಲ್ಲಿ ಮಲಮೂತ್ರ ವಿಸರ್ಜನೆ ಮಾಡುವುದರಲ್ಲಿ ನಮ್ಮ ಜನರು ನಿಸ್ಸೀಮರು. ಗ್ರಾಮಗಳಂತೂ ವರ್ಣನಾತೀತ. ಗ್ರಾಮಗಳನ್ನು ಸಮೀಪಿಸುತ್ತಲೇ ಕಾಣುವುದು ತಿಪ್ಪೆ ಗುಂಡಿಗಳು; ಅಲ್ಲಿಯ ಕೊಳಗಳೋ ದುರ್ಗಂಧ ಕೂಪಗಳು.

ಈ ಅಂಶಗಳಲ್ಲಿ ಸರ್ಕಾರದವರು ವ್ಯವಸ್ಥೆಗೊಳಿಸಿಕೊಡಬೇಕೆಂದು ನಿರೀಕ್ಷಿಸುವುದು ಮುಟ್ಠಾಳತನ.''

ನಗರನಿರ್ವಾಹ

ನಗರನಿರ್ವಾಹ ಸಭೆಗಳ ಕಾರ್ಯರಾಶಿಯನ್ನು ಕಂಡಿದ್ದಾಯಿತು. ನಿರ್ಮಲವಾದ ಗಾಳಿ, ಸ್ವಚ್ಛವಾದ ನೀರು, ಯಥೇಚ್ಛವಾದ ಬೆಳಕು—ಈ ಮೂರೂ ಪಟ್ಟಣದ ಎಲ್ಲ ಭಾಗಗಳಲ್ಲಿಯೂ ಎಲ್ಲ ಮನೆಗಳಲ್ಲಿಯೂ ಇರುವಂತೆ ಏರ್ಪಾಟಾದರೆ ಎಷ್ಟೋ ಮಾಡಿದಹಾಗಾಯಿತು. ಮಕ್ಕಳ ಕ್ರೀಡಾಕ್ಷೇತ್ರಗಳು, ಶುದ್ಧವಾದ ಹಾಲಿನ ಸರಬರಾಯಿ, ಆಹಾರ ದಿನಸುಗಳ ಶುದ್ಧಿ, ಬೀದಿಗಳ ನೈರ್ಮಲ್ಯಗಳೂ ಆರೋಗ್ಯಸಿದ್ಧಿಗೆ ಅತ್ಯವಶ್ಯಕವಾದವುಗಳು. 1927ರಲ್ಲಿ ಮೈಸೂರು ಸಂಸ್ಥಾನದಲ್ಲಿ ಮಹಾತ್ಮಾ ಗಾಂಧೀಜಿ ತುಮಕೂರು ಬೆಂಗಳೂರುಗಳಲ್ಲಿ ನಗರ ನಿರ್ವಾಹಕ ಸಭೆಗಳ ಬಿನ್ನವತ್ತಳೆಗಳನ್ನು ಸ್ವೀಕರಿಸಿ ಕೆಲವು ಪ್ರಶ್ನೆಗಳನ್ನು ಕೇಳಿದರು:

''ನಿಮ್ಮ ಪಟ್ಟಣದ ಮಕ್ಕಳಿಗೆಲ್ಲರಿಗೂ ಸಾಕಾದಷ್ಟು ಹಾಲು ಸುಲಭವಾಗಿಯೂ ಅಗ್ಗವಾಗಿಯೂ ದೊರಕುವುದೆಂದು ಹೇಳಬಲ್ಲಿರಾ? ನಿಮ್ಮ ನಿವಾಸಿಗಳಲ್ಲಿ ಮಾದಕಪದಾರ್ಥ ಸೇವನೆಯು ನಿಷಿದ್ಧವಾಗಿದೆಯೇ? ಆರೋಗ್ಯಸಿದ್ಧಿಗೂ ನೈರ್ಮಲ್ಯಸಿದ್ಧಿಗೂ ಏನು ವಿಶೇಷ ಪ್ರಯತ್ನ ನೀವು ಮಾಡಿರುತ್ತೀರಿ?

''ನಿಮ್ಮಲ್ಲಿ ಬಡವರಿಲ್ಲವೇ? ಇರುವುದಾದರೆ ಅವರು ಆರೋಗ್ಯವಂತರಾಗಿರುವಂತೆಯೂ ಚೊಕ್ಕಟವಾಗಿರುವಂತೆಯೂ ಏನು ಏರ್ಪಾಟು ಮಾಡಿದ್ದೀರಿ? ಅವರ ಕಷ್ಟಗಳಲ್ಲಿಯೂ ದುಃಖಗಳಲ್ಲಿಯೂ ನೀವು ಭಾಗಿಗಳಾಗಿ ಅನುಭವಿಸಲು ಪ್ರಯತ್ನ ಪಟ್ಟಿರುವಿರಾ? ಬಡವರು ತಮ್ಮ ಕಕ್ಕಸುಗಳನ್ನು ನಿರ್ಮಲವಾಗಿಟ್ಟುಕೊಳ್ಳಲು ನೀವೇನಾದರೂ ಸಹಾಯ ಮಾಡಿರುವಿರಾ? ನಿಮ್ಮ ಪಟ್ಟಣದ ಜಾಡಮಾಲಿಗಳು ಹೇಗೆ ಜೀವಿಸುತ್ತಲಿರುವರೋ ನೀವು ಯೋಚಿಸಿರುವಿರಾ? ಬಡವರ ಮಕ್ಕಳಿಗೆ, ಮುದುಕರಿಗೆ, ಅಶಕ್ತರಿಗೆ ಅಗ್ಗವಾಗಿ

ಹಾಲೊದಗುವಂತೆ ವ್ಯವಸ್ಥೆಗೊಳಿಸಿರುವಿರಾ? ನಿಮ್ಮೂರಿನ ಪೇಟೆಗಳಲ್ಲಿ ಮಾರುವ ಆಹಾರ ಸಾಮಗ್ರಿಗಳು ಶುದ್ಧವಾಗಿವೆಯೆಂಬ ಧೈರ್ಯ ನಿಮಗಿದೆಯೇ? ಬಡವರಿಗೂ ಧನಿಕರಿಗೂ ಒಂದೇ ರೀತಿಯಾಗಿ ಅನುಕೂಲವೊದಗುತ್ತದೆಯೇ? ನಿಮಗೆ ನಿತ್ಯವೂ ಸೊಪ್ಪುಕಾಯಿಗಳನ್ನೂ ಧಾನ್ಯವನ್ನೂ ದೊರಕಿಸುವ ಗ್ರಾಮಾಂತರ ಜೀವಿಗಳ ಸ್ಮರಣೆಯು ನಿಮ್ಮಲ್ಲಿದೆಯೇ? ನಿಮ್ಮ ನಗರದಲ್ಲಿ ಸಾರಾಯಂಗಡಿಗಳಾಗಲಿ ಜೂಜಿನ ಕಟ್ಟೆಗಳಾಗಲಿ ಇವೆಯೇ? ಇರುವುದಾದರೆ ಜನರು ಅವುಗಳಿಂದ ಕೆಡದಂತೆ ನೀವೇನು ನೆರವೇರಿಸಿರುವಿರಿ? ಭಾರವನ್ನು ಸಾಗಿಸುವ ಮತ್ತು ಹಾಲನ್ನು ಕರೆಯುವ ದನಗಳ ಸ್ಥಿತಿ ನಿಮ್ಮ ನಗರದಲ್ಲಿ ಹೇಗಿದೆ? ಇಂತಹ ಪ್ರಶ್ನೆಗಳನ್ನು ಇನ್ನೂ ಅನೇಕವಾಗಿ ಕೇಳಬಲ್ಲೆ. ಈ ಪ್ರಶ್ನೆಗಳಿಗೆ ತೃಪ್ತಿಕರವಾದ ಸಮಾಧಾನಗಳನ್ನು ನೀವು ಕೊಡಬಲ್ಲಿರಾದರೆ ನೀವು ಧನ್ಯರೆಂದು ಹೇಳುವೆನು. ಇಲ್ಲವಾದರೆ ಅವುಗಳಿಗೆ ನೀವು ನಿಮ್ಮ ಮನಸ್ಸನ್ನು ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.''

ಕೆಲಕಾಲದ ಹಿಂದೆ ಮಹಾತ್ಮಾಜೀಯವರು ರೈಲುಗಾಡಿಗಳಲ್ಲಿ ಹತ್ತಿದ ಕೂಡಲೆ ಅಲ್ಲಿಯ ಕಸವನ್ನೆತ್ತಿಹಾಕುವ ಕೆಲಸಕ್ಕೆ ತೊಡಗಿ ಇತರರನ್ನೂ ಆ ಕೆಲಸಕ್ಕೆ ಕರೆಯುತ್ತಿದ್ದುದನ್ನು ಪೌರರು ಸ್ಮರಿಸತಕ್ಕುದು. ಮತ್ತೊಮ್ಮೆ ನೈರ್ಮಲ್ಯರಕ್ಷಣೆಗಾಗಿ ಸಿದ್ಧನಾಗಿದ್ದ ಸ್ವಯಂಸೇವಕನೊಬ್ಬನನ್ನು ಸಂಬೋಧಿಸಿ "ನಿನ್ನ ಕೆಲಸವು ತೃಪ್ತಿಕರವಾಗಿದೆಯೋ ಇಲ್ಲವೋ ಎಂದು ನೋಡಲು ನನ್ನ ಪರವಾಗಿ ಅಧಿಕಾರಿಗಳು ಬಂದು ನೋಡುತ್ತಾರೆ. ಎಲ್ಲಿಯವರೆಗೂ ಆ ಅಧಿಕಾರಿಗಳು ಕಾಣಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ನಿನ್ನ ಕೆಲಸ ಸಮರ್ಪಕವಾಗಿರಬಹುದು. ಆ ಅಧಿಕಾರಿಗಳು ಯಾರು ಗೊತ್ತೇ?" ಎಂದು ಕೇಳಿದರು. ಆ ತರುಣನು "ಗೊತ್ತಿಲ್ಲ"ವೆನ್ನಲು ಮಹಾತ್ಮಾಜೀಯವರು "ನೊಣಗಳು, ಸೊಳ್ಳೆಗಳು! ನಿನ್ನ ಕೆಲಸದಲ್ಲಿ ಜೋಪಾನ ಕಡಿಮೆಯಾದಾಗ ಅವು ಬರುತ್ತವೆ, ನೋಡಿಕೋ" ಎಂದರು. ಇವರು ನಡೆಸುತ್ತಿದ್ದ ಸಾಬರಮತಿ ಆಶ್ರಮದ ಆರೋಗ್ಯಪಾಲನೆಯ ನಿಯಮಗಳನ್ನು ಎಲ್ಲರೂ ತಿಳಿಯತಕ್ಕುವಾಗಿಯೇ ಇವೆ.

ಗ್ರಾಮಗಳಲ್ಲಿಯೂ ನಗರಗಳಲ್ಲಿಯೂ ಅಲ್ಲದೆ ಜಿಲ್ಲೆಗಳಲ್ಲಿಯೂ ಆರೋಗ್ಯಸಿದ್ಧಿಗಾಗಿ ಪ್ರಯತ್ನಗಳು ನಡೆಯಬೇಕಾಗಿರುತ್ತವೆ. ಒಟ್ಟು ಜಿಲ್ಲೆಯಲ್ಲಿಯೇ ನೀರಾವರಿ ಕಡಿಮೆಯಾಗಿರಬಹುದು. ದುಷ್ಟಮೃಗಗಳ

ಹಾವಳಿಯನ್ನೂ, ಅಂಟುರೋಗಗಳ ನಿವಾರಣೆಯನ್ನೂ, ಜಾತ್ರೆ ಉರುಸು ಮುಂತಾದ ಜನರು ಗುಂಪು ಸೇರುವ ಸಂದರ್ಭಗಳಲ್ಲಿ ತಕ್ಕ ಏರ್ಪಾಡುಗಳನ್ನೂ ನಡೆಸತಕ್ಕದ್ದು ಜಿಲ್ಲಾ ಸಭೆಗೋ ಎರಡು ಮೂರು ಜಿಲ್ಲೆಗಳಿಗೆ ಸಂಬಂಧಪಟ್ಟ ಪ್ರಾದೇಶಿಕ ಸರ್ಕಾರಕ್ಕೋ ಸೇರಿದ್ದು. ಕ್ಷಾಮಗಳೋ ಪ್ರವಾಹಗಳೋ ತೋರಿಕೊಂಡಾಗ ಸರ್ಕಾರದವರು ಮಾತ್ರವಲ್ಲದೆ ಪೌರರೂ ಕರ್ತವ್ಯಪರರಾಗಬೇಕಾಗುವುದು.

ಜಿಲ್ಲಾ ನಿರ್ವಾಹ

ಸರ್ವ ಪ್ರಯತ್ನದಿಂದಲೂ ಜನತೆಯ ಆರೋಗ್ಯಭಾಗ್ಯವು ಸಾಧಿತವಾಗತಕ್ಕದ್ದು. ಸ್ಥಳೀಯ ಸಂಸ್ಥೆಗಳ ಕರ್ತವ್ಯಭಾರವು ಈ ಕ್ಷೇತ್ರದಲ್ಲಿ ಅತಿಶಯವಾಗಿಯೇ ಇರುವುದಾದರೂ ಕರ್ತವ್ಯವು ಎಲ್ಲರಿಗೂ ಉಂಟು. ನೈರ್ಮಲ್ಯ ಸಿದ್ಧಿಯೆಂಬುದು ಸ್ವಚ್ಛವಾದ ಗಾಳಿ, ನಿಷ್ಕಲ್ಮಷವಾದ ನೀರು ಮತ್ತು ಯಥೇಷ್ಟವಾದ ಬೆಳಕುಗಳು ಮಾತ್ರವೇ ಅಲ್ಲ. ಜೀವನದ ರೀತಿಯಲ್ಲಿ ನೈರ್ಮಲ್ಯವಿಲ್ಲದಿದ್ದ ಪಕ್ಷದಲ್ಲಿ ಆರೋಗ್ಯಭಂಗವು ಸುಲಭವಾಗಿ ಸಂಭವಿಸುವುದು. ಹೊಗೆಸೊಪ್ಪು, ಭಂಗಿಸೊಪ್ಪು, ಅಫೀಂ, ಮದ್ಯಗಳು ರೋಗಗಳನ್ನು ಇಲ್ಲದಿದ್ದೆಡೆಯಲ್ಲಿ ಉಂಟುಮಾಡುತ್ತವೆ. ರೋಗಹೇತುವಾದ ಮಾದಕಪದಾರ್ಥಗಳ ಸೇವನೆಗಿಂತಲೂ ದುರಾಚಾರಗಳಿಂದ, ಅಥವಾ ವಿಚಾರವಿಲ್ಲದೆ ದುಡುಕಿನಿಂದ ಅವಲಂಬಿಸಿದ ನೂತನವಾದ ಆಚಾರಗಳಿಂದ ಅಥವಾ ಆಚಾರಭೇದಗಳಿಂದ, ಅಪಾಯವು ಹೆಚ್ಚು. ಕೆಲವು ರೋಗಗಳು ಅಂಟುರೋಗಗಳೆಂಬುದು ಎಲ್ಲರಿಗೂ ತಿಳಿದ ಅಂಶ; ಅಂತಹ ರೋಗಗಳಿಗೆ ಸಿಕ್ಕಿದವರು ಇತರರಿಂದ ದೂರವಾಗಿರಬೇಕು. ಇದಕ್ಕೂ ಹೆಚ್ಚಿನ ಎಚ್ಚರಿಕೆಯು ಬಂದಾನೊಂದು ವಿಷಯದಲ್ಲಿ ಅತ್ಯವಶ್ಯಕ.

ಸ್ಥಲಸಂಸ್ಥೆಗಳ ಕರ್ತವ್ಯ

ವಂಶಪರಂಪರೆಯಾಗಿಯೇ ಸುಲಕ್ಷಣಗಳೂ ದುರ್ಲಕ್ಷಣಗಳೂ ಪ್ರಾಪ್ತವಾಗತಕ್ಕ ಅಂಶವನ್ನು ಈಚೀಚೆಗೆ ಶಾಸ್ತ್ರಕಾರರು ಪರೀಕ್ಷಿಸಿ ಸಿದ್ಧಾಂತಗೊಳಿಸಿದ್ದಾರೆ. ಇದನ್ನು ಅನುಸರಿಸಿ ಶಾಸ್ತ್ರಜ್ಞರು ಸಂತಾನಶಾಸ್ತ್ರವೆಂಬ ಒಂದು ಹೊಸ ಶಾಸ್ತ್ರವನ್ನು ವಿಸ್ತರಿಸಿದ್ದಾರೆ; ವಿವಾಹ

ಸಂತಾನ ಶುದ್ಧಿ

ಸಂಬಂಧಗಳಲ್ಲಿ ಸುವಿಚಾರಯುತರಾಗಿ ಪ್ರವರ್ತಿಸಿ ವಂಶವು ಶ್ರೇಷ್ಠವೆನ್ನಿಸುವುದೇ ಆ ಶಾಸ್ತ್ರದ ಉದ್ದೇಶ. ವಂಶಪರಂಪರೆಯಾಗಿ ನಡೆದುಬರುವ ದುರ್ಲಕ್ಷಣಗಳನ್ನೋ ರೋಗಗಳನ್ನೋ ಕಟ್ಟಿಕೊಳ್ಳುತ್ತಲಿರುವುದು ಯಾರಿಗಾದರೂ ನಾಶಹೇತುವಾದುದು. ಪ್ರಬಲವಾದ ರೋಗಗಳಲ್ಲಿ ಅನೇಕ ರೋಗಗಳು ವಂಶಪರಂಪರೆಯಾಗಿ ನೆಲೆಸಬಲ್ಲವು; ಆದ್ದರಿಂದ ಅಂತಹ ರೋಗಗಳಿಗೆ ತುತ್ತಾಗಿರತಕ್ಕವರು ಅವಿವಾಹಿತರಾಗಿಯೇ ಇರತಕ್ಕುದು ವಿಹಿತವಾದುದೆಂದು ಶಾಸ್ತ್ರಜ್ಞರ ಅಭಿಪ್ರಾಯ. ಕೆಲವು ರಾಷ್ಟ್ರಗಳಲ್ಲಿ ಅಂತಹ ಭಾಗ್ಯಹೀನರನ್ನು ಪ್ರತ್ಯೇಕವಾಗಿ ಇರಿಸುವ ಯೋಚನೆಯೂ ನಡೆದಿದೆ. ಇತ್ತೀಚಿಗೆ ವಿವಾಹ ಸಂಬಂಧವಾದ ರೋಗಗಳು ವಿಸ್ತಾರಗೊಂಡು ಜನತೆಯನ್ನೇ ದುರ್ಬಲಗೊಳಿಸುತ್ತಲಿರುವುದರಿಂದ ಎಲ್ಲ ದೇಶಗಳಲ್ಲಿಯೂ ಜನಶುದ್ಧಿಯನ್ನು ಸಾಧಿಸುವ ಯೋಚನೆಯು ಬೆಳೆಯುತ್ತಲಿದೆ. ಪಾಶ್ಚಾತ್ಯ ದೇಶಗಳಲ್ಲಂತೂ ತಬ್ಬಲಿಗಳ ಸಂಖ್ಯೆಯು ಅತಿಯಾಗಿ ವೃದ್ಧಿಯಾಗಿ ಅಲ್ಲಿಯ ಜನರಿಗೆ ವಿವಾಹ ಸಂಬಂಧಗಳ ಶುದ್ಧಿಯ ವಿಷಯದಲ್ಲಿ ದೃಷ್ಟಿಯು ಬಲವಾಗಿ ನಾಟುತ್ತಲಿದೆ. ವೈವಾಹಿಕ ಸ್ವಾತಂತ್ರ್ಯವನ್ನು ಅಡ್ಡಿಮಾಡಬೇಕೆಂಬ ಪ್ರಯತ್ನಗಳು ಅವರಲ್ಲಿ ನಡೆಯುತ್ತಲಿವೆ.

ವಿವಾಹ ನೀತಿ

ಭಾರತೀಯರು ತಮ್ಮ ವಿವಾಹ ಧರ್ಮದ ವಿಧಿಗಳ ಸಮರ್ಪಕತೆಯನ್ನು ಕಂಡು ಹಿಗ್ಗಬಹುದು. ಆದರೆ ಪರಂಪರಾಗತವಾಗಿ ಬರುವ ರೋಗಗಳನ್ನು ಕಟ್ಟಿಕೊಳ್ಳದಂತೆ ಎಚ್ಚರವನ್ನು ವಹಿಸಬೇಕು. ದೇಶದಲ್ಲಿ ಹುಟ್ಟುವ ಮಕ್ಕಳು ರೋಗರಹಿತರಾಗಿರಬೇಕಾದುದು ಅತಿ ಮುಖ್ಯವಾದುದು. ವಂಶಶುದ್ಧಿಯು ರಕ್ಷಿತವಾಗತಕ್ಕ ಅಂಶವೂ ಮುಖ್ಯವಾದುದು. ಅರೋಗಿಯಾಗಿರತಕ್ಕಾತನು ತನಗೆ ಅಂತಹ ಶುದ್ಧ ಜನ್ಮವನ್ನು ಕೊಟ್ಟ ತಾಯಿತಂದೆಗಳಿಗೆ ಎಷ್ಟು ಕೃತಜ್ಞನಾಗಿದ್ದರೂ ಸಾಲದು. ದುರ್ನೀತಿಯು ಪಾಪಕರ; ದುರ್ನೀತಿಗೆ ಫಲವಾಗಿ ಒದಗುವ ನರಕಯಾತನೆಯು ಇಹಲೋಕದಲ್ಲಿಯೇ ಪ್ರಾಪ್ತಿಯಾಗುವುದು. ಸಂಯಮನ ಶಕ್ತಿಯನ್ನು ಬೆಳೆಸದೆ ದುರ್ಬಲವಾದ ಮನಸ್ಸುಳ್ಳವನು ತಾನು ಕೆಡುವುದೇ ಅಲ್ಲದೆ ವಂಶಶುದ್ಧಿಯನ್ನು ನಾಶಗೊಳಿಸಿ ಮಕ್ಕಳ ಆರೋಗ್ಯವನ್ನು ಹಾಳುಮಾಡಿ ರಾಷ್ಟ್ರದಲ್ಲಿ ಇಲ್ಲದ

ದೋಷವನ್ನು ತಂದಿಡುವಂತಹ ನೀಚನಾಗುತ್ತಾನೆ. ಪ್ರಾಚೀನ ಕಾಲದ ಋಷಿಗಳೂ ಧರ್ಮಜ್ಞರೂ ವಿಧಿಸಿದ ಕಟ್ಟಳೆಗಳು ಈ ವಿಷಯದಲ್ಲಿ ಸ್ಪಷ್ಟವಾಗಿರುತ್ತವೆ; ಭಾರತೀಯರು ಆ ವಿಧಿಗಳನ್ನು ಹೆಮ್ಮೆಯಿಂದ ಪಾಲಿಸಬೇಕು. ರಾಷ್ಟ್ರದ ಮೇಲ್ಮೆಗಾಗಿ ಪೌರನು ವಿವಾಹಿತನಾಗಿ ಗೃಹಸ್ಥನಾಗಬೇಕಾದುದು ಅವಶ್ಯ; ಆದರೆ ವಿವಾಹವೂ ಗಾರ್ಹಸ್ಥ್ಯವೂ 'ಪ್ರಜಾಯೈ ಗೃಹಮೇಧಿನಾಂ' ಎಂಬ ಮಾತಿನಲ್ಲಿ ಅಡಗಿರುವ ಅರ್ಥಕ್ಕೆ ಅನುಸಾರವಾಗಿರತಕ್ಕದ್ದು, ಭೋಗಕ್ಕಲ್ಲ. ಭೋಗಾಭಿಲಾಷೆಯಿಂದ ವಂಶಶುದ್ಧಿಗೆ ಹಾನಿಯನ್ನು ಉಂಟುಮಾಡತಕ್ಕಾತನು ಪಂಚಮಹಾಪಾತಕಿಗಿಂತಲೂ ನೀಚನಾಗಿ ಪರಿಣಮಿಸುತ್ತಾನೆ.

**ಪೌರಕರ್ತವ್ಯ**

ಆತ್ಮಹತ್ಯ ಶಿಶುಹತ್ಯಗಳಲ್ಲಿ ಬಹುಸಂಖ್ಯೆಗೆ ದುರ್ನೀತಿಯೇ ಮೂಲ ಕಾರಣವಾಗಿರುತ್ತದೆ. ನಮ್ಮ ದೇಶದಲ್ಲಿ ಬಡತನವೂ ಅವುಗಳಿಗೆ ಹೇತುವೇ ಆಗಿದ್ದಾಗ್ಗೂ ಪೌರವರ್ಗದವರು ಆರೋಗ್ಯವನ್ನು ಕೆಡಿಸತಕ್ಕ ದುರಾಚಾರಗಳನ್ನೂ ದುರ್ನೀತಿಯನ್ನೂ ಮೂಲೋತ್ಪಾಟನೆ ಮಾಡತಕ್ಕವರಾಗಬೇಕು. ಈ ಕರ್ತವ್ಯವು ಪೌರರಿಂದಲೇ ಸಾಧ್ಯವಾದುದು. ನೈರ್ಮಲ್ಯ ಮತ್ತು ಆರೋಗ್ಯಸಾಧನೆಗಳಲ್ಲಿ ಸರ್ಕಾರದವರು ಮಾತ್ರವೇ ಕೃತಕೃತ್ಯರಾಗಲು ಸಾಧ್ಯವಿಲ್ಲ.

**ಪ್ರಬಲ ವಿಘ್ನಗಳು**

ಸ್ಥಳೀಯ ನಿರ್ವಾಹವನ್ನು ಕುರಿತು ವಿವರಿಸುವಾಗ ಯೋಗ್ಯವಾಗಿ ಕರ್ತವ್ಯ ನಿರ್ವಾಹವಾಗಲು ಅಜ್ಞಾನ, ಅಸಡ್ಡೆ, ಬಡತನ ಮತ್ತು ಅತ್ಯಧಿಕಾರಗಳು ಮುಖ್ಯವಾದ ಅಡಚಣೆಗಳೆಂದು ಕಂಡೆವು. ಅಜ್ಞಾನ ಅಸಡ್ಡೆಗಳಿಗೆ ಚಿಕಿತ್ಸೆಯು ನಡೆಯತಕ್ಕುದು ಶಿಕ್ಷಣ ಪ್ರಚಾರದಿಂದ ಮತ್ತು ನೀತಿನಿಷ್ಠೆಯಿಂದ. ಬಡತನವೆಂಬುದು ಪ್ರಬಲವಾದ ಪ್ರತಿಬಂಧಕ. ಗ್ರಾಮ ಪಂಚಾಯತಿಗಳ, ನಗರನಿರ್ವಾಹ ಸಭೆಗಳ ಮತ್ತು ಜಿಲ್ಲಾ ನಿರ್ವಾಹ ಸಭೆಗಳ ದಾರಿದ್ರ್ಯವು ಒಟ್ಟು ದೇಶದ ಮತ್ತು ಸರ್ಕಾರದ ದಾರಿದ್ರ್ಯದ ಭಾಗವಾಗಿದೆ. ಬಡತನವು ತಗ್ಗುತ್ತ ಸ್ಥಳೀಯ ನಿರ್ವಾಹ ಸಭೆಗಳು ತಮ್ಮ

ಕರ್ತವ್ಯಗಳನ್ನು ಹೆಚ್ಚು ದಕ್ಷತೆಯಿಂದ ನಿರ್ವಹಿಸಬಹುದು. ಕಾರ್ಯಾಂಗ ದವರ ಅತ್ಯಧಿಕಾರವೆಂಬುದೂ ಪೌರರಿಗೆ ಯೋಗ್ಯತೆ ಹೆಚ್ಚಿದಂತೆಲ್ಲ ತಗ್ಗಲೇ ಬೇಕಾಗುವುದು.

ಆಯುರ್ವೇದ

ಬಡತನವೇ ಸಾರ್ವತ್ರಿಕವಾಗಿ ತೋರುವ ಅಡ್ಡಿ. ಆ ಅಡ್ಡಿಯು ಮಾಯವಾದ ಮೇಲೂ ಉದ್ಧಾರ ಪ್ರಯತ್ನದಲ್ಲಿ ಕೆಲವು ಅಂಶಗಳನ್ನು ವ್ಯಕ್ತಿಗಳೇ ಆಗಲಿ ಸ್ಥಳೀಯ ಸಭೆಗಳೇ ಆಗಲಿ ನಿರ್ವಹಿಸಲಾಗುವುದಿಲ್ಲ. ಆಯುರ್ವೇದವು ಇದಕ್ಕೆ ದೃಷ್ಟಾಂತ. ಆಯುರ್ವೇದದಿಂದ ದೇಶಕ್ಕಾಗ ಬಹುದಾದ ಪ್ರಯೋಜನವು ಅಗಣ್ಯ; ಏಕಂದರೆ ಅದಕ್ಕೆ ತಗಲುವ ವೆಚ್ಚವು ಸ್ವಲ್ಪ. ಗ್ರಾಮಸ್ಥರು ಒಟ್ಟುಗೂಡಿ ಯೋಗ್ಯನಾದ ಆಯುರ್ವೇದ ಪಂಡಿತ ನೊಬ್ಬಾತನನ್ನು ಬರಮಾಡಿಕೊಂಡು ಗ್ರಾಮದಲ್ಲಿ ನೆಲೆಸಿರುವಂತೆ ನೆರವೇರಿಸುವ ವಿಧಾನವು ಆಸ್ಪತ್ರೆಯೊಂದನ್ನು ಸ್ಥಾಪಿಸಿಕೊಂಡು ಅದಕ್ಕೆ ಡಾಕ್ಟರನ್ನು ಪೋಷಿಸಿ ದೂರದೇಶಗಳಲ್ಲಿ ಸಿದ್ಧವಾದ ಔಷಧಿಗಳನ್ನೇ ತರಿಸಿ ಕೊಳ್ಳುತ್ತಲಿರುವ ವಿಧಾನಕ್ಕಿಂತಲೂ ಉತ್ತಮವಾದುದು. ಆಯುರ್ವೇದ ಪಂಡಿತರ ಧರ್ಮವು ಉತ್ಕೃಷ್ಟವಾಗಿತ್ತು; ಅವರು ರೋಗಿಗೆ ಔಷಧೋಪ ಚಾರ ನಡೆದ ತರುವಾಯ ರೋಗಿಯು ಇಷ್ಟಪಟ್ಟು ಕೊಟ್ಟುದನ್ನು ಸ್ವೀಕರಿಸುತ್ತಿದ್ದರು. ಪಾಶ್ಚಾತ್ಯ ಚಿಕಿತ್ಸಾ ವಿದ್ಯೆಯನ್ನು ಕಲಿತಾತನಾದರೆ ಮೊದಲೇ ತನ್ನ ರುಸುಮನ್ನು ನಿರೀಕ್ಷಿಸುವನು. ಕವಿರಾಜರೂ ವೈದ್ಯರೂ ಹಕೀಮರೂ ನಮ್ಮ ದೇಶದ ಸ್ಥಿತಿಗತಿಗಳಿಗೆ ಒಪ್ಪಿದಷ್ಟು ಇತರರು ಒಪ್ಪುವು ದಿಲ್ಲ. ಆದರೆ ಆಯುರ್ವೇದ ವಿದ್ಯೆಯು ಸುವ್ಯವಸ್ಥಿತವಾಗಿಲ್ಲವಾದಕಾರಣ ಅಯೋಗ್ಯತೆಯು ತೋರಿಕೊಂಡು ಮೋಸವು ನಡೆಯಲು ಆಸ್ಪದವುಂಟು. ಇದನ್ನು ಸುಸ್ಥಿತಿಗೊಳಿಸುವುದು ಅತ್ಯವಶ್ಯಕ. ಆದರೆ ಈ ಕರ್ತವ್ಯವು ರಾಷ್ಟ್ರಮುಖವಾಗಿ ನಡೆಯತಕ್ಕುದು. ಒಟ್ಟು ರಾಷ್ಟ್ರಕ್ಕೇ ಬೇಕಾದು ದಾದುದರಿಂದ ಒಟ್ಟಾಗಿ ರಾಷ್ಟ್ರ ಪ್ರಯತ್ನವೇ ನಡೆಯತಕ್ಕದ್ದಾದರೂ ಪೌರಸಮೂಹದ ಪ್ರಯತ್ನದಿಂದ ಶೋಧನಾಗಾರಗಳೂ ಉಪವನಗಳೂ ಸ್ಥಾಪನೆಯಾಗತಕ್ಕುದು ವಿಹಿತ. ಸರ್ಕಾರದವರಿಂದ ನಡೆಯುವ ಪ್ರಯತ್ನ ಕ್ಕಿಂತಲೂ ಪೌರರಿಂದ ನಡೆಯುವ ಪ್ರಯತ್ನವೇ ಶ್ರೇಯಸ್ಕರ. ಹಿಮವ

ತ್ಪರ್ವತದ ಕ್ಷೇತ್ರದಲ್ಲಿ ಅಮೆರಿಕನರು ಶಾಸ್ತ್ರ ಶೋಧನಾಗಾರವನ್ನು ಸ್ಥಾಪಿಸಿಕೊಳ್ಳುವಾಗ ಭಾರತೀಯ ಪೌರರು ತಟಸ್ಥರಾಗಿರುವುದು ಗೌರವವೇ ಅಲ್ಲ.

# 3. ಶಿಕ್ಷಣ ವಿನೋದಗಳು

ಆಧಾರಭೂತ, ಪ್ರಾಚೀನ ಸಂಪ್ರದಾಯ, ನವ್ಯ ವಿಧಾನ, ಪ್ರಕೃತಸ್ಥಿತಿ, ಶಿಕ್ಷಣ ಲಕ್ಷ್ಯ, ಶಿಕ್ಷಣದಲ್ಲಿ ಆಸಕ್ತಿ, ಪ್ರತಿ ಪೌರನ ಕರ್ತವ್ಯ, ಶಿಕ್ಷಣ ಪ್ರೋತ್ಸಾಹ, ಕಾಲಕ್ಷೇಪಗಳು, ಶಿಕ್ಷಕರ ನೀತಿ, ನೀತಿಯ ಗುರಿ, ವಿರಾಮ-ವಿನೋದ, ವಿನೋದ ಶುದ್ಧಿ; ಪ್ರಾಚೀನ ರೀತಿ: ಗ್ರಾಮಾಂತರಗಳಲ್ಲಿ, ನಗರಗಳಲ್ಲಿ; ಕಲಾಸಕ್ತಿ, ನೂತನ ವಿನೋದಗಳು; ನಗರ ನಿರ್ವಾಹದ ಅಂಶ, ಪೌರಕರ್ತವ್ಯ.

ಆಧಾರಭೂತ

ರಾಷ್ಟ್ರದ ಸೌಭಾಗ್ಯಸ್ಥಿತಿಗೆ ಅಜ್ಞಾನವೆಂಬುದು ಪ್ರಬಲತಮವಾದ ವಿಪತ್ತು. ರಾಷ್ಟ್ರದ ಏಳಿಗೆಗೆ ಪೌರರೆಲ್ಲರೂ ಪ್ರಜ್ಞಾವಂತರಾಗಿರುವುದು ಅತ್ಯವಶ್ಯ. ಪ್ರತಿ ಪೌರನು ಸುಶಿಕ್ಷಿತನಾಗಿ ಪ್ರಜ್ಞೆಯನ್ನೂ ಸೌಶೀಲ್ಯವನ್ನೂ ಪಡೆದಿರಬೇಕಾದುದು ಪೌರನ ಸ್ವಂತ ಏಳಿಗೆಗೂ ಅವಶ್ಯಕ, ರಾಷ್ಟ್ರದ ಏಳಿಗೆಗೂ ಅವಶ್ಯಕ. ಮೃಗಪ್ರಾಯರಂತೆ ಇರುವ ಜನರಲ್ಲಿ ರಾಷ್ಟ್ರವೆಂಬುದೇ ಬೇರೂರಲಾರದು; ಜನರು ಅಶಿಕ್ಷಿತರಾಗಿ ಇದ್ದ ಪಕ್ಷದಲ್ಲಿ ಮಾತ್ಸ್ಯನ್ಯಾಯವೆಂಬುದು ಬಲಗೊಂಡು ರಾಷ್ಟ್ರವೇ ಧ್ವಂಸವಾಗುವುದು. ಶಿಕ್ಷಣಪ್ರಾಪ್ತಿಯಿಂದ ಪೌರರು ಸುಶೀಲರಾಗಿಯೂ ಪ್ರಜ್ಞಾವಂತರಾಗಿಯೂ ಜೀವನವನ್ನು ನಡೆಸುವುದಲ್ಲದೆ ರಾಷ್ಟ್ರದ ಸೌಭಾಗ್ಯಸಾಧನೆಯ ಪ್ರಯತ್ನದಲ್ಲಿ ತೋರಿಕೊಳ್ಳಬಹುದಾದ ಆಪತ್ತುಗಳನ್ನು ದಾಟುವ ಶಕ್ತಿಯನ್ನು ಪಡೆಯುವರು. ಆದ್ದರಿಂದಲೇ ಆಧುನಿಕ ರಾಷ್ಟ್ರಗಳಲ್ಲಿ ಜನಶಿಕ್ಷಣವು ರಾಷ್ಟ್ರದ ಕರ್ತವ್ಯಗಳಲ್ಲಿಯೇ ಮುಖ್ಯವಾದುದೆನಿಸಿದೆ. ಸರ್ಕಾರದವರ ವಾರ್ಷಿಕ ವರದಿಗಳಲ್ಲಿ ಆರ್ಥಿಕ ಮತ್ತು ನೈತಿಕ ಅಭಿವೃದ್ಧಿಯೆಂದು ವರ್ಣಿಸುವುದು ಸಾಮಾನ್ಯ; ನೈತಿಕ ಅಭಿವೃದ್ಧಿ ವಿವರವೆಂದರೆ ಶಿಕ್ಷಣಪ್ರಚಾರ ವಿಸ್ತರಣಗಳ ವಿವರವೆಂದೇ ಅರ್ಥ. ಶಿಕ್ಷಣದ ಗುರಿ ನೈತಿಕ ಜೀವನ; ನೈತಿಕ ಜೀವನವೇ ರಾಷ್ಟ್ರದ ಸುಸ್ಥಿತಿಗೆ ಅಸ್ತಿಭಾರವಾದುದು.

ಶಿಕ್ಷಣವನ್ನು ಪಡೆಯುವುದು ಪ್ರತಿ ಪೌರನ ಕರ್ತವ್ಯವೂ ಹೌದು, ಅಧಿಕಾರವೂ ಹೌದು. ಪ್ರತಿ ಪೌರನೂ ಸುಶಿಕ್ಷಿತನಾಗುವಂತೆ ನೆರವೇರಿಸು

ವುದು ಸಮಾಜದ ಅಥವಾ ರಾಷ್ಟ್ರದ ಕರ್ತವ್ಯ. ಜನರು ಅಶಿಕ್ಷಿತರಾಗಿರುವುದಕ್ಕೆ ಸಾಧಾರಣವಾಗಿ ಸಮಾಜದ ಅಸಡ್ಡೆಯೇ ಕಾರಣವೆನಿಸುವುದು.

**ಪ್ರಾಚೀನ ಸಂಪ್ರದಾಯ**

ನಮ್ಮ ದೇಶದಲ್ಲಿ ವಿದ್ಯಾವಿಹೀನನಾದವನು ಪಶುವೆಂದೇ ಪ್ರಾಚೀನ ಕಾಲದಿಂದಲೂ ಲೆಕ್ಕವಾಗಿದೆ; ನಮ್ಮ ದೇಶದಲ್ಲಿ ಶಿಕ್ಷಣವು ಮನೆಯಲ್ಲಿ, ಜಾತಿ ಪದ್ಧತಿ ನಿಯಮಗಳಲ್ಲಿ ಮತ್ತು ಶಾಲೆಗಳಲ್ಲಿ ನಡೆಯುತ್ತಿದ್ದಿತು. ಪ್ರಾಚೀನ ಕಾಲದ ಆಡಳಿತದಲ್ಲಿ ಶಿಕ್ಷಣವನ್ನು ಅನಿವಾರ್ಯ ಕರ್ತವ್ಯವನ್ನಾಗಿ ಎಣಿಸದೆ ಇದ್ದರೂ ಆಗಾಗ್ಗೆ ವಿದ್ಯಾವಂತರನ್ನು ಪ್ರೋತ್ಸಾಹಿಸುತ್ತಲೂ ವಿದ್ಯಾನಿಲಯಗಳಿಗೆ ದಾನಧರ್ಮಗಳನ್ನು ಮಾಡುತ್ತಲೂ ಇರುವುದು ಸಂಪ್ರದಾಯವಾಗಿತ್ತು. ಜನಶಿಕ್ಷಣವು ಜನರಿಂದಲೇ ನಡೆಯುತ್ತಿತ್ತು. ಪ್ರತಿ ಗ್ರಾಮದಲ್ಲಿಯೂ ಒಂದು ಪಾಠಶಾಲೆಯು ಗ್ರಾಮಸ್ಥರಿಂದಲೇ ನಡೆಯುತ್ತಿದ್ದುದಲ್ಲದೆ ಮಠಗಳಲ್ಲಿಯೂ ವಿದ್ಯಾಪೀಠಗಳಲ್ಲಿಯೂ ಪ್ರೌಢ ಶಿಕ್ಷಣವು ನಡೆಯುತ್ತಿತ್ತು. ಪ್ರತಿ ಪೌರನೂ ಋಷಿ ಋಣ ಗುರು ಋಣಗಳನ್ನು ತೀರಿಸಬೇಕಾಗಿತ್ತು; ಫಲಿತಾಂಶವಾಗಿ, ಸಾಧಿತವಾದ ಜ್ಞಾನರಾಶಿಯು ಲೋಪವಿಲ್ಲದಂತೆ ರಕ್ಷಿತವಾದುದಲ್ಲದೆ ಜ್ಞಾನವಿಸ್ತರಣ ಕಾರ್ಯವೂ ನಡೆದು ಪರಂಪರೆಯಾಗಿ ವಿದ್ಯಾಪ್ರಚಾರವಾಗುತ್ತಿತ್ತು. ಗ್ರಾಮಸ್ಥರು, ಪಟ್ಟಣಿಗರು, ಬಡವರು, ಶ್ರೀಮಂತರು, ಅಧಿಕಾರಿಗಳು, ರಾಜಪುರುಷರು ಎಲ್ಲರೂ ತಮ್ಮ ಯೋಗ್ಯತೆಗೆ ತಕ್ಕಂತೆ ಉಚಿತವಾಗಿಯೂ ಉದಾರವಾಗಿಯೂ ವಿಹಾರ, ದೇವಾಲಯ ಮತ್ತು ಮಠಗಳಿಗೆ ಮಾತ್ರವಲ್ಲದೆ ಅಗ್ರಹಾರ ಬ್ರಹ್ಮಪುರಿಗಳಿಗೂ ದತ್ತಿಗಳನ್ನು ಏರ್ಪಡಿಸಿ ತಾವಾಗಿಯೇ ಅಧ್ಯಾಪಕವರ್ಗದವರ ಜೀವನವನ್ನು ನಡೆಸಿಕೊಡುತ್ತಿದ್ದರು. ತಪೋವನ ಋಷ್ಯಾಶ್ರಮಗಳಿಂದ ದೇವಾಲಯ ಮಠಗಳವರೆಗೂ ಹಿಂದಿನ ಕಾಲದಲ್ಲಿ ಏಕಪ್ರಕಾರವಾಗಿ ವಿದ್ಯಾಪ್ರಚಾರವು ಪವಿತ್ರವೆನಿಸಿತ್ತು. ವಿದ್ಯಾದಾನವು ಶ್ರೇಷ್ಠವೆನಿಸಿತ್ತು; ವಿದ್ಯೆಯನ್ನು ಮಾರುವುದು ಪಾಪಕರವೆನಿಸಿತ್ತು. ವಿದ್ಯೆಗೂ ಧರ್ಮಕ್ಕೂ ನಿಕಟ ಸಂಬಂಧವಿತ್ತು. ಭಾರತವರ್ಷದಲ್ಲಿ ವಿದ್ಯಾಸಾಧನ ಪ್ರಚಾರಗಳಿಗಾಗಿ ನೆಲೆಗೊಂಡ ಸಂಪ್ರದಾಯಗಳು ಅಮೋಘವಾಗಿಯೇ ಇದ್ದುವು. ಬ್ರಿಟಿಷರ ಆಳ್ವಿಕೆಯು ಪ್ರಾರಂಭವಾದ ಮೇಲೆ ಹಿಂದಿನ ಕಾಲದ ಪಾಠಶಾಲೆ

ಗಳೂ ವಿದ್ಯಾಪೀಠಗಳೂ ಪ್ರೋತ್ಸಾಹವನ್ನು ಪಡೆಯದೆ ಕ್ಷಯಿಸಿದವು. ಬ್ರಿಟಿಷರ ಆಡಳಿತದಲ್ಲಿ ವಿದ್ಯಾ ಪ್ರಚಾರ ಮತ್ತು ಜನಶಿಕ್ಷಣಗಳು ಕರ್ತವ್ಯ ಗಳೆಂದು ಸ್ವೀಕೃತವಾದಮೇಲೆ ಪಾಶ್ಚಾತ್ಯ ನೀತಿ ವಿಧಾನಗಳೇ ನೆಲೆಗೊಂಡವು. ಈ ಬದಲಾವಣೆಯಲ್ಲಿ ಅಕ್ಷರಾಭ್ಯಾಸಕ್ಕೆ ಹೆಚ್ಚು ಪ್ರಾಶಸ್ತ್ಯವೂ ಸಾಮಾನ್ಯ ಜನಶಿಕ್ಷಣವು ಏಕರೀತಿಯಾಗಿರಬೇಕೆಂದು ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ವಿಭಾಗಗಳಲ್ಲಿ ಏಕರೀತಿಯಾದ ಪರೀಕ್ಷಾ ಕ್ರಮವೂ ಮುಖ್ಯಲಕ್ಷಣಗಳಾದವು. ಆಡಳಿತದಲ್ಲಿ ಶಿಕ್ಷಣ ಶಾಖೆಯೆಂಬುದು ಏರ್ಪಟ್ಟು ಶಿಕ್ಷಣ ಮಂತ್ರಿಯೊಬ್ಬಾತನ ಕಯ್ಯಲ್ಲಿ ಶಿಕ್ಷಣ ಕರ್ತವ್ಯಪಾಲನೆಯು ನಿಲ್ಲುವಂತಾ ಯಿತು. ನೂರು ವರ್ಷಗಳ ಕಾಲ ಈ ಕರ್ತವ್ಯವು ರಾಷ್ಟ್ರಮುಖವಾಗಿಯೇ ನಡೆಯುತ್ತಿದ್ದಾಗ್ಯೂ ಭರತವರ್ಷದಲ್ಲಿ ಅಕ್ಷರಸ್ಥರಾದವರ ಸಂಖ್ಯೆಯು ಬಹಳ ಕಡಿಮೆಯಾಗಿದೆ. ಇತರ ದೇಶಗಳೊಂದಿಗೆ ಹೋಲಿಸಿ ನೋಡಿದಲ್ಲಿ ಭಾರತೀಯರಲ್ಲಿ ನಿರಕ್ಷರರಾಗಿರುವ ಜನಭಾಗವು ಘೋರ ಪ್ರಮಾಣ ದಿಂದಲೇ ಇರುವುದು ಕಾಣುತ್ತದೆ.

ನವ್ಯ ವಿಧಾನ

ಇತ್ತೀಚಿಗೆ ಶಿಕ್ಷಣ ನಿರ್ವಾಹವನ್ನು ಸ್ಥಳೀಯ ನಿರ್ವಾಹಕ ಸಂಸ್ಥೆ ಗಳಿಗೇ ಒಪ್ಪಿಸುವ ನೀತಿಯು ತೋರಿಕೊಂಡು ದೃಢಪಡುತ್ತಲಿದೆ. ಪ್ರಾಥಮಿಕ ಮತ್ತು ಮಾಧ್ಯ ಮಿಕ ಶಿಕ್ಷಣಗಳು ಗ್ರಾಮಗಳ, ನಗರಗಳ ಮತ್ತು ಜಿಲ್ಲೆಗಳ ನಿರ್ವಾಹಕ ಸಭೆಗಳಿಂದಲೇ ನಡೆಯತಕ್ಕದ್ದೆಂದು ನಿರ್ಣೀತವಾಗಿದೆ. ಹೀಗಾಗುವುದರಿಂದ ಪೌರಕರ್ತವ್ಯಭಾರವು ಹೆಚ್ಚುವುದು. ಶಿಕ್ಷಣ ಕರ್ತವ್ಯ ವೆಲ್ಲವೂ ಪೌರಸಭೆಗಳಿಂದಲೇ ನಿರ್ವಾಹವಾಗುವ ಸ್ಥಿತಿಯಲ್ಲಿ ಶಿಕ್ಷಣ ಲೋಪಕ್ಕೆ ಸರ್ಕಾರದವರನ್ನು ನಿಂದಿಸಲು ಆಸ್ಪದವೇ ಇರುವುದಿಲ್ಲ. ಶಾಲೆ ಗಳನ್ನು ಹೆಚ್ಚು ಹೆಚ್ಚಾಗಿ ತೆರೆಯಬೇಕು; ಹೆಚ್ಚು ಹೆಚ್ಚು ಮಂದಿ ಅಧ್ಯಾಪಕರು ನಿಯುಕ್ತರಾಗಬೇಕು. ಈ ಕೆಲಸವು ಸಮರ್ಪಕವಾಗಿ ನಡೆಯಲು ಸರ್ಕಾರಕ್ಕೂ ಸ್ಥಳೀಯ ಸಂಸ್ಥೆಗಳಿಗೂ ಪ್ರಬಲವಾದ ಅಡ್ಡಿಯಾಗಿ ಬಡತನವೇ ಎದುರಾಗುವುದು. ದೇಶದಲ್ಲಿ ಹುಟ್ಟಿದ ಪ್ರತಿ ಮಗುವಿಗೂ ಪ್ರಾಥಮಿಕ ಮಾಧ್ಯಮಿಕ ಶಿಕ್ಷಣಗಳು ಒದಗುವಂತೆ

ಪ್ರಕೃತಸ್ಥಿತಿ

ಪರಿಣಮಿಸತಕ್ಕುದು ಗುರಿ. ಅನೇಕ ಕಾರಣಗಳಿಂದ ಆ ಗುರಿಯು ಭಾರತೀಯ ಪ್ರಯತ್ನರಂಗಕ್ಕೆ ಅತಿದೂರದಲ್ಲಿಯೇ ಇದೆ.

ಶಿಕ್ಷಣ ಲಕ್ಷ್ಯ

ಸಾಮಾನ್ಯಜನಶಿಕ್ಷಣದಲ್ಲಿ ಪೌರರಿಗೆ ಮುಖ್ಯವಾಗಿ ಮೂರು ಉದ್ದೇಶಗಳು ಸಾರ್ಥಕವಾಗಬೇಕು. ಪ್ರತಿಯೊಬ್ಬನೂ ಯೋಗ್ಯತೆಗೆ ತಕ್ಕಂತೆ ಬದುಕನ್ನು ಪಡೆಯಲು ಶಿಕ್ಷಣವು ಸಹಾಯವಾಗಬೇಕು, ಸೌಶೀಲ್ಯವನ್ನು ಪಡೆದು ಸಂಸ್ಕೃತನಾಗಿ ಬಾಳುವಂತೆ ನೆರವೇರಿಸಬೇಕು, ಮತ್ತು ರಾಷ್ಟ್ರದಲ್ಲಿ ಪೌರನಾಗಿ ಅರ್ಹತೆಯಿಂದ ವರ್ತಿಸಲು ನೆರವಾಗಬೇಕು—ಈ ಮೂರು ಉದ್ದೇಶಗಳಲ್ಲದೆ ಇತರ ಉದ್ದೇಶಗಳೂ ಹೇರಳವಾಗಿಯೇ ಇರಬಹುದಾದರೂ ಕನಿಷ್ಠಪಕ್ಷ ಇರಬೇಕಾದವುಗಳಲ್ಲಿ ಈ ಮೂರೇ ಮುಖ್ಯ. ಪೌರರಾದವರು ಸುಶಿಕ್ಷಿತರಾಗಿರುವುದಲ್ಲದೆ ರಾಷ್ಟ್ರ ಕರ್ತವ್ಯ ಧರ್ಮಗಳಲ್ಲಿ ಪರಿಶ್ರಮವನ್ನೂ ಪಡೆದಿರಬೇಕಾದುದು ಪ್ರಾತಿನಿಧ್ಯ ತತ್ವದ ಅನುಷ್ಠಾನದಲ್ಲಿ ಅನಿವಾರ್ಯವಾದುದು.

ಶಿಕ್ಷಣದಲ್ಲಿ ಆಸಕ್ತಿ

ಶಾಸಕಾಧಿಕಾರವನ್ನು ನಿರ್ವಹಿಸುವ ಪೌರರಿಗೆ ಶಿಕ್ಷಣದಲ್ಲಿ ಆಸಕ್ತಿಯು ವಿಶೇಷವಾಗಿಯೇ ಇರಬೇಕು. ರೋಗಿಗೆ ತಪ್ಪಾದ ಔಷಧವನ್ನು ಕೊಟ್ಟರೆ ಮೂಡುವ ಅನರ್ಥಕ್ಕಿಂತಲೂ ಹೆಚ್ಚಾದ ಅನರ್ಥವು ದೋಷಯುಕ್ತವಾದ ಶಿಕ್ಷಣದಿಂದ ಸಂಭವಿಸುತ್ತದೆ. ರೋಗಗಳನ್ನೆಲ್ಲರೂ ಅನುಭವಿಸಬಲ್ಲರಾದರೂ ಚಿಕಿತ್ಸೆಯನ್ನು ನಡೆಸಬಲ್ಲವರು ಕೆಲವರು ಮಾತ್ರ; ಹಾಗೆಯೇ ಶಿಕ್ಷಣ ವ್ಯವಸ್ಥಾ ನೀತಿಗಳ ವಿಚಾರದಲ್ಲಿಯಾಗಲಿ ಆರ್ಥಿಕಸ್ಥಿತಿಗಳ ವಿಚಾರದಲ್ಲಿಯಾಗಲಿ ಪ್ರತಿಯೊಬ್ಬರೂ ಎಂತಹ ಮಾರ್ಗವು ಉತ್ತಮವೆಂದು ನಿರ್ಧರಿಸಲಾರರು. ವ್ಯವಸ್ಥೆಯ ಅಂಶಗಳನ್ನೂ ರೀತಿ ನೀತಿಗಳನ್ನೂ ನಿರ್ಧರಗೊಳಿಸಲು ಅಸಾಧಾರಣವಾದ ಪ್ರಜ್ಞೆಯುಳ್ಳವರಿಗೇ ಸಾಧ್ಯ. ಆದರೆ ಪೌರರೆಲ್ಲರೂ ತಮ್ಮ ಶಕ್ತ್ಯನುಸಾರ ಶಿಕ್ಷಣ ಪ್ರಚಾರದ ವಿಷಯದಲ್ಲಿ ಶ್ರದ್ಧೆಯನ್ನು ವಹಿಸಿ ಆಸಕ್ತಿಯನ್ನು ತೋರುತ್ತಿರಬೇಕು. ನಮ್ಮ ದೇಶದಲ್ಲಿ ನೆಲೆಸಿರುವ ಶಿಕ್ಷಣ ನೀತಿಯೂ ಶಿಕ್ಷಣ ಪದ್ಧತಿಗಳೂ ಪದೇ ಪದೇ ಖಂಡನೆಗೆ ಗುರಿ

ಯಾಗಿವೆ; ದೇಶದ ಅವನತಿಗೆ ಶಿಕ್ಷಣ ನೀತಿಯೇ ಮೂಲಕಾರಣವೆಂದು ಅನೇಕರು ಅಭಿಪ್ರಾಯಪಡುವರು. ಶಿಕ್ಷಣದಿಂದಲೇ ಭಾರತೀಯರಲ್ಲಿ ಹಿಂದೆಂದೂ ಇಲ್ಲದ ಅಯೋಗ್ಯತೆಯು ತೋರಿದೆಯೆಂದು ಅನೇಕರು ವಾದಿಸುತ್ತಾರೆ. ಶಿಕ್ಷಣ ವಿಚಾರದಲ್ಲಿ ತೊಡಗಿದರೆ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ವಿಭಾಗಗಳನ್ನು ಮಾತ್ರವೇ ಅಲ್ಲದೆ ಸ್ತ್ರೀವಿದ್ಯಾಭ್ಯಾಸ, ಉಪಜೀವನ ಶಿಕ್ಷಣ, ಟೆಕ್ನಿಕಲ್ ಶಿಕ್ಷಣ ಮುಂತಾದ ನಾನಾ ವಿಷಯಗಳನ್ನು ಕಾಣುತ್ತೇವೆ. ಅವುಗಳಲ್ಲಿ ಪ್ರತಿಯೊಂದೂ ವಾದವಿವಾದಗಳಿಂದ ಕೂಡಿದ್ದೇ. ಇವುಗಳನ್ನು ನಿಷ್ಕರ್ಷೆಮಾಡುವ ಯೋಗ್ಯತೆಯನ್ನು ಸಂಪಾದಿಸುವುದು ಎಲ್ಲ ಪೌರರಿಗೂ ಸಾಧ್ಯವಿಲ್ಲದೆ ಇರಬಹುದು. ಆದರೂ ಪೌರರೆಲ್ಲರೂ ಆ ಪ್ರಶ್ನೆಗಳಲ್ಲಿ ಆಸಕ್ತರಾಗಿ ವಿಷಯವನ್ನು ಚಿಂತಿಸಬೇಕು. ಭಾರತೀಯರೆಲ್ಲರೂ ಇಂಗ್ಲಿಷ್ ಭಾಷೆಯನ್ನು ಕಲಿಯಲೇಬೇಕೇ? ಅಕ್ಷರಸ್ಥರೆಂದರೆ ಸುಶಿಕ್ಷಿತರೆಂಬ ಅರ್ಥವು ಆಗುವುದೇ? ಸಂಸ್ಕೃತ, ಫಾರಸೀ ಭಾಷೆಗಳ ವ್ಯಾಸಂಗವು ಹೇಗೆ ನಡೆಯಬೇಕು? ಗ್ರಾಮಗಳ ಶಾಲೆಗಳು ಹೇಗೆ ನಡೆಯಬೇಕು? ಒಂದು ಶಾಲೆಗೆ ವಾರ್ಷಿಕವಾದ ವೆಚ್ಚವೆಷ್ಟು? ದೇಶದಲ್ಲಿ ಎಲ್ಲರಿಗೂ ಉಚಿತವಾಗಿ ವಿದ್ಯಾಭ್ಯಾಸವು ನಡೆಯಬೇಕಾದರೆ ವೆಚ್ಚವೆಷ್ಟು? ಬಲವಂತದ ಪ್ರಥಮಾಭ್ಯಾಸವು ಎಲ್ಲೆಡೆಗಳಲ್ಲಿಯೂ ನಡೆಯುವುದಾದರೆ ಹಣವೆಷ್ಟು ಬೇಕಾದೀತು? ಇಂತಹ ಪ್ರಶ್ನೆಗಳಲ್ಲಿ ಪೌರರಾದವರು ಕುತೂಹಲಿಗಳಾಗಿರಬೇಕು. ಪೌರಾಧಿಕಾರವು ಶಾಸನಕ್ಕೆ ಮೂಲವಾದುದರಿಂದ ಪೌರರು ಈ ವಿಷಯಗಳಲ್ಲಿ ಆಸಕ್ತಿಯನ್ನು ವಹಿಸಿ ರಾಷ್ಟ್ರದಲ್ಲಿ ಶಿಕ್ಷಣ ಕರ್ತವ್ಯದಿಂದ ಸಾಧಿತವಾಗುವ ಲಕ್ಷ್ಯವನ್ನು ಸದಾ ನೆನಪಿನಲ್ಲಿಟ್ಟಿರಬೇಕು.

**ಪ್ರತಿ ಪೌರನ ಕರ್ತವ್ಯ**

ಆದರೆ ಪ್ರತಿಯೊಬ್ಬ ಪೌರನೂ ತಾನೇ ಸುಶಿಕ್ಷಿತನಾಗಿರಬೇಕು. ಜಗತ್ತಿನಲ್ಲಿ ಅಥವಾ ಮಾನವರಾಶಿಯಲ್ಲಿ ಮತ್ತು ತನ್ನ ದೇಶ ಸಮಾಜಗಳಲ್ಲಿ ಯೋಗ್ಯನಾಗಿ ಬಾಳಬೇಕಾದುದು ಪ್ರತಿ ಮಾನವನ ಕರ್ತವ್ಯ. ಕುಮಾರರೂ ಯುವಕರೂ ಸುಶಿಕ್ಷಿತರಾಗುವುದರಲ್ಲಿ ಶಾಲೆಗಳೇ ಎಲ್ಲ ಕರ್ತವ್ಯಭಾಗವನ್ನೂ ನೆರವೇರಿಸಲು ಸಾಧ್ಯವೇ? ಇಷ್ಟವಿರಲಿ ಇಲ್ಲದಿರಲಿ, ಉದ್ದೇಶವಿರಲಿ ಇಲ್ಲದಿರಲಿ, ಹಿರಿಯರಾದವರು ಕಿರಿಯರಿಗೆ ಮಾರ್ಗದರ್ಶಿಗಳು,

ಆದರ್ಶಗಳನ್ನು ತೋರತಕ್ಕವರು. ಶಾಲೆಯಿಂದಲೋ ಕಾಲೇಜಿನಿಂದಲೋ ಪಾರಾದ ಕೂಡಲೆ ಶಿಕ್ಷಣವು ಮುಗಿಯುವುದಿಲ್ಲ. ಹುಟ್ಟಿದಂದಿನಿಂದ ಸಾಯುವವರೆಗೂ ಪ್ರತಿಯೊಬ್ಬರೂ ಶಿಕ್ಷಣವನ್ನು ಪಡೆಯುತ್ತಲೂ ಇತರರಿಗೆ ಶಿಕ್ಷಣವನ್ನು ಎರೆಯುತ್ತಲೂ ಇರುತ್ತಾರೆ. ನೀತಿಯೆಂಬುದು ಹೇಳಿಕೊಡದೆ ಬರುವುದು ಹೆಚ್ಚು; ಉಪದೇಶದಿಂದಲೇ ಸರ್ವತ್ರ ಸಿದ್ಧಿಯಾಗತಕ್ಕುದಲ್ಲ. ಕೂತುಕೊಳ್ಳುವಾಗ ಪದ್ಮಾಸನಹಾಕಿಕೊಂಡು ಕುಳಿತುಕೊಳ್ಳತಕ್ಕು ದೆಂಬುದು ಮನೆಯಲ್ಲಿಯೇ ಅಭ್ಯಾಸವಾಗತಕ್ಕುದು; ನಡೆಯುವ ಅಥವಾ ಮಾತನಾಡುವ ರೀತಿ ನೀತಿಗಳು ಹಿರಿಯರ ಅನುಕರಣದಿಂದಲೇ ಪ್ರಾಪ್ತ ವಾಗತಕ್ಕವು. ಈ ಅಂಶವನ್ನು ವಯಸ್ಕರಾದವರು ಮರೆತರೆ ಕರ್ತವ್ಯ ಭ್ರಷ್ಟತೆಯು ಸಿದ್ಧವಾಗುವುದು. ಪ್ರತಿಯೊಬ್ಬರೂ "ನಾನು ಬೇಡವೆಂದರೂ ನನ್ನನ್ನು ನೋಡಿ ಕಲಿಯುವ ಚಿಕ್ಕವರಿದ್ದಾರೆ" ಎಂಬುದನ್ನು ಮರೆಯದೆ ಇರಬೇಕು. ಇಷ್ಟುಮಾತ್ರವೇ ಅಲ್ಲ. ಶಾಲೆಯಿಂದಲೋ ಕಾಲೇಜಿನಿಂದಲೋ ಪಾರಾದ ಮಾತ್ರಕ್ಕೇ ಪೌರನ ಶಿಕ್ಷಣವು ಪೂರ್ತಿಯಾಗುವುದಿಲ್ಲ; ಪಾರಾದ ಮೇಲೂ ಪೌರನು ತನ್ನ ಬದುಕಿನ ಕೆಲಸದಲ್ಲಿ ಮಾತ್ರ ಆಸಕ್ತನಾಗಿರದೆ ಇತರ ಹವ್ಯಾಸಗಳಲ್ಲಿ ಶ್ರದ್ಧಾಳುವಾಗಿರಬೇಕು. ಲೋಕವ್ಯವಹಾರದಲ್ಲಿ, ದೇಶವ್ಯವಹಾರದಲ್ಲಿ, ನೆರೆಹೊರೆಯವರ ಕಷ್ಟಸುಖಗಳಲ್ಲಿ ವಿಚಾರಪರ ನಾಗಿದ್ದು ತನ್ನ ಸ್ಥಳದಲ್ಲಿ ತಾನೊಂದು ಬೆಳಕಿನಂತೆ ಇರಬೇಕು. ಗ್ರಾಮ ದಲ್ಲಿ ಅಥವಾ ಕೇರಿಯಲ್ಲಿ ಸಾಹಿತಿಯಾಗಿಯೋ ಸಂಗೀತ ವಿದ್ವಾಂಸ ನಾಗಿಯೋ ಯಾರಾದರಿದ್ದ ಪಕ್ಷದಲ್ಲಿ ಆತನು ಅಲ್ಲಿಗೆ ಭೂಷಣಪ್ರಾಯ ನಾಗಿರುತ್ತಾನೆ. ಆತನೆಲ್ಲಿದ್ದರೆ ಅಲ್ಲಿ ಶಿಕ್ಷಣವು ನೆರವೇರುತ್ತಲಿರುವುದು. ಆದ್ದರಿಂದ ಉಪಾಧ್ಯಾಯ ವೃತ್ತಿಯನ್ನು ಅವಲಂಬಿಸಿದವರು ಮಾತ್ರವೇ ಶಿಕ್ಷಕರಲ್ಲ. ಸಮಾಜ ಜೀವಿಗಳಲ್ಲಿ ಪ್ರತಿಯೊಬ್ಬರೂ ಶಿಕ್ಷಕರು, ಪ್ರತಿ ಯೊಬ್ಬರೂ ಶಿಕ್ಷಾರ್ಥಿಗಳು. ಶಿಕ್ಷಣವೆಂಬುದು ಪ್ರತಿ ಸ್ಥಳದಲ್ಲಿಯೂ ಪ್ರತಿ ಕ್ಷಣವೂ ಉದ್ದೇಶಪೂರ್ವಕವಾಗಿಯೋ ಉದ್ದೇಶರಹಿತವಾಗಿಯೋ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ, ಅವಿಚ್ಛಿನ್ನವಾಗಿ ಅನಿವಾರ್ಯ ವಾಗಿ ನಡೆಯುತ್ತಿರುತ್ತದೆ. ಈ ಕಾರಣದಿಂದ ಪೌರನು ಯೋಗ್ಯನೆನಿಸಲು ತಾನು ಇತರರಿಗೆ ಆದರ್ಶಪ್ರಾಯನಾಗಿರುವುದಲ್ಲದೆ ದೇಶಕ್ಕೆ ಗೌರವವನ್ನು

ತರುವಂತೆ ನಡೆದುಕೊಳ್ಳುತ್ತಿರತಕ್ಕದ್ದು. ದೇಶದ ಆದರ್ಶಧ್ಯೇಯಗಳನ್ನು ತನ್ನ ಜೀವನದಲ್ಲಿ ತೋರಬೇಕು; ಹಿಂದಿನ ಆದರ್ಶಧ್ಯೇಯಗಳನ್ನು ತಿದ್ದುವುದಾದರೆ ಅಥವಾ ಹೊಸ ಆದರ್ಶ ಧ್ಯೇಯಗಳನ್ನು ನೆಲೆಗೊಳಿಸತಕ್ಕವನಾದರೆ ತಾನೇ ಅವುಗಳನ್ನು ಆಚರಣೆಯಲ್ಲಿ ತೋರಬೇಕು. ಈ ರೀತಿಯಲ್ಲಿ ಪೌರನ ಜೀವನವು ಹಿರಿದಾದುದು, ಪ್ರಭಾವಯುಕ್ತವಾದುದು.

**ಶಿಕ್ಷಣ ಪ್ರೋತ್ಸಾಹ**

ಪ್ರಾಚೀನ ಕಾಲದಿಂದಲೂ ನಡೆದುಬಂದಿರುವ ಭಾರತೀಯ ಸಂಪ್ರದಾಯದಲ್ಲಿ ವಿದ್ಯಾರ್ಜನೆಯಲ್ಲಿ ನೆರವಾಗುವುದು ಪುಣ್ಯಕೆಲಸವೆನಿಸಿರುತ್ತದೆ. ವಿದ್ಯಾಭ್ಯಾಸದ ರಂಗದಲ್ಲಿ ಪ್ರತಿಯೊಬ್ಬರೂ ಪುಣ್ಯಲಾಭದ ಉದ್ದೇಶದಿಂದಲೇ ನೆರವಾಗುತ್ತಿದ್ದರು. ಧನಿಕನಾದವನು ದೇವಾಲಯ, ಮಠ, ಪರಿಷತ್ತು, ಮಸೀದಿ, ಮದರಸಾ ಮುಂತಾದ ಸಂಸ್ಥೆಗಳಿಗೆ ಧನವನ್ನು ನೀಡುತ್ತಿದ್ದನು; ಬಡವನಾದವನು ತನ್ನ ಚೈತನ್ಯಕ್ಕೊಡಗೂಡಿದಂತೆ ಏನಾದರೂ ಸಹಾಯಮಾಡುತ್ತಿದ್ದನು. ಧರ್ಮಾತ್ಮನಾದ ಧನಿಕನೊಬ್ಬನು ಭವ್ಯವಾದ ದೇವಮಂದಿರವನ್ನು ಕಟ್ಟಿಸಿ ಪುಣ್ಯಾರ್ಜನೆ ಮಾಡಿದ ಕಾಲದಲ್ಲಿ ಕಡುಬಡವನೊಬ್ಬಾತನು ತಾನೇ ದೇಹಶ್ರಮಪಟ್ಟು ಸುತ್ತಲೂ ಮಾವಿನ ಸಸಿಗಳನ್ನು ನೆಟ್ಟ ಕಥೆಯು ಎಲ್ಲರಿಗೂ ತಿಳಿದೇ ಇರುತ್ತದೆ. ಮದುವೆ ಮುಂಜಿಗಳ ಕಾಲದಲ್ಲಿ ವಿದ್ಯಾವಂತರನ್ನು ಕರೆಸುವುದು, ಆ ವೇಳೆಗಳಲ್ಲಿ ವಿದ್ವಾಂಸರೂ ಪಂಡಿತರೂ ಪರಸ್ಪರ ಚರ್ಚೆಗಳನ್ನು ನಡೆಸುವುದು ಸಾಮಾನ್ಯವಾಗಿತ್ತು. ಇಂದಿಗೂ ಭಾರತೀಯನೆನಿಸಿದಾತನು ಸರಸ್ವತಿಯ ಆರಾಧನೆಯನ್ನು ಮಾಡಲು ಕಾತರನಾಗಿಯೇ ಇರುತ್ತಾನೆ. ವಾರಕ್ಕೊಮ್ಮೆ ಬಡ ವಿದ್ಯಾರ್ಥಿಗೆ ಅನ್ನದಾನ ಮಾಡಲು ಸಿದ್ಧನಾಗುವ ಗೃಹಸ್ಥನು ಶಿಕ್ಷಣ ಪ್ರಚಾರದಲ್ಲಿ ಅಷ್ಟು ಮಾತ್ರ ಸಹಾಯವನ್ನು ಮಾಡಿ ಪುಣ್ಯವನ್ನು ಕಟ್ಟಿಕೊಳ್ಳುತ್ತಾನೆ. ಸದ್ಯಃಸ್ಥಿತಿಯಲ್ಲಿ ಎಲ್ಲೆಲ್ಲಿ ನೋಡಿದರೂ ಬಡ ವಿದ್ಯಾರ್ಥಿಗಳಿಗೆ ಉಚಿತವಾಗಿ ಅನುಕೂಲವನ್ನೊದಗಿಸಿಕೊಡುವ ಛಾತ್ರಾಲಯಗಳು ಅತ್ಯವಶ್ಯವಾಗಿ ಬೇಕು. ವಿದ್ಯಾರ್ಥಿಗಳಿಗೇ ಉದ್ದಿಷ್ಟವಾಗಿ ಅನ್ನವಸ್ತ್ರಾದಿ ದಾನಗಳನ್ನು ವ್ಯವಸ್ಥೆಗೊಳಿಸಿಯೋ ವಿದ್ಯಾರ್ಥಿ ವೇತನಗಳನ್ನು ಏರ್ಪಡಿಸಿಯೋ ಪೌರನು ವಿದ್ಯಾಪ್ರಚಾರಕ್ಕೆ ಸಹಾಯಮಾಡ

ಬಹುದು. ಮನೆಗೊಂದು ಹಿಡಿ ಅಕ್ಕಿಯನ್ನಿತ್ತು ಬಡ ವಿದ್ಯಾರ್ಥಿಗಳ ಪೋಷಣೆಯು ನಡೆಯುವ ಏರ್ಪಾಟು ನಡೆಯುತ್ತಿದ್ದಲ್ಲಿ ಎಂತಹ ದಟ್ಟ ದರಿದ್ರನಿಗಾದರೂ ಪುಣ್ಯವನ್ನು ಸಂಪಾದಿಸಿಕೊಳ್ಳುವ ಅವಕಾಶವುಂಟು. ಭಾರತವರ್ಷದಲ್ಲಿ ಶಿಕ್ಷಣಕ್ಕಾಗಿ ಕೊಡಬಹುದಾದ ಸಹಾಯವು ದಾನವೆನಿಸುವುದಿಲ್ಲ; ಭಕ್ತಿಯ ಕಾಣಿಕೆಯೆನಿಸುವುದು. ಆ ಲಕ್ಷಣವು ಭಾರತೀಯರಲ್ಲಿ ವಿಶೇಷವಾದುದು. ಉತ್ತಮವಾದ ಆ ಲಕ್ಷಣವು ವ್ಯತ್ಯಸ್ತವಾಗದಂತೆ ಇರಬೇಕು. ಅಮೋಘವಾದ ಸಂಪ್ರದಾಯವು ಎಂದಿಗೂ ನಷ್ಟವಾಗದಂತೆ ನಡೆಯಬೇಕು.

**ಕಾಲಕ್ಷೇಪಗಳು**

ಬೇರೊಂದು ಬಗೆಯಲ್ಲಿ ಭಾರತೀಯ ಗೃಹಸ್ಥನು ವಿದ್ಯಾಪ್ರಚಾರಕ್ಕೆ ಸಹಾಯವನ್ನು ಮಾಡುತ್ತಿದ್ದನು. ದೈವಭಕ್ತಿಯ ಪ್ರಚಾರಕ್ಕೆಂದು ಮೊದಮೊದಲು ತೋರಬಹುದಾದರೂ ಪುರಾಣ ಹರಿಕಥೆ ಮುಂತಾದ ಕಾಲಕ್ಷೇಪಗಳನ್ನು ನಡೆಸುವ ಗೃಹಸ್ಥನು ಆ ವಿಧವಾಗಿಯೂ ಶಿಕ್ಷಣಕಾರ್ಯದಲ್ಲಿಯೇ ಸಮಾಜ ಸೇವೆ ಮಾಡುವನು. ಕೇರಿಯಲ್ಲಿ ಒಬ್ಬರ ಮನೆಯಲ್ಲಿ ಹರಿಕಥೆಯು ನಡೆದರೆ ಕೇರಿಯವರೆಲ್ಲರೂ ಬಂದು ಕೇಳಿ ಉಪಕೃತರಾಗುತ್ತಾರೆ. ಧರ್ಮ ಮತ್ತು ನೀತಿಗಳ ಬೋಧೆಗೆ ಇವುಗಳಿಗಿಂತಲೂ ಉತ್ತಮವಾದ ಸಾಧಕವಿಲ್ಲವೆಂದೇ ಹೇಳಬಹುದು. ರಾಮಾಯಣ ಮಹಾಭಾರತ ಪುರಾಣಗಳ ಶ್ರವಣವು ವ್ಯರ್ಥವಲ್ಲ; ಅವುಗಳಲ್ಲಿ ಭಾರತೀಯರ ಭಕ್ತಿ ಕುತೂಹಲಗಳು ಎಂದಿಗೂ ನಷ್ಟವಾಗತಕ್ಕುವೂ ಅಲ್ಲ. ಆದ್ದರಿಂದ ಇಂತಹ ಕಾಲಕ್ಷೇಪವನ್ನು ನಡೆಸುವವರು ನೀತಿಯ ಪ್ರಚಾರದಲ್ಲಿ ನೆರವಾಗಿ ಸಮಾಜ ಸೇವೆಯನ್ನು ನೆರವೇರಿಸಿ ಪುಣ್ಯಭಾಜನರಾಗುತ್ತಾರೆ. ಲಕ್ಷಗಟ್ಟಲೆಯಾಗಿರುವ ನಮ್ಮ ಗ್ರಾಮಾಂತರಗಳಲ್ಲಿ ಇಂತಹ ಕಾಲಕ್ಷೇಪಗಳಿಂದ ಎಷ್ಟು ಮೇಲ್ಮೆಯಾಗಿರುವುದೋ ಅಗಣ್ಯ. ಆಧುನಿಕ ಕಾಲದಲ್ಲಿ ನಡೆಯುವ ಉಪನ್ಯಾಸ ಅಥವಾ ಲೆಕ್ಚರ್ ಎಂಬುದು ಕೆಲವು ಅಂಶಗಳಲ್ಲಿ ಮಾತ್ರ ಅವುಗಳನ್ನು ಹೋಲುವುದು. ಜನಶಿಕ್ಷಣದಲ್ಲಿ ವಾಚನ ಮಂದಿರಗಳು, ಪುಸ್ತಕ ಭಂಡಾರಗಳು, ಉಪನ್ಯಾಸ ಮಂದಿರಗಳು ಮುಂತಾದವುಗಳಿಂದ ಎಷ್ಟೋ ಪ್ರಯೋಜನವುಂಟು. ಇಂತಹ ಸಂಸ್ಥೆಗಳಿಗೆ ಸಹಾಯ

ಮಾಡಿದಾತನು ಪುಣ್ಯವನ್ನು ಸಂಪಾದಿಸಿಕೊಳ್ಳುವುದು ಮಾತ್ರವೇ ಅಲ್ಲ; ಇತರರ ಕೃತಜ್ಞತೆಗೆ ಪಾತ್ರನಾಗಿ ಧನ್ಯನಾಗುತ್ತಾನೆ.

ಶಿಕ್ಷಕರ ನೀತಿ

ಇನ್ನೂ ಹೆಚ್ಚಿನ ಪುಣ್ಯವನ್ನು ಸಂಪಾದಿಸುವಾತನು ಅಧ್ಯಾಪಕನಾಗ ತಕ್ಕವನು. ಸ್ವಾರ್ಥವನ್ನು ತ್ಯಜಿಸಿ ವಿದ್ಯಾಪ್ರಸಾರ ಕರ್ತವ್ಯವನ್ನು ಕಟ್ಟಿಕೊಂಡು ವ್ರತಬದ್ಧರಾಗಿ ಜೀವನವನ್ನು ನಡೆಸುವವರು ದೇಶೋದ್ಧಾರಕರೆಂದು ಗಣ್ಯರಾಗತಕ್ಕವರು. ಪೂರ್ವಕಾಲದ ಗುರುವು ಹಾಗೆಯೇ ಇರುತ್ತಿದ್ದನು; ಸ್ವಾರ್ಥವನ್ನು ನೀಗಿ ಬಡತನದಿಂದಲೇ ಬದುಕನ್ನು ಕಳೆಯುತ್ತ ಶಿಷ್ಯರನ್ನು ಪೋಷಿಸುತ್ತ ಇರುತ್ತಿದ್ದನು. ಆ ಸಂಪ್ರದಾಯವನ್ನು ಸ್ಮರಿಸಿ ಆಸೆಗಳನ್ನು ಬೆಳಸದೆ ವಿದ್ಯಾದಾನಮಾಡಲು ಕಂಕಣ ಕಟ್ಟಿಕೊಳ್ಳತಕ್ಕವರು ದೇಶಕ್ಕೇ ಭೂಷಣಪ್ರಾಯರಾದವರು. ಅಂತಹವರು ಗುಂಪುಗೂಡಿ ಒಂದು ಸಂಸ್ಥೆಯನ್ನೇ ನಡೆಸುತ್ತಿರಬಹುದು; ಅಥವಾ ವಿರಾಮಕಾಲದಲ್ಲಿ ದೇವಾಲಯದಲ್ಲಿಯೋ ಚಾವಡಿಯಲ್ಲಿಯೋ ಕುಳಿತು ಮಕ್ಕಳೊಡನೆ ಆಟವಾಡುವಂತೆ ನಟಿಸುತ್ತ ವಿದ್ಯಾದಾನಮಾಡಬಹುದು. ಪಟ್ಟಣಗಳಲ್ಲಿ ತೀರ ಬಡವರಾದವರ ಕೇರಿಗಳಿಗೆ ಹೋಗಿ ಸಾಯಂಕಾಲದ ವಿರಾಮಕಾಲವನ್ನು ಅಲ್ಲಿಯ ಮಕ್ಕಳಿಗೆ ಪಾಠ ಹೇಳಿಕೊಡುವುದರಲ್ಲಿ ಕಳೆಯಬಹುದು. ಭಾಗ್ಯವಂತರು ತಮ್ಮ ವಿರಾಮ ಸುಖಗಳಲ್ಲಿ ಇತರರನ್ನೂ ಕಟ್ಟಿಕೊಂಡು ಪುಣ್ಯ ಸಂಪಾದಿಸಬಹುದು; ತಮಗೆ ತೊಂದರೆಯಾದರೂ ಇತರರಿಗೆ ಪ್ರಯೋಜನವಾಗುವಂತೆ ನೆರವೇರಿಸುವವರು ಅಂತಹವರಿಗಿಂತಲೂ ಉತ್ತಮರು. ಬಿಡುವಿನ ವೇಳೆಯಲ್ಲಿ ಮಾತ್ರವೇ ಅಲ್ಲದೆ ಸದಾ ಇತರರ ಪ್ರಯೋಜನಕ್ಕಾಗಿ ತಮ್ಮ ಚೈತನ್ಯವನ್ನು ಅರೆಯುವವರು ಸಮಾಜಕ್ಕೇ ಶ್ರೇಷ್ಠರೆನಿಸತಕ್ಕವರು.

ನೀತಿಯ ಗುರಿ

ಅನೇಕ ಸಮಸ್ಯೆಗಳಿಗೆ ಶಿಕ್ಷಣವೇ ಉತ್ತಮವಾದ ಪರಿಹಾರ; ಆದರೆ ಶಿಕ್ಷಣವೇ ಒಂದು ಭಾರಿ ಸಮಸ್ಯೆ. ಶಿಕ್ಷಣ ವಿಸ್ತಾರಕ್ಕೆ ದಾರಿದ್ರ್ಯವು ಪ್ರತಿಬಂಧಕವಾಗುವಂತೆ ಸರ್ಕಾರದ ವೈಪರೀತ್ಯವೂ ಪ್ರತಿಬಂಧಕವಾಗಬಹುದು. ಇವೆರಡಲ್ಲದೆ ವಿಪತ್ತುಗಳು ಬೇರೆ ಉಂಟು. ಶಿಕ್ಷಣನೀತಿಯೂ

ಲಕ್ಷ್ಯವೂ ಸಮರ್ಪಕವಾಗಿಲ್ಲದಿದ್ದ ಪಕ್ಷದಲ್ಲಿ ಘೋರವಾದ ವಿಪತ್ತೇ ಸಂಭವಿಸಬಹುದು. ಜ್ಞಾನಲವದುರ್ವಿದಗ್ಧರೇ ದೇಶದಲ್ಲಿ ತುಂಬಿದರೆ ಅನರ್ಥಪರಂಪರೆಗೆ ಮೂಲವಾಗುವುದು. ಶಿಕ್ಷಣಲಾಭವೆನ್ನುವುದನ್ನು ಅಕ್ಷರಸ್ಥರ ಸಂಖ್ಯಾವೃದ್ಧಿಯಲ್ಲಿ ಮಾತ್ರವೇ ಕಾಣಲಾಗುವುದಿಲ್ಲ. ಶಿಕ್ಷಣದ ಸಿದ್ಧಿಸಾರ್ಥಕ್ಯಗಳನ್ನು ನೀತಿವೃದ್ಧಿಯಲ್ಲಿ ಕಾಣತಕ್ಕದ್ದು. ದೇಶೀಯರ ನಡತೆಯಲ್ಲಿ ಶಿಕ್ಷಣದ ಫಲವು ತೋರಿಕೊಳ್ಳತಕ್ಕದ್ದು. ಈ ದೃಷ್ಟಿಯಿಂದಲೇ ಶಿಕ್ಷಣ ಪ್ರಚಾರವೆಂಬ ವಿಚಾರದಲ್ಲಿ ತೊಡಗಬೇಕು. ಸದ್ಯಃಸ್ಥಿತಿಯಲ್ಲಿ ಶಿಕ್ಷಣ ವ್ಯಾಪ್ತಿಯು ಅಲ್ಪವೆನಿಸಿರುವುದಲ್ಲದೆ ಶಿಕ್ಷಣ ವ್ಯವಸ್ಥೆಯಲ್ಲಿಯೇ ಅನೇಕಾನೇಕ ತೊಡಕುಗಳಿವೆ.

**ವಿರಾಮ, ವಿನೋದ**

ಶಿಕ್ಷಣವಿಚಾರಕ್ಕೆ ಸಂಬಂಧಪಟ್ಟುದು ವಿನೋದ ವ್ಯವಸ್ಥೆಯೆಂಬುದು. ಅದನ್ನು ವಿರಾಮ ವಿನಿಯೋಗವೆಂದೂ ಕರೆಯಬಹುದು. ಪ್ರತಿಯೊಬ್ಬರಿಗೂ ವಿಶ್ರಾಂತಿ ಮಾತ್ರವಲ್ಲದೆ ವಿರಾಮವೂ ಇದ್ದೇ ಇರಬೇಕು. ಆದರೆ ಆ ವಿರಾಮಕಾಲವು ಸೋಮಾರಿತನಕ್ಕೆ ಆಸ್ಪದವನ್ನು ಕೊಡತಕ್ಕದ್ದಾಗಿರಬಾರದು. ಸಾಧಾರಣವಾಗಿ ಎಲ್ಲರೂ ತಮ್ಮ ವಿರಾಮಕಾಲವನ್ನು ಯಾವುದಾದರೊಂದು ವಿನೋದ ಸುಖದಲ್ಲಿ ಕಳೆಯಲು ಇಷ್ಟಪಡುತ್ತಾರೆ. ವಿನೋದಪಡುವುದರಿಂದ ಜೀವನದಲ್ಲಿ ಉಲ್ಲಾಸ ತೋರುವುದಲ್ಲದೆ ಶ್ರಮಪಟ್ಟವನಿಗೆ ಶ್ರಮಪರಿಹಾರವಾಗಿ ಅಸ್ತವ್ಯಸ್ತವಾದ ಮನಸ್ಸು ಚೈತನ್ಯಗೊಳ್ಳುವುದು. ಆದ್ದರಿಂದ ಗಂಡಸರಾಗಲಿ ಹೆಂಗಸರಾಗಲಿ, ಬಡವರಾಗಲಿ ಶ್ರೀಮಂತರಾಗಲಿ ವಿರಾಮಕಾಲವನ್ನು ಮನೋಲ್ಲಾಸಕಾರಕವಾದ ವಿನೋದಗಳಲ್ಲಿ ಕಳೆದು, ನೀಗಿದ ಚೈತನ್ಯವನ್ನು ಪುನಃ ಪಡೆಯಬೇಕು.

**ವಿನೋದ ಶುದ್ಧಿ**

ಒಳ್ಳೆಯ ವಿನೋದವೇ ಇಲ್ಲದಿದ್ದ ಪಕ್ಷದಲ್ಲಿ ಮಾನವ ಮಾತ್ರದವನು ಪಶುಪ್ರಾಯನಾಗಿಯೋ ಹೆಡ್ಡನಾಗಿಯೋ ಪರಿಣಮಿಸುತ್ತಾನೆ. ನೀಚವಾದ ವಿನೋದಗಳ ದೆಸೆಯಿಂದ ನೀತಿಯು ಕೆಟ್ಟು ಅಪರಾಧಗಳು ಹೆಚ್ಚುವುವು. ವಿನೋದಗಳು ಎಲ್ಲರಿಗೂ ಅವಶ್ಯ; ವಿನೋದಗಳು ಉತ್ತಮ ರೀತಿಯವಾಗಿರತಕ್ಕುದೂ ಅವಶ್ಯ. ವಿನೋದದ ಅವಶ್ಯಕತೆಯು

ತೋರುವುದರಿಂದಲೇ ಜೀವನದಲ್ಲಿ ಸ್ವಾರಸ್ಯವು ತೋರುವುದು, ಕಲೆಯೂ ಜನಿಸಿ ಅಭಿವೃದ್ಧಿಯಾಗುವುದು. ಆದರೆ ವಿನೋದವೆಂಬುದು ಮನಸ್ಸಿಗೆ ಉಲ್ಲಾಸವನ್ನೂ ಹರ್ಷವನ್ನೂ ಉಂಟುಮಾಡುವುದು ಮಾತ್ರವಲ್ಲದೆ ಮನಸ್ಸನ್ನು ಶುದ್ಧಿಗೊಳಿಸುವಂತೆ ಇರಬೇಕು, ಮನಸ್ಸನ್ನು ಶಿಕ್ಷಿಸುವಂತೆ ಇರಬೇಕು. ಉದಾಹರಣೆಗೆ ದ್ಯೂತವೆಂಬುದು ವಿನೋದವೇ; ಆದರೆ ಅದರಿಂದ ಮನಸ್ಸು ಉತ್ತಮಗೊಳ್ಳುವುದಿಲ್ಲ. ಜನಶಿಕ್ಷಣದಲ್ಲಿ ಆಸಕ್ತಿಯುಳ್ಳವರು ವಿನೋದಗಳ ವ್ಯವಸ್ಥೆಯನ್ನು ಕೈಕೊಂಡು ಉತ್ತಮವಾದ ವಿನೋದವನ್ನು ಒದಗಿಸುವುದಲ್ಲದೆ ವಿನೋದಗಳ ಮೂಲಕ ಶಿಕ್ಷಣವನ್ನೂ ಎರೆಯುವ ಸಂಧಾನದಲ್ಲಿ ಕಾತರತೆಯಿಂದ ತೊಡಗಬೇಕು.

ಪ್ರಾಚೀನ ರೀತಿ —ಗ್ರಾಮಾಂತರಗಳಲ್ಲಿ

ಪ್ರಾಚೀನ ಕಾಲದ ವಿನೋದಗಳೆಲ್ಲವೂ ಧರ್ಮ, ನೀತಿ ಮತ್ತು ದೈವಭಕ್ತಿಗಳನ್ನು ಎಡೆಬಿಡದೆ ಇದ್ದವು. ಗ್ರಾಮಗಳಲ್ಲಿ ಹಬ್ಬದ ವೇಳೆಗಳಲ್ಲಿಯೂ ಮದುವೆ ಮುಂಜಿ ಮುಂತಾದ ಉತ್ಸವ ಕಾಲಗಳಲ್ಲಿಯೂ ಗ್ರಾಮಸ್ಥರೆಲ್ಲರೂ ಒಂದು ಮನೆಯವರಂತೆ ಒಟ್ಟುಸೇರಿ ವಿನೋದಗಳನ್ನು ಅನುಭವಿಸುತ್ತಿದ್ದರು. ಪೌರಾಣಿಕ, ಹರಿಕಥೆಯ ದಾಸ, ಲಾವಣಿಗಾರ, ಸಂಗೀತಗಾರ, ಮುಂತಾದವರನ್ನು ಗ್ರಾಮಸ್ಥರೆಲ್ಲರೂ ಸಮುದಾಯವಾಗಿಯೋ ಅಥವಾ ಗ್ರಾಮಸ್ಥರಲ್ಲಿ ಹಿರಿಯನೆನಿಸಿದ್ದ ಗೃಹಸ್ಥನೋ ಕರೆಸಿದಾಗ ಎಲ್ಲ ಗ್ರಾಮಸ್ಥರಿಗೂ ಉಲ್ಲಾಸ ತೋರುವಂತೆ ನಡೆಯುತ್ತಿತ್ತು. ಇದಲ್ಲದೆ ಗ್ರಾಮದಿಂದ ಗ್ರಾಮಕ್ಕೆ ಹೊರಟು ಜನರನ್ನು ಸಂತೋಷಗೊಳಿಸಿ ಅದರಿಂದಲೇ ತಮ್ಮ ಬದುಕನ್ನು ಹೊರುತ್ತಿದ್ದ ದೊಂಬರು, ಬೊಂಬೆಯಾಟದವರು ಮತ್ತು ಬಸವನನ್ನೋ ಕರಡಿಗಳನ್ನೋ ಕಪಿಗಳನ್ನೋ ಹಾವುಗಳನ್ನೋ ಆಡಿಸುತ್ತಲಿದ್ದವರು ಆಗಾಗ್ಗೆ ಬಂದು ಹೋಗುತ್ತಲೇ ಇರುತ್ತಿದ್ದರು. ಯುಗಾದಿ, ನವರಾತ್ರಿ, ದೀಪಾವಳಿ, ಸಂಕ್ರಾಂತಿ ಮುಂತಾದ ಹಬ್ಬಗಳು ಬಂದಾಗ ಮನೆ ಮನೆಗೆ ಮಾತ್ರವಲ್ಲದೆ ಒಟ್ಟು ಗ್ರಾಮಕ್ಕೇ ಹಬ್ಬವಾಗಿದ್ದುದರಿಂದ ಗ್ರಾಮಸ್ಥರೆಲ್ಲರೂ ಹೊರಗಡೆ ನೆರೆದು ತಮ್ಮ ವಿನೋದಗಳನ್ನು ಅನುಭವಿಸುತ್ತಿದ್ದರು. ವರ್ಷಕ್ಕೊಮ್ಮೆ ಬರುವ ಉತ್ಸವಾದಿಗಳನ್ನು ಗ್ರಾಮಸ್ಥರು ಈ ರೀತಿಯಲ್ಲಿ ಕುತೂಹಲ

ದಿಂದ ನಿರೀಕ್ಷಿಸತಕ್ಕವರು. ರಥೋತ್ಸವಗಳೂ ಜಾತ್ರೆಗಳೂ ಎಲ್ಲೆಲ್ಲಿಯೂ ಉಂಟು; ಭಾರತವರ್ಷದಲ್ಲಿ ಎಲ್ಲಿದ್ದರೂ ಒಂದು ದಿನದ ನಡಿಗೆಯ ದೂರದಲ್ಲಿ ಜಾತ್ರೆಯ ಸ್ಥಲವಿದ್ದೇ ಇರುತ್ತದೆ. ಈ ಜಾತ್ರೆಗಳನ್ನು ಆಧುನಿಕ ಕಾಲದ ವಿನೋದ ಕೂಟಗಳಿಗೆ ಹೋಲಿಸಿ ನೋಡಬಹುದು. ಜಾತ್ರೆಗಳಿಗೆ ಹಣಗಾರರೂ ದಟ್ಟದರಿದ್ರರೂ ಎಲ್ಲರೂ ಹೋಗಬಹುದೆಂಬುದು ಮಾತ್ರವೇ ಅಲ್ಲದೆ ಇನ್ನೊಂದು ಭೇದವುಂಟು. ಜಾತ್ರೆಯೆಂದಾಗಲಿ ರಥೋತ್ಸವವೆಂದಾಗಲಿ ಜನರು ಗುಂಪು ಸೇರುವುದು ನಿಶ್ಚಯವಾದರೆ ಅಲ್ಲಿಗೆ ನಾನಾ ಬಗೆಯ ಆಟಗಾರರು ಬರುವರು. ಇಲ್ಲಿ ದೊಂಬರಾಟ, ಅಲ್ಲಿ ಹಾವಿನಾಟ, ಅಲ್ಲಿ ಕರಡಿಯ ಆಟ, ಇನ್ನೊಂದೆಡೆಯಲ್ಲಿ ಗೊಂಬೆಗಳ ನೃತ್ಯ ಮುಂತಾಗಿ ಪ್ರಧಾನೋತ್ಸವದ ಜೊತೆಗೆ ನಾನಾ ಬಗೆಯ ಆಟಗಳೂ ವಿನೋದಗಳೂ ನಡೆಯುತ್ತವೆ. ಇಷ್ಟು ಗುಂಪು ಸೇರಿದಾಗ್ಯೂ ಎಲ್ಲವೂ ಸಮಾಧಾನದಿಂದ ನೆರವೇರುತ್ತದೆ. ಪ್ರತಿಯೊಬ್ಬನೂ ವಿನೋದ ಪಡುವುದಲ್ಲದೆ ದೇವರ ಸೇವೆಮಾಡಿದೆನೆಂದು ಮನಸ್ಸನ್ನು ಶುದ್ಧಿಗೊಳಿಸಿಕೊಂಡು ಅಷ್ಟುಮಾತ್ರ ಉತ್ತಮನಾಗಿ ಹಿಂತಿರುಗುತ್ತಾನೆ. ಗ್ರಾಮಾಂತರಗಳಲ್ಲಿ ಯಾವ ಬಗೆಯ ವಿನೋದವಾದಾಗ್ಯೂ ದೈವಭಕ್ತಿಯ ಸಂಬಂಧವಿಲ್ಲದೆ ಇರುವುದಿಲ್ಲ. ಈ ಮಾತನ್ನು ಆಧುನಿಕ ವಿನೋದ ವ್ಯವಸ್ಥೆಗಳನ್ನು ಕುರಿತು ಹೇಳಲಾಗುವುದಿಲ್ಲ.

—ನಗರಗಳಲ್ಲಿ

ಜಾತ್ರೆಗಳ ಸಲುವಾಗಿಯೇ ಪುರಾತನ ಕಾಲದಲ್ಲಿ ಅನೇಕ ಪಟ್ಟಣಗಳು ಹುಟ್ಟಿದವು. ಪ್ರಕೃತಿಯು ಸೌಂದರ್ಯವನ್ನು ತೋರಿದ ಎಡೆಗಳೆಲ್ಲವೂ ಯಾವುದಾದರೊಂದು ಬಗೆಯಲ್ಲಿ ಯಾತ್ರೆಗೆ ಸ್ಥಳವಾಗಿ ಪರಿಣಮಿಸಿತು. ನದಿಗಳ ಗತಿಯನ್ನು ಅನುಸರಿಸುತ್ತ ಅಥವಾ ಪರ್ವತ ಪ್ರದೇಶಗಳನ್ನು ಗಮನಿಸುತ್ತ ನಕ್ಷೆಯನ್ನು ನೋಡಿದಲ್ಲಿ ಯಾತ್ರೆಗಳ ಈ ತತ್ವವು ಗೋಚರವಾಗುವುದು. ಪೂರ್ವಕಾಲದ ಪಟ್ಟಣವೆಂದರೆ ಕೋಟೆಯನ್ನು ಕಟ್ಟಿಕೊಂಡು ರಾಜನಾದಾತನು ಇದ್ದ ರಾಜಧಾನಿಯಾಗಿಯೋ, ವರ್ತಕ ಜನರು ತುಂಬಿದ್ದ ವ್ಯಾಪಾರಸ್ಥಳವಾಗಿಯೋ, ಯಾತ್ರಾಸ್ಥಳವಾಗಿಯೋ ಇರುತ್ತಿದ್ದಿತು. ಅಂತಹ ಪಟ್ಟಣಗಳಲ್ಲಿ ನಡೆಯುತ್ತಿದ್ದ

ವಿನೋದಗಳೂ ಗ್ರಾಮಾಂತರ ಪ್ರದೇಶಗಳ ವಿನೋದಗಳಂತೆಯೇ ಇದ್ದವು. ಪೌರುಷದ್ಯೋತಕವಾದ ಆಟಗಳೂ ಇದ್ದವು; ಆದರೆ ಅವುಗಳಲ್ಲಿಯೂ ದೈವಭಕ್ತಿಯು ಸಹಜಗುಣವಾಗಿದ್ದುದಲ್ಲದೆ ಸಮಾಜಕ್ಕೆ ಪ್ರಯೋಜನಕಾರಿಯಾಗುವಂತೆ ವ್ಯವಸ್ಥೆಯಿತ್ತು. ಪಟ್ಟಣಿಗರಾದ ಶ್ರೀಮಂತರು ಮದ್ದಾನೆಗಳ, ಟಗರುಗಳ, ಹುಂಜಗಳ ಕಾಳಗಗಳನ್ನಲ್ಲದೆ ಮಲ್ಲಯುದ್ಧಗಳನ್ನೂ ವಿಶೇಷವಾಗಿ ಪ್ರೋತ್ಸಾಹಿಸುತ್ತಿದ್ದರು. ಮಲ್ಲರು ಅಥವಾ ಜಟ್ಟಿಗಳು ನಡೆಸುತ್ತಿದ್ದ ಯುದ್ಧಗಳಲ್ಲಿ ಹುಲಿಯೊಡನೆ ನಿರಾಯುಧರಾಗಿ ಕಾಳಗಮಾಡುವುದು ಗಟ್ಟಿಗನ ಕಾಳಗವೆನಿಸುತ್ತಿತ್ತು; ಆ ಕಾಳಗಕ್ಕೇ ಉಚ್ಚಸ್ಥಾನವು ದೊರೆತುದಕ್ಕೆ ಕಾರಣ ದೇಶದಲ್ಲಿ ದನಕರುಗಳ ರಕ್ಷಣೆಯ ಅವಶ್ಯಕತೆ. ಒಬ್ಬಂಟಿಗನಾಗಿ ಆಯುಧವಿಲ್ಲದೆ ಹುಲಿಯನ್ನು ಕೊಲ್ಲಬಲ್ಲವನಾಗಿದ್ದ ವೀರನನ್ನು ಗ್ರಾಮಸ್ಥರು ಇಂದಿಗೂ ಸ್ಮರಿಸುತ್ತಾರೆ.* ಗರುಡಿ ಮನೆಯು ದೇವಾಲಯದಂತೆಯೇ ಇತ್ತು. ಬೇಟೆಯಾಡುವ ಹಬ್ಬವು ಹೇಮಂತಋತು ಶಿಶಿರಋತುಗಳಲ್ಲಿ ನಡೆಯುತ್ತಿದ್ದಿತು; ಅದಕ್ಕೆ ಕಾರಣ ಪೈರಾಗುತ್ತಿರುವ ಕಾಲದಲ್ಲಿ ಹಾವಳಿಮಾಡಬಹುದಾಗಿದ್ದ ದುಷ್ಟಮೃಗಗಳ ನಿವಾರಣೆಯ ಅಗತ್ಯ.

ಕಲಾಶಕ್ತಿ

ಆಟಪಾಟಗಳಲ್ಲಿ ಎಡೆಬಿಡದೆ ತೋರಿಕೊಂಡ ದೈವಭಕ್ತಿಯೇ ಭಾರತೀಯ ಲಲಿತ ಕಲೆಗಳಿಗೂ ಸಹಜವಾದ ಮತ್ತು ಪ್ರಧಾನವಾದ ಲಕ್ಷಣವಾಗಿ ಪರಿಣಮಿಸಿತು. ವಾಸ್ತುಶಿಲ್ಪ ಚಿತ್ರಕಲೆಗಳಲ್ಲಿ ಉತ್ಕೃಷ್ಟವಾದ ಕೃತಿಗಳು ವಿಹಾರ, ದೇವಾಲಯ, ಪ್ರತಿಮೆ ಮುಂತಾದವುಗಳಲ್ಲಿಯೇ ಕಾಣತಕ್ಕವು; ಏಕಂದರೆ ಕಲಾಭ್ಯಾಸಿಗಳಿಗೆ ಅಂತಹ ವಿಷಯಗಳಲ್ಲಿಯೇ ಶ್ರದ್ಧಾಭಕ್ತಿಗಳು ಹೆಚ್ಚಾಗಿದ್ದವು. ಹಾಗೆಯೇ ಗಾನಕಲೆಯಲ್ಲಿಯೂ ಭಕ್ತಿಪೂರಿತವಾದ ಗೀತೆಗಳೇ ಹೆಚ್ಚು. ಅದೇ ಗುಣವನ್ನು ಸಾಹಿತ್ಯ, ಅಭಿನಯ, ನಾಟ್ಯ, ನೃತ್ಯಗಳಲ್ಲಿ ಕಾಣಬಹುದು. ಹೀಗಿದ್ದುದರಿಂದ ವಿನೋದಗಳ ಅನುಭವದಿಂದ ಮಾನವನ ನೀತಿಯು ಮೇಲಾಗಲು ಆಸ್ಪದ

* ಮೊಹರಂ ಹಬ್ಬದಲ್ಲಿ ಜಟ್ಟಿಗಳು ಹುಲಿವೇಷಗಳನ್ನು ಹಾಕಿಕೊಂಡು ಆಡುವ ಸಂಗತಿಗೆ ಮೂಲವನ್ನು ಈ ಪರಿಸ್ಥಿತಿಯಲ್ಲಿ ಕಾಣಬಹುದು. ಹುಲಿಯಂತೆ ಆಡುವುದೇ ಮಲ್ಲವಿದ್ಯಾ ಪರಿಣತರ ಪ್ರೌಢ ಪ್ರದರ್ಶನ.

ದ್ದಿತೇ ವಿನಾ ಕೀಳಾಗಲು ಆಸ್ಪದವಿರಲಿಲ್ಲ. ಜಾತ್ರೆಗೆಂದು ಹೊರಟು ಅಜಂತಾ, ಎಲ್ಲೋರ, ಕಾಂಚೀ ರಥೋತ್ಸವ ಮುಂತಾದವುಗಳನ್ನು ಕಂಡು ಮನೋದೌರ್ಬಲ್ಯವನ್ನು ನೀಗುತ್ತಿದ್ದ ಭಾರತೀಯ ಗೃಹಸ್ಥನನ್ನು ಇಂಗ್ಲಂಡಿನಲ್ಲಿ ಆಯಾಸ ಪರಿಹಾರಾರ್ಥವಾಗಿ ಬ್ರೈಟನ್ನಿನಲ್ಲಿ ಕಾಲಕಳೆಯುವ ಇಂಗ್ಲೀಷ ಗೃಹಸ್ಥನೊಂದಿಗೆ ಹೋಲಿಸತಕ್ಕದ್ದು.

ಜನಜೀವನದ ವಿನೋದ ಭಾಗದಲ್ಲಾಗಲಿ ಕಲಾ ಪರಿಣತಿಯಲ್ಲಾಗಲಿ ಭಾರತೀಯ ಸಂಪ್ರದಾಯವು ದೊಡ್ಡದು, ಕಿರಿದಲ್ಲ.

**ನೂತನ ವಿನೋದಗಳು** ಇತ್ತೀಚೆಗೆ ಭಾರತೀಯ ಕಲೆಯು ಅಲಕ್ಷ್ಯಕ್ಕೆ ಈಡಾಗಿ ನೂತನವಾದ ವಿನೋದಗಳು ದೇಶದಲ್ಲಿ ಕಾಣಿಸಿಕೊಂಡಿವೆ. ನೂತನ ಪದ್ಧತಿಗಳು ಪಟ್ಟಣಗಳಲ್ಲಿ ವಿಶೇಷವಾಗಿ ಕಾಣುತ್ತವೆ; ಗ್ರಾಮಗಳಲ್ಲಿ ಇನ್ನೂ ಪೂರ್ವಕಾಲದ ವಿನೋದಗಳು ಆಗಾಗ್ಗೆ ತೋರುತ್ತವೆ. ಸರ್ಕಸ್, ನಾಟಕ ಮಂದಿರ, ಸಿನೆಮಾ ಮಂದಿರ, ಸಂಗೀತ ಕಚೇರಿ, ನರ್ತನ ಶಾಲೆ ಮುಂತಾದವುಗಳು ಪಟ್ಟಣಗಳಲ್ಲಿ ತೋರಿ ಕೊಂಡ ತರುವಾಯ ಪೂರ್ವಕಾಲದ ದೊಂಬರು, ಆಟಗಾರರು, ಗೊಂಬೆ ಯಾಟದವರು ಮೊದಲಾದವರು ತಮ್ಮ ಬದುಕನ್ನೂ ಕೌಶಲವನ್ನೂ ಕಳೆದುಕೊಳ್ಳಬೇಕಾಗಿ ಬಂದಿತು. ನೂತನವಾಗಿ ತೋರಿಕೊಂಡು ಪ್ರಬಲ ಗೊಂಡಿರುವ ವಿನೋದಗಳಲ್ಲಿ ದೈವಭಕ್ತಿಯು ಸದಾ ನೆಲೆಸಿರುವುದಿಲ್ಲ; ನೀತಿಪ್ರಧಾನವಾಗಿಯೇ ಇರುತ್ತವೆಯೆಂದು ಹೇಳಲಾಗುವುದಿಲ್ಲ. ಇದಲ್ಲದೆ ಪ್ರವೇಶಕಾಲದಲ್ಲಿಯೇ ಹಣಕೊಟ್ಟು, ವರ್ಗಗಳಂತೆ ಬೇರೆ ಬೇರೆ ಯಾಗಿ ಕುಳಿತುಕೊಳ್ಳುವುದರಲ್ಲಿ ಭಾಗ್ಯವಂತರಿಗೂ ಬಡವರಿಗೂ ಹಿಂದೆ ಇಲ್ಲದಿದ್ದ ಎಡೆಯಲ್ಲಿ ಭೇದವನ್ನು ತಂದಿಟ್ಟು ಪ್ರದರ್ಶಿಸಿದಂತಾಗುವುದು. ಪೂರ್ವಸಂಪ್ರದಾಯದ ರೀತಿಯಲ್ಲಿ ವಿನೋದವನ್ನೆಲ್ಲರೂ ಅನುಭವಿಸ ಬಹುದಾಗಿತ್ತು; ಬಡವನಿಗೂ ಹಣವಂತನಿಗೂ ಸುಖದಲ್ಲಿ ಭೇದವಿರಲಿಲ್ಲ. ಅಲ್ಲದೆ ಹಣಕೊಡುವುದು ವಿನೋದವು ಮುಗಿದ ಬಳಿಕ, ಮೊದಲಲ್ಲಿಯೇ ಅಲ್ಲ. ದುಡ್ಡಿದ್ದವರು ಕೊಡುತ್ತಿದ್ದರು, ಇಲ್ಲದವರು ಕೊಡಲೇಬೇಕೆಂಬ ಬಲವಂತವಿರಲಿಲ್ಲ. ಕೊಡುವುದು ಕರ್ತವ್ಯವಾಗಿ ತೋರಿ ಕರ್ತವ್ಯ ಪ್ರಜ್ಞೆಯು ಹೆಚ್ಚುವಂತಿತ್ತು.

ನಗರನಿರ್ವಾಹದ ಅಂಶ

ಆಧುನಿಕ ಕಾಲದಲ್ಲಿ ರಾಷ್ಟ್ರಮುಖವಾದ ಸರ್ಕಾರವು ವಿನೋದಗಳ ವ್ಯವಸ್ಥೆಯಲ್ಲಿ ಪ್ರವೇಶಿಸಲು ಕಾರಣ ಹುಟ್ಟಿಕೊಂಡಿತು. ವಿನೋದಗಳಿಲ್ಲದಿದ್ದ ಸ್ಥಿತಿಯಲ್ಲಿ ಜನರಿಗೆ ವಿನೋದಗಳನ್ನು ಒದಗಿಸತಕ್ಕುದು ಸರ್ಕಾರದ ಕರ್ತವ್ಯವಾಗುತ್ತದೆ. ನಗರ ಸಭೆಯವರು ತಮ್ಮ ನಗರದ ನಿವಾಸಿಗಳಿಗೆ ಯೋಗ್ಯವಾದ ವಿನೋದಗಳನ್ನು ಕಲ್ಪಿಸಬೇಕು; ಉದ್ಯಾನವೊಂದನ್ನು ರಕ್ಷಿಸಿ ವಾರಕ್ಕೊಂದು ದಿನವಾದರೂ ವಾಲಗದವರನ್ನು ಗೊತ್ತುಮಾಡುವುದು ಸಾಧಾರಣ. ಸರ್ಕಾರದವರು ವಿನೋದಗಳ ಪರೀಕ್ಷೆಗಾಗಿ ಅಧಿಕಾರಿಯೊಬ್ಬನನ್ನು ಗೊತ್ತುಮಾಡಬೇಕಾಗುವುದು. ನಾಟಕಗಳಲ್ಲಿ ಅಥವಾ ನರ್ತನಶಾಲೆಗಳಲ್ಲಿ ನೀತಿಹಾನಿಯು ತೋರದಂತೆ ಸರ್ಕಾರದವರು ಎಚ್ಚರದಿಂದ ಇರಬೇಕು. ಪರೀಕ್ಷಕಾಧಿಕಾರಿಯಿದ್ದ ಮಾತ್ರಕ್ಕೇ ಎಲ್ಲವೂ ಸಮರ್ಪಕವಾಗಿ ನಡೆಯುವುದೆಂದು ಹೇಳಲಾಗುವುದಿಲ್ಲ; ಅಂತಹ ಅಧಿಕಾರಿಯಿಲ್ಲದಿದ್ದರೆ ಕೇಡು ಸಂಭವಿಸಲು ಯಾವ ಅಡ್ಡಿಯೂ ಇಲ್ಲದೆ ಹೋಗುವುದೆಂದು ವಾದಿಸಬಹುದು.

ಪೌರಕರ್ತವ್ಯ

ಸಾಮಾನ್ಯ ಪೌರನಿಗೆ ಈ ವಿಷಯದಲ್ಲಿ ಕರ್ತವ್ಯವೇನು? ಪ್ರತಿಯೊಬ್ಬರಿಗೂ ವಿರಾಮವೂ ವಿನೋದವೂ ಬೇಕೇಬೇಕು; ಆದ್ದರಿಂದ ಎಲ್ಲರಿಗೂ ವಿನೋದವನ್ನು ನಿರೀಕ್ಷಿಸುವ ಅಧಿಕಾರವುಂಟು. ಆದರೆ ಒಬ್ಬರ ವಿನೋದವು ಮತ್ತೊಬ್ಬರಿಗೆ ತೊಂದರೆಯಾಗಿ ಪರಿಣಮಿಸಬಾರದು. ಸದ್ಗೃಹಸ್ಥನಾದಾತನ ವಿನೋದದಿಂದ ಎಲ್ಲರಿಗೂ ಸತ್ಪರಿಣಾಮವಾಗಬೇಕು, ರಾಷ್ಟ್ರಕ್ಕೆ ಒಳ್ಳೆಯದಾಗಿರಬೇಕು. ಭಾಗ್ಯವಂತನಾದ ಪೌರನು ತನ್ನ ವಿನೋದಗಳಲ್ಲಿ ಬಡವರನ್ನೂ ಸೇರಿಸಿಕೊಂಡು ನೆರೆಯವರಿಗೆ ಉಪಕಾರವನ್ನು ಮಾಡಬೇಕು. ಭಾಗ್ಯವಂತರಾಗಲಿ ಭಾಗ್ಯಹೀನರಾಗಲಿ ಪೌರರೆಲ್ಲರೂ ತಮ್ಮ ವಿನೋದಗಳನ್ನು ಅನುಭವಿಸುವುದರಲ್ಲಿ ದೇಶದ ಮೇಲ್ಮೆಯನ್ನು ಮರೆಯಬಾರದು. ಭಜನೆಯ ಮಂದಿರಗಳನ್ನೋ ಆಟಪಾಟಗಳಲ್ಲಿ ಸ್ಪರ್ಧೆಗಳನ್ನೋ ಕಲಾಭ್ಯಾಸಿಗಳ ಸಮಾಜಗಳನ್ನೋ ಸೇರಿ ಶಕ್ತ್ಯನುಸಾರ ಪ್ರೋತ್ಸಾಹಕೊಡತಕ್ಕ ಪೌರನು ತಾನೂ ಸುಖಪಟ್ಟು

ದೇಶಕ್ಕೂ ಒಳ್ಳೆಯದನ್ನು ಎಸಗುತ್ತಾನೆ. ಇನ್ನೂ ಉತ್ತಮನಾದ ಪೌರನಾದರೆ ಬಡಬಗ್ಗರಿಗೆ, ಅನಾಥರಿಗೆ ಅಥವಾ ಅಜ್ಞಾನದಲ್ಲಿಯೇ ಇದ್ದು ನರಳುವವರಿಗೆ ವಿನೋದದ ನೆಪದಿಂದ ಜ್ಞಾನದಾನವನ್ನು ಮಾಡಿ ಪುಣ್ಯಶಾಲಿಯಾಗುತ್ತಾನೆ.

ಕಲೆಯು ನಿಷ್ಪ್ರಯೋಜಕವೆಂದು ಯಾವ ದೇಶದವರೂ ಹೇಳಲಾರರು; ವಿನೋದಗೊಳ್ಳುವುದು ಅಸಾಧುವೆಂದು ಯಾವ ಪೌರನೂ ಹೇಳಲಾರನು. ಪೌರನು ಯಂತ್ರದಂತೆ ಇರಲು ಸಾಧ್ಯವಲ್ಲ. ಪೌರನ ಲಕ್ಷ್ಯ ತನ್ನ ಚೈತನ್ಯ ಸರ್ವಸ್ವದ ವಿಕಾಸ; ವಿನೋದಗಳನ್ನು ಅಸಡ್ಡೆಮಾಡಿದಲ್ಲಿ ಆಯಾಸ ಕಳೆಯುವ ಮಾರ್ಗವಿಲ್ಲದಂತೆ ಆಗುವುದಲ್ಲದೆ ಮಾನವತ್ವವೇ ನಷ್ಟವಾಗುವುದು. ಉದಾಹರಣೆಗೆ ಸಂಗೀತವನ್ನು ಕೇಳಿ ಸುಖಿಸುವ ಯೋಗ್ಯತೆಯಿಲ್ಲದಿರುವವರಿಗೆ ಜೀವನದ ಸಂತೋಷವೇ ಅಲಭ್ಯ. ಅಂತಹವರಲ್ಲಿ ಇತರರು ಮರುಕಗೊಳ್ಳಬೇಕಾಗುವುದು. ಸಂಗೀತವೇ ವ್ಯರ್ಥವೆಂದು ಒರಟುತನ ಮಾಡತಕ್ಕವನನ್ನು ಸಾಧಾರಣವಾಗಿ ಮೃಗಪ್ರಾಯನೆಂದೇ ಕರೆಯುವರು. ಪಾಶ್ಚಾತ್ಯದೇಶಗಳಲ್ಲಿ ಜನರು ಸೇರಿ ಸಮುದಾಯವಾಗಿ ಹಾಡುವ ಕಾಲದಲ್ಲಿ ಬಾಯಿ ತೆರೆಯದೆ ಇರುವವನನ್ನು ಎಲ್ಲರೂ ಅಪಹಾಸ್ಯ ಮಾಡಿ ಅಸಭ್ಯನೆಂದು ಭಾವಿಸುವರು. ನಮ್ಮ ಜೀವನದಲ್ಲಿಯೇ ಇಂತಹ ದೃಷ್ಟಾಂತಗಳನ್ನು ಬೇಕಾದಷ್ಟು ಕಾಣಬಹುದು. ಸಂಗೀತವಾಗುವ ವೇಳೆಯಲ್ಲಿ ಗೃಹಕೃತ್ಯ ವಿಚಾರವನ್ನು ಚರ್ಚಿಸುವ ಸಭಿಕರನ್ನು ಇತರರು, ಪರಿಚಿತರಾಗಲಿ ಅಪರಿಚಿತರಾಗಲಿ, ಶಪಿಸುತ್ತಲೇ ಇರುವುದಿಲ್ಲವೆ?

ಭಾರತೀಯ ಪೌರನು ಯೋಗ್ಯವಾದ ರೀತಿಯಲ್ಲಿ ವಿನೋದವನ್ನು ಅನುಭವಿಸುವುದು ಮಾತ್ರವೇ ಅಲ್ಲದೆ ಅಸಡ್ಡೆಗೀಡಾದ ಭಾರತೀಯ ಕಲೆಯನ್ನು ಪ್ರೋತ್ಸಾಹಿಸಬೇಕು. ಮತ್ತು ಹಳೆಯದನ್ನೂ ಹೊಸದನ್ನೂ ಚಿಂತಿಸಿ ಎರಡಕ್ಕೂ ಹೊಂದಿಕೆಯು ನೆಲೆಗೊಳ್ಳುವಂತೆ ವರ್ತಿಸಬೇಕು.

# 4. ದಾರಿದ್ರ್ಯ ನಿರುದ್ಯೋಗಗಳು

**ಸಮಸ್ಯೆಯ ಮಹತ್ವ; ದಾರಿದ್ರ್ಯ ವಿವರ; ನಿರುದ್ಯೋಗ; ಉದ್ಯೋಗ ವಿಭೇದ; ಭಾರತೀಯ ಔದ್ಯೋಗಿಕ ಸ್ಥಿತಿ; ಭೂಭಾರ, ವೃತ್ತಿನಷ್ಟ, ವಿದೇಶೀ ಬಂಡವಾಳ, ಸುಶಿಕ್ಷಿತರ ಪೈಪೋಟಿ, ವ್ಯಾಪಾರದ ರೂಪಾಂತರ, ಐಶ್ವರ್ಯನಷ್ಟ, 'ಹೊನ್ನುಹೊಳೆ,' ಕರಭಾರ, ಋಣಭಾರ; ಕೈಗಾರಿಕೆಯ ರಕ್ಷಣೆ; ಕೃಷಿಕರ್ಮದ ತೊಡಕುಗಳು, ಬಡತನದ ಪರಿಣಾಮ; ಸಾಮಾನ್ಯ ಪೌರನ ಕರ್ತವ್ಯ.**

**ಸಮಸ್ಯೆಯ ಮಹತ್ವ**

ಭಾರತೀಯ ದಾರಿದ್ರ್ಯವೇ ಭಾರತೀಯ ಪ್ರಪಂಚದ ಕೇಂದ್ರ; ಸ್ಥೂಲವಾದ ಮತ್ತು ವಾಸ್ತವವಾದ ಸ್ಥಿತಿ. ಸಮಸ್ಯೆಗಳಲ್ಲಿ ಅದೇ ಬಹು ವಿಪತ್ಕಾರಕವಾದುದು, ವಿಸ್ತಾರವಾದುದು, ಶತಮುಖವಾಗಿ ಕಾಣತಕ್ಕುದು. ಇತ್ತೀಚಿಗೆ ಭಾರತವರ್ಷದಲ್ಲಿ ದಾರಿದ್ರ್ಯವು ದಿನೇದಿನೇ ಪ್ರಬಲವಾಗುತ್ತಲಿದೆ. ಸಮಸ್ತ ಭಾರತೀಯರನ್ನೂ ದಾರಿದ್ರ್ಯವು ಆಕ್ರಮಿಸಿಕೊಂಡು ಸರ್ವಸ್ಥಿತವಾಗಿ, ಯಾವ ಉದ್ಧಾರ ಪ್ರಯತ್ನ ಮಾಡಬೇಕಾದರೂ ಎದುರಿಗೆ ಘೋರರೂಪಿಯಾಗಿ ನಿಲ್ಲುತ್ತದೆ. ಜನತೆಯ ಆರೋಗ್ಯದಲ್ಲಿಯಾಗಲಿ ಶಿಕ್ಷಣದಲ್ಲಿಯಾಗಲಿ ಪ್ರಯತ್ನಕ್ಕೆ ತಕ್ಕಂತೆ ಸಾಫಲ್ಯವು ಕೈಗೂಡದಿರಲು ದಾರಿದ್ರ್ಯವೇ ಮೂಲಕಾರಣ. ಭಾರತೀಯ ಜನರಿಗೆ ದಾರಿದ್ರ್ಯದಿಂದ ಧನುರ್ವಾಯು ಪ್ರಾಪ್ತವಾದಂತಿದೆ.

**ದಾರಿದ್ರ್ಯ ವಿವರ**

ಈ ದಾರಿದ್ರ್ಯದ ವಿವರವನ್ನು ಸುಲಭವಾಗಿ ಸೂಚಿಸಬಹುದು. ನಿವಾಸಿಗಳ ವಾರ್ಷಿಕಾದಾಯದ ಸರಾಸರಿಯು ಜಪಾನಿನಲ್ಲಿ ರೂ. 90, ಇಟಲಿಯಲ್ಲಿ ರೂ. 345, ಜರ್ಮನಿಯಲ್ಲಿ ರೂ. 450, ಫ್ರಾನ್ಸಿನಲ್ಲಿ ರೂ. 570, ಕೆನಡಾದಲ್ಲಿ ರೂ. 600, ಸಂಯುಕ್ತ ರಾಜ್ಯದಲ್ಲಿ ರೂ. 750, ಆಸ್ಟ್ರೇಲಿಯದಲ್ಲಿ ರೂ. 810, ಸಂಯುಕ್ತ ಸಂಸ್ಥಾನಗಳಲ್ಲಿ ರೂ. 1,080 ಆಗಿರುವಾಗ ಭಾರತವರ್ಷದಲ್ಲಿ ರೂ. 44 ಮಾತ್ರ. ಸರಾಸರಿಯು ರೂ. 44 ಆದರೆ ಜನರಾಶಿಯಲ್ಲಿ ಅರ್ಧಕ್ಕಿಂತ ಹೆಚ್ಚು ಪಾಲು ಅದಕ್ಕಿಂತಲೂ ಕಡಿಮೆಯ ವರಮಾನದಿಂದಲೇ ಬದುಕನ್ನು ಕಳೆಯುತ್ತಿರಬೇಕು; ಏಕಂದರೆ ಧನಿಕರಾದವರು

ಅಲ್ಪಸಂಖ್ಯಾಕರೇ. ಭಾರತವರ್ಷದಲ್ಲಿ 10 ಕೋಟಿ ಜನರಿಗೆ, ಅಥವಾ ಒಂದು ಸಾವಿರ ಲಕ್ಷಗಳಷ್ಟು ಜನರಿಗೆ, ಸಾಕಾದಷ್ಟು ಆಹಾರವಿಲ್ಲ; ಅನೇಕರು ದಿನಕ್ಕೆ ಒಂದು ಹೊತ್ತಿನ ಊಟವನ್ನು ಮಾಡಿ ಜೀವನವನ್ನು ಸಾಗಿಸುತ್ತ ಹೊಟ್ಟೆತುಂಬ ಊಟಮಾಡುವುದನ್ನೇ ಅರಿಯದೆ ಇರುವರು. ಇನ್ನೂ ಅನೇಕರು ಆಹಾರವಲ್ಲದ ಪದಾರ್ಥವನ್ನು ತಿನ್ನಲು ತೊಡಗಿ ಅತಿ ಸುಲಭ ವಾಗಿ ರೋಗರುಜನಗಳಿಗೆ ತುತ್ತಾಗುವರು. ನಿರಾಹಾರ, ಅಪಾಹಾರ ಗಳಿಂದಲೇ ಭಾರತವರ್ಷದಲ್ಲಿ ರೋಗವ್ಯಾಪ್ತಿಗೆ ಅತ್ಯನುಕೂಲವಾಗಿರುವುದು. ಈಚಿಗೆ ಪ್ರಕಟವಾಗಿರುವ ಭಾರತೀಯ ಅರ್ಥಶಾಸ್ತ್ರ ಗ್ರಂಥವೊಂದರಲ್ಲಿ "ಗತಿಗೆಟ್ಟವರ ಸಂಖ್ಯೆಯು ಇಂಗ್ಲಂಡಿನಲ್ಲ ಶೇಕಡ 10 ಇರಬಹುದು. ಭಾರತವರ್ಷದಲ್ಲಿ ನಿರ್ಗತಿಕರ ಸಂಖ್ಯೆ ಇನ್ನೂ ಹೆಚ್ಚಿನ ಪ್ರಮಾಣವುಳ್ಳದು. ಭಾರತೀಯ ಜನಸಮೂಹದಲ್ಲಿ ಶೇಕಡ 90ಪಾಲು ಸದಾ ಹಸಿವಿನ ಸಂಕಟ ವನ್ನು ಎದುರಾಗಿ ಕಾಣುತ್ತಲೇ ಇರುವರೆಂದು ಹೇಳಿದಲ್ಲಿ ಏನೂ ಅತ್ಯುಕ್ತಿ ಯಾಗುವುದಿಲ್ಲ" ಎಂದು ಸೂಚನೆಯುಂಟು. ಅದನ್ನೇ ಬೇರೊಂದು ಬಗೆ ಯಾಗಿ ಹೇಳಬಹುದು. ಜೀವನದ ಕಷ್ಟವನ್ನು ಹೋಲಿಸಿ ನೋಡಿದಲ್ಲಿ ನಲವತ್ತು ವರ್ಷಗಳ ಹಿಂದಿನ ಕಾಲದಲ್ಲಿ ಪಡಬೇಕಾಗಿದ್ದ ಕಷ್ಟದ ನಾಲ್ಕರಷ್ಟು ಕಷ್ಟವನ್ನು ಈಗ ಪಡಬೇಕಾಗಿದೆ; ಕಷ್ಟವು ಹೆಚ್ಚಿದಂತೆ ವರಮಾನವೂ ಹೆಚ್ಚಿದ್ದರೆ ಬೇರೆ ವಿಧವಾಗಿರುತ್ತಿತ್ತು. ವರಮಾನವು ಸ್ವಲ್ಪಮಾತ್ರವೂ ಹೆಚ್ಚಿಲ್ಲ. ಜನರು ದರಿದ್ರರು, ಆದ್ದರಿಂದ ರಾಷ್ಟ್ರವೂ ದರಿದ್ರ ರಾಷ್ಟ್ರ.

**ನಿರುದ್ಯೋಗ**

ಈ ನಿರಾಹಾರಸ್ಥಿತಿಗೂ ಅಲ್ಪ ವರಮಾನಕ್ಕೂ ಕಾರಣವಾದರೂ ಏನು? ಕ್ಷಾಮಡಾಮರಗಳ ಹಾವಳಿಯು ದೇಶದಲ್ಲಿ ವಿಶೇಷವಾಗಿದ್ದು ಜನರಾಶಿಯಲ್ಲಿ ಬಹು ಪಾಲು ನಷ್ಟವಾಗಿದ್ದಾಗ್ಯೂ ಒಟ್ಟಿನಲ್ಲಿ ಜನಸಂಖ್ಯೆಯು ಅಭಿವೃದ್ಧಿಯನ್ನೇ ಪಡೆದಿದೆ. ಆದ್ದರಿಂದ ಹಿಂದೆ ಇದ್ದುದಕ್ಕಿಂತ ಈಗ ಜನತೆಯ ಭಾರವು ಹೆಚ್ಚಾಗಿಯೇ ಇರುವುದು. ಹಿಂದೆ ಒಬ್ಬರು ಭುಂಜಿಸುತ್ತಿದ್ದ ಆಹಾರವನ್ನು ಈಗ ಇಬ್ಬರು ಮೂವರು ಭುಂಜಿಸಿ ತೃಪ್ತರಾಗಬೇಕಾಗಿದೆ. ಜನಸಂಖ್ಯಾವೃದ್ಧಿಯೆಷ್ಟು ಎಂದು ಇತರ ದೇಶವಿದೇಶಗಳೊಡನೆ

ಹೋಲಿಸಿದಲ್ಲಿ ಭಾರತೀಯ ವೃದ್ಧಿಯು ಭಾರತದೇಶಕ್ಕೆ ಯಾವ ವಿಧದಲ್ಲಿಯೂ ಅತಿವೃದ್ಧಿಯೆಂದೆನಿಸುವುದಿಲ್ಲ. ಆದರೆ ಸಂಖ್ಯಾವೃದ್ಧಿಯು ಯಾವ ಪ್ರಮಾಣದಲ್ಲಿ ನಡೆದಿರುತ್ತದೆಯೋ ಅದೇ ಪ್ರಮಾಣದಲ್ಲಿ ಆಹಾರಸಾಮಗ್ರಿಯು ಸಮೃದ್ಧಿಯನ್ನು ಪಡೆದಿದೆಯೇ? ಬಡತನ, ನಿತ್ಯೋಪವಾಸಗಳ ಸ್ಥಿತಿಗೆ ಕಾರಣವು ಸಂಖ್ಯಾವೃದ್ಧಿಯಲ್ಲ; ದೇಶದಿಂದ ಒದಗುವ ಸಾಮಗ್ರಿಯ ವ್ಯವಸ್ಥೆಯಲ್ಲಿ ನೆಲೆಸಿರುವ ದೋಷವೇ ಮೂಲಕಾರಣ. ಸರ್ವತ್ರ ವಿಸ್ತಾರವಾಗಿ ಕಾಣುವ ನಿರುದ್ಯೋಗ ಸ್ಥಿತಿಯಿಂದಲೇ ಆ ಕಾರಣವನ್ನು ಭೇದಿಸಬಹುದು. ಕೋಟ್ಯಂತರ ಜನರು ತಮ್ಮ ಬದುಕಿಗೆ ಬೇಕಾದಷ್ಟು ಆಹಾರವನ್ನು ಕೊಂಡುಕೊಳ್ಳುವುದಕ್ಕೆ ಅವಶ್ಯವಾದ ಹಣವನ್ನು ಕಷ್ಟಪಟ್ಟು ಸಂಪಾದಿಸಲು ಸಿದ್ಧರಾಗಿರುವರು. ಆದರೆ ಅವರಿಗೆ ಕೆಲಸ ದೊರಕುವುದಿಲ್ಲ. ದೇಶದ ನಿವಾಸಿಗಳಿಗೆ ಸಾಕಾದಷ್ಟು ಆಹಾರ ಸಂಪತ್ತು ದೇಶದಲ್ಲಿಯೇ ಬೆಳೆದು ಒದಗುವುದು; ಆದರೆ ತಮ್ಮ ಆಹಾರವನ್ನು ಒದಗಿಸಿಕೊಳ್ಳಲು ಜನರಿಗೆ ನಿರುದ್ಯೋಗ ಕಾರಣದಿಂದ ದ್ರವ್ಯವಿಲ್ಲ. ಜೀವನೋದ್ಯೋಗಗಳ ಪರಿಸ್ಥಿತಿಯಲ್ಲಿ ಪ್ರಬಲತರವಾದ ದೋಷವಿರಬೇಕು. ಅದು ಏನು?

ಉದ್ಯೋಗ ವಿಭೇದ

ಜೀವನೋದ್ಯೋಗಗಳನ್ನು ಸ್ಥೂಲರೀತಿಯಲ್ಲಿ ಜಿರಾಯತ್ ಸಂಬಂಧವಾದವುಗಳೆಂದೂ ಕೈಗಾರಿಕೆಯ ಸಂಬಂಧವುಳ್ಳವುಗಳೆಂದೂ ಎರಡು ವಿಭಾಗಗಳನ್ನಾಗಿ ಭಾವಿಸಬಹುದು. ಕೆಲವು ದೇಶಗಳಲ್ಲಿ ಜಿರಾಯತ್ ಗುಂಪಿನ ವೃತ್ತಿಗಳೇ ಪ್ರಬಲವಾಗಿರುತ್ತವೆ; ಮತ್ತೆ ಕೆಲವು ದೇಶಗಳಲ್ಲಿ ಕೈಗಾರಿಕೆಯ ಗುಂಪಿನ ವೃತ್ತಿಗಳೇ ಹೆಚ್ಚಾಗಿರುತ್ತವೆ. ಉದಾಹರಣೆಗೆ ಇಂಗ್ಲಂಡ್ ಕೈಗಾರಿಕೆಯ ಪ್ರಾಧಾನ್ಯವುಳ್ಳುದು. ಕೈಗಾರಿಕೆ ವ್ಯಾಪಾರಗಳನ್ನು ಬಿಟ್ಟರೆ ಇಂಗ್ಲಂಡಿನ ಬದುಕೇ ಸಾಗುವುದಿಲ್ಲ; ಏಕೆಂದರೆ ಆ ದೇಶದಲ್ಲಿ ವರ್ಷಕ್ಕೆಲ್ಲ ಎಷ್ಟು ಕಷ್ಟಮಾಡಿ ಬೆಳೆಸಿದರೂ ಒಟ್ಟು ಬೆಳೆಸು ಜನರಾಶಿಯ $\frac{1}{6}$ ಪಾಲಿಗೆ ಮಾತ್ರ ವಾರ್ಷಿಕವಾದ ಆಹಾರಪ್ರಮಾಣವಾಗುವುದು. ತಮ್ಮ ದೇಶದಲ್ಲಿ ಬೆಳೆದಷ್ಟನ್ನೇ ನಂಬಿಕೊಂಡು ಇರುವವರಾದರೆ ಆ ದೇಶದ ಜನರಿಗೆ $2\frac{1}{2}$ ತಿಂಗಳಲ್ಲಿಯೇ ಆಹಾರ ಸಮಸ್ತವೂ ವೆಚ್ಚವಾಗಿಬಿಡುವುದು; ಆದ್ದರಿಂದ

ಉಳಿದ 9 ತಿಂಗಳ ಆಹಾರಸಾಮಗ್ರಿಯನ್ನು ಇಂಗ್ಲಂಡಿನವರು ಇತರ ದೇಶಗಳಿಂದಲೇ ಪಡೆಯಬೇಕು. ನಮ್ಮ ದೇಶವು ಕೃಷಿಪ್ರಧಾನವಾದುದು; ಏಕೆಂದರೆ ಜನರಾಶಿಗೆ ಬೇಕಾದಷ್ಟು ಆಹಾರ ಸಮೃದ್ಧಿಯನ್ನು ಒದಗಿಸು ವಷ್ಟು ವಿಸ್ತಾರವುಳ್ಳ ಭೂಮಿಯು ದೇಶದಲ್ಲಿಯೇ ಇರುವುದಲ್ಲದೆ ಕೈಗಾರಿಕೆ ಗಳು ಅತಿ ದುರ್ಬಲವಾಗಿರುವುವು. ಕೃಷಿ ಭಾಗವೂ ಕೈಗಾರಿಕೆಯ ಭಾಗವೂ ಸಮತೂಕವಾಗಿದ್ದು ಪರಸ್ಪರವಾಗಿ ಹೊಂದಿಕೊಂಡಿರುವ ದೇಶಗಳು ಪೃಥ್ವಿಯಲ್ಲಿ ಹೆಚ್ಚಾಗಿಲ್ಲ. ಫ್ರಾನ್ಸ್ ದೇಶದಲ್ಲ ಅಂತಹ ಹೊಂದಿಕೆಯಿದೆ; ಆ ಹೊಂದಿಕೆಯಿಂದ ಆ ದೇಶವು ಆರ್ಥಿಕ ರೀತಿಯಲ್ಲಿ ಸ್ವತಂತ್ರವಾಗಿರಬಲ್ಲುದು. ಫ್ರಾನ್ಸಿನಂತಹ ದೇಶಗಳು ಅಪರೂಪ. ಅನೇಕ ದೇಶಗಳಲ್ಲಿ ನಿವಾಸಿಗಳಿಗೆ ಬೇಕಾಗುವಷ್ಟು ಭೂಸಂಪತ್ತು ಇರುವುದಿಲ್ಲ; ಬೇರೆ ಕೆಲವು ದೇಶಗಳಲ್ಲಿ ಭೂಮಿಯು ಅಪಾರವಾಗಿದ್ದು ನಿವಾಸಿಗಳಿಗೆ ಅನುಪಯುಕ್ತವಾಗಿಯೇ ಇರುತ್ತದೆ. ಬೆಲ್ಜಿಯಂ ಮತ್ತು ಆಸ್ಟ್ರೇಲಿಯ ದೇಶಗಳನ್ನು ಈ ರೀತಿಯಲ್ಲಿ ಹೋಲಿಸಿದಲ್ಲಿ ಅಜಗಜಾಂತರವೇ ಕಾಣುವುದು. ಯೂರೋಪ್ ಖಂಡದ ಪಶ್ಚಿಮ ಭಾಗದ ದೇಶಗಳಲ್ಲಿ ಸಾಮಾನ್ಯವಾಗಿ ಜನವೃದ್ಧಿಯ ಪ್ರಮಾಣವು ಭೂಮಿಯ ಪ್ರಮಾಣವನ್ನು ಅತಿಯಾಗಿಯೇ ಮೀರಿಸಿತು. ದೇಶವು ಭರಿಸಲಾರದಷ್ಟು ಜನವೃದ್ಧಿಯಾದಾಗ ಆ ದೇಶಗಳ ಜನರು ಸ್ವದೇಶಗಳನ್ನು ಬಿಟ್ಟು ದೇಶಾಂತರಗಳನ್ನು ಹುಡುಕಿಕೊಂಡು ಹೋಗಿ ಆ ದೂರಪ್ರದೇಶ ಗಳಲ್ಲಿ ನೆಲೆಸಿದರು. ದೇಶಾಂತರ ಗಮನವೆಂಬುದು ಅತಿವೃದ್ಧಿಗೆ ಸಹಜವಾದ ಪರಿಹಾರ. ಭಾರತೀಯರಿಗಾದರೆ ದೇಶಾಂತರ ಗಮನವು ಸಾಧ್ಯವಿಲ್ಲ; ಇತರ ದೇಶಗಳಲ್ಲಿ ಭಾರತೀಯರನ್ನು ಪುರಸ್ಕರಿಸುವುದಿಲ್ಲ. ಆದ್ದರಿಂದ ಭಾರತೀಯರು ಸ್ವದೇಶದಲ್ಲಿಯೇ ಇದ್ದುಕೊಂಡು ತಮ್ಮ ಆಹಾರ, ಉದ್ಯೋಗಗಳ ಸಮಸ್ಯೆಗಳನ್ನು ಪೂರ್ತಿಮಾಡಿಕೊಳ್ಳಬೇಕು.

ಜೀವನೋದ್ಯೋಗಗಳಲ್ಲಿ ಕೃಷಿ, ಕೈಗಾರಿಕೆ, ವ್ಯಾಪಾರ, ವಹನ ಮತ್ತು ಸೇವಾರೂಪವಾದ ವೃತ್ತಿಗಳೇ ಮುಖ್ಯರಾಶಿಗಳು. ಕೃಷಿ ಕೈಗಾರಿಕೆಗಳು ಅನ್ಯೋನ್ಯವಾಗಿದ್ದು ಒಂದರ ಲೋಪ ದೌರ್ಬಲ್ಯಗಳನ್ನು ಮತ್ತೊಂದು ಪರಿಹರಿಸುತ್ತಲಿರಬೇಕು. ನಮ್ಮ ದೇಶದಲ್ಲಿ ಜೀವನೋ ದ್ಯೋಗಗಳ ಸ್ಥಿತಿ ಇರುವುದು ಈ ಪರಿ:—

| | | | | |
|---|---|---|---|---|
| ಕೃಷಿಯಿಂದ ಜೀವಿಸುವವರು | ಶೇಕಡ | .. | 70·9 | (ಅದರಲ್ಲಿ 45% ಕಷ್ಟ |
| ಕೈಗಾರಿಕೆಗಳಿಂದ ,, | ,, | .. | 1·0 | ಮಾಡುವವರು, |
| ವ್ಯಾಪಾರಗಳಿಂದ ,, | ,, | .. | 6·0 | ಉಳಿದ 55 ಭಾಗ |
| ವಾಹಕವೃತ್ತಿಗಳಿಂದ | ,, | .. | 2·0 | ದವರು ಆಶ್ರಿತರು.) |
| ಸರ್ಕಾರೀ ಹುದ್ದೆಗಳಿಂದ ,, | ,, | .. | 2·0 | |

ಭಾರತೀಯ ಔದ್ಯೋಗಿಕ ಸ್ಥಿತಿ

ಈ ಪರೀಕ್ಷೆಯಿಂದ ತೇಲುವುದೇನು? ಒಟ್ಟು ಜನರಾಶಿಯಲ್ಲಿ ಶೇಕಡ 40 ಭಾಗದವರು ಬೇರೆ ಗತಿಯಿಲ್ಲದೆ ಭೂಮಿಯ ಮೇಲೆಯೇ ಭಾರವನ್ನು ಹಾಕಿರುವ ಸಂಗತಿ. ಇವರ ಭಾರವನ್ನು ಭೂಮಿಯು ಸಿಜವಾಗಿ ಸಹಿಸಲಾರದು. ಜನರಾಶಿಯಲ್ಲಿ 40% ಅಂದರೆ ಸುಮಾರು 12 ಕೋಟಿ ಜನರು ಭೂಮಿಯನ್ನು ಬಿಟ್ಟು ಇತರ ವಿಧಾನಗಳಿಂದ ಬದುಕನ್ನು ನಡೆಸಬೇಕು. ನಮ್ಮ ದೇಶದ ಏಳು ಲಕ್ಷ ಗ್ರಾಮಗಳಲ್ಲಿ ವಾಸಮಾಡುವ ಜನಭಾಗವು ಒಟ್ಟಿನಲ್ಲಿ ಶೇಕಡ 89 ಪಾಲು. ಒಟ್ಟು ಜನಸಂಖ್ಯೆಯು 100 ಆದರೆ 72 ಜನರು ವ್ಯವಸಾಯದಿಂದಲೇ ಬದುಕಲು ಪ್ರಯತ್ನಪಡುತ್ತಿರುವರು. ವ್ಯವಸಾಯದಿಂದ 40 ಜನರ ಬದುಕು ಕಳೆಯಬಹುದು; ಉಳಿದ 32 ಜನರು ಭೂಮಿಯನ್ನು ಆಶ್ರಯಿಸುವುದು ವಿಪರೀತವಾದ ಸ್ಥಿತಿ. 40 ಪಾಲನ್ನು ಹೊರಬಲ್ಲ ಭೂಮಿಗೆ 72 ಪಾಲು ಭಾರವಾಗಿರುವುದರಿಂದ ನಮ್ಮ ದೇಶದಲ್ಲಿ ವ್ಯವಸಾಯ ಭಾರವು ವಿಷಮವಾಗಿದೆಯೆಂದು ಅರ್ಥಶಾಸ್ತ್ರಜ್ಞರು ಹೇಳುತ್ತಿರುವುದು. ಈ ವಿಪರೀತಕ್ಕೆ ಕಾರಣವೇನಂದರೆ

ಭೂಭಾರ

ಕೋಟ್ಯಂತರ ಜನರು ತಮ್ಮ ಹಿಂದಿನ ವೃತ್ತಿಗಳನ್ನು ಕಳೆದುಕೊಂಡದ್ದು. ಹಿಂದಿದ್ದ ಕಸಬುಗಳೂ ವೃತ್ತಿಗಳೂ ನಷ್ಟವಾಗಲು ಅವುಗಳನ್ನು ಆಶ್ರಯಿಸಿಕೊಂಡಿದ್ದ ಜನರು ಗತ್ಯಂತರವಿಲ್ಲದೆ ವ್ಯವಸಾಯವನ್ನು ಆಶ್ರಯಿಸಿ ಭೂಮಿಗೆ ಭಾರವಾದರು. ಒಬ್ಬರಿಗೆ ಅನ್ನವನ್ನು ನೀಡುತ್ತಿದ್ದ ಭೂಮಿತಾಯಿಯು ಈಗ ಅದೇ ಅನ್ನವನ್ನೇ ಇಬ್ಬರು ಮೂವರಿಗೆ ಹಂಚುತ್ತ ಕೈತುತ್ತು ಹಾಕಬೇಕಾಗಿದೆ.

ವೃತ್ತಿ ನಷ್ಟ

ವ್ಯವಸಾಯಕ್ಕೆ ಭಾರವಾಗಿರುವ ಜನಭಾಗದವರು ಬೇರೆ ವೃತ್ತಿಗಳನ್ನು ಅವಲಂಬಿಸಬೇಕಾದುದು ಸಹಜ. ಆದರೆ ಬೇರೆ ವೃತ್ತಿಗಳು ದೇಶದಲ್ಲಿಲ್ಲ. ಇನ್ನೂರು ವರ್ಷಗಳಿಗೆ ಹಿಂದಿನ ಕಾಲದಲ್ಲಿ ಇಡೀ ಜಗತ್ತಿನಲ್ಲಿ ಪ್ರಸಿದ್ಧವಾಗಿದ್ದ ಭಾರತೀಯ ಕೈಗಾರಿಕೆಗಳೂ ಕುಶಲ ಕಲೆಗಳೂ ಮಾಯವಾದುದಲ್ಲದೆ ದೇಶದ ವ್ಯಾಪಾರದಲ್ಲಿ ವೈಪರೀತ್ಯವೊಂದು ಸಂಘಟಿಸಿತು. ಬಟ್ಟೆಯ ಕೈಗಾರಿಕೆಯಿದ್ದ ಸ್ಥಿತಿಯಲ್ಲಿ ದೇಶಕ್ಕೆ ಸಾಕಾದಷ್ಟು ವಸ್ತ್ರ ಸಮೃದ್ಧಿಯು ಸಿದ್ಧವಾಗುತ್ತಿದ್ದುದಲ್ಲದೆ ಇತರ ದೇಶಗಳಿಗೂ ವಸ್ತ್ರರಾಶಿಯು ಸಾಗಿ ವ್ಯಾಪಾರವಾಗುತ್ತಿದ್ದುದರಿಂದ ಕೋಟ್ಯಂತರ ಜನರು ವಸ್ತ್ರ ಸಂಬಂಧವಾದ ವೃತ್ತಿಗಳಲ್ಲಿಯೇ ತೊಡಗಿ ಬಾಳುತ್ತಿದ್ದರು. ಬಟ್ಟೆಯ ಕೈಗಾರಿಕೆಯು ದೇಶದಲ್ಲಿ ನಷ್ಟವಾದ ಬಳಿಕ ನೂಲುವವರು, ನೆಯ್ಯುವವರು, ಬಣ್ಣಗಾರರು, ಮುದ್ರಣಗಾರರು, ಬಡಗಿಗಳು ಮುಂತಾದವರು ತಮ್ಮ ಬದುಕನ್ನು ಕಳೆದುಕೊಂಡರು. ರೈಲ್ದಾರಿಗಳೂ ಜಹಜುಗಳೂ ವೃದ್ಧಿಗೊಂಡಹಾಗೆಲ್ಲ ಹಿಂದಿನ ಕಾಲದಲ್ಲಿ ವಹನ ವೃತ್ತಿಗಳನ್ನು ಆಶ್ರಯಿಸಿಕೊಂಡಿದ್ದ ಬಂಡಿಕಾರರು, ಅಂಬಿಗರು ಮುಂತಾದವರು ತಮ್ಮ ಬದುಕನ್ನು ಕಳೆದುಕೊಳ್ಳಬೇಕಾಯಿತು. ಯುದ್ಧಗಳೆಲ್ಲವೂ ನಿಂತುಹೋಗಲು ಯೋಧರಾಗಿ ಬಾಳುತ್ತಿದ್ದ ಜನರಿಗೆ ವೃತ್ತಿನಾಶವಾಯಿತು ; ಪುನಃ ಅವರಿಗೆ ಯೋಧವೃತ್ತಿಯು ದೊರೆಯದೆಯೇ ನಡೆಯಿತು. , ಈ ರೀತಿಯಲ್ಲಿ ಈಚಿಗೆ ನಡೆದ ಗತಿಯಲ್ಲಿ ಪೂರ್ವದ ವೃತ್ತಿಗಳು ನಷ್ಟವಾದಂತೆಲ್ಲ ವ್ಯವಸಾಯಕ್ಕೆ ಭಾರವು ಹೆಚ್ಚಿ ವಿಪರೀತವಾಗಿ ಪರಿಣಮಿಸಿತು. ಲೋಹಕರ್ಮಿಗಳು, ಕಲಾಕುಶಲಿಗಳು ಮುಂತಾದವರು ಹಳೆಯ ವೃತ್ತಿಗಳನ್ನು ಕಳೆದುಕೊಂಡು ಹೊಸ ವೃತ್ತಿಗಳನ್ನು ಕಾಣಲಾರದೆಹೋದರು. ಪರಿಣಾಮವಾಗಿ ಭೂಭಾರ ಮಾತ್ರವಲ್ಲದೆ ನಿರುದ್ಯೋಗ ವ್ಯಾಪ್ತಿ, ಭಿಕ್ಷಾವೃತ್ತಿಯ ವಿಸ್ತಾರ ಮತ್ತು ಆರ್ಥಿಕ ರೀತಿಯ ಅಪರಾಧಗಳ (Economic Crime) ವೃದ್ಧಿಗಳು ತೋರಿಕೊಂಡವು.

ದೇಶದಲ್ಲಿ ಇದೇ ಕಾಲದಲ್ಲಿ ಹೊಸವೆನಿಸಿದ ಉದ್ಯೋಗಗಳು ತೋರಿಕೊಂಡವು. ಸೆಣಬು ಹತ್ತಿಗಳ ಗಿರಣಿಗಳು, ಕಾಫಿ ಟೀಗಳ ಸಾಗುವಳಿ ವ್ಯಾಪಾರಗಳು, ಗಣಿಗಳು ಮುಂತಾಗಿ ಹೊಸದಾಗಿ ತೋರಿಕೊಂಡ

ಉದ್ಯೋಗಗಳಲ್ಲಿ ಬಂಡವಾಳವು ದೇಶದ್ದಲ್ಲ, ಹೊರಗಿನದು. ಆದ್ದರಿಂದ ಅವುಗಳಲ್ಲಿ ಹುಟ್ಟುವ ಲಾಭವು ಪರಕೀಯರಿಗೆ ಸಲ್ಲುತ್ತದೆ; ಹುದ್ದೆಗಳಲ್ಲಿ ಮೇಲ್ತರದವು ಪರಕೀಯರಿಗೇ ಉಪಯುಕ್ತವಾಗುತ್ತವೆ. ಗಣಿಗಳು, ತೋಟಗಳು, ಜಹಜು ಮತ್ತು ರೈಲು ವಾಹಕಗಳು, ಆಮದು ರಫ್ತು ವ್ಯಾಪಾರಗಳು, ಸೆಣಬು ಹತ್ತಿಗಳ ಗಿರಣಿಗಳು, ಬ್ಯಾಂಕುಗಳು, ವಿಮೆಯ ಸಂಘಗಳಲ್ಲಿ —ಹಲ ಕೆಲವು ಹತ್ತಿ ಗಿರಣಿಗಳನ್ನು ಬಿಟ್ಟರೆ ಉಳಿದವುಗಳೆಲ್ಲವೂ ವಿದೇಶೀಯರ ಸಂಸ್ಥೆಗಳಾಗಿಯೇ ಇವೆ. ಇವುಗಳಲ್ಲಿ ವಿನಿಯುಕ್ತವಾಗಿರುವ ವಿದೇಶೀ ಬಂಡವಾಳವೆಷ್ಟೆಂದು ಗಣನೆಮಾಡಿ ನೋಡಿದಲ್ಲಿ **ಒಂದು ಸಾವಿರ ಕೋಟಿ ರೂಪಾಯಿಗಳಷ್ಟೆಂದು** ತಿಳಿಯುವುದು. ಅವುಗಳಲ್ಲಿ ವಾರ್ಷಿಕವಾಗಿ ಶೇಕಡ 10 ಲಾಭವೆಂದರೂ ಒಟ್ಟಿನಲ್ಲಿ ವರ್ಷಕ್ಕೆ 100 ಕೋಟಿ ರೂಪಾಯಿಗಳ ಲಾಭವಾಗುತ್ತದೆ. ಆ ದ್ರವ್ಯರಾಶಿಯು ದೇಶೀಯರಿಗೇ ಸೇರಿದ ಪಕ್ಷದಲ್ಲಿ ಸರಾಸರಿಯ ಲೆಕ್ಕದಂತೆ ಎರಡು ಕೋಟಿ ಜನರ ಬದುಕು ಅದರಿಂದಲೇ ನಡೆಯಬಹುದಾಗಿತ್ತು. ಲಭ್ಯವಾಗಬೇಕಾದುದು ಅಲಭ್ಯವಾಗಿರುವ ಕಾರಣದಿಂದ ಈ ಅಂಶವನ್ನು ಕೆಲವರು ಶಾಸ್ತ್ರಜ್ಞರು ನ್ಯಾಯ ವಿರುದ್ಧವಾದ ನಷ್ಟವೆಂದೇ ಭಾವಿಸುತ್ತಾರೆ. ಈ ಹೊಸ ಉದ್ಯೋಗಗಳಲ್ಲಿ ಕೆಲಸಮಾಡಿ ಜೀವನವನ್ನು ಹೊರುವ ಭಾರತೀಯರ ಸಂಖ್ಯೆಯು 20 ಲಕ್ಷಗಳಿಗಿಂತ ಹೆಚ್ಚಿಲ್ಲ. ಅವರೂ ಕೂಡ ಕೂಲಿಗಾರರಾಗಿಯೋ ಗುಮಾಸ್ತೆಗಳಾಗಿಯೋ ಇರತಕ್ಕವರೇ ವಿನಾ ನೆಮ್ಮದಿಯಿಂದ ಇರತಕ್ಕವರಲ್ಲ. ಇದಲ್ಲದೆ ಗಿರಣಿಗಳ ಕಾಮಗಾರರಾಗಲಿ, ಗಣಿಗಳ ಕೂಲಿಯಾಳುಗಳಾಗಲಿ, ತೋಟಗಳ ಕೆಲಸಗಾರರಾಗಲಿ ಅವರ ಜೀವನದಲ್ಲಿ ಉಲ್ಲಾಸವೆಂಬುದು ಸ್ವಪ್ನದಲ್ಲಿಯೂ ದುರ್ಲಭ; ನಿತ್ಯ ಸಂಕಟವಾಗಿ ಜೀವನವು ಬಲು ಭಾರವಾಗಿ ತೋರುತ್ತದೆ. ಮುಂಬಯಿ ಪಟ್ಟಣದಲ್ಲಿ ಕಾಮಗಾರಿಗಳ ಕೇರಿಗಳಷ್ಟು ಘೋರವಾದುದು ಇಡೀ ಜಗತ್ತಿನಲ್ಲಿಯೇ ಇಲ್ಲವೆನ್ನುವುದು ತಥ್ಯವೆಂದು ಬಾರಿ ಬಾರಿಗೂ ಸಿದ್ಧಾಂತವಾಗಿದೆ.

ವಿದೇಶೀ ಬಂಡವಾಳ

ಸುಶಿಕ್ಷಿತ ವರ್ಗಗಳ ಜನರು ಅವಲಂಬಿಸುವ ವೃತ್ತಿಗಳನ್ನು ಹೊಸವೆಂದು ಭಾವಿಸಿದರೂ ಭಾವಿಸಬಹುದು. ನ್ಯಾಯವಾದಿಗಳು,

ಉಪಾಧ್ಯಾಯರು, ವೈದ್ಯರು ಮುಂತಾದವರು ದೇಶದ ಜೀವನದಲ್ಲಿ ಹೊಸಬರೇನೂ ಅಲ್ಲ. ಹೊಸವೆಂದು ಭಾವಿಸಿದರೂ ಕೂಡ

**ಸುಶಿಕ್ಷಿತರ ಪೈಪೋಟಿ**

ಸರ್ಕಾರದ ನೌಕರಿ, ಯಂತ್ರಯೋಜನ, ವೈದ್ಯ, ಶಿಕ್ಷಣ, ನ್ಯಾಯವಾದ ಮುಂತಾದವುಗಳನ್ನು ಆಶ್ರಯಿಸಿದವರು ಹಿಂದಿನ ಬದುಕನ್ನು ಕಳೆದುಕೊಂಡಿದ್ದವರೇ. ಸದ್ಯಃ ಸ್ಥಿತಿಯಲ್ಲಿ ಈ ವೃತ್ತಿಗಳಲ್ಲಿಯೂ ನೂಕುನುಗ್ಗಲು ಹೆಚ್ಚಾಗಿಯೇ ಇದೆ. ಸರ್ಕಾರದ ನೌಕರಿಗಳಲ್ಲಿ ಒಂದೊಂದು ನೌಕರಿಯನ್ನೂ ನೂರಾರು ಜನ ಆಶಿಸುತ್ತಾರೆ. ಸುಶಿಕ್ಷಿತವರ್ಗದ ಉದ್ಯೋಗ ರಾಹಿತ್ಯವು ಭಾರತದೇಶದಲ್ಲಿರುವಷ್ಟು ವಿಷಮವಾಗಿ ಬೇರಾವ ದೇಶದಲ್ಲಿಯೂ ಕಾಣುವುದಿಲ್ಲ.

ಎರಡು ಶತಮಾನಗಳಷ್ಟು ಮಾತ್ರದ ಹಿಂದೆ ಸಮಸ್ತ ಪೃಥ್ವಿಯನ್ನೇ ಬೆರಗುಗೊಳಿಸುವ ಐಶ್ವರ್ಯರಾಶಿಯು ನಮ್ಮ

**ವ್ಯಾಪಾರದ ರೂಪಾಂತರ**

ದೇಶದಲ್ಲಿದ್ದಿತು. ಮುಘಲ ಬಾದಷಾಹಿಯು ದುರ್ಬಲವಾದಂದಿನಿಂದ ಆ ಐಶ್ವರ್ಯವನ್ನು ವಿದೇಶೀಯರು ಕ್ರಮವಾಗಿ ಲೂಟಿಮಾಡಲು ತೊಡಗಿ ಅವಿರತರಾಗಿ ವರ್ಷೇ ವರ್ಷೇ ತಮ್ಮ ದೇಶಗಳಿಗೆ ಸಾಗಿಸತೊಡಗಿದರು. ವಿಕ್ಟೋರಿಯ ರಾಣಿಯು ಭಾರತ ಸಾಮ್ರಾಜ್ಞಿಯೆಂದೆನಿಸುವ ವೇಳೆಗೆ ದೇಶದ ನಿಧಿನಿಕ್ಷೇಪಗಳು ನಷ್ಟವಾಗಿದ್ದುವಲ್ಲದೆ ವ್ಯಾಪಾರದಲ್ಲಿ ತೋರಿಕೊಂಡು ಭದ್ರವಾದ ವೈಪರೀತ್ಯದಿಂದ ದೇಶದ ಉದ್ಯೋಗಗಳೂ ಕೈಗಾರಿಕೆಗಳೂ ನಷ್ಟವಾದವು. ಇಂಗ್ಲಂಡಿನಲ್ಲಿ ಔದ್ಯೋಗಿಕ ಪರಿವರ್ತನೆಯೆಂಬುದು ನಡೆಯಿತು; ಅದರ ಪರಿಣಾಮವಾಗಿ ಭಾರತದೇಶದಿಂದ ಕೈಗಾರಿಕೆಯ ವಸ್ತುಗಳು ಅಥವಾ ಸಿದ್ಧ ಸರಕು ಹೊರಗೆ ಸಾಗುವುದು ನಿಂತುಹೋಗಿ ಸಾಧಕ ಸಾಮಗ್ರಿಯೇ ಸಾಗಿ ಹೋಗಲು ಮೊದಲಾಯಿತು. ಕಾಲಕ್ರಮದಲ್ಲಿ ಭಾರತದೇಶವು ಸಾಧಕ ಸಾಮಗ್ರಿಯನ್ನೊದಗಿಸುವ ಮತ್ತು ಸಿದ್ಧ ಸರಕನ್ನು ಕೊಳ್ಳುವ ಬೀಡಾಗಿ ಪರಿಣಮಿಸಿತು. ಸಿದ್ಧ ಸರಕನ್ನು ಇತರ ದೇಶಗಳಿಗೆ ಸಾಗಿಸಿ ಚಿನ್ನ ಬೆಳ್ಳಿಗಳ ರಾಶಿಗಳನ್ನು ವರ್ಷೇ ವರ್ಷೇ ಪಡೆಯುತ್ತಿದ್ದ ಭಾರತವರ್ಷವು ತನ್ನ ಸಾಮಗ್ರಿಯನ್ನೇ ಸಾಗಿಸಿ ಅದಕ್ಕೆ ಬದಲಾಗಿ ಸಿದ್ಧ ಸರಕನ್ನು ತರಿಸಿ

ಕೊಳ್ಳುವ ವ್ಯಾಪಾರದಲ್ಲಿ ತೊಡಗಿತು. ಈ ವ್ಯಾಪಾರ ವೈಪರೀತ್ಯವು 1840ನೆ ಇಸವಿಗೆ ಪೂರ್ಣವಾದ ರೂಪವನ್ನು ತಾಳಿತು. ಆ ತರುವಾಯವೇ, ಪರಕೀಯರ ಬಂಡವಾಳವು ಭಾರತೀಯ ಉದ್ಯೋಗ ಕ್ಷೇತ್ರದಲ್ಲಿ ಪ್ರವೇಶಿಸಿತು; ಆಗಿನ ಸರ್ಕಾರವೂ ಅದನ್ನು ಪ್ರೋತ್ಸಾಹಿಸುತ್ತ ಬೆಂಬಲವನ್ನೊದಗಿಸಿತು. ರೈಲ್ವಾರಿಗಳು, ನೀರಾವರಿ ಕೆಲಸಗಳು, ಜಹಜುಗಳು, ಗಣಿಗಳು, ತೋಟಗಳು, ಗಿರಣಿಗಳು ಈ ರೀತಿಯಲ್ಲಿ ಸರ್ಕಾರದ ಬೆಂಬಲವನ್ನು ಪಡೆದ ವಿದೇಶೀ ಬಂಡವಾಳಗಾರರ ಸಂಸ್ಥೆಗಳಿಂದಲೇ ಪ್ರಬಲವಾದವು.

ಐಶ್ವರ್ಯ ನಷ್ಟ

ನಾದರ್ ಷಹ ಮುಂತಾಗಿ ವಾಯುವ್ಯ ದಿಕ್ಕಿನಿಂದ ಬಂದು ಲುಂಠನ ಕಾರ್ಯದಲ್ಲಿ ನಿರತರಾದವರ ಸಾಹಸದಿಂದ ಎಷ್ಟು ಧನ ನಷ್ಟವಾಯಿತೆಂದು ಗಣಿಸಲು ಸಾಧ್ಯವಿಲ್ಲ. ಆದರೆ ಪಲಾಸಿ ಕದನದ ಕಾಲದಿಂದ ಮೊದಲ್ಗೊಂಡು ಇಂಗ್ಲಂಡಿಗೆ ಸಾಗಿಹೋದ ಧನವೆಷ್ಟೆಂಬ ಲೆಕ್ಕವನ್ನು ಸ್ಥೂಲವಾಗಿ ನಡೆಸಬಹುದು. 1757 ರಿಂದ 1790 ರವರೆಗೆ ನಡೆದ 33 ವರ್ಷಗಳಲ್ಲಿ ಭಾರತದಿಂದ ಇಂಗ್ಲಂಡಿಗೆ ಸಾಗಿಹೋದ ಹಣವನ್ನು ಲೆಕ್ಕಮಾಡಿದ ಪಂಡಿತರು ಆ ರಾಶಿಯು ಕನಿಷ್ಠ ಪಕ್ಷ £ 500 ಮಿಲಿಯನ್ ಅಥವಾ 500 ಕೋಟಿ ರೂಪಾಯಿಗಳಷ್ಟೆಂದೂ, ಉತ್ತಮ ಪಕ್ಷ £ 1,000 ಮಿಲಿಯನ್ ಅಥವಾ 1,000 ಕೋಟಿ ರೂಪಾಯಿಗಳಷ್ಟೆಂದೂ ನಿಶ್ಚಯಿಸಿದ್ದಾರೆ. 1790ರಿಂದ ಮುಂದಕ್ಕೆ 1840 ರವರೆಗೆ ಗತಿಸಿದ ಕಾಲದಲ್ಲಿ ಈಸ್ಟಿಂಡಿಯ ಕಂಪೆನಿಯವರು ಇಲ್ಲಿಯ ಆಡಳಿತದಲ್ಲಿ ಗಳಿಸಿದ ಹಣವನ್ನು ಇಂಗ್ಲಂಡಿನಲ್ಲಿ ವೆಚ್ಚಮಾಡುತ್ತಿದ್ದರು. ಆ ಮೊಬಲಗು ವರ್ಷಕ್ಕೆ £ 2–3 ಮಿಲಿಯನ್ ಅಥವಾ 2½ ಕೋಟಿ ರೂಪಾಯಿಗಳಷ್ಟಿತ್ತು. 1840ರಲ್ಲಿ ಒಬ್ಬಾನೊಬ್ಬ ಇಂಗ್ಲೀಷ್ ಗೃಹಸ್ಥನು 1790ರಿಂದ 1840ರ ವರೆಗೆ, ಅಂದರೆ 48 ವರ್ಷ ಕಾಲದಲ್ಲಿ, ಭಾರತದೇಶಕ್ಕೆ ಕೇವಲ ದ್ರವ್ಯರೂಪವಾಗಿಯೇ £ 8,400 ಮಿಲಿಯನ್ ಅಥವಾ 84,00,00,00,000 ರೂಪಾಯಿಗಳಷ್ಟು ನಷ್ಟವಾಯಿತೆಂದು ಲೆಕ್ಕಮಾಡಿದನು. ಮತ್ತೊಬ್ಬಾತನು 1810ರಿಂದ 1840ರ ವರೆಗೆ 30 ವರ್ಷಗಳ ಲೆಕ್ಕವನ್ನು ಮಾಡಿ ಆ ಕಾಲದಲ್ಲಿ ಭಾರತೀಯರಿಗೆ

£ 72,39,94,791 ಅಥವಾ 7,23,99,47,910 ರೂಪಾಯಿಗಳಷ್ಟು ನಷ್ಟವಾಯಿತೆಂದು ನಿಷ್ಕರ್ಷೆಮಾಡಿದನು. ಕಂಪೆನಿಯವರು ಇಂಗ್ಲಂಡಿನಲ್ಲಿ ನಡೆಸುತ್ತಿದ್ದ ವೆಚ್ಚದ ನೀತಿಯು 1858ರಲ್ಲಿ ಕಂಪೆನಿಯು ರದ್ದಾದ ತರುವಾಯವೂ ಅನುಸರಣೀಯವಾಯಿತು. ಭಾರತೀಯ ಕಾರ್ಯದರ್ಶಿಯೆಂಬ ಮಂತ್ರಿಯು ಅಂದಿನಿಂದ ಭಾರತರಾಷ್ಟ್ರದ ಹುಟ್ಟುವಳಿಯಲ್ಲಿ ಒಂದು ಪಾಲನ್ನು ಇಂಗ್ಲಂಡಿನಲ್ಲಿ ವೆಚ್ಚಗೊಳಿಸುತ್ತಾನೆ. ಭಾರತ ರಾಜಸ್ವದ ಭಾಗವಾಗಿ ಇಂಗ್ಲಂಡಿನಲ್ಲಿ ವೆಚ್ಚವಾದ ರಾಶಿಯನ್ನು ಲೆಕ್ಕಮಾಡಿದರೆ 1834ರಿಂದ 1900ರವರೆಗೆ ಒಟ್ಟು £ 1,842 ಮಿಲಿಯನ್ನು ಅಥವಾ 1,842 ಕೋಟಿ ರೂಪಾಯಿಗಳಷ್ಟು ಆಗುತ್ತದೆ. ವರ್ಷೇ ವರ್ಷೇ ಕ್ರಮವಾಗಿ ಭರತವರ್ಷದ ಹುಟ್ಟುವಳಿಯಲ್ಲಿ ಒಂದು ಪಾಲು ಇಂಗ್ಲಂಡಿನಲ್ಲಿ ವೆಚ್ಚವಾಗುವ ನೀತಿಯನ್ನು ಅನೇಕರು ಖಂಡಿಸಿದ್ದಾರೆ. ಅದನ್ನೇ ಪ್ರತ್ಯಕ್ಷವಾಗಿ ಭಾರತದಿಂದ ಇಂಗ್ಲಂಡಿಗೆ ಹರಿಯುವ ಹೊನ್ನಿನ ಹೊಳೆಯೆಂದು ಕರೆಯುವುದು. ವರ್ಷೇ ವರ್ಷೇ ನಡೆಯುವ ಈ ವೆಚ್ಚಕ್ಕೆ ಸರ್ಕಾರದ ಲೆಕ್ಕಪತ್ರಗಳಲ್ಲಿ ಮನೆ ವೆಚ್ಚ (Home Charges) ವೆಂಬ ಹೆಸರುಂಟು; ಇಂಗ್ಲೀಷ್ ವೆಚ್ಚ (English Charges) ವೆಂಬುದು ಸಹಜವಾದ ಹೆಸರು. ಆ ವೆಚ್ಚದಲ್ಲಿ ಬಡ್ಡಿಯ ಹಣ, ವಿಶ್ರಾಂತಿ ವೇತನಗಳು, ಸೈನ್ಯದ ವೆಚ್ಚ, ಸಾಮಗ್ರಿಯ ಕೊಳ್ಳಾಟ ಮುಂತಾದ ಅಂಶಗಳು ಸೇರಿರುತ್ತವೆ. ಸದ್ಯಃಸ್ಥಿತಿಯಲ್ಲಿ ಆ ವೆಚ್ಚದ ಮೊಬಲಗನ್ನು ವರ್ಷಕ್ಕೆ £ 35 ಮಿಲಿಯನ್ ಅಥವಾ 50 ಕೋಟಿ ರೂಪಾಯಿಗಳಷ್ಟೆಂದು ಭಾವಿಸಬಹುದು. ರಾಷ್ಟ್ರದ ಹುಟ್ಟುವಳಿಯಲ್ಲಿ ವರ್ಷೇ ವರ್ಷೇ ಈ ಹಣವು ಸಾಗಿಹೋಗುವಾಗ ವಿನಿಮಯದಲ್ಲಿ ಇತರ ನಷ್ಟಗಳು ಸಂಭವಿಸುತ್ತವೆ. ಭಾರತವರ್ಷದಲ್ಲಿ ನಡೆಯುವ ನಾಣ್ಯದ ಶಿಸ್ತು ಮತ್ತು ನಾಣ್ಯದ ವಿನಿಮಯಗಳು ಭಾರತೀಯ ಕಾರ್ಯದರ್ಶಿಯ ಅನುಜ್ಞೆಯ ಮೇರೆಗೆ ವರ್ತಿಸುವ ವೈಸ್‌ರಾಯ್ ಸರ್ಕಾರದವರ ಸ್ವಾಧೀನದಲ್ಲಿವೆ. ನಮ್ಮ ದೇಶದ ಹಣಕ್ಕೂ ಇತರ ದೇಶಗಳ ಹಣಕ್ಕೂ ವಿನಿಮಯವಾಗುವ ಸಂದರ್ಭದಲ್ಲಿಯೇ ವ್ಯಾಪಾರದಲ್ಲಿ ವಿಶೇಷವಾದ ನಷ್ಟಗಳು ಸಂಭವಿಸಿವೆ.

'ಹೊನ್ನು ಹೊಳೆ'

**ಕರಭಾರ**

ಇದೇ ಕಾಲದಲ್ಲಿ ಭಾರತವನ್ನು ಆಳುವ ಬ್ರಿಟಿಷ್ ಸರ್ಕಾರದವರು ವಿಶೇಷವೆನಿಸಿದ ವೆಚ್ಚವನ್ನು ನಡೆಸಿಯೇ ದೇಶದ ಆಡಳಿತವನ್ನು ನಿರ್ವಹಿಸುತ್ತಲಿದ್ದಾರೆ. ಆಡಳಿತದ ವೆಚ್ಚವು ದೇಶದ ಯೋಗ್ಯತೆಗೆ ಮಿಾರಿದುದಾಗಿ ಭಾರವಾಗಿಯೇ ಇದೆ. ಬ್ರಿಟಿಷರು ಅವಲಂಬಿಸುವ ಆಯು ವ್ಯಯ ನೀತಿಯುನ್ನು ಅನೇಕರು ಖಂಡಿಸಿದ್ದಾರೆ; ಕೆಲವರು ಅದನ್ನು ಸಮರ್ಥಿಸಲು ಪ್ರಯತ್ನವನ್ನೂ ಮಾಡಿದ್ದಾರೆ. ದೇಶವು ಭರಿಸಲಾರದಷ್ಟು ಆಡಳಿತದ ವೆಚ್ಚವು ನಡೆಯುವ ಸಂಗತಿ ಮಾತ್ರ ದೃಢವಾಗಿದೆ. ಫಲಿತಾಂಶವಾಗಿ ಒಂದು ಕಡೆ ಕಂದಾಯ ತೆರಿಗೆಗಳ ಭಾರವು ಹೆಚ್ಚುತ್ತಲಿದೆ; ಮತ್ತೊಂದು ಕಡೆ ರಾಷ್ಟ್ರೀಯ ಋಣವು ಏರುತ್ತಲಿದೆ. 1871ರಲ್ಲಿ ಕಂದಾಯ ತೆರಿಗೆಗಳ ಭಾರಮಾನವು ಸರಾಸರಿ ರೂ. 1–13–9 ಆಗಿದ್ದುದು 1922ರ ವೇಳೆಗೆ ರೂ. 6–1–8 ಆಗಿ ಪರಿಣಮಿಸಿತು. ಕಂದಾಯ ತೆರಿಗೆಗಳು ಹೆಚ್ಚಿದಂತೆ ಜನರ ವರಮಾನವೂ ಹೆಚ್ಚಿದ್ದರೆ ನ್ಯಾಯವಿರುತ್ತಿತ್ತು. ವರಮಾನವು ಏರಿಯೇ ಇಲ್ಲ, ಇಳಿದಿದ್ದರೆ ಇಳಿದಿರಬಹುದು; ಕಂದಾಯ ತೆರಿಗೆಗಳ ಭಾರವು ಮಾತ್ರ ಏರುತ್ತಲಿದೆ. ಕಂದಾಯದ ಭಾರವು ವ್ಯವಸಾಯಗಾರರಿಗೆ ಅತಿಯಾಗಿಯೇ ತೋರಿಬಂದು ವ್ಯವಸಾಯಗಾರರು ಸಾಲಸೋಲಗಳಲ್ಲಿ ಮುಳುಗಿದ್ದಾರೆ. ಒಟ್ಟು ದೇಶದಲ್ಲಿ ರೈತಾಪಿ ಜನರು 670 ಕೋಟಿ ರೂಪಾಯಿಗಳಷ್ಟು ಸಾಲವನ್ನು ಕಟ್ಟಿಕೊಂಡಿರುವರೆಂದು ಲೆಕ್ಕವಾಗಿದೆ.

**ಋಣಭಾರ**

ಕಂದಾಯ ತೆರಿಗೆಗಳ ರೀತಿಯು ಹೀಗಿರುವಲ್ಲಿ ಸರ್ಕಾರದವರು ವೆಚ್ಚವನ್ನು ನಡೆಸುವುದಕ್ಕಾಗಿಯೂ ಇತರ ಕಾರಣಗಳಿಗಾಗಿಯೂ ಸಾಲಗಳನ್ನೆತ್ತಿದರು. ಭಾರತ ರಾಷ್ಟ್ರೀಯ ಋಣದ ವೃತ್ತಾಂತವನ್ನು ಬೇರೆಡೆಯಲ್ಲಿ ಕಾಣತಕ್ಕದ್ದು. ಅದರಲ್ಲಿ ರೂಪಾಯಿ ಸಾಲ, ಸವರನ್ನು ಸಾಲಗಳೆಂದು ಎರಡು ಭಾಗಗಳುಂಟು. ರೂಪಾಯಿ ಸಾಲವೆನ್ನುವುದು ಈ ದೇಶದಲ್ಲಿಯೇ ಎತ್ತಿದ ಸಾಲ; ಸವರನ್ನು ಸಾಲವೆನ್ನುವುದು ಇಂಗ್ಲಂಡಿನಲ್ಲಿ ಎತ್ತಿದ ಸಾಲ. ಎರಡೂ ಸೇರಿ ಋಣವು 1,200 ಕೋಟಿ ರೂಪಾಯಿಗಳಷ್ಟು. ಸವರನ್ನು ಸಾಲವೆಂಬುದು ಸುಮಾರು 600 ಕೋಟಿಗಳಷ್ಟು.

ಈ ಸಂಕ್ಷಿಪ್ತ ವಿವರದಿಂದ ಸ್ಥೂಲವಾಗಿ ದೇಶದ ಸ್ಥಿತಿಗತಿಗಳ ಅರಿವು ಉಂಟಾಗಬಹುದು. ಬ್ರಿಟಿಷರ ಆಳ್ವಿಕೆಯು ಮೊದಲಾದಂದಿನಿಂದ ದೂರಸ್ಥವಾಗಿರುವ ಇಂಗ್ಲಂಡಿಗೂ ಭಾರತವರ್ಷಕ್ಕೂ ನಿಕಟವಾದ ಸಂಬಂಧವುಂಟಾಗಿ ಜಗತ್ತಿನ ವ್ಯಾಪಾರ ಕೋಲಾಹಲದಲ್ಲಿ ಭಾರತವರ್ಷವು ಸಿಕ್ಕಿತು. ಹೊರವ್ಯಾಪಾರದ ಪ್ರಮಾಣವು ವಿಶೇಷವಾಗಿ ಏರಿತು; ಆದರೆ ವ್ಯಾಪಾರದ ರೀತಿಯು ಬದಲಾಯಿತು. ನಡೆದ ಘಟನಾವಳಿಗಳಲ್ಲಿ ಭಾರತೀಯರ ಬಂಡವಾಳವು ನಷ್ಟವಾಯಿತು, ಕೈಗಾರಿಕೆಗಳು ಮಾಯವಾದವು, ಸಾಲಸೋಲಗಳು ಹೆಚ್ಚಿದವು. ದಾರಿದ್ರ್ಯಗ್ರಸ್ತವಾಗಿದ್ದರೂ ಹೆಚ್ಚು ವೆಚ್ಚದಿಂದಲೇ ನಡೆಯುವ ಆಡಳಿತವನ್ನು ಭರಿಸಬೇಕಾಯಿತು.

**ಕೈಗಾರಿಕೆಯ ರಕ್ಷಣೆ**

ಸರ್ ವಿಲಿಯಂ ಹಂಟರ್, ವಿಲಿಯಂ ಡಿಗ್ಬಿ ಮುಂತಾದ ಆಂಗ್ಲೇಯರೂ ದಾದಾಭಾಯಿ ನೌರೋಜಿ, ರಮೇಶಚಂದ್ರ ದತ್ ಮುಂತಾದ ಭಾರತೀಯರೂ ಪ್ರಬಲಗೊಳ್ಳುತ್ತಿದ್ದ ದೇಶದ ಬಡತನವನ್ನು ವಿವರಿಸಿ ಮೇಲ್ಮೆಯ ಪ್ರಯತ್ನ ನಡೆಯತಕ್ಕುದೆಂದು ಸೂಚಿಸಿದರು. ಆ ಕಾಲದಿಂದ ಪ್ರಜಾಪ್ರಮುಖರೂ ಸರ್ಕಾರದವರೂ ಬಡತನದ ನಿವಾರಣೋಪಾಯಗಳನ್ನು ಚಿಂತಿಸುತ್ತಲಿದ್ದಾರೆ. ಈ ವಿಷಯದಲ್ಲಿ ಪ್ರಜಾಮುಖ್ಯರಿಗೂ ಅಧಿಕಾರಿ ಮುಖ್ಯರಿಗೂ ವಿರೋಧಾಭಿಪ್ರಾಯಗಳಿದ್ದಾಗ್ಯೂ ಔದ್ಯೋಗಿಕವಾಗಿ ಉದ್ಧಾರವಾಗತಕ್ಕುದು ಅತ್ಯವಶ್ಯವೆಂದು ಸಾಧಾರಣವಾಗಿ ಎಲ್ಲರೂ ಒಪ್ಪಿದ್ದಾರೆ. 1920ರಿಂದ ಈಚೆಗೆ ಸರ್ಕಾರದವರು ಪ್ರಜಾನಾಯಕರ ಬಲವಂತಕ್ಕೊಳಗಾಗಿ ಕೆಲವು ಭಾರತೀಯ ಉದ್ಯೋಗಗಳಿಗೆ ಪ್ರೋತ್ಸಾಹವನ್ನೂ ಬೆಂಬಲವನ್ನೂ ಕೊಟ್ಟಿರುತ್ತಾರೆ. ಆದರೆ ಜನಸಾಮಾನ್ಯರ ದಾರಿದ್ರ್ಯ ನಿವಾರಣೆಯೆನ್ನುವುದು ಇನ್ನೂ ಸ್ವಪ್ನಪ್ರಾಯವಾಗಿಯೇ ಇದೆ.

**ಕೃಷಿಕರ್ಮದ ತೊಡಕುಗಳು**

ಪರಿಸ್ಥಿತಿಯು ಹೀಗಿರುವಾಗ್ಗೆ ವ್ಯವಸಾಯಗಾರರಲ್ಲಿ ಸರಾಸರಿ 4 ಎಕರೆಗಳೇ ಒಂದು ಮನೆಗೆ ಪ್ರಾಪ್ತಿಯೆಂಬುದರಲ್ಲಿ ಆಶ್ಚರ್ಯ ತೋರದೆ ಇರಬಹುದು. ಒಂದು ಕುಟುಂಬಕ್ಕೆ ಜೀವನ ನಡೆಯಬೇಕಾದರೆ ಕನಿಷ್ಠಪಕ್ಷವಾಗಿ ತರಿ ಜಮೀನಾದರೆ 6 ಎಕರೆಗಳು, ಖುಷ್ಕಿ ಜಮೀನಾದರೆ 40 ಎಕರೆಗಳು ಬೇಕು. 4 ಎಕರೆಗಳನ್ನು ಕಟ್ಟಿ

ಕೊಂಡು ಏನು ಬದುಕನ್ನು ನಡೆಸಲು ಸಾಧ್ಯವಾದೀತು? ಸರಾಸರಿಯೇ 4 ಎಕರೆಗಳಾದರೆ ಬಹು ಮಂದಿಗೆ ಅದಕ್ಕಿಂತ ಕಡಿಮೆಯ ಪ್ರಮಾಣದ ಭೂಮಿಯೇ ಇರುತ್ತದೆ. ಹೀಗೆ ಭೂಮಿ ಸಾಲದು, ವರಮಾನ ಕಡಿಮೆ, ಪೋಷಣೆಯಾಗಬೇಕಾದವರು ಹೆಚ್ಚು ಆಗಿರುವಾಗ ರೈತನು ಸಾಲಮಾಡದೆ ಏನುಮಾಡಿಯಾನು? ಇದರ ಮೇಲೆ ಸರ್ಕಾರದ ಕಂದಾಯವನ್ನು ಕ್ರಮ ವಾಗಿ ಸಲ್ಲಿಸಬೇಕು. ಆರಂಬಗಾರರ ಜೀವನವು ಎಷ್ಟು ಸಂಕಟಮಯ ವಾಗಿದೆಯೆಂಬುದನ್ನು ಏಳು ಲಕ್ಷ ಹಳ್ಳಿಗಳಲ್ಲಿ ಯಾವ ಹಳ್ಳಿಗೆ ಹೋದರೂ ಪ್ರತ್ಯಕ್ಷವಾಗಿ ಕಾಣಬಹುದು. ಶತಚ್ಛಿದ್ರಗಳಾದ ಭೂವೃತ್ತಿಗಳು, ರೋಗಪೀಡಿತ ಪಶುಗಳು, ಭಾರವನ್ನೊತ್ತುವ ಕಂದಾಯ, ವಿಶೇಷ ದ್ರವ್ಯ ವನ್ನು ನುಂಗಿ ನಿಧಾನವಾಗಿ ಕೆಲಸಮಾಡುವ ನ್ಯಾಯ ತೀರ್ಪಿನ ವ್ಯವಸ್ಥೆ, ಅನೇಕಾನೇಕರಾಗಿ ಹಳ್ಳಿಗಳಲ್ಲಿ ಬಂದು ದರ್ಶನವನ್ನೂ ಹಿಂಸೆಯನ್ನೂ ಕೊಡುವ ಚಿಕ್ಕಪುಟ್ಟ ಅಧಿಕಾರಿಗಳು, ಹೊರಲಾರದಷ್ಟು ಸಾಲಸೋಲಗಳು, ಇವುಗಳ ಮಧ್ಯೆ ರೋಗರುಜನಗಳು ಎಲ್ಲವೂ ಸೇರಿಕೊಂಡು ರೈತನನ್ನು ಸುತ್ತಿಮುತ್ತಿಕೊಂಡಿರುವಾಗ ವ್ಯವಸಾಯ ಪದ್ಧತಿಗಳನ್ನು ಸಂಸ್ಕಾರ ಗೊಳಿಸುವುದು ಹೇಗೆ? ಆರಿಸಿಟ್ಟ ಬೀಜವನ್ನು ಕೊಳ್ಳುವುದಾಗಲಿ, ಉತ್ತಮವೆನಿಸಿದ ಗೊಬ್ಬರವನ್ನು ಉಪಯೋಗಿಸುವುದಾಗಲಿ, ವಿಶೇಷವಾದ ಬೆಲೆಕೊಟ್ಟು ಹೊಸ ನೇಗಿಲು ಗಾಣಗಳನ್ನು ಕೊಳ್ಳುವುದಾಗಲಿ ರೈತಾಪಿ ಜನರಿಗೆ ಗಾಳಿಗೋಪುರಗಳಂತೆಯೇ.

**ಬಡತನದ ಪರಿಣಾಮ**

ವ್ಯವಸಾಯ ವೃತ್ತಿಯ ಮೇಲೆ ಅತಿಶಯವಾದ ಹೊರೆಯೇರಿರುವುದು ದಾರಿದ್ರ್ಯಸ್ಥಿತಿಯ ಒಂದು ಚಿಹ್ನೆ ಮಾತ್ರ. ನಿತ್ಯ ಕ್ಷುಧಾರ್ತತೆ ಮತ್ತು ರುಗ್ಣಕಾಯಗಳು ಎಲ್ಲೆಲ್ಲಿಯೂ ತೋರುವುದು ದಾರಿದ್ರ್ಯದಿಂದಲೇ. ನೈರ್ಮಲ್ಯಸಿದ್ಧಿಯಾಗಲಿ ಶಿಕ್ಷಣ ಪ್ರಯತ್ನವಾಗಲಿ ನೆರವೇರದಿರುವುದು ದಾರಿದ್ರ್ಯದ ದೆಸೆಯಿಂದಲೇ. ದಾರಿದ್ರ್ಯದ ಪರಿಣಾಮಗಳಲ್ಲಿ ಭಯಾವಹ ವಾದುದು ಇವೊಂದೂ ಅಲ್ಲ; ಮತ್ತೆ ಯಾವುದೆಂದರೆ ನೀತಿದೌರ್ಬಲ್ಯ. ದಿನೇ ದಿನೇ ಜನರ ಮನೋಬಲವು ಕ್ಷೀಣಿಸುತ್ತಲಿರುವುದರಿಂದ ತಮ್ಮ ಕೆಲಸಗಳನ್ನು ತಾವೇ ನಿರ್ವಹಿಸಲಾರದೆ ಚೈತನ್ಯಹೀನರಾಗುತ್ತಲಿದ್ದಾರೆ.

ದೇಹಶ್ರಮ ಹೆಚ್ಚಿರಬಹುದು, ಆರೋಗ್ಯಸ್ಥಿತಿಯಿಲ್ಲದಿರಬಹುದು; ಅವುಗಳಿಗಿಂತಲೂ ಭಯಂಕರವಾಗಿ ತೋರುವುದು ಜನರು ಅಧೀರರಾಗಿ ಸದಾ ಖಿನ್ನತೆಯನ್ನೂ ನಿರಾಶೆಯನ್ನೂ ತೋರುತ್ತ ಜೀವಶ್ರವಗಳಂತೆ ಆಗಿರುವ ಸಂಗತಿ.* ದಾರಿದ್ರ್ಯದಿಂದಲೇ ಅವಿಭಕ್ತಕುಟುಂಬದ ಕಟ್ಟುಗಳು ಸಡಲಿದವು. ಹಿಂದಿನಂತೆ ಬಂಧುಬಳಗದವರಲ್ಲಾಗಲಿ ಇಷ್ಟಮಿತ್ರರಲ್ಲಾಗಲಿ ಸಂಬಂಧ ಗೌರವಗಳು ನಡೆಯದೆ ಜೀವನದಲ್ಲಿ ಕಾಣುತ್ತಿದ್ದ ಉಲ್ಲಾಸ ಸಂತೋಷಗಳು ಮಾಯವಾದವು. ಭಾರತೀಯ ಕಲೆಗಳೂ ವಿನೋದಗಳೂ ಕೃಶವಾಗಿ ಕಲಾವಂತರಿಗೆ ಆಶ್ರಯ ಗೌರವಗಳು ಇಲ್ಲದಂತಾಯಿತು. ಇಷ್ಟು ಘೋರವಾಗಿ ವ್ಯಾಪ್ತಿಪಡೆದ ಬಡತನದಿಂದ ಇನ್ನೂ ವಿಷಮವಾದ ಪರಿಣಾಮವು ಒದಗಬೇಕಾಗಿದ್ದಿತು. ಆದರೆ ಭಾರತೀಯರು ತಾಳ್ಮೆಯುಳ್ಳವರಾದುದರಿಂದಲೂ, ದೇಶದಲ್ಲಿ ದಾನಧರ್ಮ ಪದ್ಧತಿಗಳೂ ಜಾತಿಯ ಕಟ್ಟುಗಳೂ ಲುಪ್ತವಾಗದೆ ಇರುವುದರಿಂದಲೂ ಸ್ವಲ್ಪ ನಿವಾರಣೆಯು ನಡೆಯಿತು. ಇದೇ ದಾರಿದ್ರ್ಯವು ದೇಶದಲ್ಲಿ ಮುಂದಿನ ಕಾಲದಲ್ಲಿಯೂ ನೆಲೆಸುವ ಪಕ್ಷದಲ್ಲಿ ಎಂತೆಂತಹ ವಿಪತ್ಪರಂಪರೆಗಳು ತೋರಿಕೊಂಡಾವೋ ಭಾವಿಸಲು ಭಯಾವಹವಾಗಿರುವುದು.

**ಸಾಮಾನ್ಯಪೌರನ ಕರ್ತವ್ಯ**

ಇಂತಹ ವಿಷಮಸ್ಥಿತಿಯಲ್ಲಿ ಸಾಮಾನ್ಯನಾದ ಪೌರನು ಮಾಡತಕ್ಕುದೇನು? ಸರ್ವನಾಶಕ್ಕೆ ಕಾರಣಭೂತವಾದ ಈ ಸ್ಥಿತಿಯಿಂದ ಪಾರಾಗಲು ಜನಸಮುದಾಯ ಸರ್ವಸ್ವವೇ ತನ್ನ ಸರ್ವಶಕ್ತಿ ಚೈತನ್ಯಗಳನ್ನೂ ವಿನಿಯೋಗಿಸಬೇಕು. ಇಂದ್ರಜಾಲಕನು ಮಾಯಾಮಂತ್ರ ಮಾಡಿದಂತೆ ಈ ದುಃಸ್ಥಿತಿಯನ್ನು ಹೋಗಲಾಡಿಸಲು ಯಾವ ಒಬ್ಬನೂ ಶಕ್ತನಲ್ಲ. ಆದರೆ ಯಾವೊಬ್ಬನೂ ತಟಸ್ಥನಾಗಿರತಕ್ಕುದಲ್ಲ. ಪ್ರತಿಯೊಬ್ಬರೂ ತ್ರಿಕರಣಶುದ್ಧಿಯಾಗಿ ಪ್ರಯತ್ನದಲ್ಲಿ ಭಾಗಿಗಳಾಗಬೇಕು.

---

* ನಿರುದ್ಯೋಗವೇತನವೆಂಬುದನ್ನು ಇಂಗ್ಲಂಡಿನಲ್ಲಿ ಸರ್ಕಾರದವರು ಕೊಡಿಸುವುದರಲ್ಲಿ ಒಂದು ಆಕ್ಷೇಪಣೆಯನ್ನು ಕುರಿತು ನಾವು ಚಿಂತಿಸಬೇಕು. ವಾರವಾರವೂ ವೇತನಕೊಡುತ್ತಿದ್ದರೆ ಜನರಿಗೆ ಸೋಮಾರಿತನವು ಹೆಚ್ಚಿ ಆತ್ಮಾವಲಂಬನ ಗುಣವು ತಗ್ಗುವುದು. ಆತ್ಮಾವಲಂಬನ ಅಥವಾ ಚೈತನ್ಯವು ನಷ್ಟವಾಗತಕ್ಕುದನ್ನು ನೀತಿನಷ್ಟಕಾರಕವಾದುದೆಂದೂ ಘೋರವೆಂದೂ ಅಲ್ಲಿಯ ಪ್ರಾಜ್ಞರ ವಾದ.

ದೇಶದ ಜನಸ್ತೋಮವೆಲ್ಲವೂ ಒಂದು ದೊಡ್ಡ ಕುಟುಂಬವಿದ್ದಂತೆ ಇರ ತಕ್ಕುದು ; ಆ ಕಾರಣದಿಂದ ಕ್ಷುಧಾರ್ತರಲ್ಲಿಯೂ ಅಜ್ಞರಲ್ಲಿಯೂ ಪ್ರತಿ ಯೊಬ್ಬರೂ ಅನುಕಂಪಪಡಬೇಕು. ಸುಶಿಕ್ಷಿತನೆಂದೆನಿಸಿದ ಪೌರನು ದೇಶದ ಸ್ಥಿತಿಗತಿಗಳ ಅರಿವನ್ನು ಪಡೆಯದಿರುವುದು ಅಕ್ಷಮ್ಯವಾದುದು ; ಅಸಡ್ಡೆ ಯನ್ನು ತೋರಿದಲ್ಲಿ ಪಾಪಿಯೆಂದೇ ಎನಿಸುವನು. ದೇಶದ ಜನರಲ್ಲಿ ಪ್ರತಿ ಯೊಬ್ಬರೂ ಈ ವಿಷಮಸ್ಥಿತಿಯಲ್ಲಿ ಅವಲಂಬಿಸಬೇಕಾದ ನೀತಿಯಲ್ಲಿ ಕನಿಷ್ಠಪಕ್ಷ ಅವಲಂಬಿಸತಕ್ಕ ಅಂಶಗಳು ನಾಲ್ಕು :—

1. **ವ್ಯರ್ಥವಾದ ವೆಚ್ಚವನ್ನು ಮಾಡದಿರುವುದು.**—ಯೋಗ್ಯತೆ ಮೀರಿ ವೆಚ್ಚಮಾಡುವುದು ದುಷ್ಟವಾದುದೆಂಬುದನ್ನು ಎಲ್ಲರೂ ಅರಿತಿರು ವರು. ಆದಾಗ್ಯೂ ಶಿಕ್ಷಿತರೂ ಅಶಿಕ್ಷಿತರೂ ಭರಿಸಲಾರದಷ್ಟು ವೆಚ್ಚವನ್ನು ಮಾಡುತ್ತಲೇ ಇರುವರು. ಕಾಲಸ್ಥಿತಿಯಲ್ಲಿ ಹೊಸ ರೀತಿ ನೀತಿಗಳು ಜೀವನದ ಪರಿಯಲ್ಲಿ ತೋರಿಕೊಂಡಿವೆ; ದೇಶದಲ್ಲಿ ರೀತಿ ದ್ವಯಗಳ ದ್ವಂದ್ವವು ನಡೆಯುತ್ತಲಿದೆ. ಪಾಶ್ಚಾತ್ಯ ಸಂಸ್ಕೃತಿಯು ತೋರಿಕೊಂಡ ತರುವಾಯ ಸುಲಭವಾಗಿ ಮುಗ್ಧರಾಗಿ ಅನೇಕಾನೇಕ ಭಾರತೀಯರು ಎರಡು ರೀತಿ ಗಳನ್ನು ಕಟ್ಟಿಕೊಂಡು ವಿಚಿತ್ರವಾದ ಅವಸ್ಥೆಯಲ್ಲಿ ಸಿಕ್ಕಿದ್ದಾರೆ. ವ್ಯರ್ಥವಾದ ವೆಚ್ಚದಲ್ಲಿ ಸಿಕ್ಕಿಕೊಂಡು ಸರ್ವನಾಶವನ್ನು ಪಡೆದ ಮನೆಗಳನ್ನು ನಮ್ಮ ನೆರೆಹೊರೆಯಲ್ಲಿಯೇ ಕಾಣಬಹುದು. ಹೆಚ್ಚು ವೆಚ್ಚವನ್ನು ಮಾಡಿ ಅಂತಸ್ತನ್ನು ತೋರುವ ಆಸೆಯನ್ನು ತ್ಯಜಿಸುವುದಲ್ಲದೆ ಪೌರರು ಯೋಗ್ಯತೆಗೆ ಮೀರಿದ ಅಂತಸ್ತಿನ ಜೀವನವನ್ನು ನಡೆಸುವ ಮೋಹವನ್ನು ತೊರೆಯಬೇಕು. ಜೀವನದಲ್ಲಿ ನಮಗೆ ಹಿತಕರವೆನಿಸುವ ಸುಖ ವಿನೋದಗಳಿಗಾಗಿಯೋ ಬಂಧು ಬಳಗದಲ್ಲಿ ಗೌರವಕ್ಕಾಗಿಯೋ ಯೋಗ್ಯತೆಗೆ ತಕ್ಕಂತೆ ವೆಚ್ಚವನ್ನು ಮಾಡು ತ್ತಲೇ ಇರುತ್ತೇವೆ. ಅಂತಹ ವೆಚ್ಚದಲ್ಲಿ ಒಂದು ಬಗೆಯ ವೆಚ್ಚವು ಸಮರ್ಪಕ; ಎರಡು ಬಗೆಗಳ ಮರ್ಯಾದೆಯಾಗಲಿ ವೆಚ್ಚವಾಗಲಿ ಸಹಜವೂ ಅಲ್ಲ, ಗೌರವಪ್ರದವೂ ಅಲ್ಲ. ಉದಾಹರಣೆಗೆ ಮದುವೆ ಮುಂಜಿಗಳಲ್ಲಿ ವಾಲಗ, ಬ್ಯಾಂಡ್ ಎರಡನ್ನೂ ಗೊತ್ತುಮಾಡುವುದೇಕೆ? ಎರಡೂ ಒಟ್ಟಿಗೆ ಧ್ವನಿಮಾಡುವುದು ಕಠೋರವಾಗಿರುವುದೇ ವಿನಾ ಹಿತವಾಗಿರುವುದಿಲ್ಲ. ಅಥವಾ ಬಟ್ಟೆಬರೆಗಳಲ್ಲಿ ಧೋತ್ರವನ್ನುಡಬಹುದು ಅಥವಾ ಷರಾಯಿ

ಧರಿಸಬಹುದು. ಎರಡೂ ಏತಕ್ಕೆ? ಈ ರೀತಿ ದ್ರವ್ಯದಲ್ಲಿ ಲಾಭವಿಲ್ಲ, ಗೌರವ ವಿಲ್ಲ, ಸೊಗಸೂ ಇಲ್ಲ.

ಯೋಗ್ಯತೆ ಮೀರಿ ವೆಚ್ಚ ಮಾಡುವುದರಲ್ಲಿ ಭಾರತೀಯರು ಹೆಸರನ್ನೇ ಪಡೆದಿದ್ದಾರೆ. 500 ರೂಪಾಯಿಗಳ ಸಂಬಳಗಾರನಾದ ಐರೋಪ್ಯನು ಒಬ್ಬಂಟಿಗನಾಗಿಯೇ ಇದ್ದರೂ ಮೋಟಾರ್ ಬಂಡಿಯನ್ನು ಇಟ್ಟು ಕೊಳ್ಳಲು ಹಿಂದು ಮುಂದು ನೋಡುತ್ತಾನೆ. ಆದೇ 500 ರೂಪಾಯಿ ಸಂಬಳವನ್ನು ತರುವ ಭಾರತೀಯ ಗೃಹಸ್ಥನು ಮನೆಯಲ್ಲಿ ಇಪ್ಪತ್ತು ಜನರನ್ನು ಪೋಷಿಸುವ ಸ್ಥಿತಿಯಲ್ಲಿಯೂ ಹೆಚ್ಚು ಯೋಚನೆಯಿಲ್ಲದೆ ದೊಡ್ಡ ಮೋಟಾರ್ ಬಂಡಿಯನ್ನು ಕೊಂಡುಕೊಳ್ಳುತ್ತಾನೆ. ದೇಶದ ಸ್ಥಿತಿಯಲ್ಲಿ ಯಾವ ಭಾರತೀಯನಿಗೂ ದುಂದು ವೆಚ್ಚಗೊಳಿಸಲು ಅವಕಾಶವಿಲ್ಲ.

ಪ್ರತಿ ಪೌರನೂ ತನ್ನ ಕೈಲಾದಮಟ್ಟಿಗೆ ದ್ರವ್ಯವನ್ನು ಉಳಿಸಿಕೊಂಡು ಯಾವುದಾದರೂ ಬ್ಯಾಂಕಿನಲ್ಲಿಟ್ಟು ಅದರ ಪ್ರಯೋಜನವನ್ನು ಪಡೆಯಬೇಕು. ಇದರಿಂದ ತನಗೆ ಉಪಯೋಗವಾಗುವುದಲ್ಲದೆ ದೇಶಕ್ಕೂ ಹಿತವಾಗುವುದು. ಬ್ಯಾಂಕುಗಳಲ್ಲಿ ಹಣವು ಹೆಚ್ಚಿದಂತೆ ಕೈಗಾರಿಕೆ ವ್ಯಾಪಾರಗಳಿಗೆ ಬಲವು ಹೆಚ್ಚುವುದು. ಸ್ವಾರ್ಥ ದೃಷ್ಟಿಯಿಂದ ಹಣವನ್ನುಳಿಸಿ ಬ್ಯಾಂಕಿನಲ್ಲಿಡುವ ಗೃಹಸ್ಥನಿಂದ ಉದ್ದೇಶ ರಹಿತವಾಗಿಯೇ ದೇಶದ ಮೇಲ್ಮೆಗೆ ಸಹಾಯ ವಾಗುತ್ತದೆ.

2. **ಸ್ವದೇಶೀ ವ್ರತವನ್ನು ಅವಲಂಬಿಸುವುದು.**—ಸ್ವದೇಶೀ ನೀತಿಯೆಂಬುದು ಸಾಮೀಪ್ಯ ನ್ಯಾಯದ ಅಂಶ ಮಾತ್ರ. ತನಗೆ ಬೇಕಾದ ವಸ್ತುವನ್ನೋ ಪ್ರಯೋಜನವನ್ನೋ ಪಡೆಯುವ ಪ್ರಯತ್ನದಲ್ಲಿ ದೂರದಲ್ಲಿರು ವವರನ್ನು ಕಟ್ಟಿಕೊಳ್ಳದೆ ಸಮೀಪದಲ್ಲಿರುವವರನ್ನು ಕಟ್ಟಿಕೊಳ್ಳುವುದು ಸ್ವದೇಶೀ ಧರ್ಮ. ನಮ್ಮ ಜೀವನದಲ್ಲಿ ಎಷ್ಟೋ ವಸ್ತುಗಳನ್ನು ನಾವು ಆಶಿಸಿ ಕೊಂಡುಕೊಳ್ಳುತ್ತೇವೆ. ಆ ಕೊಳ್ಳಾಟದಲ್ಲಿ ದೇಶವನ್ನು ಮರೆಯು ವುದು ಯಾರಿಗೂ ಉಚಿತವಲ್ಲ. ವಿದೇಶೀ ವಸ್ತುಗಳು ಅಗ್ಗವಾಗಿಯೂ ಉತ್ತಮವಾಗಿಯೂ ಇರಬಹುದಾದರೂ ಸ್ವದೇಶೀ ವ್ರತವನ್ನವಲಂಬಿಸಿ ದಾಗ ಪ್ರಿಯವಾದರೂ ಸ್ವದೇಶೀ ವಸ್ತುಗಳನ್ನೇ ಹೆಮ್ಮೆಯಿಂದ ಕೊಂಡು ಕೊಂಡು ಉಪಯೋಗಿಸಬೇಕು. ಪ್ರಾಜ್ಞನಾದ ಪೌರನಿಗೆ ಈ ವಿಷಯದಲ್ಲಿ

ಇತರರಿಗೆ ದಾರಿ ತೋರಿಸಿ ಆದರ್ಶವನ್ನು ಕಟ್ಟುವ ಕರ್ತವ್ಯದ ಭಾರ ವುಂಟು. ಸ್ವದೇಶೀ ನೀತಿಯನ್ನು ಅನುಸರಿಸಿದಾತನು ತನ್ನ ದೇಶದವನು ತಾನೆಂದು ತೋರುತ್ತಾನೆ; ದೇಶಕ್ಕೆ ಹಿತಚಿಂತೆಯನ್ನು ಮಾಡತಕ್ಕವ ನಾಗಿರುತ್ತಾನೆ. ಇದು ಅಪರೂಪವೆನಿಸತಕ್ಕ ಗುಣವಲ್ಲ; ಸರ್ವಸಾಧಾರಣ ವಾಗಿರತಕ್ಕ ಲಕ್ಷಣ ಮಾತ್ರ. ಐರೋಪ್ಯರೆಲ್ಲರೂ ಸಾಮಾನ್ಯವಾಗಿ ಈ ಲಕ್ಷಣವನ್ನು ತೋರುತ್ತಾರೆ. ಇಂಗ್ಲೀಷಿನವನು ಇಂಗ್ಲೀಷಿನವನ ಅಂಗಡಿಯನ್ನೇ ಹುಡುಕಿಕೊಂಡು ಹೋಗುವುದಲ್ಲದೆ ಫರಾನ್ಸಿ ಅಥವಾ ಜಪಾನೀ ವಸ್ತುವಿಗಿಂತ ಪ್ರಿಯವಾಗಿದ್ದರೂ ಹೀನವಾಗಿದ್ದರೂ ಇಂಗ್ಲೀಷ್ ಪದಾರ್ಥವನ್ನೇ ಬಯಸುತ್ತಾನೆ.

ಇತ್ತೀಚಿಗೆ ಪಾಶ್ಚಾತ್ಯ ದೇಶಗಳಲ್ಲಿ ಆರ್ಥಿಕ ರಾಷ್ಟ್ರೀಯತೆ (Economic Nationalism)ಯೆಂಬ ಒಂದು ನೀತಿಯು ತೋರಿಕೊಂಡಿದೆ. ಪ್ರತಿಯೊಂದು ರಾಷ್ಟ್ರವೂ ಆರ್ಥಿಕ ರೀತಿಯಲ್ಲಿ ಸರ್ವಸಿದ್ಧತೆಯನ್ನು ಪಡೆಯತಕ್ಕದ್ದೆಂಬ ಉದ್ದೇಶದಿಂದ ಆ ಜನರಾಶಿಗಳವರು ಅನ್ಯದೇಶಗಳ ಆರ್ಥಿಕ ಸಂಬಂಧವನ್ನೇ ತೊಡೆದು ಹಾಕುವುದಕ್ಕೆ ಸನ್ನದ್ಧರಾಗಲು ಪ್ರಯತ್ನ ಮಾಡುತ್ತಿದ್ದಾರೆ. ಇದಕ್ಕೂ ಸ್ವದೇಶೀ ವ್ರತಕ್ಕೂ ಭೇದವುಂಟು. ಸ್ವದೇಶೀ ನೀತಿಯಲ್ಲಿ ಇತರ ದೇಶಗಳ ಸಂಪರ್ಕ ಸಂಬಂಧಗಳನ್ನು ಮೂರ್ಖತೆಯಿಂದ ಬಹಿಷ್ಕರಿಸುವ ಅಂಶವಿಲ್ಲ. ಸ್ವದೇಶೀ ನೀತಿಯನ್ನು ಪಾಲಿಸುವಾಗ ತನ್ನ ದೇಶದಲ್ಲಿ ಸಿದ್ಧವಾಗದಿರುವ ವಸ್ತುವನ್ನು ಪರದೇಶದಿಂದ ಪಡೆಯುವುದು ದುಷ್ಟವೆಂದೆನಿಸುವುದಿಲ್ಲ. ಮೋಟಾರು ಬಂಡಿಗಳು, ಗಡಿಯಾರಗಳು, ಯಂತ್ರಗಳು, ಪುಸ್ತಕಗಳು ಮುಂತಾದ ವಸ್ತುಗಳು ಸ್ವದೇಶದಲ್ಲಿ ಸಿದ್ಧ ವಾಗದಿರುವಾಗ್ಗೆ ಭಾರತೀಯರು ಪರದೇಶಗಳಿಂದ ಕೊಳ್ಳಲೇಬೇಕು. ಆದರೆ ದೇಶದಲ್ಲಿ ಒಂದು ವಸ್ತುವನ್ನು ಸಿದ್ಧಗೊಳಿಸಲು ಪ್ರಯತ್ನ ನಡೆಯುತ್ತಿದ್ದರೆ ಆ ವಸ್ತುವನ್ನೇ ಹುಡುಕಿಕೊಂಡು ಆ ಪ್ರಯತ್ನಕ್ಕೆ ಸಹಾಯಮಾಡುವುದು ಸ್ವದೇಶೀ ಧರ್ಮ. ಬೆಂಕಿ ಪೆಟ್ಟಿಗೆಗಳನ್ನು ಸ್ವೀಡೆನ್ನಿನಿಂದಲೋ ಜಪಾನಿ ನಿಂದಲೋ ಕೊಳ್ಳುತ್ತಿದ್ದೆವು; ನಮ್ಮ ದೇಶದಲ್ಲಿಯೇ ಆ ವಸ್ತುವು ಸಿದ್ಧ ವಾದಾಗ ನಾವು ಸ್ವದೇಶೀ ವಸ್ತುವನ್ನೇ ಕೊಳ್ಳಬೇಕು. ಜೋಡುಗಳು, ಬಿಸ್ಕತ್, ಚಾಕೊಲೆಟ್ ಮುಂತಾದ ಆಹಾರವಸ್ತುಗಳು, ವಸ್ತ್ರಗಳು,

ಅಲಂಕಾರ ಸಾಮಗ್ರಿ ಮುಂತಾದ ಪರದೇಶೀ ವಸ್ತುಗಳನ್ನು ಕೊಂಡು ಕೊಳ್ಳುವುದು ಭಾರತೀಯರಿಗೆ ಯುಕ್ತವಾದುದಲ್ಲ. "ಮಾಂಚೆಸ್ಟರ್ ಬಟ್ಟೆಯನ್ನು ನಾವು ಕೊಂಡುಕೊಳ್ಳದಿದ್ದರೆ ಅಲ್ಲಿ ಜನರಿಗೆ ಗಿರಾಕಿ ತಪ್ಪಿ ನಮ್ಮಿಂದ ಹಿಂಸೆಯಾಗುವುದಿಲ್ಲವೆ?" ಎಂಬ ಪ್ರಶ್ನೆಯೂ, ಸ್ವದೇಶೀ ವ್ರತ ಧಾರಿಯನ್ನು ಕಂಡು "ನಿಮ್ಮ ಗಡಿಯಾರ ಪರದೇಶಿಯಲ್ಲವೇ?" ಎಂದು ಅಪಹಾಸ್ಯಮಾಡುವ ಪ್ರಯತ್ನವೂ ಎರಡೂ ದುಷ್ಟವಾದಗಳೇ; ಕುತ್ಸಿತ ವಾದವೇ ವಿನಾ ಸಾಧುವಾದವಲ್ಲ. ಇವುಗಳಲ್ಲಿ ಅಡಗಿರುವ ಮೋಹಾಂಧತೆ ಗಿಂತಲೂ ಸ್ವದೇಶೀ ನೀತಿಗೆ ಬಾಹಿರನಾದವನನ್ನು ದ್ರೋಹಿಯೆಂದೋ ಭ್ರಷ್ಟನೆಂದೋ ತೀರ್ಮಾನಿಸುವ ಆಗ್ರಹದಲ್ಲಿ ಗೌರವವುಂಟು.

ಸ್ವದೇಶೀ ನೀತಿಯನ್ನು ವಿವರಿಸುತ್ತ ಒಂದಾನೊಂದು ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿಯವರು ಹೇಳಿದ ವಾಕ್ಯಗಳು ಚಿರಸ್ಮರಣೀಯ ವಾಗಿವೆ:—

"ಸಮೀಪಸ್ಥನ ಹಿತವನ್ನು ಅಸಡ್ಡೆಮಾಡಿ ದೂರಸ್ಥನ ಸೇವೆಯನ್ನು ನಾನು ಮಾಡ ಕೂಡದು. ಇದರಲ್ಲಿ ದ್ವೇಷವಿಲ್ಲ, ಅಸೂಯೆಯಿಲ್ಲ, ದಂಡಿಸುವ ಉದ್ದೇಶವಿಲ್ಲ. ಯಾವ ತೆರದ ಸಂಕುಚಿತ ಬುದ್ಧಿಯೂ ಇದರಲ್ಲಿಲ್ಲ; ಏಕೆಂದರೆ ನನ್ನ ಅಭಿವೃದ್ಧಿಗೆ ಬೇಕಾದಂತಹ ವಸ್ತುವನ್ನು ಪೃಥ್ವಿಯ ಯಾವ ಭಾಗದಿಂದಲಾದರೂ ತರಿಸಿಕೊಳ್ಳುವೆನು. ನನಗೆ ಹಿತವಲ್ಲದ, ಅಥವಾ ಜನ್ಮತಃ ನನಗೆ ಸಮೀಪಸ್ಥರಾದವರಿಗೆ ಹಿತವಲ್ಲದ, ವಸ್ತುವು ಎಷ್ಟು ಸೊಗಸಾಗಿದ್ದರೂ ನಾನು ಅದನ್ನು ಕೊಂಡುಕೊಳ್ಳುವುದಿಲ್ಲ. ಉಪಯುಕ್ತವಾದ ಪುಸ್ತಕಗಳನ್ನು ನಾನು ಪೃಥ್ವಿಯ ಯಾವ ಮೂಲೆಯಿಂದಲಾದರೂ ತರಿಸಿಕೊಳ್ಳುವೆನು. ಚಿಕಿತ್ಸೆಗೆ ಬೇಕಾದ ಶಸ್ತ್ರ ಸಾಮಗ್ರಿಯನ್ನು ಇಂಗ್ಲಂಡಿನಿಂದ ಕೊಳ್ಳುತ್ತೇನೆ, ಗುಂಡುಸೂಜಿಗಳನ್ನೂ ಸೀಸದಕಡ್ಡಿಗಳನ್ನೂ ಆಸ್ಟ್ರಿಯದಿಂದ ಕೊಳ್ಳುತ್ತೇನೆ, ಗಡಿಯಾರಗಳನ್ನು ಸ್ವಿಟ್ಜರ್ಲೆಂಡಿನಿಂದ ತರಿಸಿಕೊಳ್ಳುತ್ತೇನೆ. ಆದರೆ ಎಷ್ಟು ದಿವ್ಯವಾಗಿದ್ದರೂ ಇಂಗ್ಲಂಡಿನಿಂದಲಾಗಲಿ, ಜಪಾನಿನಿಂದಲಾಗಲಿ, ಮತ್ತಾವ ದೇಶದಿಂದಲಾಗಲಿ ಬರುವ ಹತ್ತಿ ಬಟ್ಟೆಯಲ್ಲಿ ಒಂದಂಗುಲದಷ್ಟನ್ನು ಕೂಡ ನಾನು ಕೊಳ್ಳಲೊಲ್ಲೆ. ಏಕೆಂದರೆ ಹಾಗೆ ಮಾಡುವುದರಿಂದ ನನ್ನ ಒಡನಾಡಿಗಳಾಗಿರುವ ಲಕ್ಷಾಂತರ ಜನರಿಗೆ ಅಹಿತವಾಗಿರುವುದಲ್ಲದೆ ಮುಂದೆ ಇನ್ನೂ ಹೆಚ್ಚಿನ ಆಪತ್ತನ್ನೇ ತಂದಿಟ್ಟಂತಾಗುವುದು. ಕೋಟಿಗಟ್ಟಲೆ ದಟ್ಟದರಿದ್ರರಾಗಿರುವ ಭಾರತೀಯರು ನೂತು ನೆಯ್ದ ವಸ್ತ್ರವನ್ನು

ಕೊಳ್ಳಲೊಲ್ಲೆನೆನ್ನುತ್ತ ಅದಕ್ಕಿಂತಲೂ ಉತ್ತಮವಾಗಿರಬಹುದಾದ ವಿದೇಶೀ ವಸ್ತ್ರವನ್ನು ಕೊಂಡುಕೊಳ್ಳುವುದು ಪಾಪಕೃತ್ಯವೆಂದೇ ನನ್ನ ಮತ."

ಇಷ್ಟನ್ನು ಹೇಳಿದವರೇ ಮುಂದೆ ಎಚ್ಚರಿಕೆಯ ಮಾತನ್ನೂ ಹೇಳಿ ಸ್ವದೇಶೀ ನೀತಿಯ ಎಲ್ಲೆಯನ್ನು ಸೂಚಿಸಿದ್ದಾರೆ:—

"ಪರದೇಶೀ ಕೈಗಾರಿಕೆಗಳನ್ನು ಪರದೇಶಿಯಾದ ಮಾತ್ರಕ್ಕೇ ಬಹಿಷ್ಕರಿಸಿ, ದೇಶಕ್ಕೆ ಯುಕ್ತವಲ್ಲದ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವ ಪ್ರಯತ್ನದಲ್ಲಿ ತೊಡಗಿ ದೇಶದ ಹಣವನ್ನೂ ಕಾಲವನ್ನೂ ವ್ಯರ್ಥಗೊಳಿಸುವುದು ಅಕ್ಷಮ್ಯವಾದ ಮತ್ತು ದಂಡನೀಯವಾದ ಮೂರ್ಖತೆ; ಅದು ಸ್ವದೇಶೀ ತತ್ವಕ್ಕೆ ವಿರುದ್ಧವಾದುದು."

3. **ಬಡಬಗ್ಗರಿಗೆ ದಾನಮಾಡುವುದು.**—ಪ್ರತಿ ಪೌರನೂ ತನ್ನ ಶಕ್ತ್ಯನುಸಾರವಾಗಿ ದಾನಮಾಡಬೇಕು. ದಾನವೆನ್ನುವುದು ಸತ್ಪಾತ್ರದಲ್ಲಿ ನಡೆಯದಿದ್ದರೆ ವ್ಯರ್ಥವಾಗುವುದು. ಆದುದರಿಂದ ಪಾತ್ರಪರಿತ ಅಥವಾ ವಿವೇಚನಾಯುಕ್ತವಾದ ದಾನವು ನಡೆಯಬೇಕು. ದಾನದಲ್ಲಿ ವಿವೇಚನೆಯಂತೆ ಮನಶ್ಶುದ್ಧಿಯೂ ಇರಬೇಕು. ದಾನಮಾಡುವಾತನು ತಾನು ದಾನಿಯೆಂಬ ಹೆಮ್ಮೆಯಿಂದ ಕೊಟ್ಟ ಪಕ್ಷದಲ್ಲಿ ಇಬ್ಬರಿಗೂ ಕೇಡನ್ನುಂಟು ಮಾಡುವುದು; ದಾನಿಗೆ ಹೆಮ್ಮೆಯೂ ಅರ್ಥಿಗೆ ನೋವೂ ಉಂಟಾಗುವುವು. ಹಿಂದೂ ಧರ್ಮವಾಗಲಿ ಇಸ್ಲಾಮೀ ಧರ್ಮವಾಗಲಿ ವಿಧಿಸುವಂತೆ ದಾನವನ್ನು ಪರಮಾತ್ಮನಲ್ಲಿ ಅರ್ಪಣೆಯೆಂದು ಭಾವಿಸತಕ್ಕದ್ದೇ ವಿನಾ ಅನ್ಯಥಾ ಭಾವಿಸಬಾರದು. ದಾನದಿಂದ ಗುಣ ಶುದ್ಧಿಯಾಗಬೇಕು; ದುರ್ಗುಣ ವೃದ್ಧಿಗೆ ಆಸ್ಪದಕೊಡತಕ್ಕದ್ದು ದಾನವಲ್ಲ. ಬೀದಿಗಳಲ್ಲಿ ಸುಳಿದಾಡುವ ಭಿಕ್ಷುಕರಿಗೆ ಪ್ರತ್ಯಕ್ಷವಾಗಿಯೋ, ಧರ್ಮಕೆಲಸವನ್ನು ನೆರವೇರಿಸುವ ಒಂದು ಸಂಸ್ಥೆಗೆ ಹಣ ಕಳುಹಿಸಿ ಪರೋಕ್ಷವಾಗಿಯೋ, ಕೊಟ್ಟ ದಾನವೆಲ್ಲವೂ ಸ್ವದೇಶಮಾತೆಯು ಒಡ್ಡಿದ ಸೆರಗಿನಲ್ಲಿ ಅರ್ಪಿಸಿದ ಕಾಣಿಕೆಯಂತೆಯೇ ಪರಿಣಮಿಸುವುದು. ದ್ವಾತ್ರಿಂಶದ್ದಾನಗಳ ಸಂಪ್ರದಾಯವನ್ನುಳ್ಳ ಹಿಂದೂಗಳೂ, ವರಮಾನದಲ್ಲಿ ನಲವತ್ತನೆ ಭಾಗವನ್ನು ದಾನಕ್ಕೆ ಮೀಸಲಾಗಿಡುವ ಮುಸಲ್ಮಾನರೂ, ದಾನ ಗುಣವನ್ನು ಮೆಚ್ಚುವ ಈಸಾಯಿ ಜನರೂ, ಇತರರೂ ತಮ್ಮಲ್ಲಿ

**ಪರಂಪರೆಯಾಗಿ** ನಡೆದುಬಂದಿರುವ ದಾನಧರ್ಮ ಪದ್ಧತಿಗಳನ್ನು ಎಂದಿಗೂ ಕಳೆದುಕೊಳ್ಳತಕ್ಕದ್ದಲ್ಲ.

4. ದೇಶದ ಸದ್ಯಃಸ್ಥಿತಿಯಲ್ಲಿ ನಿತ್ಯಕ್ಷಾಮವಿದ್ದಂತೆಯೇ ಬಹು ಜನರಿಗೆ ಇರುವುದಲ್ಲದೆ ಆಗಾಗ್ಗೆ ಅಂಟುರೋಗ ಪ್ರಬಲಿಸಿಯೋ ಕ್ಷಾಮ ತೋರಿಯೋ ಪ್ರವಾಹ ಬಂದೋ ಲಕ್ಷಾಂತರ ಜನರಿಗೆ ವಿಪತ್ಕಾರಕವಾಗುತ್ತಿರುವುದು. ಅಂತಹ ಅನಾಹುತಗಳು ಸಂಭವಿಸಿದಾಗ **ನಿವಾರಣೋದ್ಯಮ**ದಲ್ಲಿ ಪ್ರತಿಪೌರನೂ ತನ್ನ ಚೈತನ್ಯಕ್ಕನುಗುಣವಾಗಿ ಆ ಕಷ್ಟವನ್ನು ತಾನೂ ಕಟ್ಟಿಕೊಂಡು ಕೈಲಾದ ಸಹಾಯವನ್ನು ಅರ್ಪಿಸತಕ್ಕುದು ಸಹಜವಾದ ಧರ್ಮ. ದೇಶವೆಲ್ಲವೂ ಒಂದೇ ಆದಕಾರಣ ಇತ್ತ ಮಲೆಯಾಳದಲ್ಲಿ ಪ್ರವಾಹ ಬಂದು ಮನೆಮಾರುಗಳು ಕೊಚ್ಚಿಕೊಂಡು ಹೋದಾಗಲೂ, ಬಿಹಾರಿನಲ್ಲಿ ಭೂಕಂಪದ ಅನಾಹುತವು ಸಂಭವಿಸಿದಾಗಲೂ ಅದನ್ನು ತನ್ನ ಮನೆಯಲ್ಲಿ ತೋರಿದ ವಿಪತ್ತಿನಂತೆಯೇ ಭಾವಿಸಿ ನೆರವಾಗಬೇಕು. ದೇಶದಲ್ಲಿ ಅಂತಹ ಅನಾಹುತಗಳು ಸಂಭವಿಸಿದಾಗ ಅಲಕ್ಷ್ಯವನ್ನು ತೋರಿ ತನ್ನ ಸ್ವಾರ್ಥದಲ್ಲಿ ತಾನು ಮುಳುಗಿರುವಾತನು ಮಾನವ ವರ್ಗಕ್ಕೇ ಸೇರಿದವನಲ್ಲ. ಅಂತಹ ಆಕಸ್ಮಿಕ ಘಟನೆಗಳು ಸಂಭವಿಸಿದಾಗ ಸರ್ಕಾರದವರೂ ಪ್ರಜಾವರ್ಗದವರೂ ಏಕೀಭವಿಸಿ ಪರಿಹಾರೋಪಾಯವನ್ನು ನಡೆಸಬೇಕು. ಆದರೆ ಸರ್ಕಾರದಿಂದ ಕಾರ್ಯನಿರ್ವಾಹವು ಎಂದಿಗಾದರೂ ನಿದಾನ; ಆದ್ದರಿಂದ ಪ್ರಜಾಪ್ರಯತ್ನವೇ ಮುಂದಾಗಿರಬೇಕು.

ಈ ನಾಲ್ಕಂಶಗಳು ಸರ್ವಸಾಮಾನ್ಯ; ಸಾರ್ವತ್ರಿಕವಾಗಿ ಸರ್ವಕಾಲಗಳಲ್ಲಿಯೂ ಅನುಸರಣೀಯವಾದವು. ದೇಶದಲ್ಲಿ ಘೋರವಾಗಿ ವ್ಯಾಪಿಸಿ ಪ್ರಬಲಿಸಿರುವ ದಾರಿದ್ರ್ಯವು ಇವುಗಳಿಂದ ಪರಿಹಾರವಾಗುವುದಿಲ್ಲ. ಪರಿಹಾರ ಸಿದ್ಧಿಗೆ ಅಸಾಧಾರಣ ಪ್ರಯತ್ನಗಳೇ ಅವಶ್ಯ. ಆ ಪ್ರಯತ್ನಗಳಲ್ಲಿ ಪ್ರತಿಪೌರನೂ ಭಾಗಿಯಾಗಬೇಕು. ದೇಶದ ಆರ್ಥಿಕ ಪರಿಸ್ಥಿತಿಯನ್ನರಿತು ಉದ್ಧಾರೋದ್ಯಮದಲ್ಲಿ ಪ್ರತಿಪೌರನೂ ತೊಡಗಲು ಆತುರನಾಗಿರಬೇಕು. ಸಮಸ್ತ ದೇಶವನ್ನೂ ಗ್ರಾಸಗೊಂಡು ಮಹಾಭೂತದಂತಿರುವ ಭಾರತೀಯ ದಾರಿದ್ರ್ಯ ಸಮಸ್ಯೆಯು ಸುಲಭವಾಗಿ ಪೂರ್ತಿಯಾಗತಕ್ಕುದಲ್ಲ.

## 5. ಇತರ ಸಮಸ್ಯೆಗಳು

ಪುರಾತನ, ನೂತನ; ಶಿಶುಹತ್ಯೆ; ಸಹಗಮನ; ಬಾಲ್ಯವಿವಾಹ; ಬಾಲ್ಯವೈಧವ್ಯ: ವೈಧವ್ಯ ಗೌರವ, ವಿಚಾರಭ್ರಾಂತಿ, ಸ್ತ್ರೀನ ಅಧಿಕಾರ, ದಾಂಪತ್ಯ ವಿಚ್ಛೇದ, ಸಹಜಮಾರ್ಗ; ಪರದಾ, ಶಿಕ್ಷಣ ಚಿಕಿತ್ಸೆ; ಪಾಶ್ಚಾತ್ಯ ವೈಖರಿಯ ದೋಷಗಳು; ಅನಾಗರಿಕ ಕುಲಗಳು, ಸಂಸ್ಕಾರಸಿದ್ಧಿಯ ನೀತಿ; ಹರಿಜನರ ಉದ್ಧಾರ; ಜಾತಿಭೇದಗಳು, ವರ್ಣಸಮಸ್ಯಾಪೂರಣ, ಜೀವಿಕಶಾಂತಿ, ಅನ್ಯೋನ್ಯತೆ, ಸಮತೆ, ಸ್ಥಿರತೆ, ಜಾತಿ-ವರ್ಗ, ಜಾತಿ-ಗೌರವ, ಜಾತಿ-ಶಿಷ್ಟಿ, ಅಭಿವೃದ್ಧಿಮಾರ್ಗ, ಆರ್ಥಿಕ ಸಮಾಧಾನ, ಶ್ರೇಷ್ಠತಾ ನಿರ್ಣಯ, ಚಿರಾಯುಷ್ಯ ಸಾಧಕ, ಭಿನ್ನತಾವೃದ್ಧಿ, ಸಾರಾಂಶ, ಅವಿಚಾರ, ದುಷ್ಟ ಆಕ್ಷೇಪ, ದುರ್ಲಕ್ಷಣಗಳು, ದೋಷ ನಿರ್ಣಯ, ಮುಖ್ಯ ದೋಷಗಳು, ಪೌರಕ್ಷೇತ್ರದಲ್ಲಿ ಹಾನಿ, ನರಕ ಸೃಷ್ಟಿಯ ಅಪಾಯ, ವ್ಯಕ್ತಿಯ ದೃಷ್ಟಿ; ವಿಚಾರವು ಅವಶ್ಯ: ಅವಿಭಕ್ತ ಕುಟುಂಬ, ದುರ್ಬಲ ಆಕ್ಷೇಪಗಳು, ಕಾಠಿನ್ಯ ಲೋಪ; ಭಿಕ್ಷಾವೃತ್ತಿ; ಅಪರಾಧ; ಭಾರತೀಯ ವೈಶಿಷ್ಟ್ಯ: ನಗರ ನರಕ, ನಿವಾರಣೋಪಾಯಗಳು; ಮದ್ಯಪಾನ; ಕೋಮು ಕಲಹ; ದೇಶಾಂತರ ನಿವಾಸಿ ಭಾರತೀಯರು; ಭಾರತದ ಗೌರವ.

ಪುರಾತನ-ನೂತನ

ಭಾರತೀಯ ಜನಜೀವನದಲ್ಲಿ ತೋರಿಕೊಂಡಿರುವ ಇತರ ಸಮಸ್ಯೆಗಳು ಅನೇಕಾನೇಕವಾಗಿ ಉಂಟು. ಅವುಗಳನ್ನು ಸಾಧಾರಣ ಮಾತಿನಲ್ಲಿ ಸಾಮಾಜಿಕ ದೋಷಗಳೆಂದು ಕರೆಯುವುದುಂಟು; ಒಂದು ದೃಷ್ಟಿಯಿಂದ ಇರುವ ತೊಡಕುಗಳೆಲ್ಲವನ್ನೂ ಸಾಮಾಜಿಕವೆನ್ನಬಹುದು. ಗತಿಸಿ ಹೋಗಿರುವ ಕಾಲದಲ್ಲಿ ಕಾರಣಾಂತರಗಳಿಂದ ತೋರಿಕೊಂಡು ಇತ್ತೀಚಿಗೆ ಇನ್ನೂ ಪ್ರಬಲಗೊಂಡಿರತಕ್ಕ ವಿಚಾರಗಳು ಕೆಲವುಂಟು; ಇತ್ತೀಚಿನ ಕಾಲದಲ್ಲಿಯೇ ನೂತನವಾಗಿ ತೋರಿಕೊಂಡ ವಿಚಾರಗಳು ಬೇರೆ ಕೆಲವುಂಟು. ಶಿಶುಹತ್ಯೆ, ಬಾಲ್ಯವಿವಾಹ, ಬಾಲ್ಯವೈಧವ್ಯ, ಪರದಾ, ಮೂಢಾಚಾರಗಳು, ಅಸ್ಪೃಶ್ಯತೆ ಮುಂತಾದವುಗಳನ್ನು ಪುರಾತನ ಸಮಸ್ಯೆಗಳೆಂದೂ, ತಿರುಪ, ಮಾದಕಪದಾರ್ಥಗಳ ಸೇವನೆ, ನಗರ ನರಕಗಳು, ಕೋಮುಗಳ ಕಿತ್ತಾಟ, ಗ್ರಾಮಗಳ ಕ್ಷೀಣತೆ, ದೇಶಾಂತರವಾಸಿಗಳಾದ ಭಾರತೀಯರು ಮುಂತಾದ ವಿಚಾರಗಳನ್ನು ನೂತನ ಸಮಸ್ಯೆಗಳೆಂದೂ ಭಾವಿಸಬಹುದು. ಭಾರತೀಯರ ಪರಿಸ್ಥಿತಿಯಲ್ಲಿ ಇವುಗಳಲ್ಲದೆ ಇನ್ನೂ

ಬೇರೆ ತೊಡಕುಗಳಿದ್ದರೂ ಸದ್ಯಃ ನಾವು ಇಷ್ಟನ್ನು ಸ್ಥೂಲರೀತಿಯಲ್ಲಿ ಕಾಣಬೇಕು.

ಶಿಶುಹತ್ಯೆ

ಅರುವತ್ತು ಎಪ್ಪತ್ತು ವರ್ಷಗಳ ಹಿಂದೆ ಶಿಶುಹತ್ಯವು ಕೆಲವು ಕುಲಸ್ಥರಲ್ಲಿ ವಿಶೇಷವಾಗಿ ಬಳಕೆಗೊಂಡಿತ್ತು. ಉತ್ತಮವೆನಿಸಿದ ಕುಲಗಳಲ್ಲಿ ಹೆಣ್ಣುಮಕ್ಕಳು ಹುಟ್ಟಿದಾಗ ವಿವಾಹಾನುಕೂಲ್ಯತೆಯಿಲ್ಲದಿದ್ದುದರಿಂದ ಹುಟ್ಟಿದ ಕಾಲದಲ್ಲಿಯೇ ವಧಿಸಿಬಿಡುತ್ತಿದ್ದರು. ಇತ್ತೀಚಿಗೆ ಈ ಘೋರ ಪದ್ಧತಿಯು ಮಾಯವಾಗಿದೆ. ಶಿಶುಹತ್ಯಗಳು ಅಲ್ಲಲ್ಲಿ ನಡೆಯುವುದೇನೋ ಉಂಟು. ಅದಕ್ಕೆ ಬಡತನವೊಂದು ಕಾರಣ; ಮತ್ತೊಂದು ಕಾರಣ ವೈಜಾತ್ಯ ಅಥವಾ ನೀತಿಭ್ರಷ್ಟತೆ. ಸರಕಾರದ ಅಧಿಕಾರಿಗಳ ಜಾಗ್ರತಿಯೂ ಇತರ ವಿಷಯಗಳಲ್ಲಿ ಮೇಲ್ಮೆಯೂ ಹೆಚ್ಚಿದಂತೆ ಶಿಶುಹತ್ಯವೂ ತಗ್ಗುವುದು. ಯಾವ ರಾಷ್ಟ್ರದಲ್ಲಿಯಾದರೂ ಶಿಶುಹತ್ಯಗಳಿಗೆ ಅವಕಾಶವಿರಲಾಗದು; ಶಿಶುಹತ್ಯವೆಂಬುದು ರಾಷ್ಟ್ರಸಮ್ಮುಖದಲ್ಲಿ ನಡೆದ ಮಹಾಪರಾಧವಾಗಿ ಗಣ್ಯವಾಗತಕ್ಕುದು.

ಸಹಗಮನ

ಸತಿ ಅಥವಾ ಸಹಗಮನವೆಂಬುದು ಸದ್ಯದಲ್ಲಿ ಪ್ರಬಲವಾದ ಸಮಸ್ಯೆಯಲ್ಲ. ನೂರು ವರ್ಷಗಳಿಗೆ ಹಿಂದೆ ಘೋರ ರೂಪವನ್ನು ತಾಳಿತ್ತು. ಇತ್ತೀಚೆಗೆ ಮಾಯವಾಗಿದ್ದಾಗ್ಯೂ ಭಾರತೀಯ ಜನಜೀವನವನ್ನು ವಿಚಾರ ಸಹಿತವಾಗಿ ತಿಳಿಯಲು ಆಸಕ್ತಿಯುಳ್ಳಾತನು ಸಹಗಮನದ ವಿಷಯವನ್ನು ತಿಳಿದುಕೊಳ್ಳಬೇಕು.

ಬಾಲ್ಯ ವಿವಾಹ

ಬಾಲ್ಯ ವಿವಾಹವಿಲ್ಲದೆ ಬಾಲ್ಯ ವೈಧವ್ಯವಿರುವುದಿಲ್ಲ. ನಮ್ಮ ದೇಶದಲ್ಲಿ ಎರಡೂ ಉಂಟು. ಹುಟ್ಟುವುದಕ್ಕೆ ಮೊದಲೇ ವೈಧವ್ಯವನ್ನು ಪಡೆಯುವ ಯೋಗವು ಇಡೀ ಪೃಥ್ವಿಯಲ್ಲಿ ಮತ್ತಾವ ದೇಶದಲ್ಲಿಯೂ ಇಲ್ಲ. ಬಾಲ್ಯವಿವಾಹ ವಿಚಾರವು ಪುನಃಪುನಃ ಚರ್ಚೆಗೆ ಒಳಗಾಗಿದೆ. ಅನೇಕರು ಸುಧಾರಣೆಗೆ ಆತುರರಾಗಿಯೂ ಇದ್ದಾರೆ. ಸದ್ಯಃಸ್ಥಿತಿಯಲ್ಲಿ ಈ ಘೋರ ಪದ್ಧತಿಯು ಕೆಲವು ಜಾತಿಗಳಲ್ಲಿ ಮಾತ್ರ ಇರುವ ಅಂಶವನ್ನೂ, ಕಾಲ

ಗತಿಯಲ್ಲಿ ಸುಧಾರಣೆಯು ತಲೆದೋರುತ್ತಿರುವ ಅಂಶವನ್ನೂ ನಾವು ಮನಸ್ಸಿನಲ್ಲಿಡಬೇಕು. ಶೈಶವದಲ್ಲಿ ಅಥವಾ ಬಾಲ್ಯದಲ್ಲಿ ವೈಧವ್ಯ ಪ್ರಾಪ್ತಿಯಾಗುವುದು ಯಾವ ಧರ್ಮಕ್ಕೂ ಅನುಸಾರವಾದುದಲ್ಲ. ಶುಷ್ಕಾಚಾರ ವಿಚಾರಗಳನ್ನು ಧರ್ಮ ತತ್ವಗಳಿಂದ ಬೇರ್ಪಡಿಸುವ ವಿವೇಚನಾಶಕ್ತಿಯು ಜನರಿಗೆ ಉಂಟಾದಂತೆಲ್ಲ ಈ ದೋಷವು ತಾನಾಗಿಯೇ ಮಾಯವಾಗುವಂತಹುದು.

ಬಾಲ್ಯ ವೈಧವ್ಯ

ಬಾಲ್ಯದಲ್ಲಿ ವೈಧವ್ಯವನ್ನು ಕಟ್ಟಿಕೊಳ್ಳುವ ಆಚಾರವಲ್ಲದೆ ವಿಧವೆಯರಿಗೆ ಮುಂಡನಾದಿಗಳನ್ನು ವಿಧಿಸಿ ಅವರ ಜೀವನದಲ್ಲಿ ಉಲ್ಲಾಸ ಲೇಶವೂ ಇಲ್ಲದಿರುವಂತೆ ನಿರ್ಬಂಧಪಡಿಸುವ ಆಚಾರವೂ ದುಷ್ಟವೆನ್ನಿಸಿದೆ. ಈ ಆಚಾರವು ಉತ್ತಮ ಜಾತಿಗಳಲ್ಲಿಯೇ ಅವಲಂಬ್ಯವಾಗಿದೆ; ಪಟ್ಟಣಗಳಲ್ಲಿ ಶಿಥಿಲವಾದಂತೆ ತೋರಿದರೂ ಗ್ರಾಮಾಂತರಗಳಲ್ಲಿ ಇನ್ನೂ ಪ್ರಬಲವಾಗಿಯೇ ಇದೆ. 'ಪತ್ನಿಯನ್ನು ಕಳಕೊಂಡ ಗೃಹಸ್ಥನು ಸ್ವತಂತ್ರನಾಗಿರಬಹುದು, ಪತಿಯನ್ನು ಕಳೆದುಕೊಂಡಾಕೆಯು ಜೀವಾವಧಿ ಪರತಂತ್ರದಲ್ಲಿಯೇ ಇರಬೇಕು' ಎನ್ನುವುದರಲ್ಲಿ ನ್ಯಾಯವಿಲ್ಲ. ನೀತಿಯ ಕಟ್ಟು ಸ್ತ್ರೀಪುರುಷರಿಬ್ಬರಿಗೂ ಒಂದೇ ವಿಧವಾಗಿರತಕ್ಕದ್ದು ನ್ಯಾಯವೇ ವಿನಾ ಸ್ತ್ರೀ ಜನ್ಮವೇ ಹೀನವೆಂದು ಭಾವಿಸಿ ನಾನಾಬಗೆಯಾದ ಹಿಂಸೆಗಳನ್ನು ತಂದಿಡುವುದು ನಿರ್ಮಾನುಷ ರೀತಿ. ಬಾಲ್ಯ ವಿವಾಹ ಪದ್ಧತಿಯು ನಿಷಿದ್ಧವಾದಲ್ಲಿ ಬಾಲ್ಯ ವೈಧವ್ಯಕ್ಕೆ ಅವಕಾಶವಿರುವುದಿಲ್ಲ. ಜನತೆಯ ಜಾಗೃತಿಯೂ ವಿವೇಚನೆಯೂ ರೂಢಿಯಾಗಿ ಜನಾಭಿಪ್ರಾಯವನ್ನೇ ಅನುಸರಿಸಿದ ಶಾಸನದಿಂದ ಬಾಲ್ಯ ವಿವಾಹಗಳು ನಿಷಿದ್ಧವಾಗಬಹುದು. ಜನಾಭಿಪ್ರಾಯವೇ ಮುಂದಾಗಿರತಕ್ಕುದಾದರೆ ಸುಧಾರಣೆಯು ಸುಲಭವಾಗಿಯೂ ದೃಢವಾಗಿಯೂ ನೆರವೇರುವುದು. ಆದರೆ ಬಾಲ್ಯ ವಿವಾಹ ನಿರೋಧಕ ಶಾಸನದಿಂದ ಬಾಲ್ಯ ವಿವಾಹಗಳು ನಿಲ್ಲಬಹುದೇ ವಿನಾ ವಿಧವೆಯರ ಬಾಳಿನಲ್ಲಿ ಮೇಲು ತೋರಲಾರದು. ಆ ವಿಚಾರದಲ್ಲಿ ವಿಧವೆಯರ ಪುನರ್ವಿವಾಹದ ಪ್ರಶ್ನೆಯು ತೋರುವುದು. ಹಿಂದೂ ಜನರ ಧರ್ಮಶಾಸ್ತ್ರಗಳಲ್ಲಿ ಕನ್ಯಾ ವಿತಂತುಗಳ ಪುನರ್ವಿವಾಹಕ್ಕೆ ಅವಕಾಶವಿಲ್ಲದೆ ಇಲ್ಲ; ಹಿಂದೆ ಇದ್ದ ಆ ಅವಕಾಶವು

ಕಾರಣಾಂತರಗಳಿಂದ ನಷ್ಟವಾಯಿತು. ಆದ್ದರಿಂದ ಕನ್ಯಾವಿತಂತುಗಳ ಪುನರ್ವಿವಾಹಕ್ಕೆ ಎಲ್ಲಿಯೋ ಕೆಲವರು ಪೂರ್ವಾಚಾರ ಮುಗ್ಧರು ವಿನಾ ಇತರರಾರೂ ಆಕ್ಷೇಪವನ್ನು ಒಡ್ಡುವುದಿಲ್ಲ. ಇದೇ ವಿಷಯಕ್ಕೆ ಸಂಬಂಧಿಸಿದ ವಿವಾಹ ಬಂಧನ ತ್ಯಾಗದ ವಿಚಾರವು ಮಾತ್ರ ಸುಲಭವಾದುದಲ್ಲ.

**ವೈಧವ್ಯ ಗೌರವ**

ಹಿಂದೂ ಧರ್ಮದಲ್ಲಿ ಸ್ತ್ರೀಯರಿಗೆ ಅತ್ಯುಚ್ಚವಾದ ಆದರ್ಶಗಳೂ ಧ್ಯೇಯಗಳೂ ಉಂಟು. ಸ್ತ್ರೀಯರು ಭ್ರಷ್ಟರಾದರೆ ಸರ್ವನಾಶವಾಯಿತೆಂದೇ ಹಿಂದೂ ಶಾಸ್ತ್ರಜ್ಞರು ಭಾವಿಸಿ ಸ್ತ್ರೀಯರ ಪವಿತ್ರತೆಗಾಗಿ ಇತರ ಅನ್ಯಾಯಗಳನ್ನು ಸ್ವೀಕಾರಮಾಡಿದರು. ಸ್ತ್ರೀಯರು ಪವಿತ್ರರಾಗಿರುವ ಸಿದ್ಧಿಗಾಗಿಯೇ ಹಿಂದೂ ಜನರಲ್ಲಿ ವೈಧವ್ಯಕ್ಕೆ ಅಲಂಕಾರ ನಿಷೇಧವೂ ವೇಶ್ಯಾವೃತ್ತಿಗೆ ಜಾತಿ ಗೌರವವೂ ಸಂದಿತು. ಹಿಂದೂ ಜನರಲ್ಲಿ ವಿಧವೆಯರು ಅನುಭವಿಸಿದ ಮತ್ತು ಅನುಭವಿಸುವ ಕಠಿನ ಕಷ್ಟಗಳ ಕಾರಣದಿಂದಲೇ ಇತರ ಸ್ತ್ರೀಯರ ಶುಚಿತ್ವವು ಸಿದ್ಧಿಯಾಗಿದೆಯೆಂಬುದರಲ್ಲಿ ಯಥಾರ್ಥವುಂಟು. ವಿಧವೆಯರಿಗೆ ಅಲಂಕಾರ ನಷ್ಟವಾದಾಗಲೇ ವಿಶೇಷವಾದ ಗೌರವ ಲಾಭವೂ ಉಂಟು. ಸಾಧಾರಣ ಮಾತಿನಲ್ಲಿ ಅವರನ್ನು ಮಡಿಹೆಂಗಸರೆಂದು ಕರೆಯುವ ಮಾತ್ರದಿಂದಲೇ ಅವರ ಪಾವಿತ್ರ್ಯವನ್ನು ಗ್ರಹಿಸಬಹುದು. ಜೀವಾವಧಿ ಕಠಿನ ವ್ರತಗಳನ್ನು ಆಚರಿಸುತ್ತ ಅಲಂಕಾರವಾಗಲಿ ಸ್ವಾರ್ಥವಾಗಲಿ ಲೇಶವೂ ಇಲ್ಲದಿರುವ ಹಿಂದೂ ವಿಧವೆಯರನ್ನು ಸಂಸಾರಗಳಲ್ಲಿದ್ದುಕೊಂಡು ಧರ್ಮಶುದ್ಧಿಯನ್ನು ರಕ್ಷಿಸುವ ಸಂನ್ಯಾಸಿನಿಯರೆಂದೇ ಭಾವಿಸಬೇಕು. ಅವರು ತೋರುವ ಶಿಷ್ಟಿಯು ಇತರರಿಗೆ ಆದರ್ಶಪ್ರಾಯವಾದುದು. ಅವರಲ್ಲಿ ಜನರು ತೋರುವ ಗೌರವಕ್ಕೆ ಗಹನವಾದ ಕಾರಣವುಂಟು. ಹಿಂದೂ ಸ್ತ್ರೀಯರ ಶುಚಿತ್ವದಿಂದಲೇ ಹಿಂದೂ ಧರ್ಮವು ನಷ್ಟವಾಗದೆ ಚಿರಸ್ಥಾಯಿಯಾಗಿದೆಯೆಂಬುದು ತಥ್ಯವಾದುದು.

**ವಿಚಾರ ಭ್ರಾಂತಿ**

ಮದರಾಸಿನಲ್ಲಿದ್ದಾಗ ವಿವೇಕಾನಂದರನ್ನು ಒಬ್ಬಾನೊಬ್ಬರು ಸಮೀಪಿಸಿ "ಸ್ವಾಮಿಜಿ! ಹಿಂದೂ ಜನರ ಧರ್ಮದಲ್ಲಿ ವಿಧವೆಯರ ಬಾಳು ಎಷ್ಟು ಅಸಹ್ಯವಾಗಿದೆ! ತಾವು ಮುಂದಾಗಿ ವಿಧವೆಯರಿಗೆ ಪುನರ್ವಿವಾಹಗಳು ನಡೆಯುವಂತೆ ಕಂಕಣಬದ್ಧರಾಗಬೇಕು" ಎಂದು ವಿನಯದಿಂದಲೂ

ಆತುರದಿಂದಲೂ ಕೇಳಿದರು. ಅದಕ್ಕೆ "ನನ್ನನ್ನು ಏಕೆ ಕೇಳುವುದು? ನಾನೇನು ವಿಧವೆಯೇ?" ಎಂದು ಅವರು ಗದರಿಸಿಕೊಂಡರಂತೆ! ಮತ್ತೊಮ್ಮೆ ಈ ವಿಚಾರವಾಗಿ "ಅನೇಕರು ನನ್ನ ಬಳಿಗೆ ಬಂದು ವಿಧವೆಯ ಪುನರ್ವಿವಾಹವು ಮಾತ್ರ ನೆರವೇರಿದರೆ ಸಮಾಜ ಸಂಸ್ಕಾರವು ಕೈಗೂಡು ವುದು, ಆದ್ದರಿಂದ ಎಲ್ಲೆಲ್ಲಿಯೂ ಪುನರ್ವಿವಾಹ ಸಭೆಗಳನ್ನು ಸ್ಥಾಪಿಸ ಬೇಕು ಎಂದು ವಾದಿಸುತ್ತಾರೆ. ಇವರು ಪಾಶ್ಚಾತ್ಯ ಸಮಾಜಗಳಲ್ಲಿ ಕಾಣುವ ಸ್ತ್ರೀ ಸ್ವಾತಂತ್ರ್ಯದಿಂದ ಮರುಳಾಗಿರುತ್ತಾರೆ. ಈ ಪುಣ್ಯ ಭೂಮಿಯಲ್ಲಿ ವಿಧವೆಯರು ನೀರವವಾಗಿ ದುಃಖಪಟ್ಟು ಸುರಿಸುವ ಕಣ್ಣೀರಿ ನಿಂದ ನೆಲವು ತೊಯ್ದುಹೋದರೆ ಪಾಶ್ಚಾತ್ಯ ದೇಶಗಳಲ್ಲಿ ಅವಿವಾಹಿತೆಯರ ನಿಟ್ಟುಸುರುಗಳಿಂದ ಅಲ್ಲಿಯ ಆಕಾಶವೇ ಬತ್ತಿಹೋಗುತ್ತದೆ. ಇದನ್ನು ಇವರು ವಿಚಾರಿಸದೆ ಮುಗ್ಧರಾಗಿ ಆರಂಭಶೂರರಾಗುತ್ತಾರೆ" ಎಂದು ಹೇಳಿದರು. ವಿಚಾರಪರರಾಗಿ ಕಾಣುವಲ್ಲಿ ವಿಧವೆಯರ ಸ್ಥಾನದಲ್ಲಿ ಅಲೌಕಿಕವಾದ ಗೌರವವು ಕಾಣುತ್ತದೆ. ಆ ಕಾರಣದಿಂದಲೇ ಸಂಪ್ರದಾಯ ನಿಷ್ಠರಾದವರು ಕನ್ಯಾ ವಿತಂತುಗಳ ಪುನರ್ವಿವಾಹಕ್ಕೆ ಸಮ್ಮತಿಸಿದಾಗ್ಯೂ ಎಲ್ಲ ವಿಧವೆಯರ ಪುನರ್ವಿವಾಹಕ್ಕೆ ಒಡಂಬಡುವುದಿಲ್ಲ. ವಿಧವೆಯರಲ್ಲಿಯೇ ಅನೇಕರು ಒಪ್ಪುವುದಿಲ್ಲ. ಗೃಹಿಣಿಯರಾಗಿ ಸ್ವಲ್ಪ ಕಾಲವಾದರೂ ಬಾಳಿದ ವಿಧವೆಯರೆಲ್ಲರೂ ಪಾಶ್ಚಾತ್ಯ ದೇಶಗಳಲ್ಲಿ ಕೂಡ ವಿವಾಹ ಸಿದ್ಧರಲ್ಲ.

ದುಃಸ್ಥಿತಿಗೆ ಮೂಲಕಾರಣವೇನೆಂದು ವಿಚಾರಿಸುವಲ್ಲಿ ಸ್ವತ್ತಿನ ಅಧಿಕಾರ ಲೋಪವೆಂದು ಭಾಸವಾಗುವುದು.

**ಸ್ವತ್ತಿನ ಅಧಿಕಾರ** ಹಿಂದೂ ಸ್ತ್ರೀಯರಿಗೆ ಒಂದಾನೊಂದು ಕಾಲದಲ್ಲಿದ್ದ ಆ ಅಧಿಕಾರವು ಕಾಲಗತಿಯಲ್ಲಿ ಮಾಯವಾಯಿತು. ಆ ಅಧಿಕಾರವು ಪುನಃ ಪ್ರಾಪ್ತಿಯಾದರೆ ವಿಧವೆಯರಾದವರು ಬಂಧು ಬಳಗದವರ ಆಶ್ರಯವನ್ನೇ ನಂಬಿಕೊಂಡು ಪಡಬಾರದ ಕಷ್ಟಗಳನ್ನು ಪಡುವ ನಿರ್ಬಂಧವು ತಪ್ಪುವುದು. ಈ ಸಂದರ್ಭದಲ್ಲಿ ಸಮಸ್ತ ಜನ ರಲ್ಲಿಯೂ ವ್ಯಾಪಿಸಿರುವ ಬಡತನವು ಆ ಕಷ್ಟಗಳನ್ನು ಇಮ್ಮಡಿಸಿರುವ ಅಂಶವನ್ನೂ ಜ್ಞಾಪಕದಲ್ಲಿಡಬೇಕು. ಸ್ವತ್ತಿನ ಅಧಿಕಾರವು ಪುನಃ ಲಭಿಸಿದರೆ ಸದಾ ಪರತಂತ್ರದಲ್ಲಿಯೇ ಇರುವ ದುರವಸ್ಥೆಯು ತೊಲಗೀತು.

ಆದರೆ ಅದರಿಂದ ಇತರ ಅನರ್ಥಗಳು ತೋರಿಕೊಳ್ಳಲು ಆಸ್ಪದವೊದಗಲೂ ಬಹುದು. ಅಲ್ಪವಿಚಾರದಿಂದ ಸುಧಾರಣೆಯ ಮಾರ್ಗವು ಇತ್ಯರ್ಥವಾಗುವುದಿಲ್ಲ.

ದಾಂಪತ್ಯ ವಿಚ್ಛೇದ

ಇತರ ಸಮಾಜಗಳಲ್ಲಿ ಗಂಡಹೆಂಡರಿಗೆ ಮನಸ್ತಾಪಗಳು ಪ್ರಬಲವಾಗಿ ರೇಗಿದಾಗ ಪರಸ್ಪರವಾಗಿ ಅಗಲುವ ಅವಕಾಶ ವುಂಟು. ಹಾಗೆ ಬಂಧನವನ್ನು ತ್ಯಜಿಸಿದವರು ಪುನಃ ಮದುವೆಯನ್ನು ಮಾಡಿಕೊಂಡು ಹೊಸದಾಗಿ ಸಂಸಾರ ಕಟ್ಟುವುದೂ ಉಂಟು. ಹಿಂದೂ ಧರ್ಮದಲ್ಲಿ ವಿವಾಹ ಬಂಧನವು ಜೀವಾವಧಿ ಇರತಕ್ಕುದು. ಆ ಬಂಧನವು ಮಧ್ಯೆ ಸಡಿಲವಾಗುವುದು ಅಲ್ಪ ವಿಷಯವೂ ಅಲ್ಲ, ಸುಲಭಸಾಧ್ಯವೂ ಅಲ್ಲ. ಹಿಂದೂ ಜನರ ವಿವಾಹ ಕರ್ಮವೇ ವಿಶಿಷ್ಟವಾದುದು; ಅದನ್ನು ಬದಲಾಯಿಸುವ ಪ್ರಯತ್ನವು ಅಲ್ಪ ಕಾರಣಕ್ಕಾಗಿ ನಡೆಯತಕ್ಕುದಲ್ಲ. ದಾಂಪತ್ಯದ ಅನ್ಯೋನ್ಯತೆಗೆ ಭಂಗ ತೋರುವುದಕ್ಕೆ ಅನೇಕ ಕಾರಣಗಳಿರುತ್ತವೆ. ವಿಚಾರಮಾಡಿದಲ್ಲಿ ಬಡತನ ಮತ್ತು ಅಸಹನಗಳು ಪ್ರಬಲತರವಾದ ಕಾರಣಗಳಾಗಿ ತೇಲುತ್ತದೆ. ಆಚಾರ ವಿಚಾರಗಳಲ್ಲಿ ಮತ್ತು ಮನಸ್ಸಿನ ಆಸೆಗಳಲ್ಲಿ ಭೇದವು ರೇಗಿ ಅನ್ಯೋನ್ಯತೆಗೆ ಲೋಪವುಂಟಾಗಿರುವುದು ಬಹು ಸಂಖ್ಯಾ ವಿಭಾಗದಲ್ಲಲ್ಲ, ಅಲ್ಪ ಸಂಖ್ಯಾಕರಲ್ಲಿ. ಬಾಲಕರಿಗೆ ಪಾಶ್ಚಾತ್ಯ ಶಿಕ್ಷಣವನ್ನೂ ಬಾಲಕಿಯರಿಗೆ ಪೂರ್ವಾಚಾರನಿಷ್ಠೆಯನ್ನೂ ಸಮಾಜವು ಒಪ್ಪಿಕೊಂಡಾಗಲೇ ಈ ಭೇದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಂತಾಯಿತು. ರೋಗವು ಪ್ರಬಲಿಸಿದಾಗ ಔಷಧಿಯನ್ನು ಕೊಡತಕ್ಕದ್ದು ವಿಹಿತ; ಆದರೆ ರೋಗಕ್ಕೆ ಮೂಲವಾದುದನ್ನು ನಾಶಗೊಳಿಸುವುದು ಇನ್ನೂ ಮೇಲು. ದೋಷಕ್ಕೆ ಕಾರಣವಾದುದನ್ನು ಮೂಲೋತ್ಪಾಟನೆ ಮಾಡುವುದೇ ಶ್ರೇಯಸ್ಕರವಾದ ಉಪಾಯ. ಔಷಧವು ರುಚಿಕರವಾಗಿದೆಯೆಂದು ಅದನ್ನೇ ನಂಬಿದಾಗ ಹಿಂದೆ ತೋರದಿದ್ದ ಅನರ್ಥಗಳಿಗೆ ಅವಕಾಶವೇರ್ಪಡುವುದುಂಟು. ವಿವಾಹ ಬಂಧನವನ್ನು ತ್ಯಾಗಮಾಡುವ ಸೌಲಭ್ಯವು ಪಾಶ್ಚಾತ್ಯ ಸಮಾಜದಲ್ಲುಂಟು; ಆ ಸೌಲಭ್ಯದ ಪರಿಣಾಮವಾಗಿ ನೀತಿಭಂಗವೇ ಮೂಡುವ ಸಂಭವಕ್ಕೆ ನಿದರ್ಶನಗಳು ಹೇರಳವಾಗಿ ಕಾಣುತ್ತವೆ.

ಸಹಜ ಮಾರ್ಗ

ಹಿಂದೂ ಜನರು ತಮ್ಮ ಸ್ತ್ರೀಯರ ಸಾವಿತ್ರ್ಯವನ್ನು ಕಂಡು ಎಷ್ಟು ಹೆಮ್ಮೆಗೊಂಡರೂ ಒಪ್ಪುವಂತಿದೆ. ಹಿಂದೂ ಮಹಿಳೆಯರನ್ನು ದೇವಿಯರೆಂದು ಭಾವಿಸುವ ಹಿಂದೂ ಯುವಕನು ಸಹಜವಾದುದನ್ನೇ ಭಾವಿಸುತ್ತಾನೆ. ಸ್ತ್ರೀಯರ ಶುಚಿತ್ವವೇ ಹಿಂದೂ ಧರ್ಮದ ಅಮರತ್ವಕ್ಕೆ ಪೋಷಕವಾದುದು. ಆದರೆ ಸೀತಾ ಸಾವಿತ್ರಿ ಮೊದಲಾದವರು ತೋರಿದ ಆದರ್ಶಗಳನ್ನು ಸ್ತ್ರೀಯರು ಎಡೆಬಿಡದೆ ಅವಲಂಬಿಸಿರುವಲ್ಲಿ ಪುರುಷರು ಮಾತ್ರ ತಮ್ಮ ಆದರ್ಶಗಳನ್ನು ಮರೆತರು. ಇದರಿಂದಲೂ ಸಮಾಜದಲ್ಲಿ ದುರಾಚಾರಗಳು ತೋರಿಕೊಂಡವು. ಬಾಲಕಬಾಲಕಿಯರ ಶಿಕ್ಷಣವು ಯೋಗ್ಯವಾಗಿ ಮಾರ್ಪಟ್ಟು ಸ್ತ್ರೀಯರಿಗೂ ಸ್ವತ್ತಿನ ಅಧಿಕಾರವು ಲಭಿಸಿದರೆ ಎಷ್ಟೋ ಅಂಶಗಳಲ್ಲಿ ಮೇಲಾಗುವುದರಲ್ಲಿ ಸಂಶಯವಿಲ್ಲ. ಶಾರದಾ ಕಾನೂನಿನಂತಹ ಶಾಸನವು ಸಿದ್ಧವಾಗಿದ್ದಲ್ಲಿ ಆಡಳಿತದ ಅಧಿಕಾರವನ್ನು ಸುಧಾರಣೆಗಾಗಿ ಪ್ರಯೋಗಿಸುವ ಆಸ್ಪದವು ಒದಗುತ್ತದೆ. ಆದರೆ ಸುಧಾರಣೆಯು ಸಹಜವೂ ಭದ್ರವೂ ಆಗಬೇಕಾದರೆ ಸಮಾಜದಲ್ಲಿ ಸ್ವತಂತ್ರವಾಗಿಯೇ ಬೆಳೆಯಬೇಕು. ಬಲವಂತದಿಂದ ನಡೆಯುವ ಸುಧಾರಣೆಯು ಬೇರೂರುವುದಿಲ್ಲ. ನಿರ್ಬಂಧವು ಹುಟ್ಟಿದಾಗ ಅದನ್ನು ತಪ್ಪಿಸಿಕೊಳ್ಳುವ ಪ್ರಯತ್ನವೇ ಹೆಚ್ಚಾಗಿ ತೋರಿ ಬೇರೊಂದು ಬಗೆಯ ನೀತಿ ನಷ್ಟಕ್ಕೆ ಅವಕಾಶ ತೋರುವುದು. ಹಿಂದೂ ಸಂಪ್ರದಾಯದಲ್ಲಿ ನಿರ್ಬಂಧದ ಅಥವಾ ಆತುರದ ಸುಧಾರಣೆಗೆ ಅವಕಾಶವೂ ಇಲ್ಲ, ಒಪ್ಪಿಗೆಯೂ ಇಲ್ಲ; ನಿದಾನವಾಗಿಯೂ ದೃಢವಾಗಿಯೂ ನಡೆಯತಕ್ಕ ಸುಧಾರಣೆಯೇ ಹಿಂದೂ ಧರ್ಮಕ್ಕೆ ಅನುಗುಣವಾದುದು.

ಪರದಾ

ಉತ್ತರ ಪ್ರಾಂತಗಳಲ್ಲಿ ಪರದಾ ಎಂಬ ಪದ್ಧತಿಯು ಹಿಂದೂಗಳಲ್ಲಿಯೂ ಮುಸಲ್ಮಾನರಲ್ಲಿಯೂ ಸರ್ವಸಾಧಾರಣ; ದಕ್ಷಿಣದಲ್ಲಿ ಮುಸಲ್ಮಾನರು ಮಾತ್ರ ಅದನ್ನು ಆಚರಿಸುತ್ತಾರೆ. ಮುಸಲ್ಮಾನರಲ್ಲಿಯೇ ಇದು ವಿಶೇಷವಾಗಿದ್ದು ಅತಿಯಾಗಿ ಪರಿಣಮಿಸಿದಾಗ ವಯಸ್ಕರಾದ ಸೋದರ ಸೋದರಿಯರೇ ಪರಸ್ಪರವಾಗಿ ಒಬ್ಬರನ್ನೊಬ್ಬರು ನೋಡುವುದಕ್ಕೆ ಅಡ್ಡಿಯಾಗುತ್ತದೆ. ಪರದಾ ಪದ್ಧತಿಯಲ್ಲಿ ಸ್ತ್ರೀಯರಿಗೆ ಗೌರವವಿಲ್ಲವೆಂದು

ಭಾವಿಸುವುದು ಸರಿಯಲ್ಲ. ಕೊರಾನ್ ಷರೀಫದಲ್ಲಿಯೇ "ಸ್ವರ್ಗ ಬೇಕಾದರೆ ತಾಯಿಯ ಅಡಿಗಳಲ್ಲಿ ಹುಡುಕು" ಎಂಬ ಘನವಾದ ವಾಕ್ಯವುಂಟು. ಮುಸಲ್ಮಾನರ ಇತಿಹಾಸವನ್ನು ವಿಚಾರಯುಕ್ತವಾಗಿ ಕಂಡಾಗ ದಾಸ್ಯಕ್ಕೂ ಜನಾನಾ ಪದ್ಧತಿಗೂ ಕಾರಣಗಳು ದೊರಕುತ್ತವೆ. ಕಾರಣ ವಿಲ್ಲದೆ ಇಂತಹ ಆಚಾರಗಳು ಯಾವ ಸಮಾಜದಲ್ಲಿಯೂ ಬಳಕೆಯಾಗುವುದಿಲ್ಲ. ಆದರೆ ಹಿಂದಿನ ಕಾಲದಲ್ಲಿ ಪ್ರಬಲವಾಗಿದ್ದ ಕಾರಣಗಳು ಈ ಕಾಲದಲ್ಲಿಲ್ಲ. ಮುಸಲ್ಮಾನರ ಆಳ್ವಿಕೆಗೆ ಹಿಂದಿನ ಕಾಲದಲ್ಲಿ ರಾಜವಂಶಗಳಲ್ಲಿ ಶುದ್ಧಾಂತಾ ವಾಸವೆಂಬುದಿದ್ದರೂ ಪರದಾ ಪದ್ಧತಿಯಾಗಿರಲಿಲ್ಲ. ಮುಸಲ್ಮಾನರ ಕಾಲ ದಲ್ಲಿ ಅವರನ್ನು ಹಿಂದೂ ಜನರೂ ಅನುಕರಿಸಿದರು.

**ಶಿಕ್ಷಣ ಚಿಕಿತ್ಸೆ**

ಸದ್ಯಃ ಎಲ್ಲರೂ ಪರದಾ ಪದ್ಧತಿಯನ್ನು ಹೋಗ ಲಾಡಿಸತಕ್ಕದ್ದೆಂದೇ ಒಪ್ಪುವರು ; ಹೋಗಲಾಡಿಸು ವುದರಲ್ಲಿ ಬಲವಂತದ ಮಾರ್ಗವನ್ನು ಒಪ್ಪುವುದಿಲ್ಲ. ಪರದಾ ಪದ್ಧತಿಯು ಹೋಗಬೇಕಾದರೆ ಸ್ತ್ರೀ ಶಿಕ್ಷಣವೇ ಉತ್ತಮವಾದ ಮಾರ್ಗ. ಸ್ತ್ರೀಯರು ಶಿಕ್ಷಿತರಾದಂತೆಲ್ಲ ಪರದಾ ಪದ್ಧತಿಯ ದೋಷಗಳು ತಾವಾಗಿಯೇ ಮಾಯ ವಾಗುತ್ತವೆ.

**ಪಾಶ್ಚಾತ್ಯ ವೈಖರಿಯ ದೋಷಗಳು**

ಪಾಶ್ಚಾತ್ಯ ಪೌರಸ್ತ್ಯ ಸಂಸ್ಕೃತಿಗಳು ಪರಸ್ಪರವಾಗಿ ಘರ್ಷಿಸು ತ್ತಿರುವ ಈ ಕಾಲದಲ್ಲಿ ದೀರ್ಘ ವಿಚಾರವೂ ದೂರಾಲೋಚನೆಯೂ ಅತ್ಯವಶ್ಯಕ. 'ಪಾಶ್ಚಾತ್ಯರಲ್ಲಿ ಪರದಾ ಎಂಬುದೇ ಇಲ್ಲ, ವೈಧವ್ಯದ ಅಸಹ್ಯ ಸ್ಥಿತಿಯಿಲ್ಲ, ಬಂಧನ ತ್ಯಾಗವು ಎಷ್ಟು ಸುಲಭ!' ಎನ್ನುತ್ತ ಮುಗ್ಧರಾಗಬಾರದು. ಅವರಲ್ಲಿ ತೋರಿರುವ ದೋಷಗಳನ್ನು ವಿಚಾರಯುಕ್ತವಾಗಿ ತಿಳಿಯದೆ ಬೆರಗಾಗಬಾರದು. ಅವಿವಾಹಿತರಾಗಿಯೇ ಆಯುಷ್ಯವನ್ನು ಕಳೆಯುವ ದುಃಸ್ಥಿತಿಯು ಅವರಲ್ಲುಂಟು, ನಮ್ಮಲ್ಲಿಲ್ಲ. ವಧೂವರರ ಪರಸ್ಪರ ಪ್ರೇಮವು ಸುಂದರವಾಗಿ ಬೆಳೆಯಲು ಅವರಲ್ಲಿ ಅವಕಾಶವಿದೆಯೆನ್ನುತ್ತ ನಾವು ಅವರಲ್ಲಿ ಸುಂದರ ರೂಪವಿಲ್ಲದೆ ಹುಟ್ಟಿ ದವರ ದುರವಸ್ಥೆಯನ್ನು ಮರೆಯಬಾರದು. ರೂಪ ಸೌಂದರ್ಯವನ್ನು ಕಟ್ಟಿಕೊಂಡು ಹುಟ್ಟತಕ್ಕವರು ಯಾವ ಸಮಾಜದಲ್ಲಾದರೂ ಅಲ್ಪ ಸಂಖ್ಯಾಕ

ರಾಗಿಯೇ ಇರಬೇಕು; ಏಕಂದರೆ ಸೌಂದರ್ಯವೆಂಬುದೂ ಸಾಪೇಕ್ಷಕ ವಾದುದು. ಆಕರ್ಷಣೆಯೇ ವಿವಾಹ ಪ್ರಾಪ್ತಿಗೆ ಸಾಧಕವಾಗಿ ಪರಿಣಮಿಸಿದ ಪರಿಸ್ಥಿತಿಯಲ್ಲಿ ಅಲಂಕಾರ ಮೋಹ ವೈಖರಿಗಳು ಪ್ರಬಲವಾಗಿ ರೇಗುವುವು. ಪಾಶ್ಚಾತ್ಯರಲ್ಲಿ ಫ್ಯಾಷನ್ ಅಥವಾ ಅಲಂಕಾರ ರೀತಿಯು ಪದೇ ಪದೇ ಬದಲಾಗುತ್ತಿರುವುದಕ್ಕೂ ಕೃತ್ರಿಮವಾದ ಶೃಂಗಾರ ಚೇಷ್ಟೆಗಳಿಗೂ ಮಿತಿಯೇ ತೋರುವುದಿಲ್ಲ; ಅವುಗಳಿಂದ ಅನರ್ಥಗಳೆಷ್ಟೋ ಆಗುತ್ತವೆ. ಅವುಗಳನ್ನು ಸರಿಪಡಿಸಿಕೊಳ್ಳಲು ತ್ಯಾಗ ಸೌಲಭ್ಯವನ್ನು ಕಲ್ಪಿಸಿದಂದಿನಿಂದ ನೀತಿಭ್ರಂಶವು ರೇಗುತ್ತಲಿದೆ. ಪಾಶ್ಚಾತ್ಯ ಸಮಾಜಗಳಲ್ಲಿ ಪ್ರಬಲವಾದ ದೋಷಗಳಿಲ್ಲದೆ ಇಲ್ಲ. ಮೋಹಭ್ರಾಂತಿಗಳಿಗೊಳಗಾಗಿ ಒಂದು ಸಮಾಜದವರು ಬೇರೆ ಧರ್ಮವನ್ನೇ ಅವಲಂಬಿಸುವ ಇನ್ನೊಂದು ಸಮಾಜದ ಅನುಕರಣಕ್ಕೆ ತೊಡಗುವುದು ಶ್ರೇಯಸ್ಕರವಲ್ಲ. ಗುಣಾವಗುಣಗಳೆರಡನ್ನೂ ಕೂಲಂಕಷವಾಗಿ ವಿಚಾರಮಾಡಿದ ತರುವಾಯ ವಿಶಾಲ ದೃಷ್ಟಿಯನ್ನು ವಹಿಸಿ ಯಾವ ಸಮಾಜಕ್ಕೆ ಯಾವುದು ವಿಹಿತವೆಂದು ನಿಶ್ಚಯಿಸುವ ಪ್ರಯತ್ನಮಾಡಬೇಕು.

**ಅನಾಗರಿಕ ಕುಲಗಳು**

ಅಜ್ಞಾನದಲ್ಲಿಯೇ ಇದ್ದು ಅನೇಕಾನೇಕ ಮೂಢಾಚಾರಗಳನ್ನು ಅನುಸರಿಸುತ್ತ ಜಾತಿಗೌರವವನ್ನು ಪಡೆಯದೆ ಇರತಕ್ಕ ಲಕ್ಷಾಂತರ ಜನರು ಹಿಂದೂಗಳಲ್ಲಿ ಎಣಿಕೆಯಾಗುತ್ತಾರೆ. ಕಳೆದ ಒಂದೆರಡು ಶತಮಾನಗಳ ಕಾಲದಲ್ಲಿ ಕ್ರೈಸ್ತಮತದ ಪಾದ್ರಿಗಳು ಮಾತ್ರ ಅವರ ಮಧ್ಯೆ ತಮ್ಮ ಉಪದೇಶವನ್ನು ಮಾಡಿ ಅವರನ್ನು ಉದ್ಧರಿಸಲು ಪ್ರಯತ್ನಿಸಿದ್ದಾರೆ; ಮತ್ತೆ ಯಾವ ಪ್ರಯತ್ನವೂ ನಡೆದಿಲ್ಲ. ಅವರ ಉದ್ಧಾರ ಪ್ರಯತ್ನವು ನಡೆಯದೆ ಇದ್ದುದಕ್ಕೆ ಕಾರಣವನ್ನು ಇತಿಹಾಸದಲ್ಲಿ ಕಾಣಬೇಕು.

**ಸಂಸ್ಕಾರಸಿದ್ಧಿಯ ನೀತಿ**

ಪ್ರತಿ ದೇಶದಲ್ಲಿಯೂ ಪ್ರತಿ ಸಮಾಜದಲ್ಲಿಯೂ ಶ್ರೇಷ್ಠತೆಯನ್ನು ತೋರುವ ವರ್ಗದ ಜನರೊಂದೆಡೆಯಲ್ಲಿದ್ದರೆ ಮತ್ತೊಂದೆಡೆಯಲ್ಲಿ ಸಾಮಾನ್ಯವಾದ ತಿಳುವಳಿಕೆಯೂ ಇಲ್ಲದೆ ಕಾಡುಜನರಂತೆಯೇ ಇರುವ ವರ್ಗದವರಿರುತ್ತಾರೆ. ಸಹವಾಸ ಸಂಪರ್ಕಬಲದಿಂದ ಇವರ ಜೀವನದಲ್ಲಿ ಮೇಲ್ಮೆಯು ನೆಲೆಸತಕ್ಕದ್ದು. ಕಲ್ಲನ್ನೋ ಮರವನ್ನೋ

ದೇವರೆಂದು ಪೂಜಿಸಿ ಅವುಗಳಿಗೆ ರಕ್ತಬಲಿಯನ್ನು ಅರ್ಪಿಸುವ ಭಾರತೀಯ ಜನರನ್ನು 18ನೆ ಶತಮಾನದವರೆಗೂ ಸ್ಕಾಟ್ಲೆಂಡಿನ ಉತ್ತರ ಭಾಗದಲ್ಲಿ ಕಳ್ಳತನದಿಂದಲೇ ಜೀವಿಸುತ್ತಿದ್ದ ಜನರೊಂದಿಗೆ ಹೋಲಿಸಬೇಕು. ಹಿಂದೂ ಸಮಾಜವೆಂಬುದರಲ್ಲಿ ನಾನಾಬಗೆಯ ವರ್ಣಭೇದಗಳುಳ್ಳ ಜನರಾಶಿಗಳಿರುವುದಲ್ಲದೆ ವಿಧವಿಧವಾದ ಸಂಸ್ಕೃತಿಗಳನ್ನೂ ಅಂತಸ್ತುಗಳನ್ನೂ ತೋರುವ ವರ್ಗಗಳುಂಟು. ರಕ್ತಬಲಿಗಳನ್ನರ್ಪಿಸುವ ಭಾರತೀಯ ಜನರು ಭಾರತೀಯ ರೀತಿಯಲ್ಲೇ ಉದ್ಧೃತರಾಗುತ್ತಿದ್ದುದು ಅವರ ಮಧ್ಯೆ ಮನೆ ಮಾಡಿಕೊಂಡ ಬ್ರಾಹ್ಮಣ ಗೃಹಸ್ಥರ ಆದರ್ಶದಿಂದ, ಮತ್ತು ಸಾಧುಸಂತರ ಉಪದೇಶದಿಂದ. ಈ ವಿಧಾನವು ನಿದಾನವಾದರೂ ದೃಢವಾದುದು. ಹಿಂದೂ ಧರ್ಮದಲ್ಲಿ ಇಸ್ಲಾಮಿಾ ಮತ್ತು ಈಸಾಯಿ ಧರ್ಮಗಳಲ್ಲಿದ್ದಂತೆ ವ್ಯಕ್ತಿಗೆ ಉಪದೇಶ ಮಾಡಿ ಸ್ವೀಕಾರಮಾಡುವ ಆಚಾರವಿಲ್ಲ. ಆದರೆ ಅನಿವಾರ್ಯವಾದ ಮತ್ತು ನಿದಾನವಾದ ರೀತಿಯಲ್ಲಿ ಗುಂಪುಗುಂಪೇ ಹಿಂದೂ ಮತದಲ್ಲಿ ಸೇರಿಕೊಂಡು ಜಾತಿಗೌರವವನ್ನು ಪಡೆಯುವುದು. ವ್ರಾತ್ಯಸ್ತೋಮಾದಿ ಆಚರಣೆಗಳು ಅತಿ ಪೂರ್ವಕಾಲದಲ್ಲಿಯೇ ನಿಂತುಹೋದಾಗ್ಯೂ ಹಿಂದೂ ಧರ್ಮದ ಸಹಜಗುಣದ ಪ್ರಭಾವದಿಂದಲೇ ಇತರರು ಹಿಂದೂ ಧರ್ಮವನ್ನು ಸೇರಿಕೊಳ್ಳುತ್ತಿದ್ದರು. "ಇತರ ಮತಸ್ಥರು ಆತುರಪಟ್ಟು ಅನ್ಯಮತಸ್ಥರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುವ ಪ್ರಯತ್ನವನ್ನು ಬುದ್ಧಿಪೂರ್ವಕವಾಗಿ ಮಾಡುತ್ತಾರೆ; ಅಂತಹ ಆಚಾರವು ಹಿಂದೂ ಮತದಲ್ಲಿಲ್ಲ. ಆದರೆ ಗುಂಪುಗುಂಪಾಗಿ ಹಿಂದೂ ಧರ್ಮವನ್ನು ಕ್ರಮವಾಗಿ ಅವಲಂಬಿಸಿ ಹೊಸ ಜನರು ಒಂದು ಜಾತಿಯಾಗಿ ಏರ್ಪಡುವುದರಲ್ಲಿ ಅಡ್ಡಿಯಿಲ್ಲ. ಇಸ್ಲಾಮಿಾ ಧರ್ಮದಂತೆಯೋ ಈಸಾಯಿ ಧರ್ಮದಂತೆಯೋ ಧರ್ಮದೀಕ್ಷೆಯನ್ನು ಕೊಡಿಸದೆ ಇರುವ ಮಾತ್ರದಿಂದಲೇ ಹಿಂದೂ ಧರ್ಮದಲ್ಲಿ ಚೈತನ್ಯ ನಷ್ಟವಾಗಿದೆಯೆಂದು ಭಾವಿಸಕೂಡದು. ಎಂದಿನವರೆಗೂ ಸಾಧು ಸಂನ್ಯಾಸಿಗಳು ಹುಟ್ಟುತ್ತ ಉಪದೇಶಮಾಡುತ್ತ ಜನರನ್ನು ಉದ್ಧಾರಮಾಡುತ್ತಲಿರುವರೋ ಅಂದಿನವರೆಗೂ ಹಿಂದೂ ಧರ್ಮವನ್ನು ನಷ್ಟಚೇತನವೆಂದು ಹೇಳಲಾಗುವುದಿಲ್ಲ" ಎಂಬುದಾಗಿ ಸರ್ ಆಲ್ಫ್ರೆಡ್ ಲಯಲ್ ಎಂಬ ಪ್ರಸಿದ್ಧ ಆಂಗ್ಲೇಯ ಪಂಡಿತನೊಬ್ಬಾತನು ವಿವರಿಸಿದನು. ಇಸ್ಲಾಮಿಾ ಧರ್ಮವನ್ನೋ ಈಸಾಯಿ

ಧರ್ಮವನ್ನೋ ಒಂದು ಗುಂಪಿನ ಒಬ್ಬರಿಬ್ಬರು ಸ್ವೀಕರಿಸಿದ ಪಕ್ಷದಲ್ಲಿ ಅದರಿಂದ ಆ ಗುಂಪಿನ ಇತರರಿಗೆ ನಷ್ಟವೇ ವಿನಾ ಮೇಲೆಂಬುದಿಲ್ಲ. ಆ ಜನರಾದರೋ ತುತ್ತತುದಿಯಲ್ಲಿದ್ದಾಗ್ಯೂ ಹಿಂದೂಗಳಲ್ಲಿಯೇ ಎಣಿಕೆಯಾಗ ತಕ್ಕವರು; ಅವರ ಉದ್ಧಾರವು ಹಿಂದೂ ಧರ್ಮೋಪದೇಶಕರಿಂದ ನಡೆದಾಗಲೇ ಅವರಿಗೆ ಹಿತವೆನ್ನಿಸುವುದು. ಈ ಕಾರಣದಿಂದ ಸಹಜ ರೀತಿಯ ಉದ್ಧಾರ ಕಾರ್ಯವು ಹಿಂದೂ ಧರ್ಮ ಪ್ರಚಾರಕರಿಂದಲೇ ನೆರವೇರಬೇಕಾದುದು. ಇದಕ್ಕೆ ಹಿಂದೂ ಧರ್ಮದಲ್ಲಿ ಮಾಲಿನ್ಯವು ಹೋಗಿ ಚೈತನ್ಯವು ಬಲಪಡಬೇಕು. ಉದ್ಧಾರ ಕಾರ್ಯವು ಚಿರಸ್ಥಾಯಿಯಾಗಿರಬೇಕಾದರೆ ಬಹಳ ಎಚ್ಚರಿಕೆಯಿಂದ ನಡೆಯತಕ್ಕದ್ದು.

ಹರಿಜನರ ಉದ್ಧಾರ

ಹಿಂದೂ ಸಮಾಜದಲ್ಲಿ ಪ್ರಬಲತಮವಾದ ದೋಷವೆನಿಸಿರುವುದು ಹರಿಜನರ ಸ್ಥಿತಿ. ಸಮಾಜ ಬಾಹಿರರಾಗಿ ಸಮಾಜ ಗೌರವವಿಲ್ಲದೆ ಹೋದುದಲ್ಲದೆ ಆ ಜನರಿಗೆ ನಾನಾ ಬಗೆಯ ಸಂಕಟಗಳುಂಟು. ಅವರ ಸ್ಪರ್ಶವಾಗ ಬಾರದೆಂಬುದು ಮಾತ್ರವಲ್ಲದೆ ಅವರ ಸಾಮೀಪ್ಯವೂ ದುಷ್ಟವೆಂದು ಹಿಂದೂ ಸಮಾಜದಲ್ಲಿ ಬಹುಕಾಲದಿಂದ ರೂಢಿಯಾಗಿದೆ. ಕ್ರಿ. ಪೂ. 600ರಷ್ಟು ಹಿಂದಿನ ಕಾಲದಲ್ಲಿಯೇ ಉತ್ತಮಜಾತರೆನ್ನಿಸಿದವರು ಇವರನ್ನು ದೂರವಾಗಿಟ್ಟಿದ್ದುದಲ್ಲದೆ ಕಣ್ಣೆತ್ತಿ ನೋಡುವುದು ಕೂಡ ಪಾಪಕರವೆಂದು ಭಾವಿಸಿದ್ದರು. ದೇಶದ ಉತ್ತರ ಭಾಗದಲ್ಲಿ ಹರಿಜನರ ಸ್ಥಿತಿಯು ಅತಿ ದುಃಸ್ಥಿತಿಯಾಗಿದ್ದರೂ ದಕ್ಷಿಣದಲ್ಲಿ ಅಥವಾ ದ್ರವಿಡ ವಿಭಾಗಗಳಲ್ಲಿರುವಷ್ಟು ಘೋರವಾಗಿಲ್ಲ. ಕೇರಳ ಪ್ರಾಂತದಲ್ಲಿ ಹರಿಜನರು ಬೀದಿಗಳಲ್ಲಿ ಓಡಾಡುವುದಕ್ಕೂ ಬಾಧ್ಯರಲ್ಲ; ಎಲ್ಲರಿಂದ ದೂರವಾಗಿರುವ ಆಚರಣೆಯು ಸಂಪ್ರದಾಯ ಬಲವನ್ನು ಪಡೆದಿದೆ.

'ಶ್ರೇಷ್ಠ ಜಾತಿಯವನು ಬೆಕ್ಕನ್ನೋ ನಾಯಿಯನ್ನೋ ಮುಟ್ಟ ಬಹುದು, ಹರಿಜನನನ್ನು ಮಾತ್ರ ಮುಟ್ಟಬಾರದು' ಎಂಬ ನೀತಿಯಲ್ಲಿ ಮಾನವನಾಗಿ ಹುಟ್ಟಿದವನು ಪಶುಪ್ರಾಣಿಗಳಿಗಿಂತಲೂ ಕೀಳೆನಿಸಿದ ಹಾಗಾಯಿತು. ಅದೇ ಹರಿಜನನು ಕ್ರೈಸ್ತ ಮತವನ್ನು ಸೇರಿದ ಪಕ್ಷದಲ್ಲಿ ಈ ನೀಚತ್ವವು ತೊಲಗಿಹೋಗುವುದೆಂಬ ಸಂಗತಿಯು ತಥ್ಯವಾದರೆ ಹಿಂದೂ

ಸಮಾಜಕ್ಕೆ ಯಾವ ತೆರದ ಗೌರವವೂ ಲಭಿಸುವುದಿಲ್ಲ. ಇಸ್ಲಾಮಿ ಮತವನ್ನೋ ಈಸಾಯಿ ಮತವನ್ನೋ ಸೇರಿಕೊಂಡ ಪಕ್ಷದಲ್ಲಿ ಹಿಂದೂ ಜನರು ಅವರನ್ನು ಗೌರವಿಸುವುದಿಲ್ಲ. ಹಿಂದೂ ಸಮಾಜದಲ್ಲಿ ಆಚಾರ ನಿಷ್ಠರಾದವರು ಮುಸಲ್ಮಾನರನ್ನೂ ಈಸಾಯಿಗಳನ್ನೂ ಮ್ಲೇಚ್ಛರೆಂದೇ ಭಾವಿಸುವರು; ಆದರೆ ಹಿಂದೂಗಳ ರಾಶಿಯಲ್ಲೇ ಸೇರತಕ್ಕ ಮತ್ತು 6 ಕೋಟಿಗೆ ಹೆಚ್ಚಾದ ಸಂಖ್ಯಾಬಲವುಳ್ಳ ಹರಿಜನರ ಸಮುದಾಯದಿಂದ ಒದಗಬಹುದಾದ ಚೈತನ್ಯ ಲಾಭವು ನಷ್ಟವಾದುದಲ್ಲದೆ ನೀತಿಯಲ್ಲಿಯೇ ನಿಮರ್ಾನುಷವಾದ ಪ್ರವರ್ತನೆಯು ರೂಢಿಯಾದುದು ದೇಶಕ್ಕೆ ಮತ್ತು ಸಮಾಜಕ್ಕೆ ಘೋರವಾದ ಕಳಂಕ.

ಸಾವಿರಾರು ವರ್ಷ ಕಾಲದಲ್ಲಿ ರೂಢಿಗೊಂಡು ಭದ್ರವಾದ ಈ ಕಳಂಕದ ಪೂರ್ವೋತ್ತರವನ್ನು ವಿಚಾರದೃಷ್ಟಿಯಿಂದ ಕಾಣಬೇಕೇ ವಿನಾ ಆತುರತೆಯಿಂದ ದುಡುಕುವುದು ಯೋಗ್ಯವಾದುದಲ್ಲ. ಕೆಲವರು ಹರಿಜನರ ಅವಸ್ಥೆಯನ್ನು ವರ್ಣಿಸುತ್ತ ತಾರತಮ್ಯಗಳನ್ನು ಗಣಿಸದೆ ಭಾರತೀಯ ನಾಗರಿಕತೆಯನ್ನೇ ದೂಷಿಸುವುದುಂಟು. ಪಾಶ್ಚಾತ್ಯ ಸಂಸ್ಕೃತಿ ಮುಗ್ಧರಾದ ಗ್ರಂಥಕಾರರು ಕೆಲವರು ಅಲ್ಪ ವಿಚಾರದಿಂದಲೇ ತೃಪ್ತರಾಗಿ ಭಾರತೀಯತ್ವವೆಂಬುದೇ ನಿಂದ್ಯವೆಂಬ ಅತ್ಯುಕ್ತಿ ದೋಷಕ್ಕೆ ಮನಸ್ಸನ್ನೊಡ್ಡುವರು. ಹರಿಜನರ ದುರವಸ್ಥೆಯು ಸಹನಾತೀತವಾಗಿದ್ದರೂ ವಿಚಾರದಲ್ಲಿ ಸಹನವಿಲ್ಲದಿದ್ದರೆ ದೋಷವೇ ಮೂಡುವುದು. ಇತರ ದೇಶಗಳಲ್ಲಿ ಇಂತಹ ಪರಿಸ್ಥಿತಿಯಲ್ಲಿ ನಡೆದ ವ್ಯಾಪಾರಕ್ಕಿಂತಲೂ ಹರಿಜನರಲ್ಲಿ ಭಾರತೀಯರು ತೋರಿದ ದುರ್ನೀತಿಯು ಎಷ್ಟೋ ಮೇಲೆನಿಸುತ್ತದೆ. ಯಾವುದಾದರೂ ಒಂದು ದೇಶವನ್ನು ಆಗಂತುಕರಾಗಿ ಒಂದು ಕುಲದವರು ಗೆದ್ದು ಅಲ್ಲಿಯ ಪೂರ್ವನಿವಾಸಿಗಳನ್ನು ತಮ್ಮ ಹಗೆಗಳೆಂದು ಭಾವಿಸಿದ ಪರಿಸ್ಥಿತಿಯಲ್ಲಿ ಸಾಮಾನ್ಯವಾಗಿ ನಡೆದುದೇನು? ಇತರ ದೇಶಗಳಲ್ಲಿ ಜಯಶಾಲಿಗಳಾದವರು ಸೋತವರನ್ನು ವಧೆಗೇ ಗುರಿಮಾಡಿಸಿದರು; ಇಲ್ಲವೆ ಕಾಯಿಪಲ್ಯಗಳನ್ನು ಮಾರುವಂತೆ ಪರಾಜಿತರನ್ನು ಗುಲಾಮರೆಂದು ಭಾವಿಸಿ ಮಾರುತ್ತ ಕೊಳ್ಳುತ್ತ ಇದ್ದರು. ಭಾರತವರ್ಷದಲ್ಲಿ ಆರ್ಯಜನರು ಅಷ್ಟು ನಿಮರ್ಾನುಷ ಪ್ರವರ್ತನೆಗೆ ಉದ್ಯುಮಿಸಲಿಲ್ಲ; ತಮ್ಮ ಸಮಾಜದಲ್ಲಿ ಅವರಿಗೆ

ಪ್ರವೇಶವನ್ನು ಕೊಡದೆ ಅವರನ್ನು ದೂರವಾಗಿಯೂ ಪ್ರತ್ಯೇಕವಾಗಿಯೂ ಇಟ್ಟರು. ಇದಕ್ಕೆ ಮೂಲಕಾರಣವಾವುದೆಂದರೆ ವರ್ಣಭೇದ. ಇಪ್ಪತ್ತನೇ ಶತಮಾನದಲ್ಲಿ ಕೂಡ ಅಮೆರಿಕಾ ದೇಶದಷ್ಟು ಮುಂದರಿದ ರಾಷ್ಟ್ರದಲ್ಲಿ ಬಿಳಿಯರಿಗೂ ನೀಗ್ರೋ ಜನರಿಗೂ ವೈಷಮ್ಯವು ಸಾಮಾನ್ಯ ಜನರಲ್ಲಿ ಸಹಜವಾಗಿ ಘೋರ ರೂಪವನ್ನೇ ತಾಳುತ್ತದೆ. ನೀಗ್ರೋ ವರ್ಣದವನನ್ನು ಅಲ್ಲಿಯ ಬಿಳಿಯರು ದೂರವಾಗಿಯೂ ಪ್ರತ್ಯೇಕವಾಗಿಯೂ ಇಟ್ಟಿರುವುದು ಮಾತ್ರವೇ ಅಲ್ಲದೆ ಅಲ್ಪ ವ್ಯಾಜಗಳಿಗಾಗಿ ಮೈ ಸುಲಿದು ಮರಕ್ಕೋ ಕಂಬಕ್ಕೋ ಕಟ್ಟಿ ಸುಟ್ಟುಬಿಡುವರು; ಅದನ್ನು ಒಂದು ಪರಸೆಯಾಗಿ ನಡೆಸುವರು. ಕಪ್ಪುಬಣ್ಣದವನನ್ನು ತಮ್ಮ ಶಾಲೆಗಳಿಗಾಗಲಿ, ಹೊಟೇಲುಗಳಿಗಾಗಲಿ, ರೈಲುಬಂಡಿಗಳಿಗಾಗಲಿ ಸೇರಗೊಡಿಸುವುದಿಲ್ಲ. ವರ್ಣಭೇದವೆಂಬುದು ಅಮೆರಿಕದಲ್ಲಿಯೂ ಇತರ ಕ್ಷೇತ್ರಗಳಲ್ಲಿಯೂ ಐರೋಪ್ಯರಂತಹ ನಾಗರಿಕ ಜನರನ್ನು ಇಂತಹ ಘೋರ ಪ್ರವೃತ್ತಿಗೆ ಉದ್ರೇಕಿಸುವಷ್ಟು ಬಲವುಳ್ಳದು; ಅದೇ ವರ್ಣಭೇದವೇ ಹರಿಜನರ ಅಸ್ಪೃಶ್ಯತೆ, ಅದರ್ಶನೀಯತೆ ಮುಂತಾದ ದುಸ್ಥಿತಿಗೆ ಮೂಲಕಾರಣ.

ಆರ್ಯ ಸಂಸ್ಕೃತಿಯು ದೇಶದಲ್ಲಿ ಸರ್ವತ್ರ ವ್ಯಾಪ್ತಿಯನ್ನು ಪಡೆದ ತರುವಾಯ ಪ್ರತಿ ಗ್ರಾಮದ ಬಳಿಯಲ್ಲಿಯೂ ಇದ್ದ ಹರಿಜನರಿಗೂ ಇತರರಿಗೂ ಕಾಲ ಕಳೆಯುತ್ತ ಹಗೆತನವು ಹೋಗಿ ಆರ್ಥಿಕ ರೀತಿಯ ಅನ್ಯೋನ್ಯತೆಯೂ ಇತರ ರೀತಿಯ ಹೊಂದಿಕೆಯೂ ವೃದ್ಧಿಯಾದವು. ಹರಿಜನರ ವೃತ್ತಿಗೆ ಇತರರು ಆಶಿಸಲಿಲ್ಲ. ಗ್ರಾಮಜೀವನದಲ್ಲಿ ಹರಿಜನರೂ ಒಂದಂಗವಾಗಿ ಪರಿಣಮಿಸಿದರು. ಉತ್ಸವ ಹಬ್ಬಕಾಲಗಳಲ್ಲಿ ಹರಿಜನರಿಗೆ ಸಲ್ಲತಕ್ಕ ಮರ್ಯಾದೆಗಳು ರೂಢಿಯಾದವು; ಧಾನ್ಯರಾಶಿಯಲ್ಲಿ ಭಾಗವೂ ಸಲ್ಲುವಂತಾಯಿತು. ಗ್ರಾಮದಲ್ಲಿ ಒಂದೇ ಬಾವಿಯಿರುವಾಗ ಬಾವಿಯ ಬಳಿಗೆ ಹರಿಜನರು ಬರಲು ಇತರರೆಲ್ಲರ ಅಡ್ಡಿಯೇನೋ ಉಂಟು; ಆದರೆ ನೀರು ಬೇಕೆಂದು ಬಂದಾಗ ನೀರನ್ನು ಸೇದಿ ಎರೆಯುವುದು ಇತರರ ಕರ್ತವ್ಯವೆನಿಸಿತ್ತು. ಗೋಮಾಂಸ ಮೊದಲಾದ ಅಭಕ್ಷ್ಯಭಕ್ಷಣ, ಮದ್ಯಪಾನ ಮುಂತಾದ ಅಪೇಯ ಪಾನಗಳ ಕಾರಣದಿಂದ ಹರಿಜನರು ಪ್ರತ್ಯೇಕರೆಂಬ ಭಾವನೆಯೇ ಸರ್ವತ್ರ ನೆಲೆಸುವಂತಾಯಿತು. ಹರಿಜನರ ಸಂಸ್ಕಾರಕ್ಕೆ

ಹಿಂದೂ ಧರ್ಮಜ್ಞರು ಎಂದೂ ಉದ್ಯಮಿಸಲೇ ಇಲ್ಲವೆನ್ನುವುದು ಮಿಥ್ಯಾಲಾಪ. ಸಾಧುಸಂತರನೇಕರು ಹರಿಜನರಿಗೆ ಧರ್ಮೋಪದೇಶವನ್ನು ಹಿಂದಿನ ಕಾಲದಲ್ಲಿ ಮಾಡಿದರು; ಹರಿಜನರಲ್ಲಿಯೇ ಯತಿಗಳು ಅವತರಿಸಿದರು. ಹೀಗಿರುವಲ್ಲಿ ಭಾರತೀಯ ಸಂಸ್ಕೃತಿಯೇ ದುಷ್ಟವೆನ್ನುವುದು ವಿಚಾರ ಹೀನತೆಯನ್ನು ಪ್ರಕಾಶಗೊಳಿಸುತ್ತದೆಯೇ ವಿನಾ ವಿವೇಚನೆಯನ್ನು ತೋರುವುದಿಲ್ಲ.

ಆದಿಯಲ್ಲಿದ್ದ ವೈರವು ಕಾಲಕ್ರಮದಲ್ಲಿ ಮಾಯವಾದುದಲ್ಲದೆ ಉದ್ಧಾರ ಪ್ರಯತ್ನಗಳೂ ನಡೆದುವೆಂದು ಹೇಳಿಕೊಳ್ಳುವುದರಲ್ಲಿ ಹರಿಜನರ ದುರ್ದಶೆಯು ಮೇಲ್ಮೆಯನ್ನೇ ಪಡೆಯದೆ ಇರತಕ್ಕುದೆಂಬ ಅರ್ಥವಾಗಲಿ ಉದ್ದೇಶವಾಗಲಿ ಇಲ್ಲ. ಭಾರತೀಯ ಸಂಸ್ಕೃತಿಯಲ್ಲಿ ದೌರ್ಬಲ್ಯವು ತೋರಿಕೊಂಡ ಕಾಲದಿಂದ ಹರಿಜನರ ಅವಸ್ಥೆಯಲ್ಲಿ ಹೀನತೆಯು ಹೆಚ್ಚಿತು. "ಹಿಂದೂ ಧರ್ಮವೆಂಬ ಕ್ಷೀರೋದಧಿಯಲ್ಲಿ ಈ ಹಾಲಾಹಲವು ಮಿಶ್ರವಾಗಿದೆ; ಆ ವಿಷವನ್ನು ಕ್ರಮವಾಗಿ, ಸ್ವಲ್ಪಸ್ವಲ್ಪವಾಗಿ, ಬೇರ್ಪಡಿಸಿ ಶುದ್ಧಿಮಾಡುವ ಕರ್ತವ್ಯ ನಮ್ಮದು" ಎಂದು ಗಾಂಧೀಜಿಯವರು ಹೇಳುತ್ತಲಿದಾರೆ. "ಹರಿಜನರನ್ನು ಅಂತ್ಯಜರೆಂದು ನಾವು ಕಾಣುತ್ತಿರುವ ಕರ್ಮಫಲವಾಗಿ ಮಾನವಸಮುದಾಯದಲ್ಲಿ ಭಾರತೀಯರು ಅಂತ್ಯಜರಾಗಿ ಪರಿಣಮಿಸಿದ್ದಾರೆ" ಎಂಬುದಾಗಿ ರಬೀಂದ್ರನಾಥರು ಹೇಳುತ್ತಾರೆ. ಹರಿಜನರ ವಿಷಮಸ್ಥಿತಿಯನ್ನು ಕಂಡು ಮರುಕಗೊಳ್ಳದವರಿಲ್ಲ; ಎಲ್ಲರೂ ಹರಿಜನೋದ್ಧಾರವು ಕರ್ತವ್ಯವೆಂದು ಒಪ್ಪುತ್ತಾರೆ. ಆದರೆ ಉದ್ಧಾರ ವಿಧಾನವು ಹೇಗೆಂಬ ನಿರ್ಣಯವು ವಿಚಾರಪೂರಿತವಾಗಿರಬೇಕಾದುದು ಅತ್ಯವಶ್ಯಕ. ಬಲವಂತದಿಂದ ನಡೆಯುವ ಉದ್ಧಾರಕರ್ತವ್ಯವು ಪರಿಣಾಮದಲ್ಲಿ ಅಮಂಗಲಕರವಾಗುವುದು; ಗುಲಾಮರನ್ನು ಕಾನೂನು ಬಲದಿಂದ ಬಿಡುಗಡೆ ಮಾಡಿಸಿದಾಗ ಹಿಂದಿದ್ದುದಕ್ಕಿಂತಲೂ ಘೋರವಾದ ದುರವಸ್ಥೆಯೇ ವಿಮುಕ್ತರಾದ ಗುಲಾಮರಿಗೆ ಪ್ರಾಪ್ತಿಯಾಯಿತು. ಆತುರದಿಂದ ಕೂಡಿದ ಅಥವಾ ಬಲವದ್ಬಂಧದಿಂದ ಕೂಡಿದ ವಿಧಾನವು ಸತ್ಪರಿಣಾಮಕಾರಕವಾಗಲಾರದು; ಇರುವ ಕಷ್ಟಗಳನ್ನು ಪರಿಹಾರ ಮಾಡದೆ ಇರುವುದೇ ಅಲ್ಲದೆ ಇಲ್ಲದ ಕಷ್ಟಗಳನ್ನುಂಟುಮಾಡಬಹುದು.

ಜಾತಿಪದ್ಧತಿ. ಬೇರಾವ ದೇಶದಲ್ಲಿಯೂ ನಮ್ಮ ದೇಶದಲ್ಲಿ ತೋರಿದ ವರ್ಣ ಸಂಘರ್ಷಣ ಸಮಸ್ಯೆಗಳು ತೋರಲಿಲ್ಲ. ನಾನಾ ವರ್ಣಗಳ ಜನ-ಸಮೂಹಗಳು ಸಂಧಿಸಿ ಏಕದೇಶದಲ್ಲಿ ಅನ್ಯೋನ್ಯತೆಯಿಂದ ಶಾಂತಿಪ್ರಧಾನ ವಾದ ಜೀವನವನ್ನು ನಡೆಸಲು ಜಾತ್ಯಾಚಾರ ವ್ಯವಸ್ಥೆಯೇ ಪರಮ ಸಾಧಕವಾಗಿ ಪರಿಣಮಿಸಿ ಸಮಾಜಕ್ಕೆ ಸ್ಥಿರಲಕ್ಷಣವಾಯಿತು. ಭಾರತ ವರ್ಷದಲ್ಲಿ ಸಂಧಿಸಿರುವ ಅನೇಕಾನೇಕ ಮಾನವರಾಶಿಗಳು ಪರಸ್ಪರ ಸೌಹಾರ್ದದಿಂದ ಜೀವನವನ್ನು ನಡೆಸುತ್ತಲಿರುವುದು ಜಾತ್ಯಾಚಾರ ಮಹಿಮೆಯಿಂದಲೇ. ಅದರ ಪ್ರಭಾವದಿಂದ ಎಂತಹ ಜಾತಿ ವಿಭಾಗ ವಾಗಿದ್ದರೂ ಸಮಾಜದಲ್ಲಿ ಒಂದು ಅಂಗವೆನಿಸಿ, ಸಹಜ ಮತ್ತು ವಿಶಿಷ್ಟ ವಾದ ಆಚಾರಗಳನ್ನು ಅನುಸರಿಸುತ್ತ ಅನುಗುಣವಾದ ಅಭಿವೃದ್ಧಿಯನ್ನು ಸಾಧಿಸುತ್ತಲಿರುವುದು. ಬೇರೆ ಬೇರೆಯಾದ ಜಾತಿಗಳು ಇತರ ದೇಶಗಳಲ್ಲಿ ಸಂಧಿಸಿದಾಗ ವೈಷಮ್ಯವೇ ಪ್ರಬಲವಾಗಿ ಪರಸ್ಪರ ವೈರವು ಪರಂ-ಪರೆಯಾಗಿ ನಡೆಯಿತು; ಭಾರತವರ್ಷದಲ್ಲಿ ಮಾತ್ರ ವೈಷಮ್ಯಕ್ಕೆ ಪ್ರತಿಯಾಗಿ ಸೌಹಾರ್ದವು ನೆಲೆಸಿತು. ಇತರ ದೇಶಗಳಲ್ಲಿ ಪ್ರಬಲವಾಗಿ ರೂಢಿಗೊಂಡು ಹೇಯವಾದ ರೂಪವನ್ನು ತಾಳಿದ ಗುಲಾಮತನ ಅಥವಾ ದಾಸ್ಯವೆನ್ನುವುದು ಭಾರತೀಯರಲ್ಲಿ ತೋರಲಿಲ್ಲ. ಈ ಸಂಗತಿಗಳನ್ನು ಪರಾಂಬರಿಸಿದಾಗ ಜಾತ್ಯಾಚಾರವೆಂಬುದು ಸಮಾಜದ ಐಕ್ಯತೆಗೆ ಉದ್ದಿಷ್ಟವಾದುದೇ ಹೊರತು ಸಮಾಜ ವಿಭೇದಕ್ಕೆ ಉದ್ದಿಷ್ಟವಾದುದಲ್ಲವೆಂಬ ಅಂಶವು ಸ್ಪಷ್ಟ ವಾಗುವುದು.

**ಜೀವಿಕಶಾಂತಿ**

ಜಾತ್ಯಾಚಾರವುಳ್ಳ ಸಮಾಜದಲ್ಲಿ ಪ್ರತಿ ಜಾತಿಗೂ ಒಂದು ಕಸಬು ಅಥವಾ ಜೀವಿಕವು ಸಿದ್ಧವಾಗಿ ಇತರ ಜಾತಿಗಳವರು ಆ ಕಸಬನ್ನು ಕೈಕೊಳ್ಳಲು ಪ್ರಯತ್ನಿಸದಂತೆ ಆಯಿತು. ಮೊದಲಿನಿಂದಲೂ ವೃತ್ತಿಭೇದ ಅಥವಾ ಜೀವಿಕ ಭೇದವೇ ಜಾತಿ ವಿಭೇದಕ್ಕೆ ಕಾರಣವಾಯಿತು; ಆದುದರಿಂದ ಒಂದೇ ವೃತ್ತಿಗಾಗಿ ನಡೆಯತಕ್ಕ ಪೋಟಾಪೋಟಿಯು ಒಂದೇ ಜಾತಿ ಯವರಲ್ಲಿ ನಡೆಯುವಂತಾಯಿತು. ಒಂದು ಜಾತಿಯವರು ಅನ್ಯಜಾತಿ ಯವರ ವೃತ್ತಿಗೆ ಆಸೆಪಟ್ಟು ಅವರೊಡನೆ ಜೀವಿಕ ಸ್ಪರ್ಧೆಗೆ ಪ್ರಯತ್ನಿಸು

ತ್ತಿರಲಿಲ್ಲ. ಇದರಿಂದ ಜೀವಿಕಕ್ಕಾಗಿ ಪೈಪೋಟಿಯೆಂಬುದು ಭಾರತ ದೇಶದಲ್ಲಿ ತೋರಲಿಲ್ಲ; ಪೈಪೋಟಿಯ ಕಾರಣದಿಂದ ಹುಟ್ಟತಕ್ಕ ವೈಮನಸ್ಯ ಗಳೂ ಮನಸ್ತಾಪಗಳೂ ಕಾಣಿಸಿಕೊಳ್ಳಲಿಲ್ಲ. ಪ್ರತಿಯೊಂದು ಜಾತಿಗೂ ವಿಶಿಷ್ಟವಾದ ಜೀವಿಕವೊಂದು ನಿಷ್ಕೃಷ್ಟವಾಗಿ ಸರ್ವಾಧಿಕಾರಕ್ಷೇತ್ರ ವಾದುದರಿಂದ ಪ್ರತಿ ಜಾತಿಯಲ್ಲಿಯೂ ಜೀವಿಕಕ್ಕೆ ಸಂಬಂಧಪಟ್ಟ ಕಟ್ಟಳೆ ಗಳು ತೋರಿಕೊಂಡು ಅನ್ಯೋನ್ಯತೆಯೂ ಪರಸ್ಪರ ಸಹಾಯವೂ ಉದ್ದೇಶ ವಾಗಿಯುಳ್ಳ ಸಂಪ್ರದಾಯಗಳು ಬಲಗೊಂಡವು. ಈ ಪರಸ್ಪರ ಸಹಾಯದ ಆಚರಣೆಗಳನ್ನು ಇಂದಿಗೂ ಕೆಲವು ಜಾತಿಗಳಲ್ಲಿ ಕಾಣಬಹುದು. ಈ ವ್ಯವಸ್ಥೆಯಿಂದ ದೇಶದಲ್ಲಿ ಶಾಂತಿ ಸಮಾಧಾನಗಳು ದೃಢವಾದವು; ಮತ್ತು ಪರಂಪರೆಯಾಗಿ ನೆಲೆಸಿದ ಕಾರಣದಿಂದ ಪ್ರತಿ ಉದ್ಯೋಗದಲ್ಲಿಯೂ ಚಾತುರ್ಯವು ಅಭಿವೃದ್ಧಿ ಪಡೆಯಿತು. ಭಾರತೀಯ ಕುಶಲಕಲೆಗಳ ಮತ್ತು ಲಲಿತಕಲೆಗಳ ನೈಪುಣ್ಯವು ಸಿದ್ಧವಾದುದು ಈ ವ್ಯವಸ್ಥೆಯ ಬಲದಿಂದಲೇ.

ಅನ್ಯೋನ್ಯತೆ

ಸಮಾಜದಲ್ಲಿ ಪ್ರತಿ ಜಾತಿಗೂ ಸ್ಥಾನಗೌರವವು ದೃಢವಾಗಿ ಎಲ್ಲ ಜಾತಿಗಳೂ ಅನ್ಯೋನ್ಯತೆಯಿಂದ ಜೀವಿಸಿದಹಾಗೆಲ್ಲ ಜಾತಿಯಲ್ಲಿ ಜನಿಸಿದ ಪ್ರತಿಯೊಬ್ಬರಿಗೂ ತಕ್ಕ ಸ್ಥಾನವು ಸಂದಿತು. ದೇಶದಲ್ಲಿ ಹುಟ್ಟಿದವರು ಸಮಾಜಕ್ಕೆ ಬೇಡದವರಾಗುವುದೆಂಬುದು ಅಪರೂಪವೇ ಆಯಿತು. ಪ್ರತಿ ಗೃಹಸ್ಥನಿಗೂ ತನ್ನ ಜಾತಿಯಲ್ಲಿ ಸ್ಥಾನಮರ್ಯಾದೆಯು ಭದ್ರವಾಗಿತ್ತು. ಜಾತಿಯಲ್ಲಿ ಸೇರಿದ ಎಲ್ಲರೂ ಒಟ್ಟಿಗೇ ವ್ಯವಹರಿಸುತ್ತಿದ್ದರಾದಕಾರಣದಿಂದ ಸುಖದುಃಖಗಳು ಎಲ್ಲರಿಗೂ ಸೇರಿ ಪರಸ್ಪರ ಸಹಾಯವು ಉತ್ತಮವಾದ ಬಗೆಯಲ್ಲಿ ನಡೆಯುತ್ತಿತ್ತು. ನ್ಯಾಯ ನೀತಿಗಳನ್ನು ರಕ್ಷಿಸುತ್ತ ನಿಯಮ ಗಳನ್ನು ಜಾರಿಗೆ ಒತ್ತಾಯಪಡಿಸಲು ಜಾತಿಯಲ್ಲಿ ಪಂಚಾಯತ ಸಭೆಯು ಇದ್ದೇ ಇದ್ದಿತು. ಸ್ವಜಾತಿಯವರಿಗೆ ಸಹಾಯಮಾಡುವ ಕಟ್ಟಳೆಗಳಿಗೆ ನಿದರ್ಶನ ಗಳನ್ನು ಈಗಲೂ ಕಾಣಬಹುದು. ನಿರ್ಗತಿಕನಾಗಿಯೋ ನಿರುದ್ಯೋಗಿ ಯಾಗಿಯೋ ಇದ್ದರೆ ಸ್ವಜಾತಿಯವರು ಸಹಾಯವನ್ನೊದಗಿಸಬೇಕಾದುದು ಕರ್ತವ್ಯವೆನಿಸಿತ್ತು. ವ್ಯಾಪಾರದಲ್ಲಿ ನಷ್ಟವನ್ನು ಪಡೆದ ವರ್ತಕನು ಮೊನ್ನೆ ಮೊನ್ನೆವರೆಗೂ ಆ ವಿಷಮ ಸಮಯದಲ್ಲಿ ತನ್ನ ಕುಲಸ್ಥರಿಗೆ ಔತಣವನ್ನು

ಮಾಡಿಸುತ್ತಿದ್ದನು; ಔತಣಕ್ಕೆ ತಪ್ಪಿಸಿಕೊಂಡವರಿಗೆ ಗೌರವ ನಷ್ಟ. ಬಂದವರು ತಮ್ಮ ಯೋಗ್ಯತೆಗೆ ತಕ್ಕಂತೆ ಸಹಾಯವನ್ನು ನೀಡಬೇಕಾಗಿತ್ತು. ಸಾಲ ಸೋಲಗಳು, ಕರಾರುಗಳು ಮುಂತಾದವುಗಳಲ್ಲಿ ತಕರಾರೇ ಹುಟ್ಟುತ್ತಿರಲಿಲ್ಲ. ಪ್ರತಿ ಜಾತಿಯಲ್ಲಿಯೂ ಅನ್ಯೋನ್ಯ ಸಹಾಯದ ರೀತಿಗಳು ಅನೇಕವಾಗಿ ವೃದ್ಧಿಗೊಂಡುವಲ್ಲದೆ ಜಾತಿಯಲ್ಲಿ ಸಮತ್ವವು ಭದ್ರವಾಗಿ ಬೇರೂರಿತು. ಧನಿಕನಾಗಲಿ ಬಡವನಾಗಲಿ ಒಂದು ಜಾತಿಗೆ ಸೇರಿದವನಾದರೆ ಗೌರವದಲ್ಲಿ ಎಲ್ಲರೂ ಸಮಾನರೇ. ಭಾರಿ ಹುದ್ದೇದಾರನ ಮನೆಯಲ್ಲಿ ಹಬ್ಬವೋ ಉತ್ಸವವೋ ನಡೆದಾಗ ಭಿಕ್ಷುಕನಾದರೂ ಆತನ ಪಕ್ಕದಲ್ಲಿಯೇ ಸಹಪಙ್ಕ್ತಿಯಲ್ಲಿ ಊಟಕ್ಕೆ ಕೂಡಬಹುದು. ಸಮತ್ವ ತತ್ವದ ಆಚರಣೆಯಿದ್ದುದರಿಂದ ಶ್ರೀಮಂತರಿಗೂ ದರಿದ್ರರಿಗೂ ಅಂತರದಲ್ಲಿ ಬೆಳೆಯಬಹುದಾದ ವಿರೋಧಗಳಾಗಲಿ ವೈಷಮ್ಯಗಳಾಗಲಿ ಬೆಳೆಯಲಿಲ್ಲ.

ಸಮತೆ

ಧನಿಕನ ಧನವು ಜಾತಿಯವರೆಲ್ಲರಿಗೂ ಸಮಯದಲ್ಲಿ ಉಪಯುಕ್ತವಾಗುತ್ತಿತ್ತು; ಮತ್ತು ಎಲ್ಲರಿಗೂ ಹಿತವೆನಿಸಿದ ಧರ್ಮಕಾರ್ಯಗಳಲ್ಲಿ ವಿನಿಯೋಗವಾಗುತ್ತಿತ್ತು. ಈ ಪದ್ಧತಿಗಳ ಬೆಲೆಯನ್ನು ಪೂರ್ಣವಾಗಿ ತಿಳಿಯಲು ಜಾತ್ಯಾಚಾರವೇ ಇಲ್ಲದ ಸಮಾಜದಲ್ಲಿ ದರಿದ್ರರಾದವರ ಅಥವಾ ನಿರ್ಗತಿಕರ ಸ್ಥಿತಿಯೊಡನೆ ಹೋಲಿಸಿ ಕಾಣಬೇಕು. ಶ್ರೀಮಂತ ವರ್ಗವೆಂಬುದು ಪ್ರತ್ಯೇಕವಾಗಿ ಸಿದ್ಧವಾಗಲು ಭಾರತಭೂಮಿಯಲ್ಲಿ ಆಸ್ಪದವೇ ಇರಲಿಲ್ಲ; ಅದಕ್ಕೆ ಜಾತ್ಯಾಚಾರ ವ್ಯವಸ್ಥೆಯೇ ಕಾರಣ. ಪಾಶ್ಚಾತ್ಯ ದೇಶಗಳಲ್ಲಿ ಕೋಟ್ಯಾಧೀಶ್ವರರು ಒಂದುಕಡೆ, ದಟ್ಟದರಿದ್ರರಿನ್ನೊಂದುಕಡೆ ಉಂಟು; ಧನವಂತರು ಸಂಖ್ಯೆಯಲ್ಲಿ ಎಷ್ಟು ಅಲ್ಪರೋ ಧನಹೀನರು ಅಷ್ಟು ಅನಲ್ಪರು; ಅವರೆಷ್ಟು ಬೀಗಿದವರೋ ಇವರು ಅಷ್ಟು ತಗ್ಗಿದವರು. ಸೌಹಾರ್ದ ಬೆಳೆಯಲು ಆಸ್ಪದವಿಲ್ಲ; ಸದಾ ಇಬ್ಬರಿಗೂ ಪೋಟಾಪೋಟಿಯೇ. ಈ ಕಾರಣದಿಂದ ಅವರಲ್ಲಿ ಧನವಂತನೊಬ್ಬನು ಸುಖಿಯಾಗಿದ್ದರೆ ಸಾವಿರಮಂದಿ

ಸ್ಥಿರತೆ

ದುಃಖಿಗಳಾಗಿರುತ್ತಾರೆ. ಗೇಯುವುದು ಸಾವಿರ ಮಂದಿ, ಉಂಡು ಸುಖಿಸುವುದು ಒಬ್ಬನು. ಧನವಂತರಿಗೇ ನಿಜವಾದ ಅಧಿಕಾರ, ಬಡವರಿಗೆ ಹೆಸರಿನ ಅಧಿಕಾರ. ಒಬ್ಬನನು ಮತ್ತೊಬ್ಬರು ಮೋಸಗೊಳಿಸುವ

ದುರ್ನೀತಿಗೆ ಅವಕಾಶ ಹೆಚ್ಚು. ಸಮಾಜದಲ್ಲಿ ಸ್ಥಿರತೆ ಅಥವಾ ಭದ್ರತೆಯಿಲ್ಲ; ಇಂದು ಲಕ್ಷಾಧೀಶ, ನಾಳೆ ಭಿಕ್ಷಾಧೀಶ. ತುಷ್ಟಿ ಸಮಾಧಾನಗಳಿಲ್ಲ; ಎಲ್ಲರೂ ಅವಿಶ್ರಾಂತರಾಗಿ ಸಾಹಸಪಡುತ್ತಲೇ ಇರಬೇಕು.

ಜಾತಿ-ವರ್ಗ

ಭಾರತೀಯ ಜಾತಿಪದ್ಧತಿಯಲ್ಲಿರುವ ಗುಣವಿಶೇಷಗಳು ಇತರ ಸಮಾಜಗಳಲ್ಲಿ ತೋರುವುದಿಲ್ಲ. ಪಾಶ್ಚಾತ್ಯ ಸಮಾಜಗಳಲ್ಲಿ ವರ್ಗಗಳುಂಟು, ಜಾತಿಗಳಿಲ್ಲ. ಪ್ರತಿಯೊಬ್ಬನೂ ತನ್ನ ಚೈತನ್ಯವನ್ನು ತೋರಿ ಸ್ವಂತ ಸಾಹಸದಿಂದ ಅಭಿವೃದ್ಧಿಪಡೆಯಬೇಕು; ಆ ಪ್ರಯತ್ನದಲ್ಲಿ ಇತರರ ಸಹಾಯಕ್ಕಿಂತಲೂ ವಿರೋಧವೇ ಎದುರಾಗುವುದು. ಅಭಿವೃದ್ಧಿಪಡೆದ ತರುವಾಯ ಹಿಂದಿನ ವರ್ಗವನ್ನು ಬಿಟ್ಟು ಮೇಲಿನ ವರ್ಗದಲ್ಲಿ ಪ್ರವೇಶಿಸುವನು; ಪ್ರತಿಯೊಬ್ಬರಿಗೂ ಅತ್ಯುತ್ತಮ ವರ್ಗದಲ್ಲಿ ಸೇರಬೇಕೆಂಬ ಆಕಾಂಕ್ಷೆಯುಂಟು. ಈ ಸಂತತ ಸಾಹಸದಲ್ಲಿ ಇಷ್ಟಸಿದ್ಧಿಯು ಕೆಲವರಿಗೆ ಮಾತ್ರ, ನಷ್ಟವು ಬಹುಮಂದಿಗೆ ಆಗತಕ್ಕದ್ದು ಅನಿವಾರ್ಯ. ಅದಲ್ಲದೆ ಒಂದು ವರ್ಗದಲ್ಲಿ ಹುಟ್ಟಿ ಮೇಲ್ಮೆಯನ್ನು ಪಡೆದಾತನು ಆ ವರ್ಗವನ್ನು ತ್ಯಜಿಸಿ ಬೇರೊಂದು ವರ್ಗವನ್ನು ಸೇರಿಕೊಳ್ಳುವುದರಿಂದ ವರ್ಗಕ್ಕೆ ಆತನಿಂದ ಯಾವ ಪ್ರಯೋಜನವೂ ಉಂಟಾಗುವುದಿಲ್ಲ. ಕೀಳಾದ ವರ್ಗಗಳು ಕೀಳಾಗಿ ಶಾಶ್ವತವಾಗಿರಬೇಕು. ಅದೇ ಒಂದು ಜಾತಿಯಲ್ಲಿ ಒಬ್ಬನು ಮೇಲ್ಮೆಯನ್ನು ಪಡೆದಾಗ ಜಾತಿಯನ್ನು ಬಿಡಲಾರದ ಕಾರಣದಿಂದ ಆತನ ಮೇಲ್ಮೆಯು ಮಹಿಮೆಯೂ ಆ ಜಾತಿಯವರೆಲ್ಲರಲ್ಲಿಯೂ ತೋರಬಹುದು. ಉದ್ಯಮ ಮಹತ್ವವುಳ್ಳವರು ಜಾತಿಯಲ್ಲಿ ಹುಟ್ಟಿದಹಾಗೆಲ್ಲ ಜಾತಿಗೆ ಮೇಲು ಒದಗುವುದು. ಈ ರೀತಿಯಲ್ಲಿ ಜಾತಿಯೆಂಬುದು ಸಹಜಶಕ್ತಿಯಿಂದ ಅಭಿವೃದ್ಧಿಯನ್ನು ಪಡೆಯುವುದು; ವರ್ಗವೆಂಬುದು ಅಭಿವೃದ್ಧಿಯನ್ನು ಸ್ವಂತ ಶಕ್ತಿಯಿಂದ ಪಡೆಯಲಾರದು.

ಜಾತಿ-ಗೌರವ

ಜಾತಿಯೆಂಬ ಶಬ್ದಕ್ಕೆ ಅರ್ಥವೇನು? ಐರೋಪ್ಯರು ಮೊದಮೊದಲು ಭಾರತೀಯ ಜನಸಮುದಾಯವನ್ನು ನೋಡಿ ಜಾತಿ ವಿಭಾಗಗಳನ್ನು ಕಂಡಾಗ ಭ್ರಾಂತರಾಗಿ ಯಾವುದೋ ಶಬ್ದವನ್ನು ಅದಕ್ಕೆ ಸಮಾನವೆಂದು ಭಾವಿಸಿಕೊಂಡರು. ದೇಶಭಾಷೆಗಳಲ್ಲಿ ಜಾತಿಯೆಂಬುದಕ್ಕೆ ಸಾಮಾನ್ಯವಾಗಿ

ಗೌರವ, ಮಾನ, ಪದವಿಯೆಂಬ ಅರ್ಥವುಂಟು. ಜಾತಿಭ್ರಷ್ಟ ಅಥವಾ ಜಾತಿಹೀನ ಎಂದಾಗ ನೀತಿಹೀನನೆಂದೇ ಅರ್ಥವಾಗುವುದು. ಈ ರೀತಿಯಲ್ಲಿ ಜಾತಿಯೆಂದರೆ ಗೌರವವೆಂಬ ಅರ್ಥವೇ ಸಹಜವಾದುದು. ಅಪರಿಚಿತನಾದವನು ತನ್ನ ಜಾತಿಯನ್ನು ತಿಳಿಸಿದೊಡನೆಯೇ ಎಷ್ಟೋ ಪರಿಚಯವನ್ನು ಕೊಟ್ಟಹಾಗಾಗುವುದು. ಇದಕ್ಕೆ ಮೂಲ—ಜಾತಿಯಲ್ಲಿ ಅನಿವಾರ್ಯವಾಗಿ ವ್ಯಕ್ತಿಗೆ ದೊರಕುವ ಶಿಕ್ಷಣ ಮತ್ತು ಶಿಷ್ಟಿಗಳು. ರಾಜಾಧಿಕಾರಿಗಳು ತಮ್ಮ ಅಧಿಕಾರಬಲದಿಂದ ನೆಲೆಗೊಳಿಸಲಾಗದ ನಯನೀತಿಗಳನ್ನು ಜಾತಿಯೆಂಬುದು ನೆಲೆಗೊಳಿಸಬಲ್ಲುದು. ಉಚಿತವಾದ ಮತ್ತು ವಿಶಿಷ್ಟವಾದ ಶಿಕ್ಷಣವನ್ನು ಹುಟ್ಟಿದವರೆಲ್ಲರಿಗೂ ಜಾತಿಯು ಒದಗಿಸುವುದಲ್ಲದೆ ಆಚಾರನಿಯಮಗಳನ್ನು ನಡೆಸದಿದ್ದವರನ್ನು ಶಿಕ್ಷಿಸಲೂ ಶಿಕ್ಷಿಸುತ್ತದೆ. ದಂಡಾಧಿಕಾರಿಗಳನ್ನು ಅಲಕ್ಷ್ಯಮಾಡತಕ್ಕವನು ಕೂಡ ಜಾತಿ ಮರ್ಯಾದೆಯನ್ನು ಅತಿಕ್ರಮಿಸುವುದಿಲ್ಲ.

**ಜಾತಿ-ಶಿಷ್ಟಿ**

ಜಾತಿಭ್ರಷ್ಟನಾಗುವುದಕ್ಕಿಂತ ಘೋರವಾದ ಶಿಕ್ಷೆಯಿಲ್ಲ; ಮರಣದಂಡನೆ ಕೂಡ ಅದರಷ್ಟು ಕಠಿಣವಲ್ಲ. ಈ ಬಗೆಯಲ್ಲಿ ಭಾರತೀಯರು ನಯನೀತಿಗಳನ್ನು ಸಾವಿರಾರು ವರ್ಷ ಕಾಲ ಕಾಪಾಡಿಕೊಂಡವರು. ಜಾತ್ಯಾಚಾರ ವ್ಯವಸ್ಥೆಯುಳ್ಳ ಸಮಾಜದಲ್ಲಿ ನೀತಿ ನಷ್ಟವು ಸುಲಭವಲ್ಲ; ನೀತಿ ರಕ್ಷಣೆಯು ಸಹಜವಾಗಿ, ಸುಲಭವಾಗಿ, ಸ್ವತಂತ್ರವಾಗಿ ಕೈಗೂಡುವುದು. ನೈತಿಕ ಜೀವನವೇ ಎಲ್ಲ ಜಾತಿಗಳಲ್ಲಿಯೂ ಭದ್ರಗೊಳ್ಳುವುದು.

**ಅಭಿವೃದ್ಧಿಮಾರ್ಗ**

ಜಾತಿಯೆಂದರೂ ಮಾನಮರ್ಯಾದೆಗಳೆಂದರೂ ಒಂದೇ. ಪ್ರತಿ ಜಾತಿಗೂ ಆಚಾರ ಮರ್ಯಾದೆಗಳಲ್ಲಿ ವಿಶಿಷ್ಟವಾದ ಆದರ್ಶವುಂಟು, ಅದಕ್ಕನುಸಾರವಾದ ನಿಯಮಗಳುಂಟು. ಆ ನಿಯಮಗಳನ್ನು ಬಿಡಲು ವ್ಯಕ್ತಿಗೆ ಸಾಧ್ಯವಿಲ್ಲ. ಆದ್ದರಿಂದ ಜಾತಿಯ ಮರ್ಯಾದೆ ಅಥವಾ ಅಂತಸ್ತು ಎಂಬುದು ನಷ್ಟವಾಗುವ ಸಂಭವವೇ ಇಲ್ಲ; ಕೀಳಾಗಲು ಮಾರ್ಗವಿಲ್ಲ. ಮೇಲಾಗಲು ಮಾರ್ಗವುಂಟು. ಒಬ್ಬ ವ್ಯಕ್ತಿಯು ಮಾತ್ರ ಸ್ವಾರ್ಥಿಯಾಗಿ ಮೇಲ್ಮೆಯನ್ನು ಪಡೆಯಲು ಸಾಧ್ಯವಿಲ್ಲ; ತನ್ನ ಮೇಲ್ಮೆಯನ್ನು ತನ್ನ

ಜಾತಿಯವರಿಗೂ ಹಂಚಿಕೊಡುತ್ತಲಿರಬೇಕು. ಆರ್ಥಿಕವಾದ ಪೈಪೋಟಿಯಿಲ್ಲದೆ ನೀತಿಯೇ ಪ್ರಧಾನವಾಗಿದ್ದುದರಿಂದ ಆಚಾರ ವಿಚಾರಗಳಲ್ಲಿ ಪ್ರತಿ ಜಾತಿಯೂ ಉನ್ನತಿಯನ್ನು ಸಾಧಿಸಲು ಅನುಕೂಲವಾಗಿತ್ತು. ನಮ್ಮ ನೆರೆಹೊರೆಯಲ್ಲಿಯೇ ಇದಕ್ಕೆ ನಿದರ್ಶನಗಳನ್ನು ಕಾಣಬಹುದು. ಮೊದಲು ಮಾಂಸಾಹಾರಿಗಳಾಗಿದ್ದು ಕಾಲಕ್ರಮದಲ್ಲಿ ಅದನ್ನು ತ್ಯಜಿಸಿದ ಜಾತಿಗಳನ್ನು ಎಲ್ಲಿಯಾದರೂ ಕಾಣಬಹುದು. ಹಿಂದೂ ಧರ್ಮತತ್ವಗಳಿಗನುಸಾರವಾಗಿ ನೈತಿಕ ಜೀವನದಲ್ಲಿ ಮೇಲ್ಮೆಯನ್ನೂ ಆಚಾರ ಶುದ್ಧಿಯನ್ನೂ ಪಡೆಯಲು ಪ್ರತಿ ಜಾತಿಗೂ ಆಸ್ಪದವುಂಟು. ಭಾರತೀಯರಲ್ಲಿ ವ್ಯಕ್ತಿಯು ಸ್ವಾರ್ಥಿಯಾಗಿ ಮೇಲ್ಮೆಯನ್ನು ಪಡೆಯಲು ಅವಕಾಶವಿಲ್ಲ; ಒಟ್ಟು ಜಾತಿಯೇ ಮೇಲ್ಮೆಯನ್ನು ಪಡೆಯಲು ಆಸ್ಪದವುಂಟು. ಇತಿಹಾಸವನ್ನು ಗಮನಿಸಿದರೆ ಮೇಲ್ಮೆಯನ್ನು ಪಡೆದ ಜಾತಿಗಳ ವೃತ್ತಾಂತಗಳು ದೊರಕುತ್ತವೆ. ಹಿಂದೂ ಸಮಾಜವು ಚೈತನ್ಯಪೂರ್ಣವಾಗಿದ್ದ ಕಾಲದಲ್ಲಿ ರೂಕ್ಷಜನರಾಗಲಿ ವ್ರಾತ್ಯರಾಗಲಿ ಶುದ್ಧಿಯನ್ನು ಪಡೆದು ಜಾತಿಗೌರವವನ್ನು ಹೊಂದಿ ಸಮಾಜದಲ್ಲಿ ಅಂಗವಾಗಿ ಪರಿಣಮಿಸುವುದು ಸಾಮಾನ್ಯವಾಗಿತ್ತು.

**ಆರ್ಥಿಕ ಸಮಾಧಾನ**

ಆರ್ಥಿಕ ರೀತಿಯಲ್ಲಿ ಜಾತಿಗಳು ಪರಸ್ಪರಾವಲಂಬಿಗಳಾಗಿಯೇ ಇದ್ದವು. ಬೇರೆ ಜಾತಿಯ ಜೀವಿಕದ ಗೋಜಿಗೆ ಯಾರೂ ಹೋಗದೆ ಇದ್ದುದರಿಂದ ವೈಷಮ್ಯ ತೋರಲು ಅವಕಾಶವಿರಲಿಲ್ಲ. ಇದಲ್ಲದೆ ಕಸಬುಗಳಲ್ಲಿ ಎಲ್ಲವೂ ಸಮಾನವೆಂದೇ ಎನಿಸಿದ್ದವು. 'ಅವರವರ ಕೆಲಸಕಾರ್ಯಗಳಲ್ಲಿ ಅವರು ದೊಡ್ಡವರು' ಎಂಬ ಭಾವನೆಯೇ ನೆಲೆಸಿತ್ತು. ಕೆಲಸಗಳಲ್ಲಿ ಶ್ರೇಷ್ಠ ಹೀನಗಳೆಂಬವು ತರುವಾಯ ತೋರಿಕೊಂಡ ಅಂಶವೇ ವಿನಾ ಜಾತಿ ವ್ಯವಸ್ಥೆಯಲ್ಲಿ ಅನಿವಾರ್ಯವಾಗಿರತಕ್ಕ ಲಕ್ಷಣವಲ್ಲ. ಆರ್ಥಿಕ ಜೀವನದಲ್ಲಿ ಧನಬಲವನ್ನು ತಗ್ಗಿಸಿ ವೈಷಮ್ಯಗಳಿಗವಕಾಶಕೊಡದೆ ಅನ್ಯೋನ್ಯತೆಯನ್ನೂ ಶಾಂತಿ ಸಮಾಧಾನಗಳನ್ನೂ ಭದ್ರಗೊಳಿಸುವುದೇ ಉದ್ದೇಶವಾಗಿತ್ತು. ಹಾಗಿದ್ದುದರಿಂದಲೇ ಭಾರತೀಯರಲ್ಲಿ ಪಾತಾಳ ವಿಭಾಗ (Under-World) ಎಂಬ ನರಕ ವರ್ಗವು ಸಿದ್ಧವಾಗಲಿಲ್ಲ. ಪಾಶ್ಚಾತ್ಯರ ಆರ್ಥಿಕ ಜೀವನದಲ್ಲಿ ಮೊದಲು ಯಜಮಾನರೊಂದು ಕಡೆ,

ಗುಲಾಮರಿನ್ನೊಂದು ಕಡೆ ಇದ್ದರು; ಆಧುನಿಕ ಕಾಲದಲ್ಲಿ ಸ್ವರ್ಗಸುಖ ಗಳನ್ನನುಭವಿಸುವಂತೆ ತೋರುವ ಧನಾಢ್ಯರೊಂದು ಕಡೆ, ನರಕ ಹಿಂಸೆ ಯನ್ನನುಭವಿಸುವ ಬಡಪಾಯಿಗಳಿನ್ನೊಂದು ಕಡೆ ಪರಸ್ಪರ ವಿರೋಧಿ ಗಳಾಗಿ ಇರುವರು. ಇಂತಹ ಸ್ವರ್ಗ ನರಕ ವಿಭಾಗಗಳು ಭಾರತೀಯ ಸಮಾಜದಲ್ಲಿ ತೋರಿಕೊಳ್ಳದಿರಲು ಜಾತ್ಯಾಚಾರವ್ಯವಸ್ಥೆಯೇ ಕಾರಣ.

ಶ್ರೇಷ್ಠತಾ ನಿರ್ಣಯ

ಜಾತಿಗಳಲ್ಲಿ ಶ್ರೇಷ್ಠಕನಿಷ್ಠಗಳೆಂಬ ಭಾವನೆಯುಂಟು. ಮೊದಲು ವರ್ಣಭೇದವನ್ನನುಸರಿಸಿ ಆರ್ಯ ಮತ್ತು ಅನಾರ್ಯರ ಗುಂಪುಗಳು ದ್ವಿಜ ಮತ್ತು ಶೂದ್ರ ರೆಂದಾಗಿತ್ತು; ತರುವಾಯ ಭಾರತಭೂಮಿಯ ವೈಶಿಷ್ಟ್ಯಕ್ಕೆ ಅನುಗುಣವಾಗಿ ವರ್ಗೀಕರಣವು ನಡೆಯಿತು. ನೈತಿಕ ಮತ್ತು ಆಧ್ಯಾತ್ಮಿಕ ದೃಷ್ಟಿಯೇ ಮುಖ್ಯವಾಗಿದ್ದುದರಿಂದ ಶ್ರೇಷ್ಠತೆ ಯೆಂಬುದು ಕಠಿಣಶಿಷ್ಟಿಯುತರಾದ ಬ್ರಾಹ್ಮಣರಿಗೆ ಸಂದಿತು. ಈ ತತ್ವದಲ್ಲಿ ಸಮಾಜದ ಬುದ್ಧಿಬಲಕ್ಕೆ ದಾರಿದ್ರ್ಯವು ಗಂಟುಬಿದ್ದುದು ಮಾತ್ರವೇ ಅಲ್ಲದೆ ಬುದ್ಧಿಯ ವ್ಯವಸಾಯವು ಪರಂಪರೆಯಾಗಿ ನಡೆಯಲು ಅನುಕೂಲ ವಾಯಿತು. ಧನಬಲಕ್ಕಿಂತಲೂ ಅಧಿಕವಾದುದು ಬುದ್ಧಿಬಲ; ಬುದ್ಧಿ ಬಲವು ಸ್ವಾರ್ಥದಲ್ಲಿ ನಿಯುಕ್ತವಾದ ಪಕ್ಷದಲ್ಲಿ ಸಮಾಜದ ಸೌಭಾಗ್ಯ ಸಮಸ್ತವೂ ಅಲ್ಪಸಂಖ್ಯಾಕರಾದ ಬುದ್ಧಿಬಲವುಳ್ಳವರಲ್ಲಿಯೇ ಇದ್ದು ಉಳಿದ ಬಹುಸಂಖ್ಯಾಕರು ಪಶುಪ್ರಾಯರಾಗಿಯೇ ಇರಬೇಕಾಗಿದ್ದಿತು. ಬುದ್ಧಿಬಲಕ್ಕೆ ವೈರಾಗ್ಯವು ಲಕ್ಷಣವಾದುದು ಭಾರತೀಯರಲ್ಲಿಯೇ. ಉತ್ತಮ ಸ್ಥಾನವು ಬ್ರಾಹ್ಮಣ ಜಾತಿಗೆ ಸಂದುದರಲ್ಲಿ ಸಮಾಜಕ್ಕೆ ವಿಶೇಷ ವಾದ ಒಂದು ಪ್ರಯೋಜನವುಂಟು. ಆಚಾರಶುದ್ಧಿಯನ್ನೂ ನಿಷ್ಠೆಯನ್ನೂ ಪಡೆದಿರಬೇಕಾದ ಬ್ರಾಹ್ಮಣನು ಇತರರಿಗೆ ಆದರ್ಶಭೂತನಾದವನು. ನೀತಿ ವಿಚಾರಗಳಲ್ಲಿಯೂ ಸದಾಚಾರಗಳಲ್ಲಿಯೂ ಬ್ರಾಹ್ಮಣರನ್ನು ಅನುಕರಿಸ ತಕ್ಕುದು ಇತರ ಜಾತಿಗಳಿಗೆ ಸಹಜವಾಗಿ ತೋರುವ ಮಾರ್ಗ. ಭೋಗಗಳಲ್ಲಿ ಎಷ್ಟೋ ಬ್ರಾಹ್ಮಣರಿಗೆ ನಿಷಿದ್ಧ; ಆಚಾರಗಳು ಹೇರಳ. ಬ್ರಾಹ್ಮಣರಿಗೆ ಕಟ್ಟುಗಳು ಹೆಚ್ಚು. ಅಷ್ಟು ನಿಯಮಗಳಿಂದ ಬದ್ಧನಾದ ಕಾರಣದಿಂದ ಬ್ರಾಹ್ಮಣನಿಗೆ ಹೆಚ್ಚು ಗೌರವ. ಗ್ರೀಕ ತತ್ವಜ್ಞರಲ್ಲಿ ಪ್ರಸಿದ್ಧನಾದ

ಪ್ಲೇಟೋ ಎಂಬಾತನು ರಾಷ್ಟ್ರವಿಚಾರವನ್ನು ನಡೆಸುತ್ತ ತತ್ವಜ್ಞ ಪ್ರಧಾನವಾದ ರಾಷ್ಟ್ರವೇ ಅತ್ಯುತ್ತಮವೆಂದು ನಿರ್ಣಯಿಸಿದನು. ಆ ನಿರ್ಣಯವು ರೂಪಗೊಂಡುದು ಭಾರತೀಯ ಸಮಾಜದಲ್ಲಿ.

ಚಿರಾಯುಷ್ಯ ಸಾಧಕ

ಜಾತಿ ವ್ಯವಸ್ಥೆಯಿಂದ ನಡೆದಿರುವ ಸತ್ಪರಿಣಾಮಗಳು ಇನ್ನೂ ಹೇರಳವಾಗಿವೆ. ಎಲ್ಲವನ್ನೂ ವಿಸ್ತಾರವಾಗಿ ಪರಿಶೀಲಿಸುವುದು ಇಲ್ಲಿ ಅನುಚಿತ. ಆದರೆ ಭಾರತೀಯ ಸಮಾಜದ ಚಿರಾಯುಷ್ಯಕ್ಕೂ ಭಾರತೀಯರ ಜ್ಞಾನ ವಿಜ್ಞಾನ ಸಾಧನ ಕೌಶಲಗಳಿಗೂ ಆ ವ್ಯವಸ್ಥೆಯೇ ಮೂಲಕಾರಣವೆಂಬುದನ್ನು ಮರೆಯುತಕ್ಕುದಲ್ಲ. ನಮ್ಮ ದೇಶದಲ್ಲಿ ಪದೇ ಪದೇ ಅನ್ಯರು ಆಕ್ರಮಣ ಪ್ರಯತ್ನಗಳನ್ನು ನಡೆಸಿದಂತೆ ಬೇರಾವ ದೇಶದಲ್ಲಿಯೂ ನಡೆಸಲಿಲ್ಲ. ಆದರೆ ಅನ್ಯರೆನಿಸಿದ್ದವರು ಕಾಲಕ್ರಮದಲ್ಲಿ ಶಾಂತರಾಗಿ ಭಾರತೀಯರಲ್ಲಿ ಕಲೆತು ಒಂದು ಜಾತಿಯಾಗಿ ಏರ್ಪಟ್ಟರು. ಈ ಗತಿಯನ್ನು ಇತ್ತೀಚಿನ ಕಾಲದ ಸಂಗತಿಗಳಲ್ಲಿಯೇ ಕಾಣಬಹುದು. ಐರೋಪ್ಯರೆಲ್ಲರೂ ಒಂದು ಜಾತಿಯವರಾಗಿರುವುದಲ್ಲದೆ ಅವರಲ್ಲಿ ವರ್ಣಭೇದಗಳಿಗೂ ಮತ್ತು ಮತಾಚಾರ ಭೇದಗಳಿಗೂ ಅನುಸಾರವಾಗಿ ಉಪಜಾತಿಗಳು ಹುಟ್ಟಿವೆ. ಭಾರತಭೂಮಿಯಲ್ಲಿ ನೆಲೆಸಿದವರೆಲ್ಲರೂ ಜಾತಿಪದ್ಧತಿಯನ್ನು ಕಾಲಕ್ರಮದಲ್ಲಿ ಸ್ವೀಕರಿಸಲೇಬೇಕಾಗಿರುತ್ತದೆ. ಅತಿ ಪೂರ್ವಕಾಲದಲ್ಲಿ ಚಾತುರ್ವರ್ಣ್ಯವೆಂಬ ನಾಲ್ಕೇ ವಿಭಾಗಗಳು ಇರಬಹುದಾಗಿದ್ದರೂ

ಭಿನ್ನತಾ ವೃದ್ಧಿ

ಕಾಲಕ್ರಮದಲ್ಲಿ ಸಾವಿರಾರು ಜಾತಿಗಳು ಸಿದ್ಧವಾದವು. ಸ್ಥಲ, ವರ್ಣ, ಭಾಷೆ, ಆಚಾರ, ವೃತ್ತಿ, ಮತ ಮುಂತಾದ ಅಂಶಗಳಲ್ಲಿ ಭೇದಗಳು ತೋರಿದಹಾಗೆಲ್ಲ ಜಾತಿಭೇದಗಳು ಗೌರವವನ್ನು ಪಡೆದವು. ಹೀಗಿರುವಲ್ಲಿ ಯಾರೋ ಪೂರ್ವಿಕರು ಕುಳಿತುಕೊಂಡು ವರ್ಣ ವಿಭಾಗಗಳನ್ನು ಮಾಡಿಬಿಟ್ಟರೆನ್ನುತ್ತ ದೂಷಣೆಯನ್ನು ಪ್ರಾರಂಭಿಸುವುದು ಕೇವಲ ಮೂರ್ಖತೆಯೆಂದೇ ತೀರ್ಮಾನವಾಗುವುದು. ಋಷಿಗಳೂ ತತ್ವಜ್ಞರೂ ಸಮಾಜ ಶುದ್ಧಿ ಸಂಸ್ಕಾರಗಳನ್ನು ನಡೆಸುವುದರಲ್ಲಿ ಪ್ರಯತ್ನಪಟ್ಟವರು; ಸೃಷ್ಟಿಕರ್ತರಲ್ಲ. ಭಾರತೀಯ ಸಮಾಜದ ಅಭಿವೃದ್ಧಿಸ್ಥಿತಿಗಳು ದೇಶದ ಪರಿಸ್ಥಿತಿಯನ್ನು ಅನುಸರಿಸಿತು. ಜಾತಿ

ವ್ಯವಸ್ಥೆಯೆಂಬುದು ಸಾವಿರಾರು ವರ್ಷಗಳ ದೀರ್ಘಕಾಲದಲ್ಲಿ ಪರಿಸ್ಥಿತಿ ಗನುಗುಣವಾಗಿ ಬೆಳೆದು, ಕ್ರಮವಾಗಿ ಭದ್ರತೆಯನ್ನು ಪಡೆದುದೆಂಬ ಅಂಶವನ್ನು ಅಲಕ್ಷ್ಯಮಾಡತಕ್ಕುದಲ್ಲ. ಭಾರತೀಯತ್ವದ ಲಕ್ಷಣವೇ ಜಾತಿಧರ್ಮವೆಂದು ಒಂದು ವೇಳೆ ಭಾವಿಸಿದರೂ ತಪ್ಪಾಗುವುದಿಲ್ಲ.

ಸಾರಾಂಶ

ವರ್ಣ, ಮತ, ಆಚಾರ, ಸಂಪ್ರದಾಯಗಳಲ್ಲಿ ಭಿನ್ನ ಭಿನ್ನರಾದ ಮಾನವರಾಶಿಗಳವರು ಪರಸ್ಪರ ಸೌಹಾರ್ದದಿಂದ ಬದುಕನ್ನು ಸಾರ್ಥಕಗೊಳಿಸಿಕೊಳ್ಳಲು ಭಾರತ ದೇಶದಲ್ಲಿ ಈ ವ್ಯವಸ್ಥೆಯು ಸಿದ್ಧವಾಯಿತು. ಇತರ ದೇಶಗಳಲ್ಲಿ ಜನಸಮುದಾಯವು ಏಕರೀತಿಯಾಗಿರಬಹುದು; ಭಾರತ ಭೂಮಿಯಲ್ಲಿ ಜನರು ಭಿನ್ನ ಭಿನ್ನ ಸಂಸ್ಕೃತಿಗಳನ್ನುಳ್ಳವರಾದುದರಿಂದ ನಾನಾರೀತಿಯಾಗಿರತಕ್ಕವರು. ವೃತ್ತಿಯು ಜಾತಿಮೂಲವಾದ ತರುವಾಯ ವೃತ್ತಿಗಾಗಿ ಸಮಾಜದಲ್ಲಿ ನಡೆಯಬಹುದಾಗಿದ್ದ ಪೈಪೋಟಿಗಳಿಗೆ ಅವಕಾಶವು ಕಿರಿದಾಯಿತು. ಆರ್ಥಿಕ ಕ್ಷೇತ್ರದಲ್ಲಿ ಜಾತಿಧರ್ಮವು ನೆಲೆಗೊಂಡ ಕಾರಣದಿಂದ ದುರ್ಬಲರಿಗೆ ರಕ್ಷಣೆ ಮತ್ತು ಸಹಾಯಗಳು ದೊರಕುವಂತೆ ಪರಿಣಮಿಸಿತು; ಬಲಿಷ್ಠರು ಬಲಹೀನರನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿ ಕೊಳ್ಳಲು ಆಸ್ಪದವಿಲ್ಲವಾಯಿತು. ಸೌಶೀಲ್ಯ ಶಿಷ್ಟಾಚಾರಗಳಿಗೆ ಪ್ರಾಧಾನ್ಯವು ಸಂದ ಕಾರಣದಿಂದ ಸಮಾಜದಲ್ಲಿ ಸಹಜವಾದ ನೈತಿಕ ಶಿಕ್ಷಣವು' ಒಡಗೂಡಿದ್ದಲ್ಲದೆ ಪಾರಲೌಕಿಕ ಸಾಧನೆಗೆ ಪ್ರಾಶಸ್ತ್ಯವು ದೊರೆತ ಕಾರಣದಿಂದ ಒಟ್ಟು ಸಮಾಜದ ಸಂಸ್ಕೃತಿಯು ಆಸುರಿಕವಾಗದೆ ದೈವೀ ಎನ್ನಿಸುವಂತೆ ನಡೆಯಿತು. ಜಾತಿಯ ಅಂತಸ್ತು ಮರ್ಯಾದೆಗಳನ್ನು ತಪ್ಪಿಸಿಕೊಂಡು ಕೀಳಾಗಲು ಯಾರಿಗೂ ಆಸ್ಪದವಿಲ್ಲ. ಅಸಾಧಾರಣವಾದ ಸಾಮರ್ಥ್ಯವನ್ನು ಕಟ್ಟಿಕೊಂಡು ಹುಟ್ಟಿದವರು ತಾವು ಮೇಲನ್ನು ಸಾಧಿಸಿ ಕೊಂಡಂತೆಲ್ಲ ತಮ್ಮ ಜಾತಿಯವರನ್ನೂ ಮೇಲ್ಮೆಗೊಯ್ಯುವ ನಿರ್ಬಂಧ ವುಂಟು. ಬುದ್ಧಿವಂತರಾಗಲಿ ಶಕ್ತಿವಂತರಾಗಲಿ ಸ್ವಾರ್ಥಸಾಧನೆಯನ್ನು ನಡೆಸಲು ಅಡ್ಡಿಗಳು ಮಾತ್ರ ಬಲವಾಗಿ ಉಂಟು. ಭಾರತೀಯರು ಇದು ವರೆಗೂ ಜಗತ್ತಿನಲ್ಲಿ ತೋರಿರುವ ಸೌಶೀಲ್ಯಕ್ಕೂ ಕೌಶಲಕ್ಕೂ ಅವರ ಜಾತಿವ್ಯವಸ್ಥೆಯೇ ಕಾರಣವಾಗಿರುವುದು ಮಾತ್ರವಲ್ಲ; ಜಾತಿವ್ಯವಸ್ಥೆಯು

ಮಹಿಮೆಯಿಂದ ಜನಸಮೂಹದಲ್ಲಿ ಶಾಂತಿ ಸೌಹಾರ್ದಗಳು ಭದ್ರವಾದವು, ಮತ್ತು ಭಾರತೀಯ ಸಂಸ್ಕೃತಿಯೆಂಬುದು ಕಾಲಾತೀತವೆನಿಸಿ ಚಿರಸ್ಥಾಯಿಯಾಯಿತು.

ಅವಿಚಾರ ದುಷ್ಟ ಆಕ್ಷೇಪ

"ಹುಟ್ಟಿದ್ದು ತಪ್ಪೇ? ಕೀಳು ಜಾತಿಯಲ್ಲಿ ಹುಟ್ಟಿದ ಮಾತ್ರದಿಂದಲೇ ಗೌರವಾಧಿಕಾರಗಳು ಅಲಭ್ಯವಾಗಿರುವುದು ನ್ಯಾಯವೇ?" ಎಂದು ಐರೋಪ್ಯನಾದವನು ಕೇಳುವುದು ಆತನಿಗೆ ಸಹಜ. ಐರೋಪ್ಯರಲ್ಲಿ ಸ್ಪರ್ಧೆಗೆ ಅಥವಾ ಪೈಪೋಟಿಗೆ ಯಾವ ಪ್ರತಿಬಂಧಕವೂ ಇಲ್ಲ; ಎಲ್ಲರೂ ತಮ್ಮ ಸಹಜ ಚೈತನ್ಯವನ್ನು ತೋರಿ ಸಮಾಜದ ಶ್ರೇಷ್ಠವರ್ಗದಲ್ಲಿ ಸೇರಿಕೊಳ್ಳಲು ಯತ್ನಿಸಬಹುದು. ಆದರೆ ಆ ಬಗೆಯಾದ ವ್ಯಕ್ತಿಸ್ವಾತಂತ್ರ್ಯವು ವಿಚ್ಛಿತ್ತಿಯಿಲ್ಲದೆ ನೂರಾರು ವರ್ಷಕಾಲ ನಡೆದುಬಂದಿದ್ದರೂ ತನ್ನ ಸಮಾಜದಲ್ಲಿ ಕೆಲವರು ಮಾತ್ರರೇ ಶ್ರೇಷ್ಠರೆನಿಸಿರುವ ಅಂಶವನ್ನು ಆತನು ಮರೆಯುತ್ತಾನೆ. ಧನವಂತರಾಗುವುದಕ್ಕೋ, ಕೀರ್ತಿವಂತರಾಗುವುದಕ್ಕೋ, ಬಲವಂತರಾಗುವುದಕ್ಕೋ ತಮ್ಮ ಚೈತನ್ಯಸರ್ವಸ್ವವನ್ನೂ ಒಡ್ಡುವುದರಲ್ಲಿ ಪ್ರಯತ್ನ ವಿಫಲರಾಗಿ ಮರ್ಮಾಹತರಾದವರು ಬಹುಮಂದಿ, ಜಯಶಾಲಿಗಳಾಗಿ ರಂಜಿಸುವವರು ಹಲಕೆಲವರು ಮಾತ್ರ. ಕೋಟ್ಯಾಧೀಶರ ಜೀವನವು ಎಷ್ಟು ದಿವ್ಯವಾಗಿ ರಂಜಿಸುವುದೋ ಅಷ್ಟು ಹೀನಾಯವಾಗಿ ನಿರ್ಗತಿಕರ ಜೀವನವು ನಾರುತ್ತದೆ. ಪ್ರತಿ ಲಕ್ಷಾಧೀಶನ ವೈಭವಕ್ಕೂ ಜೊತೆಯಾಗಿ ಲಕ್ಷ ಜನರ ಸಂಕಟಮಯವಾದ ಬಾಳು ಇದ್ದೇ ಇರಬೇಕಾಗಿರುತ್ತದೆ. ಕೆಲವರ ಭೋಗವೈಭವಗಳಿಗಾಗಿ ಬಹುಮಂದಿ ನಿತ್ಯನರಕದಲ್ಲಿ ನರಳುತ್ತಿರುವುದರಲ್ಲಿ ಯಾವ ನ್ಯಾಯವುಂಟೆಂದು ಪ್ರತಿ ಪ್ರಶ್ನೆ ಹಾಕಬಹುದು. ಪಾಶ್ಚಾತ್ಯರಲ್ಲಿ ವ್ಯಕ್ತಿಗೆ ಹೆಚ್ಚು ಸ್ವಾತಂತ್ರ್ಯವೇನೋ ಉಂಟು; ಅದರ ಪರಿಣಾಮವಾಗಿ ಸಮಾಜದಲ್ಲಿ ಭದ್ರತೆಯಾಗಲಿ, ಶಾಂತತೆಯಾಗಲಿ ಪ್ರಾಪ್ತಿಯಾಗಿಲ್ಲ. ಪರಿಣಾಮಸ್ವರೂಪವು ಸದಾ ಅತೃಪ್ತಿ ಮತ್ತು ಸ್ವಾರ್ಥವೃದ್ಧಿಗಳಲ್ಲಿ ತೋರಿಕೊಳ್ಳುವುದು. ವ್ಯಕ್ತಿಸ್ವಾತಂತ್ರ್ಯ ಮತ್ತು ನಿರಾತಂಕವಾದ ಸ್ಪರ್ಧೆಗಳುಳ್ಳ ಸಮಾಜದಲ್ಲಿ ಜೀವನವು ಜುಗುಪ್ಸಾಪೂರಿತವಾಗಿ ಮತಿವೈಕಲ್ಯ ಮತ್ತು ಆತ್ಮಹತ್ಯಗಳು ಹೆಚ್ಚುತ್ತಲಿವೆ. ಪ್ರತಿ ಪ್ರಶ್ನೆಗಳನ್ನು

ಕೇಳುವುದಕ್ಕೇ ತೊಡಗಿದರೆ ಈ ರೀತಿ ಅನೇಕವಾಗಿ ಕೇಳಬಹುದು. ಬಡವನಾಗಿ ಹುಟ್ಟಿದ ಮಾತ್ರಕ್ಕೆ ಎಲ್ಲೆಲ್ಲಿಯೂ ಆತಂಕಗಳನ್ನು ಕಂಡು ಸಹಾಯ ಶೂನ್ಯನಾಗಿರಬೇಕೇ? ರೂಪ ಲೋಪವಾಗಿದ್ದ ಮಾತ್ರದಿಂದಲೇ ಸದಾ ದುಃಖಿಯಾಗಿ ಬಾಳಬೇಕೇ? ಕಪ್ಪು ಜನರ ಸಂಬಂಧವನ್ನು ಕಟ್ಟಿಕೊಂಡು ಹುಟ್ಟಿದುದು ಒಂದು ದೋಷವೆನಿಸಿ ಸಮಾಜ ಬಾಹಿರರೆನಿಸುವುದರಲ್ಲಿ ನ್ಯಾಯವುಂಟೇ?

ದುರ್ಲಕ್ಷಣಗಳು

ಜಾತಿಪದ್ಧತಿಗಳಲ್ಲಿ ತೋರುವ ಅನ್ಯಾಯವನ್ನು ಪ್ರಸ್ತಾಪಿಸಿದಾಗ ಇತರ ಸಮಾಜಗಳಲ್ಲಿ ದೋಷಗಳಿಲ್ಲವೆಂದಾಗಲಿ, ಇತರ ಸಮಾಜಗಳನ್ನು ಮೆಚ್ಚತಕ್ಕದ್ದೆಂದಾಗಲಿ ಅಭಿಮತವು ಸಿದ್ಧವಾಗುವುದಿಲ್ಲ. ಭಾರತೀಯ ಸಮಾಜದಲ್ಲಿ ನಡೆಯುವ ಅನ್ಯಾಯವನ್ನೋ ದುರಾಚಾರಗಳನ್ನೋ ಎತ್ತಿಯಾಡುವುದು ಒಂದು, ಭಾರತೀಯರು ಪಾಶ್ಚಾತ್ಯರ ರೀತಿ ನೀತಿಗಳನ್ನು ಮೆಚ್ಚಿ ಅನುಕರಣ ಮಾಡತೊಡಗುವುದು ಮತ್ತೊಂದು. ಈಗ ಬಳಕೆಯಲ್ಲಿರುವ ಜಾತಿಪದ್ಧತಿಗಳಲ್ಲಿ ಪ್ರಬಲವಾದ ದೋಷಗಳುಂಟು. ಬೇಟೆಗಾರರು ಅಟ್ಟಿಸಿಕೊಂಡುಬಂದು ಸುತ್ತಮುತ್ತಿದಾಗ ಉಷ್ಟ್ರಪಕ್ಷಿಯು ಪಾತಾಳವನ್ನು ಕಾಣುವಂತೆ ತಲೆಯನ್ನು ನೆಲದಲ್ಲಿ ಹುದುಗಿಸಿಬಿಡುವುದಂತೆ. ಆದರಂತೆಯೇ ಭಾರತೀಯ ಸಮಾಜವು ನೂರಾರು ವರ್ಷಗಳ ಕಾಲ ತಲೆಯನ್ನು ಮರೆಸಿಕೊಂಡು ಇರುವ ಪ್ರಯತ್ನದಲ್ಲಿ ಅನೇಕ ದೋಷಗಳು ತೋರಿಕೊಂಡು ಪ್ರಬಲಿಸಿದವು. ಈಗಿನ ಪರಿಸ್ಥಿತಿಯನ್ನು ಪರೀಕ್ಷಿಸುವಾಗ *ವರ್ಣಾಶ್ರಮ ಧರ್ಮವೆಂಬ ಮೂಲವ್ಯವಸ್ಥೆಯ ನೀತಿತತ್ವಗಳನ್ನು ಸುವಿಚಾರ ಪೂರಿತವಾದ ದೃಷ್ಟಿಯಿಂದ ಕಾಣಬೇಕು; ದುರ್ಲಕ್ಷಣಗಳಿಗೆ ನಿಜವಾದ ಹೇತುಗಳನ್ನು ತಿಳಿಯಬೇಕು. ಈಗಿನ ಪರಿಸ್ಥಿತಿಯು ವಕ್ರ ಅಥವಾ ಕುಟಿಲವೆಂಬ ಅಂಶವನ್ನು ಮರೆಯಬಾರದು.

ಈಗಿನ ಪರಿಸ್ಥಿತಿಯಲ್ಲಿ ದೋಷಗಳು ಯಾವುವು? ಇದಕ್ಕೆ ನಾನಾ ಉತ್ತರಗಳುಂಟು. ಅಲ್ಪ ವಿಚಾರವನ್ನು ಪ್ರಕಾಶಗೊಳಿಸುವ ತೀರ್ಮಾನ

* ವರ್ಣಾಶ್ರಮ ಧರ್ಮವೆಂಬುದೇ ಭಾರತೀಯ ನಾಗರಿಕತೆಗೆ ರೂಢಿಯಾದ ಹೆಸರು. ಇತ್ತೀಚೆಗೆ ಹಿಂದೂ ಧರ್ಮವೆಂದು ಕರೆಯುವುದು ಅದನ್ನೇ.

ಗಳು ಹೇರಳವಾಗಿ ತೋರುತ್ತವೆ. ಭಾರತೀಯರ ಕಷ್ಟಗಳಿಗೆಲ್ಲಕ್ಕೂ ಜಾತಿ ಪದ್ಧತಿಗಳೇ ಮೂಲವೆಂದು ಆಡುವುದು ಸಾಮಾನ್ಯ.

ದೋಷ ನಿರ್ಣಯ

ಜಾತಿಯೆಂಬುದು ಘೋರವಾದ ರಾಕ್ಷಸಾಕೃತಿ ಯೆಂದು ದೂರುವುದು ಸಾಧಾರಣವಾಗಿ ತೋರುವ ಚಾಪಲ್ಯ. ದೋಷಗಳು ಯಾವುವೆಂದು ನಿರ್ಣಯಿಸುವ ಕರ್ತವ್ಯ ಭಾಗದಲ್ಲಿಯೇ ವಿಶೇಷವಾದ ವಿಚಾರವು ಅವಶ್ಯ. ದೋಷಗಳು ಇಂತಹ ವೆಂದು ನಿಶ್ಚಯವಾದ ಬಳಿಕ ಅವುಗಳಿಗೆ ನಿಜವಾದ ಮೂಲವೆಲ್ಲಿ ಎಂಬುದು ವಿಚಾರ್ಯವಾದುದು. ಹೊಸ ಬಗೆಯ ಸಂಚಾರ ಸಾಧಕಗಳು, ಹಿಂದಿನ ಕಾಲದ ಜೀವಿಕಗಳ ನಷ್ಟ, ದಿನೇ ದಿನೇ ಬಲಗೊಳ್ಳುತ್ತಲಿರುವ ಬಡತನ, ನೂತನ ರೀತಿಯಲ್ಲಿ ಪ್ರವರ್ತಿಸುವ ಹೊಸ ಸರ್ಕಾರ ಮುಂತಾದ ಅಂಶಗಳು ಜಾತಿಪದ್ಧತಿಗಳಲ್ಲಿ ವಿವಿಧ ಪರಿಣಾಮಗಳನ್ನು ಉಂಟುಮಾಡಿವೆ.

ಸದ್ಯಃಸ್ಥಿತಿಯಲ್ಲಿ ಜಾತಿಪದ್ಧತಿಯ ವ್ಯವಸ್ಥೆಯಲ್ಲಿ ಗುರುತರವಾದ ದೋಷಗಳು ಮೂರುಂಟೆಂದು ಹೇಳಬಹುದು:

ಮುಖ್ಯ ದೋಷಗಳು

(1) ಅನೇಕಾನೇಕ ಭಿನ್ನತೆಗಳು ತೋರಿಬಂದು ಜಾತಿ ಗಳು ಸಾವಿರಗಟ್ಟಲೆಯಾಗಿರುವುದು, (2) ಸಮಾಜ ಮರ್ಯಾದೆಯಲ್ಲಿ ಉತ್ತಮ, ನೀಚ ಎಂಬ ವಿಭೇದದಿಂದ ಹುಟ್ಟಿರುವ ವ್ಯತ್ಯಾಸ, (3) ಜಾತಿವ್ಯವಸ್ಥೆಗೊಳಗಾಗಿ ಸಮಾಜವು ಸಂಪಾದಿಸಿಕೊಂಡಿರುವ ಸಾಹಸದೌರ್ಬಲ್ಯ. ಒಂದೇ ಜಾತಿಯಲ್ಲಿ ಅನೇಕಾನೇಕ ಕೋಮುಗಳು ತೋರಿ ಕೊಂಡು ಪ್ರತ್ಯೇಕತೆಯನ್ನು ಸಾಧಿಸುತ್ತಲಿರುವುದು, ಅಥವಾ ನಾಲ್ಕು ವಿಭಾಗಗಳಿಗೆ ಬದಲಾಗಿ ಸಾವಿರಾರು ವಿಭಾಗಗಳಿರುವುದು ಸಾಧುವಲ್ಲ; ಸಣ್ಣ ಸಣ್ಣ ವಿಭಾಗಗಳು ಮಾಯವಾಗಿ ಚಾತುರ್ವರ್ಣ್ಯ ಮಾತ್ರವೇ ನೆಲೆಸು ವಂತೆ ನೆರವೇರಿಸತಕ್ಕುದು ಅವಶ್ಯ. ಹಾಗೆ ನೆರವೇರಬೇಕಾದಲ್ಲಿ ಒಂದೇ ವರ್ಣದೊಳಗೆ ಹುಟ್ಟಿಕೊಂಡಿರುವ ವಿಭೇದಗಳು ಮಿತಿಮೀರಬಾರದು. ಎಂತಹ ಕಾಯಕವಾದರೂ ಸಮಾಜದ ದೃಷ್ಟಿಯಲ್ಲಿ ಒಂದೇ ಅಂತಸ್ತಿನ ಗೌರವವನ್ನು ಪಡೆಯಬೇಕು. "ಅವರವರ ಕೆಲಸದಲ್ಲಿ ಅವರು ದೊಡ್ಡ ವರು" ಎಂಬ ದೃಷ್ಟಿಯು ಸಾರ್ವತ್ರಿಕವಾಗಿ ರೂಢಿಯಾದಾಗ ಯಾವ ವೃತ್ತಿಯನ್ನೂ ಹೀನಾಯವೆಂದೆಣಿಸಲಾಗುವುದಿಲ್ಲ. ಸಮಾಜ ಸ್ಥಿತಿಗೆ ಎಲ್ಲ

ವೃತ್ತಿಗಳೂ ಸಮರ್ಪಕವಾಗಿ ನಡೆಯಲೇ ಬೇಕಾಗಿರುವಲ್ಲಿ ' ಇದು ಮೇಲು, ಇದು ಕೀಳು ' ಎನ್ನುವುದು ದುಷ್ಟವಾದುದು. ಆ ದುಷ್ಟವಾದ ಭಾವನೆಯೇ ಜಾತಿಗಳಲ್ಲಿ ಪರಸ್ಪರ ತಿರಸ್ಕಾರವು ತೋರಲು ಒಂದು ಕಾರಣ. ಸಮಾನವಾದ ಮರ್ಯಾದೆಯೇ ಎಲ್ಲ ಜಾತಿಗಳಿಗೂ ಸಂದ ಪಕ್ಷದಲ್ಲಿ ಪರಸ್ಪರವಾಗಿ ಸೌಹಾರ್ದ ಬೆಳೆದು ಸಾರ್ವಜನಿಕವಾದ ಕರ್ತವ್ಯಗಳನ್ನು ಅನ್ಯೋನ್ಯವಾಗಿ ಸೇರಿ ನಿರ್ವಹಿಸಲು ಸುಲಭವಾಗುವುದು. ಕಡೆಯದಾಗಿ ಪ್ರತಿ ಜಾತಿಯಲ್ಲಿಯೂ ಆತ್ಮರಕ್ಷಣೆಯ ಸಾಮರ್ಥ್ಯವು ಊರ್ಜಿತವಾಗಿ ದೃಢವಾಗಬೇಕಾದುದು ಅತ್ಯವಶ್ಯ. ಕ್ಷತ್ರಿಯರು ಮಾತ್ರ ಯುದ್ಧ ಸಿದ್ಧತೆಯಲ್ಲಿ ಶಿಕ್ಷಿತರಾಗಿ ಇತರರು ಅಶಿಕ್ಷಿತರಾಗಿ ಭೀರುಗಳಾಗಿರತಕ್ಕುದು ಸಮಾಜದ ಸುಸ್ಥಿತಿಗೆ ಪೋಷಕವಾದುದಲ್ಲ. ಸೈನ್ಯದಲ್ಲಿ ಎಲ್ಲ ಜಾತಿಗಳವರೂ ಸೇರಿ ಶಿಕ್ಷಿತರಾಗುತ್ತಿದ್ದ ಅಂಶವು ವಾಸ್ತವವಾಗಿದ್ದಿತೆಂದು ಇತಿಹಾಸದಿಂದಲೆ ವ್ಯಕ್ತವಾಗುವುದು ; ಆದರೆ ಅವಧ್ಯರೆಂದು ಗೊತ್ತಾದ ಗುಂಪುಗಳವರಿಗೆ ದೇಶರಕ್ಷಣೆಯ ಕರ್ತವ್ಯವು ಐಚ್ಛಿಕ ಮಾತ್ರವಾಗಿರತಕ್ಕುದು ಒಟ್ಟು ದೇಶಕ್ಕೆ ಹಿತವಲ್ಲ. ಆದ್ದರಿಂದ ಭಾರತೀಯ ಸಮಾಜವನ್ನು ಸಂಸ್ಕಾರಗೊಳಿಸಲು ಪ್ರಯತ್ನಪಡತಕ್ಕವರು ದೇಶರಕ್ಷಣೆಯ ಭಾರವನ್ನು ಎಲ್ಲ ಜಾತಿಗಳ ಮೇಲೂ ಸಮಾನವಾಗಿ ಹೊರಿಸಿ ಎಲ್ಲರಿಗೂ ಆ ಬಗೆಯ ಶಿಕ್ಷಣವನ್ನೂ ಯೋಗ್ಯತೆಯನ್ನೂ ಒದಗಿಸಬೇಕು.

ಪೌರಕ್ಷೇತ್ರದಲ್ಲಿ ಹಾನಿ

ಪೌರಧರ್ಮದ ವಿಚಾರವನ್ನು ಮಾತ್ರ ನಡೆಸುವಾಗ ಜಾತಿಪದ್ಧತಿಯಲ್ಲಿ ಎರಡು ದೋಷಗಳು ಮುಖ್ಯವಾಗಿ ಕಾಣುತ್ತವೆ. ಜಾತಿಧರ್ಮವನ್ನೇ ಸರ್ವಸ್ವವೆಂದು ನಂಬಿದವರಿಗೆ ಸ್ವಜಾತಿ ಪಕ್ಷಪಾತವು ಸಹಜವಾಗಿ ಅತಿಯಾಗಿ ಪರಿಣಮಿಸಿ ಅವರ ದೃಷ್ಟಿಯು ಸಂಕುಚಿತವಾಗುವುದು. ರಾಷ್ಟ್ರೀಯವಾದ ಉದ್ಯಮಕ್ಕೋ ಅಂತರರಾಷ್ಟ್ರೀಯವಾದ ಉದ್ಯಮಕ್ಕೋ ಎಲ್ಲ ಜಾತಿಗಳವರೂ ಅನ್ಯೋನ್ಯವಾಗಿ ಒಟ್ಟುಕೂಡಿ ಸನ್ನದ್ಧರಾಗಲು ಸಂಕುಚಿತ ದೃಷ್ಟಿಯು ಬಲು ಹಾನಿಕರವಾದುದು. ಐಕಮತ್ಯದಿಂದ ನಡೆಯುವ ಸನ್ನಾಹಕ್ಕೆ ಪ್ರತಿಯಾಗಿ ಯಾದವೀ ಕಲಹಗಳೇ ರೇಗುವುವು. ನೆಮ್ಮದಿಯಿಂದಲೂ ಮರ್ಯಾದೆಯಿಂದಲೂ ಬಾಳುವುದರಲ್ಲಿ ಎಲ್ಲರಿಗೂ

ಸಮಾನವಾದ ಅವಕಾಶವಿಲ್ಲದಿರುವುದು ಎರಡನೆಯ ದೋಷ. ನರಜನ್ಮವನ್ನೆತ್ತಿದವನು ಮಾನವನಿಗೆ ಸಾಧ್ಯವಾದ ನೆಮ್ಮದಿ ಗೌರವಗಳನ್ನು ಸಾಧಿಸಿಕೊಳ್ಳುವ ಪ್ರಯತ್ನದಲ್ಲಿ ಸಮಾಜವು ಸಹಾಯವನ್ನು ನೀಡಬೇಕೇ ವಿನಾ ವಿರೋಧವನ್ನು ತೋರಿ ವ್ಯಕ್ತಿಯೆದುರಿಗೆ ಘೋರಭೂತದಂತಿರಬಾರದು. ಇವೆರಡೂ ಆಕ್ಷೇಪಕ್ಕೊಳಗಾಗತಕ್ಕ ದುರ್ಲಕ್ಷಣಗಳು. ಆದರೆ ಜಾತಿವ್ಯವಸ್ಥೆಗೆ ಆ ದುರ್ಲಕ್ಷಣಗಳು ಇರಬೇಕಾದುದೇ ಇಲ್ಲ. ಜಾತಿಪದ್ಧತಿಗಳು ದೊಡ್ಡ ದೇಶದಲ್ಲಿ ವ್ಯಾಪ್ತಿಯನ್ನೂ ರೂಢಿಯನ್ನೂ ಪಡೆದ ಕಾಲಗತಿಯಲ್ಲಿ ಆ ದುರ್ಲಕ್ಷಣಗಳು ಒಲಪಟ್ಟುವೇ ವಿನಾ ಮೊದಲಿನಿಂದಲೂ ಅನಿವಾರ್ಯವಾಗಿಯೋ ಅವಶ್ಯಕವಾಗಿಯೋ ಇರತಕ್ಕುವೆಂದು ನಿಶ್ಚಿತವಾದವುಗಳಲ್ಲ. ಕಾಲಗತಿಯಲ್ಲಿ ತೋರಿಕೊಂಡು ವೃದ್ಧಿಯಾದ ಆ ಅಂಶಗಳನ್ನು ಮಾತ್ರವೇ ಹಿಡಿದು ಅವುಗಳಿಗಾಗಿ ಜಾತಿಪದ್ಧತಿಯನ್ನು ಆಕ್ಷೇಪಿಸುವುದು ಯುಕ್ತವಲ್ಲ. ದೋಷಗಳನ್ನು ಸರಿಪಡಿಸುವ ಯೋಚನೆಯಲ್ಲಿ ಆ ವ್ಯವಸ್ಥೆಯ ಗುಣಗಳನ್ನು ಮರೆಯಬಾರದು. ಆ ವ್ಯವಸ್ಥೆಯ ದೋಷಗಳನ್ನು ಮಾತ್ರ ಆರಿಸಿಕೊಂಡು ಅವುಗಳ ನಿವಾರಣೆಯನ್ನು ಸಾಧುವಾದ ಮಾರ್ಗದಲ್ಲಿ ಸಾಧಿಸಬೇಕೇ ವಿನಾ ಭ್ರಾಂತರಾಗಿ ಜಾತಿಪದ್ಧತಿಯನ್ನು ಬೇರು ಸಹಿತ ಕಿತ್ತುಹಾಕುವ ಪ್ರಸ್ತಾಪವನ್ನೆತ್ತಬಾರದು. ಆ ಪದ್ಧತಿಯ ಸರ್ವನಾಶವು ಅವಶ್ಯವಲ್ಲ; ತಿದ್ದುಪಡಿ ಮಾತ್ರ ಅವಶ್ಯ. ಆದುದರಿಂದ ಜಾತಿಪದ್ಧತಿಯನ್ನು ಮೂಲೋತ್ಪಾಟನ ಮಾಡಬೇಕೆಂಬ ಮಾತು ಉನ್ಮಾದ ಮಾತ್ರ. ಮೂಲೋತ್ಪಾಟನವು ಹಿತವೂ ಅಲ್ಲ, ಸಾಧ್ಯವೂ ಅಲ್ಲ. ಒಂದು ವೇಳೆ ಸಾಧ್ಯವಾಗುವ ಉಪಾಯವು ಸಿದ್ಧವಾದರೂ ಹಿತವಲ್ಲವಾದುದರಿಂದ ಪ್ರಯತ್ನಿಸತಕ್ಕುದೇ ಅಲ್ಲ. ಮೂಲೋತ್ಪಾಟನ ಪ್ರಯತ್ನವೆಂಬುದು ಆರಂಭದಲ್ಲಿಯೇ ಹಾನಿಕರವಾಗುವುದು. ಜಾತಿನಿಯಮಗಳನ್ನೂ ನಿರ್ಬಂಧಗಳನ್ನೂ ಲಕ್ಷಿಸದೆ ಸಾಹಸದಿಂದ ಪ್ರವೃತ್ತರಾದವರು ಕಡೆಗೆ ತಾವೇ ಒಂದು ಹೊಸ ಜಾತಿಯವರಾಗಬೇಕಾಯಿತು. ಅನೇಕಸಲ ಜಾತಿ ನಿರ್ಬಂಧಗಳನ್ನು ವಿರೋಧಿಸಲು ತೊಡಗಿದವರು ಹಿಂದಿನ ನಿಯಮ ನೀತಿಗಳನ್ನು ಕಳೆದುಕೊಂಡು ಬೇರಾವ ನೀತಿ ನಿಯಮಗಳನ್ನೂ ಸಂಪಾದಿಸಿಕೊಳ್ಳದೆ ಸಮಾಜ ಭ್ರಷ್ಟರಾಗಿಯೇ ಬಾಳನ್ನು ಕಳೆಯಬೇಕಾಯಿತು.

ನರಕ ಸಿದ್ಧಿಯ ಸಂಭವ

ಕುಲವ್ಯವಸ್ಥೆ ಮತ್ತು ಜಾತಿಪದ್ಧತಿಗಳಿಲ್ಲದಿದ್ದರೆ ಸಮಾಜವು ಎಂತಹ ವ್ಯವಸ್ಥೆಗೊಳಗಾಗಬಹುದೆಂಬುದನ್ನು ಪಾಶ್ಚಾತ್ಯ ಸಮಾಜಗಳಲ್ಲಿ ಕಾಣಬಹುದು. ಆ ಸಮಾಜಗಳಲ್ಲಿ ವರ್ಗಗಳುಂಟು, ಜಾತಿಗಳಿಲ್ಲ. ವರ್ಗ ವಿಭೇದಗಳು ನೆಮ್ಮದಿಯ ಅಂತಸ್ತನ್ನೇ ಅನುಸರಿಸುವುದರಿಂದ ಸಮಾಜವು ಒಂದು ಗೋಪುರದಂತೆ ಇರುವುದು. ಶಿಖರದಲ್ಲಿ ಹಲಕೆಲವರು ಧನಾಢ್ಯರೂ ಬುಡದಲ್ಲಿ ಬಹುಜನರು ಹೊರಲಾರದಷ್ಟು ಭಾರವನ್ನು ಹೊತ್ತು ನಿತ್ಯ ದರಿದ್ರರೂ ಆಗಿರುವರು. ಈ ವ್ಯವಸ್ಥೆಯಲ್ಲಿ ಮೇಲೆ ಸ್ವರ್ಗ, ಕೆಳಗೆ ನರಕವಿದ್ದಂತೆ ಏರ್ಪಟ್ಟು ಜನತೆಯ ಬಹುಭಾಗವು ನರಕವನ್ನೇ ಅನುಭವಿಸುತ್ತಿರಬೇಕಾಗುವುದು. ವರ್ಗ ವ್ಯವಸ್ಥೆಯುಳ್ಳ ಸಮಾಜದಲ್ಲಿ ನಡೆಯುವಷ್ಟು ಅನ್ಯಾಯವು ಜಾತಿ ವ್ಯವಸ್ಥೆಯುಳ್ಳ ಸಮಾಜದಲ್ಲಿ ನಡೆಯುವುದಿಲ್ಲ. ಭರತವರ್ಷದಲ್ಲಿ ಸಮಾಜವು ವರ್ಗ ವ್ಯವಸ್ಥೆಗೆ ಒಳಗಾದರೆ ಲೋಕದಲ್ಲೆಲ್ಲಿಯೂ ಇಲ್ಲದಂತಹ ನರಕವು ಈ ದೇಶದಲ್ಲಿ ಸಿದ್ಧವಾಗುವುದು.

ವ್ಯಕ್ತಿಯ ದೃಷ್ಟಿ

ಸಮಾಜ ಸಂಸ್ಕಾರವನ್ನು ನಡೆಸಲು ಇಷ್ಟಪಡುವವರು ಸಮಸ್ತ ದೇಶವನ್ನೂ ಸಮಸ್ತ ಸಮಾಜವನ್ನೂ ಮನಸ್ಸಿನಲ್ಲಿಟ್ಟುಕೊಂಡು ಸನ್ನಾಹಯುತರಾಗತಕ್ಕದ್ದೇ ವಿನಾ ಒಬ್ಬ ವ್ಯಕ್ತಿಯ ಅಥವಾ ಒಂದು ವಿಭಾಗದ ಮೇಲನ್ನೇ ಮುಖ್ಯವೆಂದೆಣಿಸಿ ಸಂಸ್ಕಾರೋಪಾಯಗಳನ್ನು ಚಿಂತಿಸ ತಕ್ಕದ್ದಲ್ಲ. ಅಂಗವಾಗಿರತಕ್ಕದ್ದು ದೇಹಕ್ಕೆ ಒಗ್ಗಬೇಕು; ದೇಹವೆಂಬುದು ಒಂದಂಗಕ್ಕೆ ಒಗ್ಗತಕ್ಕುದಲ್ಲ. ಕಿರಿಯದಾದುದು ಹಿರಿಯದಾದುದಕ್ಕೆ ವಶವಾಗಬೇಕು. ವೈಯಕ್ತಿಕವಾದ ದೃಷ್ಟಿಯಿಂದಲೇ ವಿಚಾರ ಮಾಡುತ್ತ "ನನ್ನ ಬೆಳೆವಣಿಗೆಗೆ ಜಾತಿಯ ಕಟ್ಟು ಪ್ರತಿಬಂಧಕವಾಗಿದೆ; ನನ್ನ ಸಾಹಸ ಪ್ರತಾಪಗಳನ್ನು ತೋರಲು ನನಗೆ ಅವಕಾಶವೇ ಇಲ್ಲದಂತಾಗಿದೆ" ಎಂದು ಬಗೆಯುವುದು ದೋಷಯುಕ್ತವಾದುದು. *ಹಿಂದೆ ನಾವು ಕಂಡಂತೆ ಜಾತಿಯಲ್ಲಿ ಹುಟ್ಟಿದ ಪ್ರತಿ ವ್ಯಕ್ತಿಗೂ ವಿಶೇಷವಾದ ಅನುಕೂಲಗಳು ಸಿದ್ಧವಾಗಿ ದೊರಕುತ್ತವೆ; ಅವುಗಳನ್ನು ಮರೆಯಬಾರದು. ಇದಲ್ಲದೆ ಹಿತಚಿಂತಕ

---

* ಪುಟ 90-91

ನಾದವನು ಎಲ್ಲರ ಹಿತಸಾಧನೆಯನ್ನು ಕುರಿತು ಯೋಚಿಸತಕ್ಕುದು ಅತ್ಯವಶ್ಯವಾದುದು. ಒಬ್ಬಾತನ ಮೇಲು ಮತ್ತೊಬ್ಬನ ಕೀಳಾಗಿಯೂ, ಒಂದು ಪಂಗಡದ ಉನ್ನತಿಯು ಬೇರೊಂದು ಪಂಗಡದ ಅವನತಿಯಾಗಿಯೂ ಪರಿಣಮಿಸುವುದಾದರೆ ನ್ಯಾಯವೇ ನೆಲೆಸುವುದಿಲ್ಲ. ವ್ಯಕ್ತಿ ಪ್ರಧಾನವಾದ ಸಮಾಜಕ್ಕೆ ಸೇರಿದ ಐರೋಪ್ಯನು ಮೊದಮೊದಲು ಭಾರತೀಯ ಸಮಾಜ ದಲ್ಲಿ ವ್ಯಕ್ತಿಗೆ ಇರತಕ್ಕ ನಿರ್ಬಂಧಗಳನ್ನು ಮಾತ್ರವೇ ಕಾಣುವುದು ಸಹಜ; ಸ್ವಲ್ಪ ಅನುಭವವುಂಟಾದಮೇಲೆ ಆ ನಿರ್ಬಂಧಗಳಿಂದ ಒಟ್ಟು ಸಮಾಜಕ್ಕೆ ಲಭಿಸುವ ಅನುಕೂಲಗಳನ್ನೂ ಭದ್ರತೆಯನ್ನೂ ಕಾಣುತ್ತಾನೆ. ವ್ಯಕ್ತಿಗೆ ನಿರ್ಬಂಧಗಳು ಹೆಚ್ಚಾಗಿಯೇ ತೋರಿದರೂ ಅವುಗಳನ್ನು ಎಡೆ ಬಿಡದೆ ವ್ಯಕ್ತಿಯ ಯೋಗಕ್ಷೇಮಕ್ಕೆ ಸಾಧಕಗಳಾದ ಅನುಕೂಲ ಗಳೂ ಹೆಚ್ಚಾಗಿಯೇ ಉಂಟು. ನೀಚವೆಂದೋ ಅವಮಾನಕರವೆಂದೋ ಗಣ್ಯವಾಗತಕ್ಕ ವೃತ್ತಿಗಳಿಗೆ ಜಾತಿಪದ್ಧತಿಯಲ್ಲಿ ಜಾತಿ ಗೌರವವೂ ಸಮಾಜ ಗೌರವವೂ ಲಭ್ಯ; ಇತರ ಸಮಾಜಗಳಲ್ಲಿಲ್ಲ. ಸಂಸ್ಕಾರಕನು ಭಾರತೀಯನಾಗಿರುವಲ್ಲಿ ಕೋಟಿಗಟ್ಟಲೆಯಾಗಿರತಕ್ಕ ತನ್ನ ಒಡನಾಡಿ ಗಳಿಗೂ ಸಹಜಾತರಿಗೂ ಜಾತಿಪದ್ಧತಿಗಳು ಎಷ್ಟು ಸಹಜವೂ ಭದ್ರವೂ ಆಗಿರತಕ್ಕವೆಂಬುದನ್ನು ಮರೆಯದೆ ಆಲೋಚನೆಗಳನ್ನು ಕಟ್ಟಬೇಕು. ಇತರ ದೇಶಗಳಲ್ಲಿ ವ್ಯಕ್ತಿಯಾದವನು ರಾಷ್ಟ್ರಹಿತವನ್ನು ಮರೆಯದೆ ಹೇಗಿರುವನೋ ಹಾಗೆಯೇ ಭಾರತೀಯನಾದವನು ಅಖಿಲ ಸಮಾಜದ ಹಿತವನ್ನು ಮರೆಯದೆ ಇರಬೇಕು. ಜಾತಿಪದ್ಧತಿಗಳಲ್ಲಿ ತೋರಬಹುದಾದ ದೋಷಗಳನ್ನು ಒಟ್ಟು ಸಮಾಜ ಹಿತದ ದೃಷ್ಟಿಯಿಂದ ವಿಚಾರಮಾಡ ತಕ್ಕದ್ದು; ವೈಯಕ್ತಿಕ ದೃಷ್ಟಿಯಿಂದಲ್ಲ.

**ವಿಚಾರವು ಆವಶ್ಯ**

ಆಧುನಿಕ ಕಾಲದ ಸ್ಥಿತಿಗತಿಗಳಿಗೆ ಅನುಗುಣವಾಗಿ ಯಾವ ರೀತಿಯಲ್ಲಿ ಭಾರತೀಯ ಸಮಾಜದ ಬಂಧವು ಬದಲಾಗ ತಕ್ಕದ್ದೆಂಬ ವಿಚಾರವು ಅತಿಗಹನವಾದುದು. ಜಾತಿ ಪದ್ಧತಿಗಳಲ್ಲಿ ಎಂತಹ ಸಂಸ್ಕಾರವು ಯುಕ್ತ, ಎಂತಹ ವಿಧಾನವು ಉಚಿತ, ಮುಂತಾದ ಸಮಸ್ಯೆಗಳನ್ನು ಕುರಿತು ಯೋಗ್ಯ ವಾದ ಚಿಂತನೆಯೇ ಇನ್ನೂ ನಡೆದಿಲ್ಲ. ಆತುರದಿಂದ ಪ್ರವರ್ತಿಸುವುದರಲ್ಲಿ

ಇನ್ನೂ ಘೋರವಾದ ಅನ್ಯಾಯಗಳಿಗೇ ಆಸ್ಪದವು ದೊರೆಯಬಹುದು. ಉರಿಯುವ ಮನೆಯಿಂದ ತಪ್ಪಿಸಿಕೊಳ್ಳಲು ಕಾಡ್ಗಿಚ್ಚಿನಲ್ಲಿ ನುಗ್ಗುವ ಉದ್ಯಮದಂತೆ ನೆರವೇರಬಾರದು.

ಅವಿಭಕ್ತ ಕುಟುಂಬ

ಭಾರತೀಯ ಸಮಾಜದ ಮತ್ತೊಂದು ಮುಖ್ಯ ಲಕ್ಷಣವೆನಿಸಿದ ಅವಿಭಕ್ತ ಕುಟುಂಬವನ್ನು ಕುರಿತು ಪ್ರಸ್ತಾಪಿಸುವಾಗಲೂ ಇದೇ ನಿರ್ಣಯವನ್ನು ಅನುಸರಿಸಬೇಕಾಗುವುದು. ಅವಿಭಕ್ತ ಕುಟುಂಬದ ರೀತಿಯಲ್ಲಿ ಸ್ವಾರ್ಥಕ್ಕೆ ಅವಕಾಶವಿಲ್ಲದಂತೆ ಕೆಲಸಕಾರ್ಯಗಳು ನಡೆಯುವುದಲ್ಲದೆ ಪ್ರತಿಯೊಬ್ಬರಿಗೂ ಜೀವನವು ನಡೆಯುವಂತೆ ಒದಗುತ್ತದೆ. ಅನಾಥರೂ ತಬ್ಬಲಿಗಳೂ ಆದ ಮಕ್ಕಳು ನಿರ್ಗತಿಕರಾಗದೆ ಬಂಧು ಬಳಗದವರ ಪೋಷಣೆಯನ್ನು ಪಡೆಯುತ್ತವೆ; ವಿಧವೆಯರಾಗಿ ಮನೆತಪ್ಪಿದವರಿಗೆ ಆಶ್ರಯವು ಲಭಿಸುತ್ತದೆ. ಅವಿಭಕ್ತ ಕುಟುಂಬ ಧರ್ಮವು ನೆಲೆಸಿದ್ದ ಪಕ್ಷದಲ್ಲಿ ಮುಪ್ಪಿನ ವೇತನ (Old Age Pensions), ಬಡಬಗ್ಗರ ಸಹಾಯ ಮಂದಿರ (Poor Houses) ಮುಂತಾಗಿ ಪಾಶ್ಚಾತ್ಯ ಸಮಾಜಗಳಲ್ಲಿ ರಾಷ್ಟ್ರಮುಖವಾಗಿ ನಡೆಸತಕ್ಕ ಕರ್ತವ್ಯಗಳಿಗೆ ಅವಶ್ಯಕತೆಯೇ ತೋರುವುದಿಲ್ಲ. ಕುಟುಂಬವು ದೊಡ್ಡದಾಗಿ ಒಂದೇ ಮನೆಯಲ್ಲಿ ಅನೇಕರು ಒಟ್ಟುಕೂಡಿ ಜೀವಿಸುವಾಗ ವೆಚ್ಚವು ದುಂದುಗಾರಿಕೆಯಾಗಿ ಪರಿಣಮಿಸಲು ಆಸ್ಪದವಿರುವುದಿಲ್ಲ. ಅಲ್ಪಸ್ವಲ್ಪ ಸಂಪಾದನೆಗಳನ್ನೇ ಒಡಹುಟ್ಟಿದವರಲ್ಲಿ ಪ್ರತಿಯೊಬ್ಬರೂ ಮಾಡುತ್ತಲಿದ್ದಾಗ್ಯೂ ಎಲ್ಲರೂ ಒಟ್ಟುಕೂಡಿ ಜೀವಿಸುವುದರಲ್ಲಿ ಅವರೆಲ್ಲರ ಬದುಕು ನಡೆಯುವುದು ; ಪ್ರತ್ಯೇಕವಾಗಿದ್ದಲ್ಲಿ ನಡೆಯಲಾರದು. ಕುಟುಂಬದಲ್ಲಿ ಎಲ್ಲರೂ ಸಮನಾಗಿ ಸುಖದುಃಖಗಳನ್ನು ಅನುಭವಿಸುವುದರಲ್ಲಿ ಸಮತ್ವ ತತ್ವವು ಬೇರೂರಿ ಸಮಾಧಾನವನ್ನುಂಟುಮಾಡುವುದಲ್ಲದೆ ಅನ್ಯೋನ್ಯತೆಯನ್ನು ವೃದ್ಧಿಗೊಳಿಸುವುದು. ತ್ಯಾಗ, ವಿಧೇಯತೆ, ಶಿಷ್ಟಾಚಾರ, ದಾಕ್ಷಿಣ್ಯ, ಸ್ವಾರ್ಥ ದಮನಗಳು ಅವಿಭಕ್ತ ಕುಟುಂಬದಲ್ಲಿ ಸುಲಭವಾಗಿ ಊರ್ಜಿತವಾಗುತ್ತವೆ.

ಜಾತಿಪದ್ಧತಿಯ ವಿಷಯ ವಿಮರ್ಶೆಯಲ್ಲಿ ಅನೇಕಾನೇಕ ದುಷ್ಟ ಸಲ್ಲಾಪಗಳು ತೋರಿಕೊಂಡಿರುವಂತೆ ಅವಿಭಕ್ತ ಕುಟುಂಬದ ಪ್ರಸ್ತಾಪ

ದಲ್ಲಿಯೂ ದೋಷಯುಕ್ತವಾದ ವಾದಗಳು ಸಾಮಾನ್ಯವಾಗಿವೆ. ವಿಚಾರ ಮಾಡಿ ನೋಡಿದಲ್ಲಿ ಯಾವ ದೋಷಗಳಿಗೆ ಅವಿಭಕ್ತ ಕುಟುಂಬವೇ ಮೂಲವೆಂದು ಹೇಳುವರೋ ಆ ದೋಷಗಳಿಗೆ ಮೂಲಕಾರಣಗಳು ಬೇರೆಯಾಗಿ ಕಾಣುತ್ತವೆ. ಅವಿಭಕ್ತ ಕುಟುಂಬದಲ್ಲಿ ಸೋಮಾರಿಗಳಿಗೆ ಪ್ರೋತ್ಸಾಹ ದೊರೆಯುವುದೆಂದೂ, ಕೆಲಸಮಾಡಲು ಉತ್ತೇಜನವಿರುವುದಿಲ್ಲವೆಂದೂ ಆಕ್ಷೇಪಿಸುವುದು ಸಾಮಾನ್ಯ. ಕೆಲಸಕಾರ್ಯಗಳಾವುವೂ ಇಲ್ಲದೆ ಸಂಪಾದನೆಯ ಪ್ರಯತ್ನವೇ ಇಲ್ಲದೆ ಕುಟುಂಬಕ್ಕೆ ಭಾರವಾಗಿರುವ ಶತ ಸೋಮಾರಿಗಳು ಅನೇಕ ಮನೆಗಳಲ್ಲಿರಬಹುದು. ಅಂತಹವರನ್ನು ಅವರಿಗೆ ಪರಮಾಪ್ತರಾದ ಪತ್ನೀಪುತ್ರರೇ ಹಿಯ್ಯಾಳಿಸುತ್ತಲಿರುತ್ತಾರೆ. ಮೌನ ವಾಗಿಯೇ ತೋರಬಹುದಾದ ಆ ತಿರಸ್ಕಾರವನ್ನು ಸಹಿಸಿಕೊಂಡು ಸೋಮಾರಿತನವನ್ನೇ ತಬ್ಬಿಕೊಳ್ಳುವಂತಹ ಪುರುಷನು ಮತ್ತಾವ ಕಾರಣ ದಿಂದ ಚೈತನ್ಯವನ್ನು ಪಡೆದಾನು! ಸ್ವಭಾವ ಸೋಮಾರಿಗಳು ಇತರರಿಗೆ ಭಾರವಾಗಿರುವುದು ಎಲ್ಲ ಸಮಾಜಗಳಲ್ಲಿಯೂ ಸಾಮಾನ್ಯ; ಏಕಂದರೆ, ಮಾನವ ಸ್ವಭಾವವು ಒಂದೇ. ಧನಸಂಚಯವಾಗಲು ಅವಿಭಕ್ತ ಕುಟುಂಬವು ಪ್ರತಿಕೂಲವಾಗುವುದೆಂಬ ಆಕ್ಷೇಪವೂ ಉಂಟು; ಆಕ್ಷೇಪಕ್ಕೆ ಸ್ವಲ್ಪ ವಾದರೂ ಬಲವಿಲ್ಲ. ಅನೇಕರು ಸಂಪಾದಿಸುತ್ತ ಸಂಪಾದನೆಯನ್ನು ಯಜಮಾನನ ಕೈಯಲ್ಲಿಡುವಾಗ ಎಲ್ಲರ ಸಂಪಾದನೆಯೂ ಒಟ್ಟಿಗೆ ಕೂಡಿ ರಾಶಿಯಾಗುವುದಿಲ್ಲವೆ? ಆರ್ಜನೆಯಲ್ಲಿ ಮಿಗಿಸಿ ಮಿಕ್ಕದ್ದನ್ನು ಶೇಖರಮಾಡಿ ಬಂಡವಾಳವನ್ನು ಕಟ್ಟಿಕೊಳ್ಳಲು ಅವಿಭಕ್ತ ಕುಟುಂಬವು ಪ್ರತಿಬಂಧಕ ವೆಂಬ ಮಾತು ವಾಸ್ತವವಾದುದಲ್ಲ. ಭಾರತೀಯರು ವ್ಯಾಪಾರೋ ದ್ಯೋಗಗಳಲ್ಲಿ ಸಾಹಸವನ್ನು ತೋರುವುದಕ್ಕೆ ಈ ಕುಟುಂಬ ಜೀವನ ದಿಂದ ಅನುಕೂಲವಾಗುವುದಿಲ್ಲವೆಂಬ ಮಾತೂ ದುಷ್ಟವಾದುದು. ಏಕಂದರೆ ತಮ್ಮನಾದವನು ಪತ್ನೀಪುತ್ರರನ್ನು ಮನೆಯಲ್ಲಿ ಬಿಟ್ಟು ನಿಶ್ಚಿಂತೆಯಾಗಿ ದೂರಪ್ರಯಾಣವನ್ನು ಬೆಳೆಸುವುದಕ್ಕೂ ಸಾಹಸಪಡುವುದಕ್ಕೂ ಅನು ಕೂಲವುಂಟು. ಪ್ರತ್ಯೇಕವಾಗಿ ಜೀವಿಸುತ್ತಿದ್ದರೆ ಸಾಹಸಪಡಲು ಅವಕಾಶ ಕಡಿಮೆಯೇ ವಿನಾ ದೊಡ್ಡಮನೆಯಲ್ಲಿ ಸೇರಿಕೊಂಡಿದ್ದರೆ ಕಡಿಮೆಯಲ್ಲ

ದುರ್ಬಲ ಆಕ್ಷೇಪಗಳು

ದೊಡ್ಡ ಮನೆಗಳಲ್ಲಿ ಮನಸ್ತಾಪಗಳೂ ಅಸೂಯೆಗಳೂ ಹೆಚ್ಚಿ ಹೋಗಿ ಎಲ್ಲರಿಗೂ ಅಸಮಾಧಾನವೇ ತೋರುವುದೆಂಬ ಆಕ್ಷೇಪಕ್ಕೆ ನಿಜವಾದ ಕಾರಣವು ಬಡತನವೋ ಒಟ್ಟಿನ ಜೀವನವೋ? ಅಸೂಯೆಗಳಿಗೂ ಮನಸ್ತಾಪಗಳಿಗೂ ಮೂಲವಾದ ಸ್ವಾರ್ಥವನ್ನು ತಗ್ಗಿಸಿ ದಾಕ್ಷಿಣ್ಯ ಗುಣವನ್ನು ವೃದ್ಧಿಪಡಿಸುವುದು ದೊಡ್ಡ ಕುಟುಂಬದ ಅನಿವಾರ್ಯ ಪರಿಣಾಮ; ಹಾಗಿರುವಲ್ಲಿ ಅನ್ಯೋನ್ಯತೆಯನ್ನೂ ತೃಪ್ತಿಯನ್ನೂ ಭಂಗಪಡಿಸುವ ಪರಿಣಾಮವು ತೋರಿದಾಗ ಅದಕ್ಕೆ ಕಾರಣವನ್ನು ಬೇರೆಡೆಯಲ್ಲಿ ಕಾಣಬೇಕು. ಮನಸ್ತಾಪಗಳಿಗೂ ಕಲಹಗಳಿಗೂ ಕುಟುಂಬ ಜೀವನವು ಮೂಲವಲ್ಲ; ಮೂಲವಾಗಿರತಕ್ಕವು ದಿನೇ ದಿನೇ ಬಲಗೊಳ್ಳುತ್ತಿರುವ ಬಡತನ, ನಿರುದ್ಯೋಗ, ಅನಾರೋಗ್ಯಗಳು. ಆರ್ಥಿಕ ಸ್ಥಿತಿಗತಿಗಳ ಪರಿಣಾಮ ಪ್ರಭಾವಗಳನ್ನು ವಿಚಾರ ದೃಷ್ಟಿಯಿಂದ ಕಂಡಲ್ಲಿ ಇತ್ತೀಚಿಗೆ ಅವಿಭಕ್ತ ಕುಟುಂಬಗಳಲ್ಲಿ ತೋರಿಕೊಂಡಿರುವ ದುಃಸ್ಥಿತಿಗತಿಗಳಿಗೆ ಆರ್ಥಿಕ ಅವನತಿಯೇ ನಿಜವಾದ ಕಾರಣವೆಂದು ಸ್ಫುಟವಾಗುವುದು. ಈ ದುಷ್ಟ ಆಕ್ಷೇಪಗಳು ಮಾತ್ರವಲ್ಲದೆ ವಿಚಿತ್ರವೆನಿಸುವ ಮತ್ತೊಂದು ಆಕ್ಷೇಪವೂ ಅಲ್ಲಲ್ಲಿ ಕೇಳಬರುವುದು. ನೂತನ ವಧೂವರರಿಗೆ, ಅಂದರೆ ಸತೀಪತಿಗಳಾಗಿ ಗಾರ್ಹಸ್ಥ್ಯವನ್ನು ಆರಂಭಿಸುವ ದಂಪತಿಗಳಿಗೆ, ದೊಡ್ಡಮನೆಯಲ್ಲಿ ಸ್ವಾತಂತ್ರ್ಯವು ಕಡಿಮೆಯಂತೆ. ಅನುಭವವಾಗಲಿ, ವಿಶೇಷವಾದ ಪರಿಜ್ಞಾನವಾಗಲಿ ಇಲ್ಲದಿರುವ ಹೊಸ ದಂಪತಿಗಳು ಹಿರಿಯರ ಮಧ್ಯೆ ಇರತಕ್ಕುದು ಮೇಲೋ ಸ್ವತಂತ್ರವಾಗಿಯೂ ಪ್ರತ್ಯೇಕವಾಗಿಯೂ ಇದ್ದುಕೊಂಡು ಸ್ವೇಚ್ಛೆಯಿಂದ ಇರತಕ್ಕುದು ಮೇಲೋ?

ಕಾಠಿಣ್ಯ ಲೋಪ

ಅವಿಭಕ್ತ ಕುಟುಂಬದ ಗುಣದೋಷಗಳನ್ನು ಸುವಿಚಾರಪೂರಿತವಾದ ರೀತಿಯಲ್ಲಿ ವಿಮರ್ಶೆಮಾಡಿ, ಪಾಶ್ಚಾತ್ಯರಲ್ಲಿ ನೆಲೆಯಾಗಿರುವ ಪ್ರತ್ಯೇಕ ಕುಟುಂಬದ ಗುಣದೋಷಗಳೊಂದಿಗೆ ಹೋಲಿಸಿ, ತಾರತಮ್ಯಗಳನ್ನು ಮನಗಾಣಬೇಕೇ ವಿನಾ ಅಲ್ಪವಿಚಾರದಿಂದ ತೃಪ್ತರಾಗಿ ಇತಿ ನಿರ್ದೇಶವನ್ನು ನಿರ್ಣಯಿಸಬಾರದು. ಹಾಗೆ ಮಾಡಿದಲ್ಲಿ ಅವಿಭಕ್ತ ಕುಟುಂಬವೇ ಭಾರತೀಯರಿಗೆ ಅನುಕೂಲವಾದುದೆಂಬ ನಿಶ್ಚಯವು ತೋರುತ್ತದೆ. ಆಗ

ಮೇಲಿನ ಆಕ್ಷೇಪಗಳು ನಿಜವಾಗಿ ಆಕ್ಷೇಪಗಳೆನಿಸುವುದಿಲ್ಲ; ವಾಸ್ತವವಾಗಿ ತೋರುವ ಆಕ್ಷೇಪವು ಬೇರೆ. ದೊಡ್ಡ ಮನೆಯಲ್ಲಿ ಬೆಳೆದ ಭಾರತೀಯನು ಸಹಜವಾಗಿ ಸ್ವಾರ್ಥವನ್ನು ಹೆಚ್ಚಾಗಿ ಬೆಳೆಸದೆ ಇರುವುದು ಹಿತವಾಗಿರ ಬಹುದು; ಆದರೆ ಅದೇ ಪರಿಣಾಮದಲ್ಲಿಯೇ ದಾಕ್ಷಿಣ್ಯ ಪ್ರಕೃತಿಯುಳ್ಳವ ನಾಗಿ ಕಾಠಿಣ್ಯವೇ ಇಲ್ಲದೆ ಅನೇಕ ವೇಳೆಗಳಲ್ಲಿ ದುರ್ಬಲನಾಗಿರುವನು. ಮನಸ್ಸಿನ ಕಾಠಿಣ್ಯವೂ ಸಹಜ ಗುಣವಾಗಿ ಬೆಳೆಯುವಂತೆ ನೆರವೇರಿಸತಕ್ಕ ಅಂಶಗಳನ್ನು ಕುರಿತು ಯೋಗ್ಯವಾದ ಆಲೋಚನೆಯನ್ನು ಸಂಸ್ಕಾರಕರು ನಡೆಸತಕ್ಕದ್ದು.

ಅತಿಶಯವಾಗಿ ಬೆಳೆದಿರುವ ದಾರಿದ್ರ್ಯ ನಿರುದ್ಯೋಗಗಳ ಪ್ರಭಾವ ದಿಂದ ದೊಡ್ಡ ಮನೆಗಳು ಒಡೆಯುತ್ತಲೇ ಇವೆ. ಪ್ರಕೃತ ಕಾಲಸ್ಥಿತಿಯಲ್ಲಿ ನಡೆಯುವ ಘಟನಾವಳಿಗಳಲ್ಲಿ ಇದೂ ಒಂದು. ಆದರೆ ಮನೆಗಳು ಛಿದ್ರಛಿದ್ರಗಳಾಗುವ ಗತಿಯಲ್ಲಿ ಪೂರ್ವದಿಂದಲೂ ನಡೆದುಬಂದಿರುವ ಸತ್ಸಂಪ್ರದಾಯ ಸಂಪತ್ತನ್ನುಳಿಸಿಕೊಳ್ಳುವ ರೀತಿ ಹೇಗೆ, ದುಷ್ಪರಿಣಾಮ ಗಳು ಮೂಡದಂತೆ ನೆರವೇರಿಸುವ ಪರಿ ಹೇಗೆ ಎಂದು ಮುಂತಾಗಿ ವಿಚಾರ ವಿಮರ್ಶೆಗಳನ್ನು ಭಾರತೀಯರೆಲ್ಲರೂ ಶ್ರದ್ಧೆಯಿಂದ ನಡೆಸಬೇಕು.

**ಭಿಕ್ಷಾವೃತ್ತಿ**

ಭರತವರ್ಷದಲ್ಲಿರುವಷ್ಟು ಭಿಕ್ಷುಕರು ಬೇರಾವ ದೇಶದಲ್ಲಿಯೂ ಇಲ್ಲ; ಪೃಥ್ವಿಯಲ್ಲಿ ಈ ದೇಶವು ತಿರುಪಗಾರರ ದೇಶವೆಂದು ಹೆಸರಾಗಿದೆ. ಜಾತಿಪದ್ಧತಿಯೇ ಇದಕ್ಕೂ ಮೂಲವೆಂದು ಅವಿಚಾರ ದುಷ್ಟವಾದ ಆಕ್ಷೇಪವು ಆತುರಗಾರರ ಬಾಯಿಂದ ಕೇಳುವುದುಂಟು. ಭಿಕ್ಷುಕರು ಭಗವಂತನಿಗೆ ಇಷ್ಟರಾದವರೆಂದೂ ಆ ಕಾರಣದಿಂದ ಪವಿತ್ರರಾದವರೆಂದೂ ದೈವಭಕ್ತಿಯುಳ್ಳ ಹಿಂದೂಗಳೂ ನಂಬುತ್ತಾರೆ, ಮುಸಲ್ಮಾನರೂ ನಂಬುತ್ತಾರೆ. ಈ ಬಗೆಯ ವಿಶ್ವಾಸದ ಪರಿಣಾಮವಾಗಿ ಇತ್ತೀಚಿನ ಕಾಲದಲ್ಲಿ ಭಿಕ್ಷುಕರ ಸಂಖ್ಯೆಯು ಅತಿಯಾಗಿ ವೃದ್ಧಿಯಾಗಿರುವುದಲ್ಲದೆ ದಾನಧರ್ಮ ಪದ್ಧತಿಗಳಲ್ಲಿ ಮೌಢ್ಯವೂ ಹೆಚ್ಚಿ ವ್ಯರ್ಥವಾದ ದಾನವು ಎಲ್ಲೆಲ್ಲಿಯೂ ಹೆಚ್ಚಿದೆ. ದಿನೇ ದಿನೇ ದಾರಿದ್ರ್ಯ ಹೆಚ್ಚುತ್ತಿರುವ ಪರಿಸ್ಥಿತಿಯಲ್ಲಿ ಭಿಕ್ಷುಕತನದ ಹಾವಳಿಯೂ ದಿನೇ ದಿನೇ ಹೆಚ್ಚುತ್ತಲಿದೆ.

ಭಿಕ್ಷಾವೃತ್ತಿಯೇ ಇಲ್ಲದಿರುವ ದೇಶವೊಂದು ವೇಳೆ ಇದ್ದಿದ್ದರೆ ಆ ದೇಶದ ಜನರು ಬೇಕಾದಷ್ಟು ಹೆಮ್ಮೆಪಡಬಹುದಾಗಿತ್ತು. ಆದರೆ ಭೂಮಂಡಲದಲ್ಲಿ ಅಂತಹ ದೇಶವೇ ಇಲ್ಲ. ಇಂಗ್ಲಂಡಿನಲ್ಲಿ ಭಿಕ್ಷುಕರು ದಂಡಾರ್ಹರೆಂಬ ವಿಧಿಯಿದೆ; ಆದರೆ ಆ ವಿಧಿಬಲದಿಂದ ಭಿಕ್ಷಾಟನೆಯು ನಿಲ್ಲಲಿಲ್ಲ. ಅಲ್ಲಿ ನಿರ್ಗತಿಕರಾದವರು ಅನೇಕಾನೇಕ ಕೃತ್ರಿಮೋಪಾಯ ಗಳನ್ನು ಅವಲಂಬಿಸಿ ಭಿಕ್ಷೆಯನ್ನು ಅಪೇಕ್ಷಿಸುತ್ತಾರೆ. ಜಗತ್ತಿನಲ್ಲಿ ಎಂದಿನವರೆಗೆ ದಾರಿದ್ರ್ಯವಿರುವುದೋ, ಎಂದಿನವರೆಗೆ ಮಾನವ ಸ್ವಭಾವದಲ್ಲಿ ದಾನಬುದ್ಧಿಯಿರುವುದೋ ಅಂದಿನವರೆಗೂ ಭಿಕ್ಷೆಯೆಂಬುದು ಇದ್ದೇ ಇರತಕ್ಕುದು. ಭಿಕ್ಷಾವೃತ್ತಿಯನ್ನು ಬಲವಂತದಿಂದ ನಿಷೇಧಿಸಲು ಯತ್ನಿಸಿದಾಗಲೆಲ್ಲ ಕಳ್ಳತನ ಮೊದಲಾದ ಅಪರಾಧಗಳು ಹೆಚ್ಚುವ ಪರಿಣಾಮವೇ ತೋರಿಕೊಂಡಿರುವುದು.

ಇತರ ದೇಶಗಳಲ್ಲಿ ಭಿಕ್ಷಾವೃತ್ತಿಯನ್ನು ಉತ್ಕೃಷ್ಟವೆಂದು ಭಾವಿಸು ವುದಿಲ್ಲ. ಭರತವರ್ಷದಲ್ಲಿ ಮಾತ್ರ ಭಿಕ್ಷಾವೃತ್ತಿಯು ಗೌರವಾರ್ಹವಾದು ದೆಂದು ಭಾವಿಸುತ್ತಾರೆ; ಕೆಲವು ಜಾತಿಗಳವರಂತೂ ಇತರ ವೃತ್ತಿಗಳನ್ನು ತಿರಸ್ಕರಿಸಿ ಭಿಕ್ಷಾಟನೆಯೇ ಪರಮೋತ್ತಮವೆಂದು ಭಿಕ್ಷುಕರಾಗಿಯೇ ಇರುತ್ತಾರೆ. ಬ್ರಾಹ್ಮಣರು ಇತರ ವೃತ್ತಿಗಳನ್ನು ಹೇಯವೆಂದೆಣಿಸಿ ಉಂಛವೃತ್ತಿಯೇ ಶ್ರೇಷ್ಠವೆಂದು ಭಾವಿಸುತ್ತಾರೆ. ವಿಚಿತ್ರವೆಂದು ತೋರುವ ಈ ಪದ್ಧತಿಗೆ ಜಾತಿಗೌರವವೆಂಬುದು ಮೂಲ; ಅದನ್ನು ಇಂಗ್ಲಂಡಿನ ದರಿದ್ರ ಶ್ರೀಮಂತರ ಪದ್ಧತಿಯೊಂದಿಗೆ ಹೋಲಿಸತಕ್ಕದ್ದು. ಅಲ್ಲಿಯ ಶ್ರೀಮಂತಕುಲಸ್ಥನು ಸರ್ವನಾಶಕ್ಕೆ ಸಿಕ್ಕಿದಾಗ ಸ್ವದೇಶದಲ್ಲಿಯೇ ದೊರಕಬಹುದಾದ ಚಾಕರಿಯನ್ನು ಅವಮಾನಕರವೆಂದೆಣಿಸಿ ದೇಶಾಂತರ ಗಳಲ್ಲಿ ಕೂಲಿಯಾಳಾಗಿ ದುಡಿಯಲು ಸಿದ್ಧನಾಗುತ್ತಾನೆ. ಇವೆರಡಕ್ಕೂ ನಿಜವಾಗಿ ಹೋಲಿಕೆಯಿಲ್ಲ; ಏಕಂದರೆ ಶ್ರೀಮಂತನನ್ನು ಬಾಧಿಸುವುದು ದರ್ಪದ ಚಿಂತೆ, ಬ್ರಾಹ್ಮಣನನ್ನು ಬಾಧಿಸುವುದು ಜಾತಿಶಿಷ್ಟಿಯ ಚಿಂತೆ. ಇತ್ತೀಚಿಗೆ ನಡೆದಿರುವ ಕಾಲಗತಿಯಲ್ಲಿ ಅನೇಕಾನೇಕ ಜಾತಿಗಳವರು ತಮ್ಮ ಪೂರ್ವವೃತ್ತಿಗಳನ್ನು ಕಳೆದುಕೊಳ್ಳುವಂತಾಯಿತು; ಅಂತಹವರಿಗೆ ಬೇರೆ ಜೀವನೋಪಾಯಗಳು ಲಭಿಸದೆ ಹೋದವು. ಆದ್ದರಿಂದ ಅವರಲ್ಲಿ

ಅನೇಕರು ಭಿಕ್ಷಾವೃತ್ತಿಯನ್ನನುಸರಿಸಿದರು; ಕೆಲವೇಳೆಗಳಲ್ಲಿ ಕಳ್ಳತನ ದರೋಡೆಗಳನ್ನೂ ವೃತ್ತಿಯಾಗಿ ಅವಲಂಬಿಸಿದರು. ಈ ಘಟನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಭಾರತೀಯ ಭಿಕ್ಷುಕತನದ ವಿಚಾರದಲ್ಲಿ ಇತರ ಉದ್ಯೋಗವಿಲ್ಲದೆ ತಿರುಪಗಾರರಾಗಿರುವವರನ್ನೂ, ಭಿಕ್ಷಾಟನೆಯೇ ತಮ್ಮ ಅಧಿಕಾರವೆಂದುಕೊಂಡು ಭಿಕ್ಷುಕರಾಗಿರುವವರನ್ನೂ ಬೇರೆಬೇರೆಯಾಗಿ ಕಾಣಬೇಕು.

ಸ್ವಲ್ಪ ದೂರ ವಿಚಾರವನ್ನು ನಡೆಸುವುದರಲ್ಲಿಯೇ ಭಾರತೀಯ ಭಿಕ್ಷುಕರಲ್ಲಿ ಒಂದು ವಿಶೇಷ ಗುಣವು ವ್ಯಕ್ತವಾಗುತ್ತದೆ. ಭಿಕ್ಷಾಧಿಕಾರಿಗಳಾದವರು ಗೃಹಸ್ಥರಿಗೆ ಯಾವುದಾದರೂ ಪ್ರಯೋಜನವನ್ನು ಕಲ್ಪಿಸಿ ಕೊಡುತ್ತಾರೆ. ಏಕನಾದ, ತಂಬೂರಿ, ಶಂಖ, ಜಾಗಟೆ, ಬುಡುಬುಡಿಕೆಗಳನ್ನು ಹಿಡಿದೋ ಮೃಗಪಕ್ಷಿಗಳನ್ನು ಆಡಿಸಿಕೊಂಡೋ ಬರುವ ಜನರು ಸ್ವಲ್ಪ ಗಾನವನ್ನು ಕೇಳಿಸಿಯೋ ವಿನೋದವನ್ನು ತೋರಿಯೋ ಯಾಚಿಸುತ್ತಾರೆ. ಸಾಧಾರಣವಾಗಿ ಎಲ್ಲ ಭಿಕ್ಷುಕರೂ ದೇವರ ಹೆಸರನ್ನು ಹೇಳಿಕೊಂಡೇ ಬೇಡುತ್ತಾರೆ. ಭಾರತೀಯರ ಪುರಾತನ ಸಂಪ್ರದಾಯಗಳಲ್ಲಿ ಗುರುವಾದವನು ಭಿಕ್ಷಾಜೀವಿಯಾಗಿ ಕಾಲಹರಣಮಾಡಬೇಕೆಂಬ ನಿಯಮವು ಇದಕ್ಕೆ ಮೂಲ. ಸಾಧು ಸಂನ್ಯಾಸಿಗಳು ಭಿಕ್ಷಾಧಿಕಾರಿಗಳಾಗಿ ಭರತವರ್ಷದಲ್ಲಿ ಮೆರೆಯುವುದು ಇದರಿಂದಲೇ. ಮನೆ ಮುಂದೆ ಬಂದರೂ ಹೊಸ್ತಿಲನ್ನು ದಾಟದೆ ಕರೆಸಿಕೊಂಡು ದಾಟುವ ಭಿಕ್ಷಾಧಿಕಾರಿಗಳನ್ನು ಸುಲಭವಾಗಿ ಕಾಣಬಹುದು. ಭಿಕ್ಷೆ ಸಿಕ್ಕದಿದ್ದ ವೇಳೆಯಲ್ಲಿ ಭಿಕ್ಷುಕರು ಬಯ್ದು ಜರೆದಾಡುವ ಕೌತುಕವನ್ನೂ ಕಾಣಬಹುದು. ಮುಂಬಯಿ ಪ್ರಾಂತದಲ್ಲಿ ನ್ಯಾಯಾಧೀಶ ಪದವಿಯಲ್ಲಿ ಗೌರವಪಡೆದು ಹೆಸರುವಾಸಿಯಾಗಿದ್ದ ಸರ್ ನಾರಾಯಣ ಭಾಂದಾವಾರಕರ್ ಎಂಬ ಗೃಹಸ್ಥರು ಒಂದು ದಿನ ತಮ್ಮ ಬಳಿಗೆ ಬಂದ ಸಂನ್ಯಾಸಿಗಳ ಗುಂಪಿನವರ ಮೇಲೆ ಕೋಪಗೊಂಡು "ಈ ರೀತಿಯಲ್ಲಿ ಭಿಕ್ಷೆಯೆತ್ತಿ ಹೊಟ್ಟೆಹೊರೆದುಕೊಂಡು ಭೂಭಾರವಾಗಿರುವುದೇತಕ್ಕೆ? ಯಾವುದಾದರೂ ಕಸಬನ್ನು ಅವಲಂಬಿಸಿ ಎಲ್ಲರಂತೆ ಏಕೆ ಶ್ರಮಪಟ್ಟು ಜೀವಿಸಬಾರದು ನೀವು?" ಎಂದು ನಿಂದಿಸಿದರು. ಆಗ ಆ ಸಂನ್ಯಾಸಿಗಳು "ನಾವು ಭಿಕ್ಷೆ ಬೇಡುವುದು ನಮ್ಮ ಹೊಟ್ಟೆ

ಭಿಕ್ಷಾವೃತ್ತಿಯೇ ಇಲ್ಲದಿರುವ ದೇಶವೊಂದು ವೇಳೆ ಇದ್ದಿದ್ದರೆ ಆ ದೇಶದ ಜನರು ಬೇಕಾದಷ್ಟು ಹೆಮ್ಮೆಪಡಬಹುದಾಗಿತ್ತು. ಆದರೆ ಭೂಮಂಡಲದಲ್ಲಿ ಅಂತಹ ದೇಶವೇ ಇಲ್ಲ. ಇಂಗ್ಲಂಡಿನಲ್ಲಿ ಭಿಕ್ಷುಕರು ದಂಡಾರ್ಹರೆಂಬ ವಿಧಿಯಿದೆ; ಆದರೆ ಆ ವಿಧಿಬಲದಿಂದ ಭಿಕ್ಷಾಟನೆಯು ನಿಲ್ಲಲಿಲ್ಲ. ಅಲ್ಲಿ ನಿರ್ಗತಿಕರಾದವರು ಅನೇಕಾನೇಕ ಕೃತ್ರಿಮೋಪಾಯ ಗಳನ್ನು ಅವಲಂಬಿಸಿ ಭಿಕ್ಷೆಯನ್ನು ಅಪೇಕ್ಷಿಸುತ್ತಾರೆ. ಜಗತ್ತಿನಲ್ಲಿ ಎಂದಿನವರೆಗೆ ದಾರಿದ್ರ್ಯವಿರುವುದೋ, ಎಂದಿನವರೆಗೆ ಮಾನವ ಸ್ವಭಾವದಲ್ಲಿ ದಾನಬುದ್ಧಿಯಿರುವುದೋ ಅಂದಿನವರೆಗೂ ಭಿಕ್ಷೆಯೆಂಬುದು ಇದ್ದೇ ಇರತಕ್ಕುದು. ಭಿಕ್ಷಾವೃತ್ತಿಯನ್ನು ಬಲವಂತದಿಂದ ನಿಷೇಧಿಸಲು ಯತ್ನಿಸಿದಾಗಲೆಲ್ಲ ಕಳ್ಳತನ ಮೊದಲಾದ ಅಪರಾಧಗಳು ಹೆಚ್ಚುವ ಪರಿಣಾಮವೇ ತೋರಿಕೊಂಡಿರುವುದು.

ಇತರ ದೇಶಗಳಲ್ಲಿ ಭಿಕ್ಷಾವೃತ್ತಿಯನ್ನು ಉತ್ಕೃಷ್ಟವೆಂದು ಭಾವಿಸು ವುದಿಲ್ಲ. ಭರತವರ್ಷದಲ್ಲಿ ಮಾತ್ರ ಭಿಕ್ಷಾವೃತ್ತಿಯು ಗೌರವಾರ್ಹವಾದು ದೆಂದು ಭಾವಿಸುತ್ತಾರೆ; ಕೆಲವು ಜಾತಿಗಳವರಂತೂ ಇತರ ವೃತ್ತಿಗಳನ್ನು ತಿರಸ್ಕರಿಸಿ ಭಿಕ್ಷಾಟನೆಯೇ ಪರಮೋತ್ತಮವೆಂದು ಭಿಕ್ಷುಕರಾಗಿಯೇ ಇರುತ್ತಾರೆ. ಬ್ರಾಹ್ಮಣರು ಇತರ ವೃತ್ತಿಗಳನ್ನು ಹೇಯವೆಂದೆಣಿಸಿ ಉಂಛವೃತ್ತಿಯೇ ಶ್ರೇಷ್ಠವೆಂದು ಭಾವಿಸುತ್ತಾರೆ. ವಿಚಿತ್ರವೆಂದು ತೋರುವ ಈ ಪದ್ಧತಿಗೆ ಜಾತಿಗೌರವವೆಂಬುದು ಮೂಲ; ಅದನ್ನು ಇಂಗ್ಲಂಡಿನ ದರಿದ್ರ ಶ್ರೀಮಂತರ ಪದ್ಧತಿಯೊಂದಿಗೆ ಹೋಲಿಸತಕ್ಕದ್ದು. ಅಲ್ಲಿಯ ಶ್ರೀಮಂತಕುಲಸ್ಥನು ಸರ್ವನಾಶಕ್ಕೆ ಸಿಕ್ಕಿದಾಗ ಸ್ವದೇಶದಲ್ಲಿಯೇ ದೊರಕಬಹುದಾದ ಚಾಕರಿಯನ್ನು ಅವಮಾನಕರವೆಂದೆಣಿಸಿ ದೇಶಾಂತರ ಗಳಲ್ಲಿ ಕೂಲಿಯಾಳಾಗಿ ದುಡಿಯಲು ಸಿದ್ಧನಾಗುತ್ತಾನೆ. ಇವೆರಡಕ್ಕೂ ನಿಜವಾಗಿ ಹೋಲಿಕೆಯಿಲ್ಲ; ಏಕೆಂದರೆ ಶ್ರೀಮಂತನನ್ನು ಬಾಧಿಸುವುದು ದರ್ಪದ ಚಿಂತೆ, ಬ್ರಾಹ್ಮಣನನ್ನು ಬಾಧಿಸುವುದು ಜಾತಿಶಿಷ್ಟಿಯ ಚಿಂತೆ. ಇತ್ತೀಚಿಗೆ ನಡೆದಿರುವ ಕಾಲಗತಿಯಲ್ಲಿ ಅನೇಕಾನೇಕ ಜಾತಿಗಳವರು ತಮ್ಮ ಪೂರ್ವವೃತ್ತಿಗಳನ್ನು ಕಳೆದುಕೊಳ್ಳುವಂತಾಯಿತು; ಅಂತಹವರಿಗೆ ಬೇರೆ ಜೀವನೋಪಾಯಗಳು ಲಭಿಸದೆ ಹೋದವು. ಆದ್ದರಿಂದ ಅವರಲ್ಲಿ

ಅನೇಕರು ಭಿಕ್ಷಾವೃತ್ತಿಯನ್ನನುಸರಿಸಿದರು; ಕೆಲವೇಳೆಗಳಲ್ಲಿ ಕಳ್ಳತನ ದರೋಡೆಗಳನ್ನೂ ವೃತ್ತಿಯಾಗಿ ಅವಲಂಬಿಸಿದರು. ಈ ಘಟನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಭಾರತೀಯ ಭಿಕ್ಷುಕತನದ ವಿಚಾರದಲ್ಲಿ ಇತರ ಉದ್ಯೋಗವಿಲ್ಲದೆ ತಿರುಪಗಾರರಾಗಿರುವವರನ್ನೂ, ಭಿಕ್ಷಾಟನೆಯೇ ತಮ್ಮ ಅಧಿಕಾರವೆಂದುಕೊಂಡು ಭಿಕ್ಷುಕರಾಗಿರುವವರನ್ನೂ ಬೇರೆಬೇರೆಯಾಗಿ ಕಾಣಬೇಕು.

ಸ್ವಲ್ಪ ದೂರ ವಿಚಾರವನ್ನು ನಡೆಸುವುದರಲ್ಲಿಯೇ ಭಾರತೀಯ ಭಿಕ್ಷುಕರಲ್ಲಿ ಒಂದು ವಿಶೇಷ ಗುಣವು ವ್ಯಕ್ತವಾಗುತ್ತದೆ. ಭಿಕ್ಷಾಧಿಕಾರಿಗಳಾದವರು ಗೃಹಸ್ಥರಿಗೆ ಯಾವುದಾದರೂ ಪ್ರಯೋಜನವನ್ನು ಕಲ್ಪಿಸಿಕೊಡುತ್ತಾರೆ. ಏಕನಾದ, ತಂಬೂರಿ, ಶಂಖ, ಜಾಗಟೆ, ಬುಡುಬುಡಿಕೆಗಳನ್ನು ಹಿಡಿದೋ ಮೃಗಪಕ್ಷಿಗಳನ್ನು ಆಡಿಸಿಕೊಂಡೋ ಬರುವ ಜನರು ಸ್ವಲ್ಪ ಗಾನವನ್ನು ಕೇಳಿಸಿಯೋ ವಿನೋದವನ್ನು ತೋರಿಯೋ ಯಾಚಿಸುತ್ತಾರೆ. ಸಾಧಾರಣವಾಗಿ ಎಲ್ಲ ಭಿಕ್ಷುಕರೂ ದೇವರ ಹೆಸರನ್ನು ಹೇಳಿಕೊಂಡೇ ಬೇಡುತ್ತಾರೆ. ಭಾರತೀಯರ ಪುರಾತನ ಸಂಪ್ರದಾಯಗಳಲ್ಲಿ ಗುರುವಾದವನು ಭಿಕ್ಷಾಜೀವಿಯಾಗಿ ಕಾಲಹರಣಮಾಡಬೇಕೆಂಬ ನಿಯಮವು ಇದಕ್ಕೆ ಮೂಲ. ಸಾಧು ಸಂನ್ಯಾಸಿಗಳು ಭಿಕ್ಷಾಧಿಕಾರಿಗಳಾಗಿ ಭರತವರ್ಷದಲ್ಲಿ ಮೆರೆಯುವುದು ಇದರಿಂದಲೇ. ಮನೆ ಮುಂದೆ ಬಂದರೂ ಹೊಸ್ತಿಲನ್ನು ದಾಟದೆ ಕರೆಸಿಕೊಂಡು ದಾಟುವ ಭಿಕ್ಷಾಧಿಕಾರಿಗಳನ್ನು ಸುಲಭವಾಗಿ ಕಾಣಬಹುದು. ಭಿಕ್ಷೆ ಸಿಕ್ಕದಿದ್ದ ವೇಳೆಯಲ್ಲಿ ಭಿಕ್ಷುಕರು ಬಯ್ದು ಜರೆದಾಡುವ ಕೌತುಕವನ್ನೂ ಕಾಣಬಹುದು. ಮುಂಬಯಿ ಪ್ರಾಂತದಲ್ಲಿ ನ್ಯಾಯಾಧೀಶ ಪದವಿಯಲ್ಲಿ ಗೌರವಪಡೆದು ಹೆಸರುವಾಸಿಯಾಗಿದ್ದ ಸರ್ ನಾರಾಯಣ ಛಾಂದಾವಾರಕರ್ ಎಂಬ ಗೃಹಸ್ಥರು ಒಂದು ದಿನ ತಮ್ಮ ಬಳಿಗೆ ಬಂದ ಸಂನ್ಯಾಸಿಗಳ ಗುಂಪಿನವರ ಮೇಲೆ ಕೋಪಗೊಂಡು "ಈ ರೀತಿಯಲ್ಲಿ ಭಿಕ್ಷೆಯೆತ್ತಿ ಹೊಟ್ಟೆಹೊರೆದುಕೊಂಡು ಭೂಭಾರವಾಗಿರುವುದೇತಕ್ಕೆ? ಯಾವುದಾದರೂ ಕಸಬನ್ನು ಅವಲಂಬಿಸಿ ಎಲ್ಲರಂತೆ ಏಕೆ ಶ್ರಮಪಟ್ಟು ಜೀವಿಸಬಾರದು ನೀವು?" ಎಂದು ನಿಂದಿಸಿದರು. ಆಗ ಆ ಸಂನ್ಯಾಸಿಗಳು "ನಾವು ಭಿಕ್ಷೆ ಬೇಡುವುದು ನಮ್ಮ ಹೊಟ್ಟೆ

ಗೋಸ್ಕರವಲ್ಲ. ಗೃಹಸ್ಥರಾದವರಿಗೆ ದಾನಮಾಡಲು ಅವಕಾಶವನ್ನೊದಗಿಸಿ ಅವರಲ್ಲಿ ದಾನಪದ್ಧತಿಯು ಊರ್ಜಿತವಾಗಲೆಂಬ ಘನವಾದ ಉದ್ದೇಶದಿಂದ ನಾವು ಭಿಕ್ಷೆಯನ್ನು ಆಶಿಸತಕ್ಕವರು! ಆಸೆಯಿಂದ ನಾವು ಬರುವವರಲ್ಲ. ಸಮಾಜಕ್ಕೆ ಉಪದೇಶಮಾಡುವುದು ನಮ್ಮ ಧರ್ಮ. ಉಪದೇಶ ಮಾಡು ವುದಕ್ಕೇ ನಾವು ಭಿಕ್ಷೆಯೆತ್ತುವುದು'' ಎಂದು ಉತ್ತರಕೊಟ್ಟರು. ಸರ್ ನಾರಾಯಣ ಭಾಂದಾವಾರಕರರು ಅಪ್ರತಿಭರಾಗಿಹೋದರು; ಪ್ರತಿಯಾಗಿ ಏನು ಹೇಳುವುದಕ್ಕೂ ತೋರಲಿಲ್ಲ. ಈ ನಿದರ್ಶನದಿಂದ ಭಾರತೀಯ ದಾನಧರ್ಮ ಪದ್ಧತಿಯ ಗೂಢತತ್ವವೊಂದು ಗೋಚರವಾಗುವುದು.

ನಿರ್ಗತಿಕರಿಗೋ ಅಂಗಹೀನರಿಗೋ ಪ್ರತ್ಯಕ್ಷವಾಗಿ ದಾನಮಾಡು ವಾಗ ನಡೆಯಬಹುದಾದ ಶಿಕ್ಷೆಯು ಅಪ್ರತ್ಯಕ್ಷವಾಗಿ ದಾನಮಾಡಿದಾಗ ನಡೆಯುವುದಿಲ್ಲ. ಒಂದು ಅನಾಥಾಲಯಕ್ಕೋ ಆಸ್ಪತ್ರೆಗೋ ಸಹಾಯ ಮಾಡುವೆನೆಂಬ ಉದಾರ ಬುದ್ಧಿಯಿಂದ ಗೃಹಸ್ಥನಾದವನು ಒಂದು ಚೆಕ್ಕು ಬರೆದು ರವಾನಿಸುವುದರಲ್ಲಿ ಔದಾರ್ಯವಿದ್ದರೂ ಶಿಕ್ಷೆಯಿಲ್ಲ. ಅಂತಹ ರೀತಿಯನ್ನೇ ಅವಲಂಬಿಸುವ ಶ್ರೀಮಂತರು ಪ್ರತ್ಯಕ್ಷವಾಗಿ ಅನಾಥರನ್ನೂ ಬಡಬಗ್ಗರನ್ನೂ ಕಂಡಾಗ ಅಸಹ್ಯಗೊಳ್ಳುವರು. ಪ್ರತ್ಯಕ್ಷವಾಗಿ ದಾನ ಮಾಡತಕ್ಕವನಿಗೆ ಅದೇ ಸಮಯದಲ್ಲಿ ಮನಸ್ಸಿನಲ್ಲಿ ಕನಿಕರವು ತೋರು ವುದು, ಅಸಹ್ಯ ತೋರುವುದಿಲ್ಲ. ದಾನವೆಂಬುದರಲ್ಲಿ ಭಿಕ್ಷುಕನ ಮನಸ್ಸಿಗೆ ನೋವಾಗಬಾರದು, ಶ್ರೀಮಂತನಲ್ಲಿ ದರ್ಪವು ನೆಲೆಸಲಾಗದು. ದಾನ ಪದ್ಧತಿಯು ಉದ್ಧಾರಕವಾಗಬೇಕಾದರೆ ದಾನಿಯಲ್ಲಿ ದೈನ್ಯವೂ ಯಾಚಕನಲ್ಲಿ ಆತ್ಮಗೌರವವೂ ಬೇರೂರಬೇಕು. ದಾನಮಾಡುತ್ತೇನೆಂದು 'ಬಿಸಾಡು' ವುದರಿಂದ ಯಾಚಕನ ಮನಸ್ಸಿನಲ್ಲಿ ನೋವೂ ದಾನಿಯಲ್ಲಿ ದರ್ಪವೂ ಬೇರೂರುವುವು. ಭಾರತೀಯ ದಾನಪದ್ಧತಿಯಲ್ಲಿ ದಾನಿಗೂ ಯಾಚಕನಿಗೂ ಶಿಕ್ಷೆಯುಂಟು. ಆ ಕಾರಣದಿಂದ ಭಾರತೀಯನಾದವನು ಭಿಕ್ಷುಕರನ್ನು ತಿರಸ್ಕರಿಸುವುದಿಲ್ಲ. ಯಾಚಕರನ್ನು ಬಯ್ಯುವುದೇ ಆಗಲಿ ಒಡಿಯುವುದೇ ಆಗಲಿ ಭಾರತೀಯರಿಗೆ ನಿಜವಾಗಿ ಸಹನಾತೀತವಾಗಿ ತೋರುವುದು.

ಯಾಚಕವೃತ್ತಿಯು ಏತಕ್ಕೆ ಶ್ರೇಷ್ಠವೆನಿಸಿರುವುದೆಂಬುದು ಇದರಿಂದ ಸೂಚಿತವಾಗುವುದು. ಆದರೆ ಅಸಂಖ್ಯಾಕರಾದ ಯಾಚಕರು ದೇಶದಲ್ಲಿ

ಅಲೆದಾಡುತ್ತಿರುವುದಾಗಲಿ, ಯಾಚಕರಾದವರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸುತ್ತ ಅಹಂಕಾರವನ್ನು ಬೆಳೆಸುವುದಾಗಲಿ ಶ್ರೇಯಸ್ಕರವೂ ಅಲ್ಲ, ಪೂರ್ವಪದ್ಧತಿಯೂ ಅಲ್ಲ. ವಿಷಯವನ್ನು ವಿಚಾರಣೆಗೆ ಗುರಿಮಾಡಿ ಪರೀಕ್ಷೆಗೆ ತೊಡಗಿದಾಗ ಯಾಚಕರಲ್ಲಿ ಅನೇಕರು ಬೇರೆ ಗತಿಯಿಲ್ಲದ ಕಾರಣದಿಂದ ಯಾಚಿಸುವ ಅಂಶವೂ, ಯಾಚಿಸುವುದರಲ್ಲಿ ಅನೇಕರು ತಮ್ಮ ಗೌರವವನ್ನು ಕಾಣುವುದಿಲ್ಲವೆಂಬ ಅಂಶವೂ ವಿಶದವಾಗುವುವು. ನಿರುದ್ಯೋಗ ದಾರಿದ್ರ್ಯ ಸಮಸ್ಯೆಯ ಒಂದು ಶಾಖೆ ಮಾತ್ರವಾದುದು ಇದೂ ಎಂದು ಭಾಸವಾಗುತ್ತದೆ.

ಅಪರಾಧ

ಇತರ ದೇಶಗಳಲ್ಲಿ ಭಿಕ್ಷಾವೃತ್ತಿಗೂ ಚೌರ್ಯಾದಿ ಅಪರಾಧಗಳಿಗೂ ಇರುವಷ್ಟು ಸಂಬಂಧವು ನಮ್ಮ ದೇಶದಲ್ಲಿ ಪ್ರಾಯಶಃ ಇಲ್ಲದಿದ್ದರೂ ಅನೇಕ ಭಿಕ್ಷುಕರು ಕಳ್ಳತನ ದರೋಡೆಗಳಿಗೆ ತೊಡಗುವುದು ಸಹಜಗತಿಯಾಗುತ್ತಲಿದೆ. ಸಾಹಸದ ಅಪರಾಧಗಳಿಗೆ ಆರ್ಥಿಕ ಸ್ಥಿತಿಗತಿಗಳೇ ಮುಖ್ಯ ಪ್ರೇರಕಗಳು; ಮನೋವಿಕಾರಗಳೂ ಕಾರಣಗಳಾಗಿದ್ದರೂ ಆರ್ಥಿಕ ಕಾರಣಗಳಷ್ಟು ಪ್ರಬಲವಾದವುಗಳಲ್ಲ. ಬಡತನವು ತಗ್ಗಿದಂತೆಲ್ಲ ಅಪರಾಧಗಳು ತಗ್ಗುವುದರಲ್ಲಿ ಸಂಶಯವಿಲ್ಲ. ಕಾಮಕ್ರೋಧಾದಿ ವರ್ಗಗಳ ಪ್ರಾಬಲ್ಯವನ್ನು ತಗ್ಗಿಸಲು ಶಿಕ್ಷಣವೊಂದೇ ಸದುಪಾಯ. ಅಪರಾಧಿಗಳನ್ನು ಶಿಕ್ಷಿಸುವುದು ನ್ಯಾಯವೇ ವಿನಾ ದಂಡಿಸುವುದು ನ್ಯಾಯವಲ್ಲವೆಂಬುದು ಯೋಗ್ಯವಾದ ತತ್ವ. ಅಪರಾಧಗಳಿಗೆ ಪ್ರೇರಕಗಳಾದ ಅಂಶಗಳನ್ನು ಮೂಲೋತ್ಪಾಟನಗೊಳಿಸುವುದು ಉತ್ತಮ ಕರ್ತವ್ಯ; ಆರ್ಥಿಕಸ್ಥಿತಿಯ ಉದ್ಧಾರವೂ ನೀತಿಶಿಕ್ಷಣವೂ ಆ ಕಾರಣದಿಂದ ಮುಖ್ಯವಾದವುಗಳು.

ದಂಡವಿಧಿಯಲ್ಲಿ ಪ್ರಾಚೀನ ಭಾರತೀಯ ಪದ್ಧತಿಯೊಂದು ಉತ್ತಮವೆನಿಸಿರುವುದು. ದಂಡನೆಯ ಉದ್ದೇಶವು ಶಿಕ್ಷೆಯೆಂದು ನಿಶ್ಚಿತವಾದ ತರುವಾಯ ಬೇರೆಬೇರೆ ಜನರಿಗೆ ಬೇರೆಬೇರೆ ದಂಡನೆಯು ಯೋಗ್ಯವಾಗಿ ಪರಿಣಮಿಸುತ್ತದೆ. ಕೆಲವರನ್ನು ಎಷ್ಟು ಬಯ್ದರೂ ಅವರಿಗೆ ಅವಮಾನ ತೋರುವುದಿಲ್ಲ; ಕೆಲವರನ್ನು ಒಂದೆರಡು ಮಾತುಗಳಿಂದಲೇ ಅವಮಾನಗೊಳಿಸಬಹುದು. ಗೌರವವು ಹೆಚ್ಚಿದಂತೆ ಅವಮಾನದ ನೋವೂ

ಹೆಚ್ಚುವುದು. ಅವಮಾನದಿಂದ ಆತ್ಮಹತ್ಯವನ್ನು ಮಾಡಿಕೊಳ್ಳುವ ಜನರೂ ಉಂಟು, ಅವಮಾನವನ್ನು ಲೆಕ್ಕಿಸದ ಜನರೂ ಉಂಟು. ಈ ಭೇದಾಭೇದ ಗಳನ್ನು ಅನುಸರಿಸಿಯೇ ಮನುಧರ್ಮಶಾಸ್ತ್ರ ಮುಂತಾದ ಧರ್ಮಶಾಸ್ತ್ರ ಗಳಲ್ಲಿ ದಂಡನೆಗಳು ವಿಧಿತವಾಗಿದ್ದವು. ಅವುಗಳಲ್ಲಿ ಬೇರೆ ಬೇರೆ ಜಾತಿಗಳವ ರಿಗೆ ಬೇರೆಬೇರೆ ದಂಡನೆಗಳು ಗೊತ್ತಾಗಿರುವ ಅಂಶದಲ್ಲಿ ಮೊದಮೊದಲು ಅನ್ಯಾಯವೇ ತೋರಿದಾಗ್ಗೂ ವಿಚಾರದೃಷ್ಟಿಗೆ ಉತ್ತಮವಾದ ನ್ಯಾಯದ ನೆಲೆಯು ಕಾಣುವುದು. ಐರೋಪ್ಯ ದೇಶಗಳಲ್ಲಿ ಅನೇಕ ಕಾಲದವರೆಗೆ ಉಚ್ಚಕುಲಸ್ಥರನ್ನು ಗಲ್ಲಿಗೇರಿಸುತ್ತಿರಲಿಲ್ಲ; ಬ್ರಾಹ್ಮಣರಿಗೆ ಮರಣಶಿಕ್ಷೆ ಯೆಂಬುದಿಲ್ಲದೆಯೇ ಪ್ರಾಚೀನಕಾಲದಲ್ಲಿದ್ದುದನ್ನು ಅದರೊಂದಿಗೆ ಹೋಲಿಸ ತಕ್ಕದ್ದು. ಮುಖ್ಯಾಂಶವೇನೆಂದರೆ, ದಂಡನೆಯು ಮುಯ್ಯಿಗಲ್ಲ, ಶಿಕ್ಷೆಗೆ ಎಂಬುದು.

ಭಾರತೀಯ ವೈಶಿಷ್ಟ್ಯ

ಭಿಕ್ಷಾವೃತ್ತಿ ವಿಚಾರದ ಸಂಬಂಧದಲ್ಲಿಯೇ ಇತ್ತೀಚಿಗೆ ಭಾರತೀಯ ರಲ್ಲಿ ಬಲಗೊಳ್ಳುತ್ತಲಿರುವ ಒಂದು ದೋಷವನ್ನು ಪ್ರಸ್ತಾಪಿಸಬಹುದು. ಭಾರತೀಯರ ಸ್ವಭಾವ ವನ್ನು ಅನೇಕರು ಅನೇಕ ರೀತಿಯಲ್ಲಿ ಬಣ್ಣಿಸಿದ್ದಾರೆ. ಪ್ರಾಯಕವಾಗಿ ಎಲ್ಲರೂ ಭಾರತೀಯರಲ್ಲಿ ಔದಾರ್ಯ, ಮಾರ್ದವ, ದಾಕ್ಷಿಣ್ಯ ಗುಣಗಳನ್ನು ಕಂಡು ಶ್ಲಾಘಿಸಿದ್ದಾರೆ; ಆದರೆ ಭಾರತೀಯರಲ್ಲಿ ಮೋಸ, ಹೀನಯುಕ್ತಿ, ಸ್ವೇಚ್ಛಾನುಸಂಧಾನಪಟುತ್ವ ಮುಂತಾದ ಪೌರುಷಹೀನ ವಾದ ದುರ್ಗುಣಗಳನ್ನು ಅದೇ ವೇಳೆಯಲ್ಲಿಯೇ ಆರೋಪಿಸಿದ್ದಾರೆ. ಸಾಧಾ ರಣವಾಗಿ ಭಾರತೀಯನಾದವನು ಕಾಠಿನ್ಯವಿಲ್ಲದವನು; ಕಾಠಿನ್ಯವನ್ನು ವಹಿಸಬೇಕಾದ ಸಮಯ ಸಂದರ್ಭಗಳಲ್ಲಿ ಮನಸ್ಸನ್ನು ದಾಕ್ಷಿಣ್ಯಕ್ಕೆ ಕೊಟ್ಟು ದುರ್ಬಲನಾಗುತ್ತಾನೆ. ಮೋಸ, ಹೇಡಿತನ ಮುಂತಾದ ನೀಚತನದ ಉಪಾಯಗಳನ್ನು ಸಾಧಿಸುವ ವಕ್ರತೆಗೆ ಅರ್ಥ ಭಾರತೀಯರಲ್ಲಿ ನಿಜವಾದ ಪೌರುಷವಿಲ್ಲವೆಂಬುದು. ಆತ್ಮಗೌರವವು ದೃಢವಾದ ಹಾಗೆ ಹೇಡಿತನವು ಮಾಯವಾಗತಕ್ಕುದು. ಭಾರತೀಯರಲ್ಲಿ ನೀಚ ಗುಣಗಳು ಏತಕ್ಕೆ ವೃದ್ಧಿ ಯಾದವು ಎಂಬ ವಿಚಾರವನ್ನು ವಿದ್ಯಾರ್ಥಿಗಳು ತಾವಾಗಿಯೇ ನಡೆಸ ತಕ್ಕುದು. ಬೇರೆ ಬೇರೆ ಸಮಯಗಳಲ್ಲಿ ಐರೋಪ್ಯರ ನಡತೆಯನ್ನೂ

ಭಾರತೀಯರ ನಡತೆಯನ್ನೂ ಪರಸ್ಪರವಾಗಿ ಹೋಲಿಸಿ ಗುಣಾವ ಗುಣಗಳ ವಿಮರ್ಶೆಯನ್ನು ನಡೆಸಬೇಕು.

ಇದುವರೆಗೂ ವಿಚಾರಮಾಡಿದ ಸಮಸ್ಯೆಗಳನ್ನು ಒಂದು ದೃಷ್ಟಿಯಿಂದ ಪೂರ್ವಾರ್ಜಿತವೆಂದು ಕರೆಯಬಹುದು; ಏಕಂದರೆ ಅವುಗಳಲ್ಲಿ ಪುರಾತನ ಸಂಪ್ರದಾಯಗಳ ಸಂಬಂಧವು ಕಾಣುತ್ತದೆ. ಅಷ್ಟೇ ಮುಖ್ಯವಾದ ಬೇರೆ ಕೆಲವು ಬೇರೆ ಸಮಸ್ಯೆಗಳೂ ಉಂಟು; ಅವುಗಳನ್ನು ನೂತನ ಅಥವಾ ಆಧುನಿಕ ವೆಂದು ಕರೆಯಬಹುದು. ಅವುಗಳಲ್ಲಿ ನಗರ ನರಕಗಳು, ಕೂಲಿನಾಲಿಯ ಸಂಕಟಗಳು, ಮಾದಕಪದಾರ್ಥಗಳ ಸೇವನೆ, ಕೋಮುವಾರು ಕಲಹಗಳು, ದೇಶಾಂತರಗಳಲ್ಲಿ ಭಾರತೀಯರ ಗೌರವಾಭಾವಗಳನ್ನು ಮುಖ್ಯವೆಂದು ಎಣಿಸಬಹುದು.

**ನಗರ ನರಕ**

ಮುಂಬಯಿ, ಅಹಮದಾಬಾದ್, ಕಲ್ಕತ್ತ, ಕಾನ್ಪುರ, ಮದರಾಸು ಮುಂತಾದ ದೊಡ್ಡ ಪಟ್ಟಣಗಳಲ್ಲಿ ಲಂಡನ್, ನ್ಯೂಯಾರ್ಕ್ ಮುಂತಾದ ನಗರಗಳಲ್ಲಿರುವಂತೆಯೇ ನರಕ ಭಾಗಗಳೆಂಬವು ದುರ್ವೃದ್ಧಿಯನ್ನು ಪಡೆದಿವೆ. ಉದ್ಯೋಗ ಕೈಗಾರಿಕೆಗಳ ಕ್ಷೇತ್ರಗಳಾಗಿ ವಿಸ್ತಾರಗೊಂಡ ಪಟ್ಟಣಗಳಲ್ಲಿ ಭಾರಿ ಉದ್ಯೋಗಗಳನ್ನೂ ವ್ಯಾಪಾರಗಳನ್ನೂ ಧನಿಕರಾದವರೇ ನಿರ್ವಹಿಸು ತ್ತಾರೆ; ಆ ಬಂಡವಾಳಗಾರರ ಯಾಜಮಾನ್ಯದಲ್ಲಿಯೇ ಗಿರಣಿಗಳು, ಮಳಿಗೆ ಗಳು, ಕೋಠಿಗಳು ಮುಂತಾದವು ನಡೆಯುತ್ತವೆ. ಅವುಗಳಲ್ಲಿ ಸಾವಿರಾರು ಜನ ಚಾಕರಿಗೆ ಸೇರಿ ದಿನಗೂಲಿಯನ್ನೋ ವಾರಕೂಲಿಯನ್ನೋ ನಂಬಿ ಕೊಂಡು ಜೀವನವನ್ನು ನಡೆಸುತ್ತಾರೆ. ಬಂಡವಾಳಗಾರರು ಸರ್ವ ಪ್ರಯತ್ನದಿಂದಲೂ ಚಾಕರರಿಂದ ಆದಷ್ಟು ಕೆಲಸವನ್ನು ಮಾಡಿಸಿಕೊಂಡು, ಸಾಧ್ಯವಾದಷ್ಟು ಕಡಿಮೆ ಕೂಲಿಯನ್ನು ಕೊಟ್ಟು, ಸಾಧ್ಯವಾದಷ್ಟು ಲಾಭ ವನ್ನು ಸಂಪಾದಿಸಲು ಸಂಧಾನಮಾಡುತ್ತಾರೆ. ಕೂಲಿಗಾರರು ಅಜ್ಞರು ಮಾತ್ರರಲ್ಲದೆ ದಟ್ಟದರಿದ್ರರೂ ಆಗಿರುತ್ತಾರೆ; ಆದ್ದರಿಂದ ನ್ಯಾಯವಾದ ಕೂಲಿಯನ್ನು ದಕ್ಕಿಸಿಕೊಳ್ಳಲು ಒಗ್ಗಟ್ಟಿನಿಂದ ವ್ಯವಹರಿಸುವ ಸಾಧನೆ ಯೊಂದನ್ನು ಮಾತ್ರವೇ ಉಳ್ಳವರಾಗಿರುತ್ತಾರೆ. ಮೋಸಕ್ಕೂ ಹಿಂಸೆಗೂ ಸುಲಭವಾಗಿ ಸಿಕ್ಕಿ ನರಳುವ ಕೂಲಿಗಾರರೊಂದು ಕಡೆ, ದರ್ಪಿಷ್ಠರಾದ

ಧನಿಕರೊಂದು ಕಡೆ. ಎರಡು ಪಕ್ಷಗಳವರಿಗೂ ಆಗಾಗ್ಗೆ ಕಠೋರವಾದ ಪ್ರಸಂಗಗಳು ಒದಗುತ್ತಲೇ ಇರುತ್ತವೆ. ನ್ಯಾಯವಾದ ಕೂಲಿಯನ್ನು ದಕ್ಕಿಸಿಕೊಳ್ಳುವ ಪ್ರಯತ್ನದಲ್ಲಿ ದಿನಗೂಲಿಯನ್ನೇ ನಂಬಿಕೊಂಡಿರುವ ಕೂಲಿಗಾರರಿಗೆ ಬಲವಿರುವುದಿಲ್ಲ. ವ್ಯಾಪಾರ ಹೆಚ್ಚಿದಂತೆ ಲಾಭ ವೇನೋ ಹೆಚ್ಚುವುದು; ಆದರೆ ಲಾಭ ಹೆಚ್ಚಿದ ಹಾಗೆಯೇ ಕೂಲಿಯು ಹೆಚ್ಚುವುದಿಲ್ಲ. ಆಹಾರಸಾಮಗ್ರಿಗಳ ಧಾರಣೆವಾಸಿಗಳು ಏರಿದಂತೆ ಕೂಲಿಯ ದರವೂ ಏರದಿದ್ದಲ್ಲಿ ಕೂಲಿಗಾರರ ಪಾಡು ಕಷ್ಟಮಯ ವಾಗುವುದು.

ಒಗ್ಗಟ್ಟಿನಲ್ಲಿ ಮಾತ್ರವೇ ಚೈತನ್ಯವನ್ನುಳ್ಳ ಕೂಲಿಗಾರರು ಸಂಘವನ್ನು ಅನಿವಾರ್ಯವಾಗಿ ಕಟ್ಟಿಕೊಂಡು ಅನೇಕ ವೇಳೆ ಮುಷ್ಕರವನ್ನೇ ಹಿಡಿಯ ಬೇಕಾಗುತ್ತದೆ. ಗಿರಣಿ ಕಾಮಗಾರ ಸಂಘಗಳಂತಹ ಸಂಸ್ಥೆಗಳು ಎಲ್ಲೆಲ್ಲಿ ಭಾರಿ ಉದ್ಯೋಗ ಕೈಗಾರಿಕೆಗಳುಂಟೋ ಅಲ್ಲೆಲ್ಲ ಸಹಜವಾಗಿ ಹುಟ್ಟಿ ಕೊಳ್ಳಲೇಬೇಕು. ಅಂತಹ ಸ್ಥಲಗಳಲ್ಲಿ ಪದೇ ಪದೇ ಜಗಳಗಳು ನಡೆ ಯುತ್ತಲೇ ಇರುತ್ತವೆ. ಕೂಲಿಗಾರರಿಗೆ ಅಸಮಾಧಾನವಾದಾಗ ಮುಷ್ಕರಗಳೂ, ಬಂಡವಾಳಗಾರರಿಗೆ ಅತೃಪ್ತಿ ತೋರಿದಾಗ ಕವಾಟ ಬಂಧನಗಳೂ ಸಾಮಾನ್ಯ. ವ್ಯಾಪಾರವು ಇಳಿದುಹೋದಾಗ ಲಾಭಕರ ವಾಗಿ ಸರಕನ್ನು ಮಾರಲಾರದೆ ಕಡಿಮೆ ಲಾಭಕ್ಕೋ ಲಾಭವಿಲ್ಲದೆಯೋ ಮಾರಬೇಕಾಗಿರುತ್ತದೆ. ಕೆಲವೇಳೆಗಳಲ್ಲಿ ಸಿದ್ಧವಾದ ಸರಕು ಅತಿಯಾಗಿದ್ದು ವ್ಯಾಪಾರವೇ ಆಗುವುದಿಲ್ಲ; ವಸ್ತುವಿಗೆ ಇರಬಹುದಾದ ಆದರ(Demand)ದ ಪ್ರಮಾಣವನ್ನು ಮೀರಿದ ಪ್ರಮಾಣದಲ್ಲಿ ಸರಕು ಸಿದ್ಧವಾಗಿರುತ್ತದೆ. ಅಂತಹ ಸಮಯಗಳಲ್ಲಿ ಬಂಡವಾಳಗಾರರು ಕೆಲಸವನ್ನು ತಾವೇ ನಿಲ್ಲಿಸಿ ಬಿಡುತ್ತಾರೆ; ಕೂಲಿಗಾರರಿಗೆ ಕೆಲಸವಿಲ್ಲದೆ ಅಂದರೆ ಜೀವನವೇ ಇಲ್ಲದೆ ಘಟಿಸುತ್ತದೆ. ವ್ಯಾಪಾರವು ಒಂದೇ ಸಮನಾಗಿ ನಡೆಯುವುದಿಲ್ಲವಾದುದ ರಿಂದ ಕೂಲಿಗಾರರಿಗೆ ಯಾವ ಕಾಲದಲ್ಲಿ ನಿರುದ್ಯೋಗವು ಘಟಿಸುವುದೋ ಏನೋ ಎಂಬ ಚಿಂತೆಯಿರುತ್ತದೆ. ಕೂಲಿಗಾರರ ಬದುಕು ಈ ರೀತಿಯಲ್ಲಿ ಸ್ಥಿರವಲ್ಲ; ಈವತ್ತಿನ ಸ್ಥಿತಿ ನಾಳೆ ಇರುವುದು ಸಂದೇಹ. ಇದಲ್ಲದೆ ಆಧುನಿಕ ರೀತಿಯ ಕೈಗಾರಿಕೆಗಳಲ್ಲಿ ಕೂಲಿಗಾರರಿಗೆ ಮಾಡತಕ್ಕ ಕೆಲಸದಲ್ಲಿ

ಸ್ವಲ್ಪವಾದರೂ ಉಲ್ಲಾಸವಿರುವುದಿಲ್ಲ; ಒಂದೇ ಬಗೆಯಾದ ಕೆಲಸವನ್ನು ಮಾಡಿ ಮಾಡಿ ಚಿತ್ತಕ್ಕೆ ಬೇಸರಿಕೆಯೇ ಬಲವಾಗುವುದು; ತಾನೂ ಜೀವವಿಲ್ಲದ ಯಂತ್ರದಂತೆ ಪರಿಣಮಿಸಬೇಕಾಗಿರುವುದರಿಂದ ಕೂಲಿಗಾರರಿಗೆ ಕೆಲಸದಲ್ಲಿ ಹರ್ಷವೆಂಬುದೇ ಇರುವುದಿಲ್ಲ. ಜೀವನವೇ ಘೋರ ನರಕ ಯಾತನೆಯಾಗಿ ತೋರುವುದರಿಂದ ಅನೇಕ ಕೂಲಿಗಾರರು ನಿರ್ಗತಿಕರಾದಾಗ್ಗೂ ತಾವಾಗಿ ಕೆಲಸವನ್ನು ಬಿಟ್ಟುಕೊಟ್ಟು ಭಿಕಾರಿಗಳಾಗಿ ಹೊರಟುಬಿಡುವರು. ಯಜಮಾನ ಚಾಕರರ ನಿರಂತರ ಕಲಹಗಳಲ್ಲಿ ಪಕ್ಷವಿಪಕ್ಷಗಳು ಸಮಾನಬಲವುಳ್ಳವಾಗಿರಲಾರವು; ಆದ್ದರಿಂದ ಸರ್ಕಾರದವರು ಮಧ್ಯೆ ಪ್ರವೇಶಮಾಡಿ ನ್ಯಾಯನಿಷ್ಕರ್ಷೆ ಮಾಡಬೇಕಾಗುತ್ತದೆ.

ಚಾಕರಿಯೆಂಬುದು ದುರ್ಘಟನೆಗಳಿಗೆ ಆಗಾಗ್ಗೆ ತುತ್ತಾಗುವ ಅಂಶವಾಗಿರುವುದಲ್ಲದೆ ಚಾಕರರ ಬಾಳು ಅತಿಹೀನವಾಗಿರುತ್ತದೆ. ದೊಡ್ಡ ಪಟ್ಟಣಗಳಲ್ಲಿ ಬಾಡಿಗೆಗಳು ಹೆಚ್ಚು; ಆದ್ದರಿಂದ ಕೂಲಿಗಾರರು ಸಂತತವಾಗಿ ಕಿಷ್ಕಿಂಧಾವಾಸಿಗಳಾಗಿ ಇರಬೇಕಾಗುತ್ತದೆ. ಒಂದು ಸಣ್ಣ ಕೋಣೆಯಲ್ಲಿ 3–4 ಸಂಸಾರಗಳು ಮೂಲೆಗೊಂದರಂತೆ ವಾಸಮಾಡುವುದನ್ನು ಮುಂಬಯಿಯಲ್ಲಿ ಕಾಣಬಹುದು. ಕೂಲಿಗಾರರು ವಾಸಮಾಡುವ ನಗರಭಾಗಗಳು ಜನಸ್ತೋಮದಿಂದ ಕಿಕ್ಕಿರಿದು ಕಶ್ಮಲಪೂರಿತವಾಗಿ ರೋಗರುಜನಗಳಿಗೆ ತವರ್ಮನೆಗಳಾಗಿ ನರಕ ಕೂಪಗಳಂತೆ ಇರುತ್ತವೆ. ಆಹಾರವಿಲ್ಲ, ಆರೋಗ್ಯವಿಲ್ಲ, ಆಟಪಾಟಗಳಿಲ್ಲ, ಜೀವನದಲ್ಲಿ ಯಾವ ಹರ್ಷವೂ ಇಲ್ಲದೆ ಮಾನವರು ಜೀವಿಸುತ್ತ ಇತರ ಮಾನವರನ್ನು ತಮ್ಮ ಶತ್ರುಗಳಂತೆ ಕಾಣುವ ಮಾನವ ಮೃಗಗಳಾಗಿ ಪರಿಣಮಿಸುವುದು ದೊಡ್ಡ ನಗರಗಳ ಸಾಧಾರಣ ಅನುಭವ. ಪಾಶ್ಚಾತ್ಯ ಜಗತ್ತಿನ ಮಹಾನಗರಗಳಲ್ಲಿ ಶ್ರೀಮಂತರು ವಾಸಿಸುವ ಭಾಗಗಳು ಇಂದ್ರಲೋಕವನ್ನು ಧಿಕ್ಕರಿಸುವಂತಿರುವುದೂ, ಬಡವರು ವಾಸಿಸುವ ಭಾಗಗಳು ರೌರವಾದಿ ನರಕ ಭಾಗಗಳನ್ನು ಧಿಕ್ಕರಿಸುವಂತಿರುವುದೂ ಸಾಮಾನ್ಯ ಲಕ್ಷಣ. ಅಲ್ಪ ಸಂಖ್ಯಾಕರಿಗೆ ಸ್ವರ್ಗವಾಸವೂ ಬಹುಸಂಖ್ಯಾಕರಿಗೆ ನರಕವಾಸವೂ ಅನಿವಾರ್ಯವೆನ್ನಿಸುವಂತೆ ಪಾಶ್ಚಾತ್ಯ ನಾಗರಿಕತೆಯ ಅಭಿವೃದ್ಧಿಯು ಕೈಗೂಡುತ್ತದೆ.

ನಿವಾರಣೋಪಾಯಗಳು

ಲೇಬರ್ ಯೂನಿಯನ್ಸ್ ಅಥವಾ ಕೂಲಿಗಾರರ ಕೂಟಗಳು ಶಿಸ್ತಿನಿಂದ ಚೈತನ್ಯವನ್ನು ಸಂಪಾದಿಸಿಕೊಂಡಿದ್ದ ಪಕ್ಷದಲ್ಲಿ ಸ್ವಲ್ಪ ಮೇಲನ್ನು ಸಾಧಿಸಿಕೊಳ್ಳಬಹುದು. ಅದನ್ನು ಬಿಟ್ಟರೆ ಮೇಲ್ಮೆಗೆ ಎರಡೇ ಮಾರ್ಗಗಳು. ಸರ್ಕಾರದವರು ವಿಷಯದಲ್ಲಿ ಪ್ರವೇಶಮಾಡಿ ಫ್ಯಾಕ್ಟರಿ ಲೆಜಿಸ್ಲೇಷನ್ (Factory Legislation) ಅಥವಾ ಕಾರ್ಖಾನೆ ಶಾಸನಗಳನ್ನು ರಚಿಸಿ ಅಧಿಕಾರಬಲದಿಂದ ಚಾಕರರ ಕಷ್ಟಗಳನ್ನು ಕಡಿಮೆಗೊಳಿಸಲು ಉದ್ಯಮಿಸಬಹುದು. ಇಷ್ಟೇ ಹೊತ್ತು ಕೆಲಸ ತೆಗೆಯತಕ್ಕದ್ದೆಂದೋ, ಚಾಕರರಿಗೆ ಅಪಾಯವನ್ನೂ ಅನಾರೋಗ್ಯವನ್ನೂ ಉಂಟುಮಾಡುವ ಸ್ಥಿತಿಗತಿಗಳು ನಿಷಿದ್ಧವೆಂದೋ ಶಾಸಕ ಸಭೆಗಳವರು ಕಾನೂನು ಕಟ್ಟಳೆಗಳನ್ನು ಜಾರಿಪಡಿಸಬಹುದು; ನಗರನಿರ್ವಾಹ ಸಭೆಗಳವರು ವಾಸಸ್ಥಳಗಳನ್ನು ಉತ್ತಮಗೊಳಿಸಿ, ವಿನೋದಗಳನ್ನು ಕಲ್ಪಿಸಿ, ಜೀವನದಲ್ಲಿ ಸಮಾಧಾನವು ತೋರುವಂತೆ ಪ್ರಯತ್ನಿಸಬಹುದು. ಆಡಳಿತದವರಲ್ಲದೆ ಸಾಮಾನ್ಯ ಪೌರರು ನಗರದ ನರಕ ಭಾಗಗಳ ನಿವಾಸಿಗಳ ಉದ್ಧಾರಕ್ಕೆ ನಾನಾ ರೀತಿಗಳಲ್ಲಿ ಪ್ರಯತ್ನಿಸಬಹುದು. ಕೂಲಿಜನರ ಅಜ್ಞಾನವನ್ನೂ, ನಿರುತ್ಸಾಹವನ್ನೂ, ನಿರುದ್ಯೋಗವನ್ನೂ, ಅನಾರೋಗ್ಯವನ್ನೂ ನಿವಾರಿಸಲು ಎಂತಹ ಪ್ರಯತ್ನವನ್ನು ಕೈಕೊಂಡರೂ ಅದು ಧರ್ಮಕಾರ್ಯವಾಗಿ ಪರಿಣಮಿಸುವುದು. ನಗರನಿವಾಸಿಗಳಿಗೆ ಪುಣ್ಯಾರ್ಜನೆಯು ಆಧುನಿಕ ಕಾಲದಲ್ಲಿ ಇಂತಹ ಕೆಲಸಗಳಿಂದ ಸಿದ್ಧಿಸುವುದು. ಅವರ ಕೇರಿಗಳಲ್ಲಿ ಭಜನೆ ಮಂದಿರಗಳನ್ನು ಸ್ಥಾಪಿಸುವುದೂ, ರಾತ್ರಿಯ ಶಾಲೆಗಳನ್ನು ನಡೆಸುವುದೂ, ಆಪನ್ನಿವಾರಣೆಗಾಗಿ ನಿರುದ್ಯೋಗ ವಿಮೆ ಮುಂತಾದ ಏರ್ಪಾಟುಗಳನ್ನು ನೆಲೆಗೊಳಿಸುವುದೂ ಧರ್ಮಿಷ್ಠರಾದ ಪೌರಜನರ ಕರ್ತವ್ಯಗಳೆನಿಸುತ್ತವೆ.

ಇಂತಹ ನರಕ ಕೂಪಗಳು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮಾತ್ರ ಇರತಕ್ಕವೆಂದು ಭಾವಿಸಬಾರದು. ಎಲ್ಲೆಲ್ಲಿ ಕೂಲಿಗಾರರೂ ಚಾಕರರೂ ಗುಂಪುಗುಂಪಾಗಿ ಇರುವರೋ ಅಲ್ಲೆಲ್ಲ ಈ ಬಗೆಯಾದ ಕಷ್ಟಗಳೂ ಆಪತ್ತುಗಳೂ ಸಾಧಾರಣವಾಗಿರುತ್ತವೆ. ನೀಲಿ, ಕಾಫಿ, ಟೀ, ರಬ್ಬರ್, ಸಿಂಕೋನ ತೋಟಗಳಲ್ಲಿ ನೂರಾರು ಕೂಲಿಗಾರರು ಸೇರಿಕೊಂಡು ಕೆಲಸ

ಮಾಡುತ್ತಾರೆ; ಗಣಿಗಳಲ್ಲಿಯೂ ಗುಂಪು ಗುಂಪಾಗಿ ಕೆಲಸಮಾಡು ತ್ತಿರುತ್ತಾರೆ. ಬಿಹಾರ ಪ್ರಾಂತದ ನೀಲಿಯ ತೋಟಗಳಲ್ಲಿ, ಅಸ್ಸಾಂ ಪ್ರಾಂತದ ಟೀ ತೋಟಗಳಲ್ಲಿ, ದಕ್ಷಿಣ ಆಫ್ರಿಕಾ ಅಥವಾ ಫೀಜೀ ದ್ವೀಪ ಗಳಲ್ಲಿ ಕರಾರಿಗೆ ಸಿಕ್ಕಿಕೊಂಡು ಬದುಕಿಗೆ ಪ್ರಯತ್ನಿಸಿದವರ ವೃತ್ತಾಂತ ಗಳನ್ನು ಗಮನಿಸುವುದರಿಂದ ಈ ವಿಷಯದಲ್ಲಿ ನಾವು ಜ್ಞಾನವನ್ನು ಪಡೆಯಬಹುದು. ನರಹತ್ಯವು ರಾಷ್ಟ್ರಸಮುಖದಲ್ಲಿ ಮಹಾಪರಾಧ ವಾಗಿಯೂ ನೀತಿಶಾಸ್ತ್ರಗಳಿಗನುಸಾರವಾಗಿ ಘೋರಪಾತಕವಾಗಿಯೂ ಗಣ್ಯವಾದಲ್ಲಿ ರೋಗಾಕರ್ಷಕವಾದ ಎಡೆಗಳಲ್ಲಿ ಜ್ಞಾನಹೀನರಾಗಿ ಘೋರ ದಾರಿದ್ರ್ಯದ ಕಷ್ಟಗಳನ್ನು ಅನುಭವಿಸುವಂತೆ ಜನರನ್ನು ನಿರ್ಬಂಧ ಪಡಿಸುವ ವ್ಯವಸ್ಥೆಯನ್ನು ಏನೆಂದು ಕರೆಯಬೇಕು! ಒಂದೇ ತಡವೆ ಕೊಂದು ಬಿಡದೆ ನಿದಾನವಾಗಿ ಜೀವವನ್ನು ಅರೆಯುವ ನಿರ್ಬಂಧವನ್ನು ಎಂತಹ ಪಾತಕವೆಂದು ಬಣ್ಣಿಸಬೇಕು!

ಆಧುನಿಕ ಜೀವನದ ಲಕ್ಷಣವೆನಿಸುವ ಈ ನರಕ ಕೂಪಗಳನ್ನು ಎಡೆ ಬಿಡದೆ ಇರತಕ್ಕುದು ಮಾದಕಪದಾರ್ಥಗಳ ಸೇವನೆ.

ಮದ್ಯಸೇವನ — ಕಠೋರ ದುಃಖವನ್ನು ನಿತ್ಯವೂ ಅನುಭವಿಸುವ ಕೂಲಿಗಾರನು ತನ್ನ ದುಃಖವನ್ನು ಸ್ವಲ್ಪ ಕಾಲ ವಾದರೂ ಮರೆಯಬಹುದೆಂದು ಮದ್ಯವನ್ನು ಸೇವಿಸುತ್ತಾನೆ; ಮದ್ಯ ಕ್ಕಾಗಿಯೇ ತನ್ನ ಸಂಪಾದನೆಯನ್ನು ವೆಚ್ಚಗೊಳಿಸುವುದರಿಂದ ಕಡು ಬಡವನಾಗಿರುತ್ತಾನೆ. ಮದ್ಯಪಾನ ದಾರಿದ್ರ್ಯಗಳು ಅನ್ಯೋನ್ಯವಾಗಿ ಹೇತು ಪರಿಣಾಮಗಳು. ಮದ್ಯಪಾಯಿಯಾದವನು ಆರೋಗ್ಯವನ್ನು ನೀಗಿ ರೋಗಗ್ರಸ್ತನಾಗುತ್ತಾನೆ; ತನ್ನ ಹೆಂಡತಿ ಮಕ್ಕಳ ಸುಖದುಃಖಗಳ ಚಿಂತೆಯನ್ನು ಬಿಟ್ಟು ಅವರಲ್ಲಿ ಅಲಕ್ಷ್ಯವನ್ನು ವಹಿಸಿ ಭ್ರಷ್ಟನಾಗುತ್ತಾನೆ; ನೆರೆಹೊರೆಯವರೊಡನೆ ಜಗಳಗಳನ್ನು ಕಟ್ಟಿಕೊಂಡು ದುಷ್ಟನೆನಿಸಿ, ಸಾಲದ ಹೊರೆಯನ್ನು ಕಟ್ಟಿಕೊಂಡು ಅಪರಾಧ ಮಾರ್ಗದಲ್ಲಿ ಹೆಜ್ಜೆಯನ್ನಿಟ್ಟು ಘೋರ ಪಾತಕಿಯಾಗಿ ಪರಿಣಮಿಸುತ್ತಾನೆ. ವಿಷವೆಂಬುದು ಒಂದು ತಡವೆಗೇ ಮನುಷ್ಯನನ್ನು ಕೊನೆಗಾಣಿಸುವುದು; ಮದ್ಯವು ಮನುಷ್ಯನನ್ನು ಮೃಗಪ್ರಾಯನನ್ನಾಗಿ ಮಾಡಿ ಆತನ ಇಷ್ಟಮಿತ್ರರಿಗೆ ನರಕವನ್ನುಂಟು ಮಾಡುವುದು.

ಭೋಗಲಾಂಪಟ್ಯಕ್ಕೆ ಮನಗೊಟ್ಟು ತನ್ನ ಧನವನ್ನು ವಿಧವಿಧವಾದ ದ್ರಾಕ್ಷಾರಸಗಳಿಗಾಗಿ ಸುರಿದು ಪಾನಮತ್ತನಾಗಿ ಸರ್ವನಾಶವನ್ನು ತಿಳಿದು ತಿಳಿದು ಸಂಪಾದಿಸಿಕೊಳ್ಳುವ ಶ್ರೀಮಂತನಲ್ಲಿ ಎಲ್ಲರೂ ಅನುಕಂಪವನ್ನು ತೋರದೆ ಇರಬಹುದು; ತತ್ರಾಪಿ ಮೇಲ್ಮೆಯನ್ನು ಕೋರಿ ಅಂತಹವರನ್ನೂ ಉದ್ಧಾರಗೊಳಿಸುವುದು ಧರ್ಮಿಷ್ಠರ ಕರ್ತವ್ಯ. ಈ ವರ್ಗದವರದು ಸ್ವಕೃತಾಪರಾಧವೆನ್ನಬಹುದು; ಆದರೆ ಆಡಳಿತದ ನೀತಿಯಿಂದಲೇ ಆಕೃಷ್ಟರಾಗಿ ನಿರ್ವಾಹವಿಲ್ಲದೆ ಮದ್ಯಪಾಯಿಗಳಾಗುವ ಬಡಪಾಯಿಗಳದು ಅನ್ಯಕೃತಾಪರಾಧ. ಇತರರ ಮೇಲ್ಮೆಗಾಗಿ ಅವರು ಮದ್ಯಪಾಯಿಗಳಾಗಿರಬೇಕಾಗುವುದು. ನಮ್ಮ ದೇಶದ ರಾಷ್ಟ್ರಾದಾಯದಲ್ಲಿ ಆಬ್ಕಾರಿ ಎಂಬುದು ಭಾರಿ ಅಂಶ; ಹೆಂಡ, ಸಾರಾಯಿ, ಗಾಂಜಾ, ಅಫೀಂ ಮುಂತಾದ ಮಾದಕಪದಾರ್ಥಗಳನ್ನು ಮಾರುವ ಅಂಗಡಿಗಳಲ್ಲಿ ವ್ಯಾಪಾರವು ನಿಂತು ಹೋದರೆ ಸರ್ಕಾರದ ಆದಾಯವು ಬಹಳ ಕಡಿಮೆಯಾಗುವುದು. ಪ್ರಬಲವಾದ ಈ ಕಾರಣದ ದೆಸೆಯಿಂದ ಮದ್ಯಪಾನನಿಷೇಧವೆಂಬುದು ದೇಶದಲ್ಲಿ ದುಸ್ಸಾಧ್ಯವಾಗಿ ಪರಿಣಮಿಸಿದೆ.

ಮದ್ಯಪಾನ ನಿಷೇಧದ ವಿಚಾರವನ್ನು ಮಾಡುವ ಸಂದರ್ಭದಲ್ಲಿ ಆಧಾರಭೂತವಾದ ಒಂದು ಸಂಗತಿಯನ್ನು ಮರೆಯಬಾರದು. ಹಿಂದೂ ಧರ್ಮವಾಗಲಿ ಇಸ್ಲಾಮೀ ಧರ್ಮವಾಗಲಿ ಮದ್ಯಪಾನಕ್ಕೆ ಸ್ವಲ್ಪವಾದರೂ ಬೆಂಬಲಕೊಡುವುದಿಲ್ಲ; ಮದ್ಯಪಾನಮಾಡಿದವನು ಎರಡರಲ್ಲಿಯೂ ಭ್ರಷ್ಟನೆಂದೆನಿಸುತ್ತಾನೆ. ಭಾರತೀಯರಲ್ಲಿ ಯಾವ ಜಾತಿಗೂ ಮದ್ಯಪಾನವು ಗುಣವೆನ್ನಿಸಿಲ್ಲ; ಎಲ್ಲ ಜಾತಿಯವರಲ್ಲಿಯೂ ಮದ್ಯಪಾನವು ನಿಂದ್ಯವಾಗಿಯೇ ಗಣ್ಯವಾಗಿದೆ. ಆದ್ದರಿಂದ ಮದ್ಯಪಾನ ನಿಷೇಧವು ಭಾರತೀಯರಲ್ಲಿ ಅತಿ ಸುಲಭವಾಗಿ ಕೈಗೂಡತಕ್ಕುದು; ಇತರ ದೇಶಗಳಲ್ಲಿ ತೋರಬಹುದಾದ ತೊಂದರೆಗಳು ಈ ದೇಶದಲ್ಲಿ ಇಲ್ಲ. ಇಲ್ಲಿಯ ತೊಂದರೆಗಳಲ್ಲಿ ಮುಖ್ಯವಾದುದು ರಾಷ್ಟ್ರಾದಾಯ ಸಂಬಂಧದ್ದು; ನೆಲಗಂದಾಯಕ್ಕೆ ಮಾತ್ರ ಎರಡನೆಯದಾಗಿದೆ ಮದ್ಯಪಾನದಿಂದ ಹುಟ್ಟುವ ಆದಾಯ. ಸರ್ಕಾರದ ವೆಚ್ಚವನ್ನು ತಗ್ಗಿಸುವುದು ಒಂದು ಕಡೆ, ಇತರ ಆದಾಯವನ್ನು ಹೆಚ್ಚಿಸುವುದಿನ್ನೊಂದು ಕಡೆ—ಎರಡೇ ಸಹಜವಾದ ಮಾರ್ಗಗಳು. ಮದ್ಯ

ಪಾನವು ನಿಂತರೆ ಜನರ ಶಿಕ್ಷಣವೇ ನಿಂತುಹೋದೀತೆಂಬ ಸ್ಥಿತಿಯು ಅತಿ ಶೋಚನೀಯವಾದುದು.

ಇತರ ಮಾದಕಪದಾರ್ಥಗಳ ಅಂದರೆ ಅಫೀಂ, ಗಾಂಜಾ, ಭಂಗಿ, ತಂಬಾಕು ಮುಂತಾದವುಗಳ ಸೇವನೆಯು ಪಾನದಷ್ಟು ಘೋರವೂ ಅಲ್ಲ, ವ್ಯಾಪ್ತವೂ ಅಲ್ಲ. ಕೆಲಸಗಾರ್ತಿಯರು ತಮ್ಮ ಕೂಸುಗಳಿಗೆ ಸ್ವಲ್ಪ ಅಫೀಂ ಕೊಟ್ಟು ಕೆಲಸಕ್ಕೆ ತೆರಳುವ ಸಂಗತಿಯನ್ನು ಎಲ್ಲರೂ ಕೇಳಿರುತ್ತಾರೆ; ಅದಕ್ಕಾಗಿ ಆ ಬಡತಾಯಂದಿರನ್ನು ನಿಂದಿಸಲಾಗುವುದಿಲ್ಲ. ಅದರಲ್ಲಿ ವ್ಯಕ್ತವಾಗುವುದು ಅವರ ದೌಷ್ಟ್ಯವಲ್ಲ, ಅವರ ನಿತ್ಯಜೀವನದ ಗೋಳು. ಅಫೀಂ ವ್ಯಾಪಾರವು ಮಾತ್ರ ಇತ್ತೀಚಿಗೆ ತಗ್ಗಿದೆ. ರಾಷ್ಟ್ರ ಪರಿಷತ್ತು (League of Nations) ರೂಪಗೊಂಡ ತರುವಾಯ ನಿಂದ್ಯವಾದ ಈ ವ್ಯಾಪಾರವನ್ನು ತಗ್ಗಿಸುವ ಪ್ರಯತ್ನ ನಡೆಯುತ್ತಲಿದೆ. ಸಭ್ಯತೆಯನ್ನು ತೋರತಕ್ಕ ಯಾವ ರಾಷ್ಟ್ರವಾದರೂ ಅಫೀಂ ವ್ಯಾಪಾರವನ್ನು ಹಿಂದಿನಂತೆ ನಡೆಸುವಹಾಗಿಲ್ಲ.

**ಕೋಮು ಕಲಹ**

ಜಾತಿ ವೈಷಮ್ಯವೆಂಬುದು ಇತ್ತೀಚಿಗೆ ರಾಜಕೀಯ ಸಮಸ್ಯೆಗಳಲ್ಲಿ ಒಂದಾಗಿದೆ; ಆದ್ದರಿಂದ ಸಮಗ್ರವಾಗಿ ವಿಚಾರ ಮಾಡಲಾರೆವು. ಮುಖ್ಯಾಂಶಗಳನ್ನು ಮಾತ್ರ ಕಾಣಬಹುದು. ಈ ವೈಷಮ್ಯ ವಿರೋಧಗಳು ಇತ್ತೀಚಿಗೆ ಬಲಗೊಂಡಿರುವುವು; ವರಣಕ್ಷೇತ್ರಗಳನ್ನು ಕೋಮುವಾರಾಗಿ ವಿಭಾಗಮಾಡಿರುವುದರಿಂದ ವೈಷಮ್ಯವು ಹೆಚ್ಚಿದೆ.

ವಿಷಮಸ್ಥಿತಿಯು ಹಿಂದೂಗಳಿಗೂ ಮುಸಲ್ಮಾನರಿಗೂ ಇರುವುದಲ್ಲದೆ ಹಿಂದೂಗಳಲ್ಲಿಯೇ ಬ್ರಾಹ್ಮಣರಿಗೂ ಬ್ರಾಹ್ಮಣೇತರರಿಗೂ, ಬೇರೆ ಬೇರೆ ಜಾತಿಗಳಿಗೂ ಉಂಟು. ಬಿಳಿಯರಿಗೂ ಇತರರಿಗೂ ಇರುವ ವರ್ಣಭೇದ ವನ್ನೂ ಈ ವಿಚಾರಕ್ಕೆ ಸಂಬಂಧಿಸಿದ್ದೆಂದೇ ಭಾವಿಸಬೇಕು.

ಕಳೆದ ಎಳೆಂಟು ವರ್ಷಗಳಿಂದ ಮಾತ್ರವೇ ಬಿಳಿಯರು ತಾವೂ ಭಾರತೀಯರೆಂದು ಒಪ್ಪಿಕೊಳ್ಳುತ್ತಲಿದಾರೆ. ಅವರಲ್ಲಿಯೂ ಮೂರು ವರ್ಗ ಗಳಿರುವುದನ್ನು ಆಗಲೇ ಕಂಡುದಾಯಿತು; ಮೂರು ವರ್ಗಗಳು ಪರಸ್ಪರ

ವಾಗಿ ವೈಷಮ್ಯಗಳನ್ನು ಬೆಳೆಸಿರುವುದುಂಟು. ಆದರೆ ಮೂರು ವರ್ಗಗಳೂ ಒಟ್ಟಾಗಿ ಶ್ರೇಷ್ಠಕುಲದವರೆಂದು ಹೆಮ್ಮೆಯನ್ನು ತೋರುತ್ತ ಅನೇಕಾಂಶ ಗಳಲ್ಲಿ ವಿಶೇಷವಾದ ಅಧಿಕಾರಗಳನ್ನು ಅನುಭವಿಸಿರತಕ್ಕವು. ಕ್ರೈಸ್ತಮತಸ್ಥ ರಾಗಿದ್ದಾಗ್ಯೂ ವರ್ಣಭೇದ ಸಂಸ್ಕೃತಿ ಭೇದಗಳ ದೆಸೆಯಿಂದ ಬಿಳಿಯರಿಗೂ ದೇಶೀಯರಿಗೂ ಮಧ್ಯೆ ಅಸಮಾಧಾನ ತೋರಿದೆ. ಈ ಅಸಮಾಧಾನವು ತೊಲಗುವುದಕ್ಕೆ ಬಿಳಿಯರಿಗೆ ಮಾತ್ರವೇ ಇರತಕ್ಕ ವಿಶಿಷ್ಟಾಧಿಕಾರಗಳು ಮಾಯವಾಗಿ ಭಾರತೀಯರೆಲ್ಲರಿಗೂ ಸಮಾನವಾದ ಹಕ್ಕುಬಾಧ್ಯತೆಗಳು ಆಚರಣೆಯಲ್ಲಿ ಪ್ರಾಪ್ತವಾಗತಕ್ಕದ್ದೊಂದೇ ಮಾರ್ಗ; ಬಿಳಿಯರ ದರ್ಪವೂ ಇತರರ ಅಸಮಾಧಾನವೂ ಆಗ ಮಾಯವಾಗುವುವು. ಎಲ್ಲರೂ ಸಮಾನಸ್ಕಂಧರೆಂಬ ಭಾವನೆಯು ಊರಿದಂದೇ ವೈಷಮ್ಯವು ಮಾಯ ವಾಗುವುದು.

ಹಿಂದೂ ಮುಸ್ಲಿಮ್ ಸೌಹಾರ್ದ ಸಾಧನೆಯು ಇತ್ತೀಚಿಗೆ ಪ್ರಬಲ ತಮವಾದ ಸಮಸ್ಯೆಯಾಗಿ ಪರಿಣಮಿಸಿದೆ. ಅನ್ಯೋನ್ಯ ವಿಶ್ವಾಸಕ್ಕೆ ಪ್ರತಿ ಯಾಗಿ ಪರಸ್ಪರ ಅನುಮಾನ ವಿರೋಧಗಳೇ ಬಲಗೊಂಡಿವೆ. ಹಿಂದೆಯೇ ವಿವರಿಸಿದಂತೆ ಗ್ರಾಮಾಂತರ ಪ್ರದೇಶಗಳಲ್ಲಿ ಈ ವಿರೋಧವಿಲ್ಲ. ಪಟ್ಟಣ ಗಳಲ್ಲಿಯೇ ವಿರೋಧವು ತೋರಿಕೊಂಡು ಆಗಾಗ್ಗೆ ಹೊಡೆದಾಟಗಳಲ್ಲಿ ಪರಿಣಮಿಸುತ್ತದೆ. ಗೋವಧೆ, ಮತಾಂತರ ಸ್ವೀಕಾರ, ಮಸೀದಿಗಳ ಮುಂದೆ ಮೇಳ ಮುಂತಾದವು ಈ ವೈಷಮ್ಯಕ್ಕೆ ಚಿಹ್ನೆಗಳು; ನಿಮಿತ್ತ ಗಳು. ಸ್ವೀಕಾರಕ್ಕಿಂತ ತ್ಯಾಗವು ದೊಡ್ಡದೆಂಬ ತತ್ವವು ಬೇರೂರಿ, ಅಧಿಕಾರ ಪ್ರಾಪ್ತಿಗಾಗಿ ಕಲಹಮಾಡುವುದಕ್ಕಿಂತ ಕರ್ತವ್ಯತತ್ಪರರಾಗುವುದು ಮೇಲೆಂದು ಜನರು ತಿಳಿದು ಕರ್ತವ್ಯನಿಷ್ಠೆಯು ದೃಢವಾದ ಪಕ್ಷದಲ್ಲಿ ಪರಸ್ಪರ ವಾದ ಅನುಮಾನ ವಿರೋಧಗಳಿಗೆ ಅವಕಾಶವಿರುವುದಿಲ್ಲ. ಪರಸ್ಪರ ಗೌರವ ಮರ್ಯಾದೆಗಳು ವೃದ್ಧಿಗೊಳ್ಳುವುದಕ್ಕೆ ಕೃತಜ್ಞತೆಯನ್ನು ಬೆಳೆಸತಕ್ಕ ಅನ್ಯೋನ್ಯ ಸಹಾಯವು ಅಸ್ತಿಭಾರ; ಮೊನ್ನೆ ಮೊನ್ನೆವರೆಗೂ ಅನ್ಯೋನ್ಯ ವಾದ ಮೈತ್ರಿಯೇ ಸಾಧಾರಣವಾಗಿ ದೇಶದಲ್ಲೆಲ್ಲಿಯೂ ನೆಲೆಸಿತ್ತು. ಹಿಂದೂ ಗಳಾಗಲಿ ಮುಸ್ಲಿಮರಾಗಲಿ ತಾವು ಸಂಖ್ಯಾದುರ್ಬಲರೆಂಬ ಕಾರಣವನ್ನು ಒಡ್ಡಿ ಇತರ ಜಾತಿಗಳ ಅಭ್ಯುದಯಕ್ಕೆ ವಿಘ್ನಗಳನ್ನೊಡ್ಡುವುದು ಸರ್ವಥಾ

ನ್ಯಾಯವಲ್ಲ. ತಾವು ಹಿಂದುಳಿದ ಪಂಗಡವೆಂದೋ ಅಲ್ಪಸಂಖ್ಯಾಕರೆಂದೋ ಹೇಳಿಕೊಂಡು ರಾಷ್ಟ್ರದ ಅಭಿವೃದ್ಧಿ ಪ್ರಗತಿಗಳಿಗೆ ಅಡ್ಡಿಮಾಡಲು ಯಾವ ಜಾತಿಯವರಿಗೂ ಅಧಿಕಾರವಿರುವುದಿಲ್ಲ.

ದಖನ್ನಿನಲ್ಲಿ ಬ್ರಾಹ್ಮಣ ಬ್ರಾಹ್ಮಣೇತರರಿಗೆ ತೋರಿಕೊಂಡಿರುವ ವೈಷಮ್ಯ ವಿಚಾರವೂ ಇದರಂತೆಯೇ. ಪ್ರತಿ ಜಾತಿಗೂ ವಿಶಿಷ್ಟವೆನಿಸಿ ರೂಢಮೂಲವಾಗಿದ್ದ ವೃತ್ತಿವ್ಯವಸ್ಥೆಯು ಅಲ್ಲಕಲ್ಲೋಲವಾಗುತ್ತಲಿರುವ ಘಟನೆಯ ದೆಸೆಯಿಂದ ವಿಚಾರವು ಕಷ್ಟಸಾಧ್ಯವಾಗಿದೆ. ಸರ್ಕಾರೀ ಹುದ್ದೆಗಳಿಗೆ ಆಸೆಪಟ್ಟು ನ್ಯಾಯುವಾಗಿ ಸ್ಪರ್ಧಿಸುವುದರಲ್ಲಿ ದೋಷವಿಲ್ಲ; ಹುದ್ದೆಗಳ ಸಂಪಾದನೆ ಮಾತ್ರದಿಂದಲೇ ಉದ್ಧಾರವಾಗುವುದೆಂಬ ನಂಬಿಕೆಯು ದುಷ್ಟವಾದುದು. ಜಾತಿಭೇದಗಳಿಗನುಸಾರವಾಗಿ ವರಣಕ್ಷೇತ್ರ ವಿಭಜನೆಯು ಇದರ ಪರಿಣಾಮವೂ ಹೌದು, ಹೇತುವೂ ಹೌದು.

ಮತ್ತೊಬ್ಬರಿಗೆ ಕೀಳನ್ನುಂಟುಮಾಡುವ ತನ್ನ ಮೇಲು ನ್ಯಾಯ ವಿರುದ್ಧವೆಂಬ ಅಂಶವನ್ನು ಹಿಂದೆಯೇ ಕಂಡೆವು. ಅನ್ಯರಿಗೆ ಲೋಪಕಾರಕವಾದ ಅಥವಾ ರಾಷ್ಟ್ರಸ್ಥಿತಿಗೆ ಲೋಪಕಾರಕವಾದ ತನ್ನ ಮೇಲ್ಮೆಯೆಂಬುದು ಅಪರಾಧವೆಂದೇ ಗಣ್ಯವಾಗತಕ್ಕದ್ದು. ರಾಷ್ಟ್ರಕ್ಕೋ ಮತ್ತೊಂದು ಜಾತಿಗೋ ನಷ್ಟಕಾರಕವಾಗಿ ಮೇಲ್ಮೆಯನ್ನು ಸಾಧಿಸಲು ಯಾವ ಜಾತಿಗೂ ನ್ಯಾಯುವಾದ ಅಧಿಕಾರವಿರುವುದಿಲ್ಲ. ರಾಷ್ಟ್ರಸಮ್ಮುಖದಲ್ಲಿ ಯಾವ ಜಾತಿಗಾದರೂ ಲಭಿಸುವ ಗೌರವವು ಆ ಜಾತಿಯ ಸೇವೆ ಅಥವಾ ಉಪಯುಕ್ತತೆಗೆ ಅನುಸಾರವಾಗಿರುತ್ತದೆ. ಅಲ್ಪಸಂಖ್ಯಾಕರಾಗಿಯೋ ಹಿಂದುಳಿದವರಾಗಿಯೋ ಇರುವ ಮಾತ್ರದಿಂದಲೇ ಯಾವ ಜಾತಿಗಾಗಲಿ ಪ್ರಗತಿಗೆ ಅಡ್ಡಿಯಾಗಿ ನಿಲ್ಲುವ ಅಧಿಕಾರವಿರುವುದಿಲ್ಲ. ಹಿಂದುಳಿದ ಜಾತಿಗಳು ರಾಷ್ಟ್ರದಲ್ಲಿರುವುದು ರಾಷ್ಟ್ರಕ್ಕೇ ವಿಪತ್ಕಾರಕವಾದುದರಿಂದ ಅಂತಹವರ ಉದ್ಧಾರಪ್ರಯತ್ನವು ರಾಷ್ಟ್ರಮುಖವಾಗಿ ನಡೆಯಬೇಕು; ಆದರೆ ಆ ಪ್ರಯತ್ನವು ಇತರ ಜಾತಿಗಳ ನ್ಯಾಯವಾದ ಸುಸ್ಥಿತಿಗೆ ವಿಘ್ನ ತೋರದಂತೆ ನೆರವೇರಬೇಕು. ಪ್ರಕೃತ ಸ್ಥಿತಿಯನ್ನು ವಿಕೃತ ಸ್ಥಿತಿಯೆಂದೇ ಹೇಳಬೇಕು; ಏಕಂದರೆ ಮೊನ್ನೆ ಉತ್ತಮರೆಂದೆನಿಸಿಕೊಳ್ಳಲು ತವಕ

ಪಡುತ್ತಿದ್ದ ಕೆಲಜಾತಿಗಳು ಈಗ ನೀಚವೆಂದೆನಿಸಿಕೊಳ್ಳಲು ತವಕಪಡುವ ವಿಚಿತ್ರ ಸ್ಥಿತಿಯು ತೋರುವುದು.

ಯಾವ ಜಾತಿಯಾಗಲಿ ಇತರ ಜಾತಿಗಳ ಸಹವಾಸ ಲೇಶವೂ ಇಲ್ಲದೆ ತಾನೇತಾನಾಗಿ ಬಾಳುವುದು ಅಸಾಧ್ಯ; ಆದ್ದರಿಂದ ಪ್ರತಿ ಜಾತಿಯೂ ಇತರ ಜಾತಿಗಳನ್ನು ಹೊಂದಿಕೊಂಡು ಇತರ ಜಾತಿಗಳಿಂದ ಗೌರವ ಸಂಪಾದನೆ ಮಾಡಿಕೊಂಡು ಮಾನವನ್ನು ಗಳಿಸಬೇಕು. ಇತರರಿಂದ ಉಪಕಾರವನ್ನು ನಿರೀಕ್ಷಿಸುವವನು ತಾನೇ ಮುಂದಾಗಿ ಇತರರಿಗೆ ಉಪಕಾರಮಾಡಿದ್ದಲ್ಲಿ ನಿರೀಕ್ಷಣೆಯ ಅಧಿಕಾರವನ್ನು ಪಡೆದಿರುತ್ತಾನೆ; ಹಾಗೆಯೇ ಒಂದು ಜಾತಿಯು ಇತರ ಜಾತಿಗಳಿಂದ ಅನುಕೂಲಗಳನ್ನು ನಿರೀಕ್ಷಿಸುವ ಅಧಿಕಾರವನ್ನು ಪಡೆಯಲು ಇತರ ಜಾತಿಗಳಿಗೆ ತಾನು ಅನುಕೂಲವಾಗಿರಬೇಕು. ಪ್ರತಿ ಜಾತಿಯೂ ಹೀಗಿದ್ದಲ್ಲಿ ಅನ್ಯೋನ್ಯತೆಯು ಸ್ಥಿರವಾಗಿ ವೃದ್ಧಿಗೊಳ್ಳುವುದು; ಸಮಾಜವು ಭದ್ರವಾಗುವುದು. ಕಾರಣಾಂತರಗಳಿಂದ ಯಾವ ಜಾತಿಯಾದರೂ ವಿಶೇಷವೆನಿಸತಕ್ಕ ಅಧಿಕಾರವನ್ನು ಪಡೆದ ಪಕ್ಷದಲ್ಲಿ ಆ ಅಧಿಕಾರವು ಚಿರಕಾಲ ನಡೆದುಬರಬೇಕಾದರೆ ಅದಕ್ಕೆ ತಕ್ಕ ಯೋಗ್ಯತೆಯಿರಬೇಕು. ಯೋಗ್ಯತೆಗೆ ಮೀರಿದ ಅಧಿಕಾರವು ಚಿರಸ್ಥಾಯಿಯಾಗಿ ವ್ಯಕ್ತಿಗಾಗಲಿ ಜಾತಿಗಾಗಲಿ ನಡೆಯಲಾರದು. ಇತರ ಜಾತಿಗಳಿಗೆ ಲೋಪವೋ ಅನ್ಯಾಯವೋ ಸಂಭವಿಸುವ ರೀತಿಯಲ್ಲಿ ಯಾವುದಾದರೂ ಜಾತಿಯು ಸ್ವಾರ್ಥವನ್ನು ಸಾಧಿಸಿದುದೇ ಆದರೆ ಅದಕ್ಕೆ ತಕ್ಕಂತೆ ಯೋಗ್ಯತೆಯನ್ನು ಕಳೆದುಕೊಳ್ಳುವುದಲ್ಲದೆ ಅಪಕೀರ್ತಿಯನ್ನೂ ಸಂಪಾದಿಸಿಕೊಳ್ಳುವುದು. ಕರ್ತವ್ಯವಿಲ್ಲದ ಅಧಿಕಾರವಿಲ್ಲ; ತನ್ನ ಕರ್ತವ್ಯಕ್ಕೆ ಅಥವಾ ಪ್ರಯೋಜಕತ್ವಕ್ಕೆ ಮೀರಿದ ಅಧಿಕಾರಕ್ಕಾಸೆಪಡುವ ಜಾತಿಯು ದುಷ್ಟವೆನಿಸುತ್ತದೆ.

ರಾಷ್ಟ್ರಭಕ್ತಿ, ಸಮಾಜಭಕ್ತಿ, ಜಾತಿಭಕ್ತಿ ಮುಂತಾದವುಗಳ ಪರಸ್ಪರ ತಾರತಮ್ಯಗಳು ಸ್ಪಷ್ಟವಾದಲ್ಲಿ ವ್ಯಕ್ತಿಗಳಾಗಲಿ ಜಾತಿಗಳಾಗಲಿ ಸಮಾಜದಲ್ಲಿ ತಮ್ಮ ಸ್ಥಾನಗೌರವವನ್ನು ಅತಿಕ್ರಮಿಸುವುದಿಲ್ಲ. ಸಮಾಜ ಗೌರವ ಸಂಪಾದನೆಯಲ್ಲಿ ಕ್ಷುದ್ರತೆಯನ್ನು ವಹಿಸುವುದಿಲ್ಲ; ತನಗೆ ಸಲ್ಲಲಾಗದ ಪದವಿಗಾಗಲಿ ಅಧಿಕಾರಕ್ಕಾಗಲಿ ಆಗ ಯಾವ ಜಾತಿಯೂ

ಆಸೆಪಡುವುದಿಲ್ಲ. ಜಾತಿಗಿಂತ ರಾಷ್ಟ್ರವು ದೊಡ್ಡದೆಂಬ ಅಂಶವು ಎಲ್ಲರ ಬುದ್ಧಿಯಲ್ಲಿಯೂ ಬೇರೂರಿದರೆ ಅಲ್ಪಕಾರಣಗಳಿಗಾಗಿ ಜಾತಿ ವೈಷಮ್ಯಗಳು ರೇಗುವ ಸಂಭವವಿರುವುದಿಲ್ಲ.

ಆದರೆ ಸ್ಥಿತಿಗತಿಗಳು ಅಷ್ಟು ಸುಲಭಸಾಧ್ಯವಾಗಿಲ್ಲ. ಬಡತನದಲ್ಲಿ ಮುಳುಗಿ, ಅತ್ಯಧಿಕ ವ್ಯಾಪ್ತಿಯುಳ್ಳ ಆಡಳಿತಕ್ಕೊಳಗಾಗಿ, ಪ್ರಾತಿನಿಧ್ಯ ಸಂಸ್ಥೆಗಳ ಮೋಹಕ್ಕೆ ಸಿಕ್ಕಿರುವುದರಿಂದ ಕೋಮುವಾರು ಕಿತ್ತಾಟ ವೆನ್ನುವುದು ಕಠಿನ ಸಮಸ್ಯೆಯ ರೂಪವನ್ನು ತಾಳಿದೆ.

**ದೇಶಾಂತರ ನಿವಾಸಿ ಭಾರತೀಯರು**

ಸ್ವದೇಶವನ್ನು ಬಿಟ್ಟು ಹೊರಟು ದೇಶಾಂತರವಾಸಿಗಳಾಗಿರುವ ಭಾರತೀಯರು ಸುಮಾರು 25 ಲಕ್ಷಗಳಷ್ಟಿದ್ದಾರೆ. ಅವರಲ್ಲಿ ಬಹುಭಾಗದವರು ಬ್ರಿಟಿಷ್ ಸಮುದಾಯ ಬಂಧದಲ್ಲಿ ಲೆಕ್ಕವಾದ ಕ್ಷೇತ್ರಗಳಲ್ಲಿಯೇ ನೆಲೆ ಯಾಗಿದ್ದಾರೆ; ಅದರ ಹೊರಗಡೆ, ಅಂದರೆ ಅನ್ಯದೇಶ ಗಳಲ್ಲಿ, ನೆಲೆಯಾಗಿರುವವರು ಹಲಕೆಲವು ಸಾವಿರ ಜನರು ಮಾತ್ರ. ಪರದೇಶ ಗಳಲ್ಲಿ ನೆಲೆಯಾಗಿರುವ ಭಾರತೀಯರ ಲೆಕ್ಕವು ಸರಿಯಾಗಿ ಲಭ್ಯವಲ್ಲ. ಈ ಲೆಕ್ಕದಲ್ಲಿ ವಿದ್ಯಾರ್ಥಿಗಳು, ವರ್ತಕರು, ಪ್ರಯಾಣಿಕರು ಸೇರುವುದಿಲ್ಲ; ಸ್ಥಿರವಾಗಿ ಮನೆಮಾರುಗಳನ್ನು ಕಟ್ಟಿಕೊಳ್ಳುವ ಉದ್ದೇಶದಿಂದ ನೆಲೆಯಾ ದವರು ಮಾತ್ರವೇ ಸೇರತಕ್ಕವರು.

ಲಕ್ಷಾಂತರ ಭಾರತೀಯರು ಸ್ವದೇಶವನ್ನು ಬಿಟ್ಟು ಅನ್ಯದೇಶಗಳನ್ನು ಆಶ್ರಯಿಸಿದುದಕ್ಕೆ ಕಾರಣವು ದೂರವಾದುದು. ಹತ್ತೊಂಭತ್ತನೆಯ ಶತಮಾನದ ಮಧ್ಯಕಾಲದಲ್ಲಿ ಗುಲಾಮ ವ್ಯಾಪಾರವು ನಿಂತ ಸಂಗತಿಯು ಭಾರತೀಯರ ದೇಶಾಂತರನಿವಾಸಕ್ಕೆ ಕಾರಣವಾಗಿ ಪರಿಣಮಿಸಿತು. ಗುಲಾಮಿ ವ್ಯಾಪಾರವು ನಿಷಿದ್ಧವಾದಾಗ ಕಾಲೋನಿಗಳಲ್ಲಿ ನೆಲೆಸಿದ್ದ ಪರಂಗಿ ಜನರಿಗೆ ಅಗ್ಗವಾಗಿ ಕೂಲಿಯಾಳುಗಳು ದೊರೆಯುವುದು ನಿಂತು ಹೋಯಿತು. ಆಗ ಭಾರತವರ್ಷವನ್ನು ಅವರೆಲ್ಲರೂ ಕೂಲಿಗಳ ದೇಶವೆಂದೇ ಭಾವಿಸಿದ್ದರು. ಆದ್ದರಿಂದ ತಮಗೆ ಬೇಕಾದ ಕೂಲಿಯಾಳುಗಳನ್ನು ಒಯ್ಯಲು ಅನುಕೂಲಮಾಡಿಕೊಡಬೇಕೆಂದು ಆಗಿನ ಬ್ರಿಟಿಷ್ ಸರ್ಕಾರದವರನ್ನು ಅವರು ಕೇಳಿದರು. ಈ ದೇಶೀಯರನ್ನು ಕೂಲಿಯಾಳುಗಳ ತಂಡಗಳಾಗಿ

ಒಯ್ಯಲು ಸರ್ಕಾರದವರು ಅನುಮತಿಯನ್ನು ಕೊಟ್ಟರು. ಕಾಲೊನಿಗಳಲ್ಲಿ ಯಜಮಾನರಾದವರು ತಮ್ಮ ನಿಯೋಗಿಗಳನ್ನು ಕೊಟ್ಟುಕಳುಹಿಸಿ ಕೂಲಿಯಾಳುಗಳನ್ನು ಕರಾರುಗಳಿಗೊಪ್ಪಿಸಿ ಗುಂಪುಗುಂಪಾಗಿ ಕರೆದೊಯ್ದರು. ಈ ರೀತಿಯಲ್ಲಿ ಅಜ್ಞಾನಿಗಳಾದ ಭಾರತೀಯರು ಫೀಜೀ, ಮಾರಿಷಸ್, ನೆಟಾಲ್, ಜಮೈಕಾ, ಟ್ರಿನಿಡಾಡ್, ಗ್ವಿಯಾನಾ ಮುಂತಾದ ಕ್ಷೇತ್ರಗಳಿಗೆ 'ಇಂಡೆಂಚರ್' ಎಂದು ಹೆಸರಾದ ಕರಾರು ಕ್ರಮದಂತೆ ಹೊರಟರು; ಸಿಂಹಳಕ್ಕೂ ಮಲಯ ಪರ್ಯಾಯದ್ವೀಪಕ್ಕೂ ಹೊರಟವರು ಬೇರೆ ಬಗೆಯಾದ ಕ್ರಮಕ್ಕೊಪ್ಪಿ ಹೊರಟರು. ಮೊದಲು ಹೊರಟವರು ನಿರಕ್ಷರರಾಗಿಯೂ ಕೇವಲ ಕಾಯಕಷ್ಟಪಡತಕ್ಕವರಾಗಿಯೂ ಇದ್ದರು. ಆ ತರುವಾಯ ಹೊರಟವರು ವ್ಯಾಪಾರೋದ್ಯೋಗಗಳಲ್ಲಿ ತೊಡಗತಕ್ಕವರಾಗಿದ್ದು ಸ್ವಲ್ಪ ಮೇಲೆನಿಸಿದವರಾಗಿದ್ದರು. ಮೊದಲು ಹೊರಟ ಅಜ್ಞರ ರಾಶಿಯೇ ಹೆಚ್ಚು. ಕಾಲೊನಿಗಳಿಗೆ ಹೊರಟ ತರುವಾಯ ಅವರು ಅನುಭವಿಸಿದ ಕಷ್ಟಗಳ ವೃತ್ತಾಂತವನ್ನು ಪ್ರತಿ ಭಾರತೀಯನೂ ಬೇರೆಡೆಯಲ್ಲಿ ತಿಳಿಯತಕ್ಕದ್ದು. 'ಇಂಡೆಂಚರ್' ಎಂಬ ಕರಾರಿನ ಕ್ರಮವು ಅತಿ ದುಷ್ಟವಾಗಿ ಕಂಡುಬಂದು 1917ರಲ್ಲಿ ನಿಷಿದ್ಧವಾಯಿತು. ಅಂದಿನಿಂದ ಕೂಲಿಯಾಳುಗಳ ದೇಶಾಂತರ ಗಮನವು ತಗ್ಗಿಹೋಯಿತು. ಈಗ ಕಾಲೊನಿಗಳಲ್ಲಿರುವ ಭಾರತೀಯರು ಬಹುವಾಗಿ ಅಲ್ಲಿಯ ತೋಟಗಳಲ್ಲಿ ಕೂಲಿಯಾಳುಗಳಾಗಿಯೇ ಇದ್ದಾರೆ.

ಬ್ರಿಟಿಷ್ ಸಮುದಾಯದ ಭಾಗಗಳಲ್ಲಿ ನಿವಾಸಿಗಳಾಗಿದ್ದಾಗ್ಗೂ ಭಾರತೀಯರಿಗೆ ಸಲ್ಲಬೇಕಾದ ಗೌರವವು ಸಲ್ಲುತ್ತಿಲ್ಲ. ಸಾಮ್ರಾಜ್ಯ ಪೌರರಲ್ಲಿ ಭಾರತೀಯರು ಗಣ್ಯರಾಗಿದ್ದರೂ ಪೌರರಿಗೆ ಸಲ್ಲತಕ್ಕ ಸ್ಥಾನವು ಅವರಿಗಿಲ್ಲ. ಡುಮಿನಿಯನ್ನುಗಳಲ್ಲಿಯೂ ಕಾಲೊನಿಗಳಲ್ಲಿಯೂ ಇರುವ ಸ್ಥಿತಿಗತಿಗಳನ್ನು ಈ ಬಗೆಯಾಗಿ ವರ್ಣಿಸಬಹುದು.

"ಆಸ್ಟ್ರೇಲಿಯ, ನ್ಯೂಸೀಲಂಡ್ ಮುಂತಾದ ದೇಶಗಳಲ್ಲಿ ಅಲ್ಲಿಯ ನಿವಾಸಿಗಳು ತಮ್ಮ ಜೀವನದ ಅಂತಸ್ತನ್ನು, ತಮ್ಮ ಕೆಲಸದ ಸ್ವಲ್ಪ ಕಾಲವನ್ನು, ತಮ್ಮ ಹೆಚ್ಚು ಸಂಬಳಗಳನ್ನು ರಕ್ಷಿಸಿಕೊಳ್ಳುವುದಕ್ಕೆ ಬಲವಂತದಿಂದಲಾದರೂ ಏಷ್ಯಾಖಂಡದವರನ್ನು ದೂರ ದೂರವಾಗಿಟ್ಟಿರುವುದರಿಂದ ಮಾತ್ರವೇ ಸಾಧ್ಯವೆಂದು ಏಕಕಂಠದಿಂದ ವ್ಯಕ್ತಪಡಿಸು

ತ್ತಾರೆ. ಏಷ್ಯಾಖಂಡದವರನ್ನು ದೇಶದಲ್ಲಿ ತಡೆಯಿಲ್ಲದೆ ಸೇರಿಸಿದ ಪಕ್ಷದಲ್ಲಿ ತನ್ನ ಪ್ರಾಣಕ್ಕೇ ಆಪತ್ತೊದಗುವುದೆಂದು ಬಿಳಿಯನು ಭಾವಿಸುತ್ತಾನೆ. ತಾನು ಪಡೆಯುವ ಸಂಬಳಕ್ಕೆ ಪ್ರತಿಯಾಗಿ ಏಷ್ಯಾಖಂಡದವನು ಐರೋಪ್ಯನಿಗಿಂತ ಹೆಚ್ಚು ಕೆಲಸ ಮಾಡುವ ನೆಂಬುದನ್ನು ಅವನೊಪ್ಪಿಕೊಳ್ಳುತ್ತಾನೆ; ಯಾವ ನಿರ್ಬಂಧವೂ ಇಲ್ಲದೆ ಸರಿಸಮಾನವಾದ ಸ್ಪರ್ಧೆಗೆ ಅವಕಾಶವಿದ್ದಲ್ಲಿ ಆ ಕಾರಣದಿಂದ ಬಿಳಿಯನು ಏಷ್ಯಾಖಂಡದವನೊಡನೆ ಸ್ಪರ್ಧಿಸ ಲಾರದೆ ಸರ್ವನಾಶಕ್ಕೆ ಗುರಿಯಾಗುವುದು ಖಂಡಿತ. ಇದರಲ್ಲಿ ಸಂದೇಹವಿಲ್ಲ; 'ಉತ್ತಮ' ನಾದ ಸಭ್ಯತೆಯನ್ನು 'ಕೀಳಾದ' ಸಭ್ಯತೆಯ ದೆಸೆಯಿಂದ ರಕ್ಷಿಸುವ ಕರ್ತವ್ಯ ನಿರ್ವಾಹದಲ್ಲಿ ಬಲಪ್ರಯೋಗವನ್ನು ಮಾಡಲೇಬೇಕು."

ಇದೇ ವರ್ಣವೈಷಮ್ಯವೆಂಬುದು. ಇದರಿಂದಲೇ ಭಾರತೀಯರು ಬ್ರಿಟಿಷ್ ಸಾಮ್ರಾಜ್ಯದ ಪ್ರಜೆಗಳಾಗಿದ್ದಾಗ್ಯೂ ಸಾಮ್ರಾಜ್ಯದಲ್ಲಿ ಪೌರರಿಗೆ ಸಲ್ಲತಕ್ಕ ಅಧಿಕಾರ ಗೌರವಗಳಿಲ್ಲದೆ ಕಷ್ಟಗಳನ್ನು ಸಹಿಸಬೇಕಾಗಿರುವುದು. ಬ್ರಿಟಿಷ್ ಸಮುದಾಯ ಬಂಧದಲ್ಲಿ ಸೇರಿಕೊಂಡು ಸ್ವದೇಶದ ಆಡಳಿತವನ್ನು ತಾವೇ ವಹಿಸಿರುವ ಬ್ರಿಟಿಷ್ ನಿವಾಸಿಗಳು ತಂತಮ್ಮ ಕ್ಷೇತ್ರ ನಿವಾಸಿಗಳು ಯಾವ ಯಾವ ಜಾತಿಯವರಾಗಿರತಕ್ಕದ್ದೆಂಬ ವಿಚಾರವನ್ನು ತಾವೇ ತೀರ್ಮಾನಿಸಿಕೊಳ್ಳುವ ಅಧಿಕಾರವನ್ನು 1921ನೆ ಇಸವಿಯಿಂದ ಪಡೆದಿದ್ದಾರೆ. ಇಂಗ್ಲಂಡಿನ ಮಂತ್ರಿವರ್ಗದವರಾಗಲಿ ಭಾರತೀಯ ಅಧಿಕಾರಿಗಳಾಗಲಿ ಡುಮಿನಿಯನ್ನುಗಳ ಅಥವಾ ಕಾಲೊನಿಗಳ ಸರ್ಕಾರಗಳನ್ನು ಯಾವ ವಿಧದಲ್ಲಿಯೂ ನಿರ್ಬಂಧಪಡಿಸಲಾರದವರು. ವರ್ಣಭೇದ ಒಂದು ಕಡೆ, ಆರ್ಥಿಕ ಪೈಪೋಟಿ ಇನ್ನೊಂದು ಕಡೆ ಘೋರ ರೂಪಗಳನ್ನು ತಾಳುತ್ತಲಿವೆ. ಸಾಮ್ರಾಜ್ಯ ಭಾಗಗಳಲ್ಲಿರುವ ಭಾರತೀಯರ ಸ್ಥಿತಿಗತಿಗಳನ್ನು ಉತ್ತಮ ಗೊಳಿಸಲು ಹಲಕೆಲವು ಪ್ರಯತ್ನಗಳು ನಡೆದಿದ್ದಾಗ್ಯೂ ಆ ಭಾಗಗಳಲ್ಲಿ ಭಾರತೀಯರು ಇನ್ನು ಮುಂದೆ ನೆಲೆಸಬಹುದೆಂಬ ಯೋಚನೆಯನ್ನು ಬಿಟ್ಟು ಬಿಡಬೇಕು.

ದೇಶಾಂತರವಾಸಿಗಳಾಗಿರುವ ಭಾರತೀಯರು ಆ ದೇಶಗಳಲ್ಲಿ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವಿಚಾರಗಳಲ್ಲಿ ಅನ್ಯಾಯಗಳನ್ನು ಸಹಿಸಿಕೊಂಡಿರಬೇಕಾಗಿದೆ. ಜನ್ಮಭೂಮಿಯಲ್ಲಿದ್ದುಕೊಂಡೇ ನಿತ್ಯದುಃಖ ವನ್ನು ಅನುಭವಿಸುತ್ತಿರುವ ಕೋಟ್ಯಂತರ ಭಾರತೀಯರ ಕಷ್ಟಗಳು

ಅವರಿಗಿಲ್ಲ; ಆದರೂ ದೇಶಾಂತರವಾಸಿ ಭಾರತೀಯರ ಸ್ಥಾನಗೌರವಗಳು ಚಿಂತನೀಯವಾದ ಅಂಶಗಳು. ಏಕಂದರೆ ಅವರಿಗೆ ಸಲ್ಲುವ ಗೌರವವೇ ಭಾರತವರ್ಷಕ್ಕೆ ಸಲ್ಲುತ್ತಿರುವ ಗೌರವದ ಸೂಚಕ. ಭಾರತವರ್ಷದಿಂದ ಬಂದವರೆಂದು ತಿಳಿದ ಕೂಡಲೆ ಘನವಾದ ಕ್ಷೇತ್ರನಿವಾಸಿಗಳೆಂಬ ಮರ್ಯಾದೆಯು ಇತರ ದೇಶಗಳಲ್ಲಿ ಪ್ರಾಪ್ತವಾಗುತ್ತಿದ್ದರೆ ಮಾತೃಭೂಮಿಗೆ ಗೌರವ. ಭಾರತೀಯರಿಗೆ ಇತರರಿಂದ ನಡೆಯುವ ಮರ್ಯಾದೆಯು ಆ ಕಾರಣದಿಂದ ಆತ್ಮಗೌರವದ ವಿಷಯ.

ಸಾಮ್ರಾಜ್ಯದ ಹೊರಗಿನ ರಾಷ್ಟ್ರಗಳಲ್ಲಿ ಭಾರತೀಯರು ಬಹುಸಂಖ್ಯಾಕರಾಗಿಲ್ಲ. ಆ ದೇಶಗಳಲ್ಲಿ ಭಾರತೀಯರಿಗೆ ಸಲ್ಲುವ ಮರ್ಯಾದೆಯು ಉತ್ತಮವಾದುದೇನೂ ಅಲ್ಲ. ಸಾಮ್ರಾಜ್ಯದಲ್ಲಿಯೇ ಅಲಭ್ಯವಾದ ಮರ್ಯಾದೆಯು ಸಾಮ್ರಾಜ್ಯದ ಹೊರಗೆ ಲಭಿಸುವುದು ಹೇಗೆ? ನ್ಯಾಯವಾಗಿ ಸಲ್ಲಬೇಕಾದ ಮರ್ಯಾದೆಯು ಭಾರತೀಯರಿಗೆ ಜಗತ್ತಿನ ಇತರ ಭಾಗಗಳಲ್ಲಿ ದೊರಕದೆ ಇರುವುದು ಭಾರತೀಯರಾದವರಿಗೆ ಮಾನದಾಯಕವಾದುದಲ್ಲ. ಈ ಸಮಸ್ಯೆಯು ಮುಖ್ಯವಾಗಿ ರಾಜಕೀಯವಾದುದರಿಂದ ಇಲ್ಲಿ ವಿಚಾರಣೀಯವಾದುದಲ್ಲ.

ಭಾರತದ ಗೌರವ

ಜಗತ್ತಿನಲ್ಲಿ ದೇಶಗಳ ಕೀರ್ತಿಗೌರವಗಳಿಗೆ ಆಧಾರಭೂತವಾದುದು ಅವುಗಳ ಬಲಾಬಲಗಳು ಮಾತ್ರವಲ್ಲ; ಮಾನವ ಸಮುದಾಯಕ್ಕೆ ಆಯಾ ದೇಶದಿಂದ ನಡೆದಿರತಕ್ಕ ಮೇಲ್ಮೆಯೂ ಕಾರಣಭೂತವಾದುದು. ಹಿಂದಿನ ಕಾಲದಲ್ಲಿ ಭಾರತವರ್ಷವು ಹಿರಿಯದಾಗಿತ್ತು; ಮಾನವ ಸಭ್ಯತೆಗೆ ಅನೇಕ ರೀತಿಗಳಲ್ಲಿ ಪೋಷಕವಾಗಿತ್ತು. ಈ ಸಂಗತಿಯು ಭದ್ರವಾದುದಾದರೂ ಗತವೈಭವಕ್ಕಾಗಿ ಗೌರವವನ್ನು ನಿರೀಕ್ಷಿಸುವುದರಲ್ಲಿ ಪೌರುಷದ ಲಕ್ಷಣವೇ ಇರುವುದಿಲ್ಲ. ಇತಿಹಾಸಜ್ಞರಲ್ಲಿ ಕೆಲವರು ಮಾತ್ರ ಭಾರತೀಯರಲ್ಲಿ ಆದರವನ್ನು ತೋರಬಹುದೇ ವಿನಾ ಇತರರು ತೋರುವುದಕ್ಕೆ ಕಾರಣವಿರುವುದಿಲ್ಲ. ಪುನಃ ಭರತವರ್ಷವು ಜಗತ್ತಿನಲ್ಲಿ ಹಿರಿಯದೆನ್ನಿಸಿದಾಗ್ಗೆ ಭಾರತೀಯರಿಗೆ ಗೌರವವು ತಾನಾಗಿಯೇ ಲಭಿಸುವುದು. ಶಾಂತಿ ಸಾಧನೆ

ಯಲ್ಲಿಯೇ ಪರಿಣತರಾದ ಭಾರತೀಯರು ಜಗತ್ತಿಗೆ ಶಾಂತಿಯ ಮಾರ್ಗವನ್ನು ತೋರಿಕೊಟ್ಟು ದೈವೀಸಂಪತ್ತನ್ನು ಇತರರಿಗೆರೆಯಲು ಅರ್ಹರಾದವರು. ಭಾರತೀಯ ಆದರ್ಶ ಧ್ಯೇಯಗಳು ಉದಾತ್ತವೂ ಹೌದು, ಉದಾರವೂ ಹೌದು. ಭಾರತೀಯನು ಶಾಂತಿಗೆಂದು ಭಗವತ್ಪ್ರಾರ್ಥನೆ ಮಾಡುವಾಗ ಸಕಲ ಚರಾಚರ ಜಗತ್ತಿಗೇ ಶಾಂತಿಯಾಗಲೆಂದು ಪ್ರಾರ್ಥಿಸತಕ್ಕವನು. ಇದು ಮುಂದಿನ ಕಾಲದಲ್ಲಿ ಭಾರತೀಯರಿಂದ ಸಾಧಿತವಾಗತಕ್ಕ ಕರ್ತವ್ಯ ವಿಚಾರ; ಸದ್ಯದ ಕರ್ತವ್ಯವಲ್ಲ. ತಮ್ಮ ದೇಶದಲ್ಲಿಯೇ ಘೋರ ರೂಪವನ್ನು ತಾಳಿರುವ ಸಮಸ್ಯೆಗಳನ್ನು ಪರಿಹರಿಸದಿರುವವರೆಗೆ ಭಾರತೀಯರು ದೇಶದ ಹೊರಗಿನ ವಿಚಾರಗಳನ್ನು ಕಟ್ಟಿಕೊಳ್ಳಲಾರರು.

ಭರತವರ್ಷದ ಕೀರ್ತಿ ಗೌರವಗಳು ಜಗತ್ತಿನಲ್ಲಿ ಇತ್ತೀಚಿಗೆ ಉತ್ತಮಗೊಳ್ಳಲು ಕಾರಣಭೂತವಾದ ಒಂದೆರಡು ಸಂಗತಿಗಳನ್ನು ನಾವು ಸ್ಮರಿಸಬೇಕು. 1893ರಲ್ಲಿ ಷಿಕಾಗೊ ನಗರದಲ್ಲಿ ಸರ್ವಧರ್ಮಗಳ ಪರಿಷತ್ತಿನಲ್ಲಿ ವಿವೇಕಾನಂದ ಸ್ವಾಮಿಯ ಮತ್ತು ಇಂಗ್ಲಂಡಿನಲ್ಲಿ ದಾದಾಭಾಯಿ ನೌರೋಜಿಯ ಕಾರ್ಯಸಾಹಸಗಳ ಕಾಲದಿಂದ ಭಾರತೀಯರು ಇತರೆಡೆಗಳಲ್ಲಿ ಕೀರ್ತಿಯನ್ನು ಗಳಿಸುತ್ತಿದಾರೆ. ಅನ್ಯದೇಶಗಳ ವಿದ್ಯಾನಿಲಯಗಳಲ್ಲಿ ವ್ಯಾಸಂಗಮಾಡಿ ಮೇಧಾವಿಗಳೆನಿಸಿದ ಭಾರತೀಯ ಯುವಕರೂ, ಆಟಪಾಟಗಳ ಕೂಟಗಳಲ್ಲಿ ಸಾಮರ್ಥ್ಯವನ್ನು ಬೀರಿದ ಭಾರತೀಯ ಆಟಗಾರರೂ ಇತರರ ಮೆಚ್ಚುಗೆಯನ್ನು ಸೆಳೆದುಕೊಂಡಿರುವರು. ಭಾರತೀಯರಲ್ಲಿ ವಿದಗ್ಧರಾಗಿ ಹೆಸರುವಾಸಿಯಾದವರನ್ನು ಇತರರೂ ಮೆಚ್ಚುವುದಕ್ಕೆ ಮೊದಲಾಗಿದೆ. ನೋಬೆಲ್ ಬಹುಮಾನವನ್ನು ಎರಡುಬಾರಿ ಭಾರತೀಯರು ಸಾಧಿಸಿದರು. ಭಾರತೀಯರಲ್ಲಿ ಮಹಾಪುರುಷರಾದವರು ಪ್ರಯತ್ನವಿಲ್ಲದೆಯೇ ಇತರೆಡೆಗಳಲ್ಲಿಯೂ ವಿಖ್ಯಾತರಾಗುತ್ತಿದಾರೆ. ಶ್ರೀರಾಮಕೃಷ್ಣ ಪರಮಹಂಸರ ಮಹತ್ವವನ್ನು ಮ್ಯಾಕ್ಸ್‌ಮುಲ್ಲರ್ ಎಂಬ ವಿದ್ವಾಂಸನು ವಿವರಿಸಿದ ಹಾಗೆಯೇ ಮಹರ್ಷಿ ದಯಾನಂದ ಸರಸ್ವತಿಯವರನ್ನು ಅಮೆರಿಕದ ಬ್ರಹ್ಮಜ್ಞಾನ ಸಮಾಜದವರು ಕೊಂಡಾಡಿದರು. ಇತ್ತೀಚಿಗೆ ಮಹಾತ್ಮಾ ಗಾಂಧೀಜಿಯವರೊಬ್ಬರಿಂದ ಭರತವರ್ಷಕ್ಕೆ ಲಭಿಸಿರುವ ಕೀರ್ತಿಯು ಅಸಾಧಾರಣವಾಗಿಯೇ ಇದೆ.

ಸರ್ಕಾರದವರೂ ಈ ವಿಚಾರದಲ್ಲಿ ಕೃತಪ್ರಯತ್ನರಾಗಿ ಇದ್ದಾರೆ. ಯೂರೋಪಿನಲ್ಲಿ ಭಯಂಕರವಾಗಿ ನಡೆದ ಮಹಾಯುದ್ಧವು ಕೊನೆಗಂಡ ಸಮಯದಲ್ಲಿ ಅಮೆರಿಕದ ಸರ್ವಾಧ್ಯಕ್ಷ ವಿಲ್ಸನ್ ಎಂಬಾತನು ಜಗತ್ತಿನಲ್ಲಿ ಯುದ್ಧವೆಂಬುದು ನಿಂತುಹೋಗುವ ವ್ಯವಸ್ಥೆಯನ್ನು ನೆಲೆಗೊಳಿಸಲು ಪ್ರಯತ್ನಿಸಿದನು. ಅದರ ಪರಿಣಾಮವಾಗಿ ರಾಷ್ಟ್ರಗಳ ಪರಿಷತ್ತೆಂಬುದು ರೂಪಗೊಂಡಿತು. ಹತ್ಯವನ್ನೂ ಅನ್ಯಾಯವನ್ನೂ ವಿರೋಧಿಸುವ ಉದ್ದೇಶವುಳ್ಳ ಆ ಸಂಸ್ಥೆಯಲ್ಲಿ ಭಾರತವರ್ಷವೂ ಸೇರಿದೆ. ಭಾರತೀಯ ಕಾರ್ಯದರ್ಶಿಯೆಂಬ ಸಂಯುಕ್ತ ರಾಜ್ಯದ ಮಂತ್ರಿಯು ಭಾರತವರ್ಷದ ಪರವಾಗಿ ಅಲ್ಲಿಗೆ ನಿಯೋಗಿಗಳನ್ನು ನಿಯಾಮಕಮಾಡಿ ಕೊಟ್ಟು ಕಳುಹಿಸುತ್ತಾನೆ. ಅಂತರ ರಾಷ್ಟ್ರೀಯವಾಗಿಯೋ ಬ್ರಿಟಿಷ್ ಕ್ಷೇತ್ರಗಳಲ್ಲಿ ಸಮುದಾಯವಾಗಿಯೋ ಸಭೆಗಳೂ ಪರಿಷತ್ತುಗಳೂ ನಡೆಯುವ ವೇಳೆಗಳಲ್ಲಿ ಭಾರತವರ್ಷದ ಪ್ರತಿನಿಧಿಯಾಗಿ ಒಬ್ಬಾತನಾದರೂ ಇರುತ್ತಾನೆ.

ಜಗತ್ತಿನಲ್ಲಿ ಭರತವರ್ಷಕ್ಕೆ ಸಲ್ಲುವ ಮರ್ಯಾದೆಯು ಭಾರತೀಯರು ಸ್ವಸಾಮರ್ಥ್ಯದಿಂದ ಹೇಗೆ ಸಂಪಾದಿಸಿಕೊಂಡರೆ ಹಾಗೆ ಸಲ್ಲುತ್ತದೆ.

## 6. ಉಪಸಂಹಾರ

**ಗ್ರಾಮಗಳ ಪುನರುಜ್ಜೀವನ; ಗೋಸಂರಕ್ಷಣೆ; ಆರ್ಥಿಕ ಉದ್ಧಾರ; ರಾಜಕೀಯ ಉದ್ಧಾರ; ಸಂಸ್ಕೃತಿ ಸಮಸ್ಯೆ; ತರುಣರ ಸುಯೋಗ; ಆದರ್ಶ ಭಾರತ.**

ನಮ್ಮ ಜೀವನದಲ್ಲಿ ಎದುರಾಗಿರುವ ಸಮಸ್ಯೆಗಳಲ್ಲಿ ಮುಖ್ಯವಾದು ವನ್ನು ಸಂಕ್ಷೇಪವಾಗಿ ವಿಚಾರಿಸಿದ್ದಾಯಿತು. ಅವುಗಳಲ್ಲಿ ಯಾವುದನ್ನು ತಿಳಿಯಬೇಕೆಂದರೂ ಅದನ್ನು ಪ್ರತ್ಯೇಕಿಸಿ ಸ್ವತಂತ್ರವಾಗಿ ವಿಸ್ತಾರ ವಿಚಾರಣೆ ನಡೆಸತಕ್ಕದ್ದೆಂಬ ಅಂಶವನ್ನು ನೆನಪಿನಲ್ಲಿಡಬೇಕು. ಭಾರತೀಯ ಸಮಸ್ಯೆ ಗಳು ಪರಸ್ಪರ ಸಂಬಂಧ ಪರಿಣಾಮಗಳನ್ನುಳ್ಳವು; ಒಂದೇ ರೋಗದ ನಾನಾಲಕ್ಷಣಗಳಂತೆ ಇರತಕ್ಕವು. ಅವುಗಳಲ್ಲಿ ಯಾವುದನ್ನು ಪರಾಮರ್ಶೆ ಮಾಡಬೇಕಾದರೂ ಅದರ ವಿವರವನ್ನು ಆದ್ಯಂತವಾಗಿ ಮನನಮಾಡಿಕೊಳ್ಳ ಬೇಕು; ತರುವಾಯ ಪರಿಹಾರ ಪ್ರಯತ್ನವನ್ನು ನಿರ್ದೇಶಮಾಡಿಕೊಂಡು ಕರ್ತವ್ಯಪರರಾಗಬೇಕು. ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ರಂಗಗಳಲ್ಲಿ ಎತ್ತ ನೋಡಿದರೂ ಆಪನ್ನಿವಾರಣೆಯೂ ಜೀರ್ಣೋದ್ಧಾರವೂ ಅವಿಳಂಬ್ಯವಾಗಿ ನಡೆಯತಕ್ಕದ್ದಾಗಿದೆ. ಸಮಸ್ತ ಜೀವನವೇ ರೋಗ ಗ್ರಸ್ತವೂ ದುರ್ಬಲವೂ ಆಗಿರುವುದರಿಂದ ಭಾರತೀಯರು ಮಹತ್ಪ್ರಯತ್ನ ವನ್ನೇ ಕೈಕೊಳ್ಳಬೇಕು. ಉದ್ಧಾರ ಕಾರ್ಯವು ಅತಿ ವಿಶಾಲವಾದುದು; ಅದರಲ್ಲಿ ಅತಿಮುಖ್ಯವಾದ ಒಂದೆರಡು ಭಾಗಗಳನ್ನು ಮಾತ್ರ ಸ್ಮರಿಸ ಬಹುದು.

**ಗ್ರಾಮಗಳ ಪುನರುಜ್ಜೀವನ**

ನಮ್ಮ ದೇಶವೆಂದರೆ ಸುಮಾರು ಏಳು ಲಕ್ಷ ಗ್ರಾಮಗಳ ಸಮೂಹ; ನಮ್ಮ ಜನರೆಂದರೆ ಆ ಗ್ರಾಮಗಳಲ್ಲಿ ವಾಸ ವಾಗಿರುವ 31 ಕೋಟಿ ಜನರು. ಗ್ರಾಮಾಂತರ ಪ್ರದೇಶಗಳಲ್ಲಿ 89 ಪಾಲೂ, ಪಟ್ಟಣಗಳಲ್ಲಿ 11 ಪಾಲೂ ಇರುವುದೆಂಬುದರ ಅರ್ಥ ಗ್ರಾಮಾಂ ತರವೇ ಭಾರತವರ್ಷ, ಗ್ರಾಮಸ್ಥರೇ ಭಾರತೀಯ ರಾಶಿಯೆಂದು. ಅವರೇ ಭಾರತೀಯ ಸರ್ವಸ್ವ, ಭಾರತೀಯ ಶರೀರ. ಗ್ರಾಮಗಳು ಧೇನು

ಗಳಂತೆಯೂ ಪಟ್ಟಣಗಳು ಅವುಗಳ ಮೈಯಲ್ಲಿ ಸೇರಿಕೊಂಡು ರಕ್ತಹೀರುವ ಜಿಗಣೆಗಳಂತೆಯೂ ಸದ್ಯಃಸ್ಥಿತಿಯಿದೆಯೆಂಬುದರಲ್ಲಿ ಅತಿಶಯೋಕ್ತಿಯಿಲ್ಲ. ಗ್ರಾಮಜೀವನದ ಉದ್ಧಾರವೆಂಬುದು ಆ ಕಾರಣದಿಂದ ಅತಿಪ್ರಧಾನ ವಾದುದು, ಅವಿಲಂಬ್ಯವಾದುದು.

ಗ್ರಾಮಗಳ ದುರವಸ್ಥೆಗೆ ದಾರಿದ್ರ್ಯ, ರೋಗ ಮತ್ತು ಮೌಢ್ಯಗಳು ಮುಖ್ಯ ಕಾರಣಗಳೆಂದು ಆಗಲೇ ಎಣಿಸಿದೆವು. ಬಲವಂತದ ಸಿರಾಹಾರ, ಇಲ್ಲದಿದ್ದರೆ ಅಪಾಹಾರಸ್ಥಿತಿಯೇ ಸರ್ವತ್ರ ವ್ಯಾಪಿಸಿರುವುದರಿಂದ ಚೈತನ್ಯವೇ ನಷ್ಟವಾಗಿ ಜನರು ಅಸ್ಥಿಪಂಜರಗಳಾಗಿರುತ್ತಾರೆ. ಆರೋಗ್ಯ ನಾಶಕವಾದ ಜೀವನಸ್ಥಿತಿಯಲ್ಲಿ ಅಜ್ಞಾನವೂ ಪ್ರವೇಶಿಸಿ ಉದ್ಧಾರ ಪ್ರಯತ್ನಗಳಿಗೆ ಪ್ರಬಲ ವಿಘ್ನಗಳನ್ನೊಡ್ಡುತ್ತದೆ. ಸ್ಥಿತಿಗತಿಗಳು ಭಯಾನಕ ವಾಗಿವೆ. ಕೃಷಿಯು ಮೇಲ್ಮೆಯನ್ನು ಪಡೆಯಲು ಘೋರವಾದ ಅಡ್ಡಿ ಗಳು ತೋರುತ್ತವೆ. ವೃತ್ತಿಗಳು ಛಿದ್ರಛಿದ್ರಗಳಾಗಿರುವುದರಿಂದ ಆಧುನಿಕ ವಿಧಾನಗಳನ್ನು ಅವಲಂಬಿಸುವ ಶಕ್ಯತೆಯೇ ಇಲ್ಲ; ಬಹು ಭಾಗದವರು ಋಣಗ್ರಸ್ತರಾಗಿರುವುದರಿಂದ ಬೀಜಕ್ಕಾಗಲಿ, ಎತ್ತುಗಳಿಗಾಗಲಿ, ಗೊಬ್ಬರ ಕ್ಕಾಗಲಿ ಸಾಕಾದಷ್ಟು ಹಣವೊದಗುವುದಿಲ್ಲ. ಸಹಕಾರ ಸಂಘಗಳಿಂದ ನಡೆಯಬೇಕಾಗಿದ್ದ ಸಹಾಯವು ನಡೆಯದಾಯಿತು; ಅನೇಕೆಡೆಗಳಲ್ಲಿ ಅವಿಶ್ವಾಸವೃದ್ಧಿಯೇ ಅವುಗಳಿಗೆ ಫಲವಾಯಿತು. ಹಿಂದಿದ್ದ ಜೀವಿಕ ಕಾಯಕಗಳ ವಿನಾಶದಿಂದ ನಿರುದ್ಯೋಗವು ಎಲ್ಲೆಲ್ಲಿಯೂ ಮಹಾಭೂತ ವಾಗಿ ಪರಿಣಮಿಸಿತು. ಇದಕ್ಕೆ ಪರಿಹಾರವಾಗಿ ಗ್ರಾಮಗಳಲ್ಲಿ ಮನೆಯ ಉದ್ಯೋಗಗಳನ್ನು ಊರ್ಜಿತಗೊಳಿಸಬೇಕೆಂದು ಯೋಚನೆ ನಡೆದಿದ್ದರೂ ಕೆಲಸವು ತಕ್ಕಷ್ಟು ನಡೆದಿಲ್ಲ; ಬಹು ಭಾಗದಲ್ಲಿ ಇನ್ನೂ ಮೊದಲೇ ಇಲ್ಲ. ಹಾಲು ಮೊಸರು ಬೆಣ್ಣೆ ಗಿಣ್ಣು ತುಪ್ಪಗಳನ್ನು ಸಿದ್ಧಪಡಿಸಿ ಮಾರುವುದು, ಪಶುಪಾಲನೆ, ಕೋಳಿಗಳನ್ನು ಸಾಕುವುದು, ಹಣ್ಣುಹಂಪಲಿನ ವ್ಯಾಪಾರ, ಕಾಯಿಪಲ್ಯಗಳ ವ್ಯಾಪಾರ, ರೇಷ್ಮೆಹುಳುಗಳನ್ನು ಸಾಕುವುದು, ಅರಗಿನ ಕೈಗಾರಿಕೆ, ಜೇನು ಸಾಕುವುದು, ತೊಗಲನ್ನು ಹದಮಾಡುವುದು, ಚಾಪೆ ಗಳನ್ನು ಹೆಣೆಯುವುದು, ಬಿದುರಿನ ಕೆಲಸ, ಕುಂಬಾರಿಕೆ, ಬೊಂಬೆಗಳ ವ್ಯಾಪಾರ ಮುಂತಾದುವನ್ನು ಅರ್ಥಶಾಸ್ತ್ರಜ್ಞರು ಹಳ್ಳಿಗಳಲ್ಲಿ ಮಾಡ

ಬಹುದಾದ ಕೆಲಸಗಳೆಂದು ಹೇಳುತ್ತಾರೆ. ಅವುಗಳಲ್ಲಿ ಹೊಸದೆನ್ನುವುದು ಒಂದೆರಡು ಮಾತ್ರ. ಇವುಗಳನ್ನು ಆಶ್ರಯಿಸುವುದರಲ್ಲಿ ಪ್ರಧಾನವಾದ ತತ್ವವೊಂದನ್ನು ಮರೆಯದಿರಬೇಕು. ಏನಂದರೆ ಗ್ರಾಮಸ್ಥರ ಕೆಲಸದ ವ್ಯಾಪಾರವು ಕೂಡಿದಮಟ್ಟಿಗೂ ಸ್ವಕ್ಷೇತ್ರದಲ್ಲಿಯೇ ನಡೆಯತಕ್ಕುದು; ದೂರ ವ್ಯಾಪಾರದ ಏರಿಳಿತಗಳ ಪರಿಣಾಮಕ್ಕೆ ಸಿಕ್ಕಬಾರದು. ರೈತನು ಜೇನು ಸಾಕುವುದರಿಂದ ಉದ್ಧಾರವಾಗುವುದೆಂದು ನಂಬಿ ಸಾಲಮಾಡಿ ಕೊಂಡು ಕಷ್ಟಪಟ್ಟು ಜೇನನ್ನು ಸಿದ್ಧಪಡಿಸಿ ವ್ಯಾಪಾರಮಾಡುವ ವೇಳೆಗೆ ಇತರೆಡೆಗಳಲ್ಲಿ ಜೇನು ಅಗ್ಗವಾಗಿಹೋಗಿ ನಷ್ಟವೇ ಮೂಡಿದರೆ ಇರುವ ಕಷ್ಟನಿವಾರಣೆಯಾಗದೆ ಶತಮುಖವಾದ ಕಷ್ಟವು ಬೆನ್ನಂಟುವುದು. ಗ್ರಾಮಸ್ಥರ ಕಷ್ಟದಿಂದ ಸಿದ್ಧವಾದ ಸರಕು ಗ್ರಾಮಸ್ಥರಲ್ಲಿಯೇ ವಿಕ್ರಯ ವಾಗುವಂತಿದ್ದರೆ ಉತ್ತಮ; ಆದುದರಿಂದ ಗ್ರಾಮಸ್ಥರಿಗೆ ಅವಶ್ಯಕವಾದ ಪದಾರ್ಥಗಳನ್ನು ಗ್ರಾಮಸ್ಥರು ಸಿದ್ಧಗೊಳಿಸಿಕೊಳ್ಳುವಂತೆ ವ್ಯವಸ್ಥೆಯನ್ನು ಉದ್ಯಮಿಸತಕ್ಕುದು ಸೂಕ್ತ. ನೂಲುವ ಮತ್ತು ನೆಯ್ಯುವ ಕಾಯಕವು ಈ ರೀತಿಯಲ್ಲಿ ಉತ್ಕೃಷ್ಟವಾದುದು. ಗ್ರಾಮಗಳು ಈಗಿರುವ ಸ್ಥಿತಿಯಲ್ಲಿ ಕೈರಾಟೆಯ ಕೆಲಸವು ಅತ್ಯುತ್ತಮವಾದುದು, ಸರ್ವಗ್ರಾಹ್ಯವಾದುದು.

ಗ್ರಾಮಗಳ ಪುನರುಜ್ಜೀವನಕ್ಕಾಗಿ ನಡೆದಿರುವ ಪ್ರಯತ್ನಗಳಲ್ಲಿ ಅನೇಕವಾಗಿ ವ್ಯರ್ಥ ಪ್ರಯತ್ನವೇ ಪರಿಣಾಮವಾಗಿದೆ. ಈ ನಿಷ್ಫಲತೆ ಗೇನುಕಾರಣವೆಂದು ವಿಚಾರವನ್ನು ನಡೆಸತಕ್ಕುದು ನಮ್ಮ ಅವಶ್ಯ ಕರ್ತವ್ಯ. ಪಂಜಾಬು ಪ್ರಾಂತದ ಗುರಗಾಂ ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಯಾಗಿದ್ದ ಬ್ರೈಯ್ನ್ ಎಂಬಾತನು ಗ್ರಾಮಗಳ ಸ್ಥಿತಿಗತಿಗಳನ್ನು ಸಮಗ್ರವಾಗಿ ತಿಳಿದುಕೊಂಡು ಉಜ್ಜೀವನ ಪ್ರಯತ್ನಗಳನ್ನು ನಡೆಸಿದನು; ಆತನ ಪ್ರಯತ್ನವು ಕಡೆಯಲ್ಲಿ ವ್ಯರ್ಥವೆನಿಸಿತು. ಇಂತಹ ವಿವರಗಳನ್ನು ಸಮಾಲೋಚನೆಮಾಡಿದಾಗ ಆಧಾರಭೂತವಾದ ಒಂದಂಶವು ಸ್ಫುಟವಾಗಿ ಎದ್ದುತೋರುವುದು. ಉದ್ಧಾರ ಪ್ರಯತ್ನವು ಎಷ್ಟು ಶ್ಲಾಘ್ಯ ವಾಗಿದ್ದಾಗ್ಗೂ ಬಲವಂತದಿಂದ ನಡೆಯತಕ್ಕದ್ದಾದರೆ ಸ್ಥಿರವಾಗಿ ಬೇರೂರು ವುದಿಲ್ಲ. ಅತಿಭಾರವಾದ ಪ್ರಮಾಣದಲ್ಲಿ ನೆಲಗಂದಾಯವನ್ನು ಸ್ವಲ್ಪ ವಾದರೂ ದಯಾದಾಕ್ಷಿಣ್ಯಗಳಿಲ್ಲದಂತೆ ವಸೂಲ್ಮಾಡುವುದರಿಂದಲೂ,

ಅಧಿಕಾರಿಗಳೂ ನೌಕರರೂ ಪದೇ ಪದೇ ಗ್ರಾಮಸ್ಥರನ್ನು ಹಿಂಸೆಗೆ ಗುರಿ ಮಾಡಿ ಅವರ ಆದರ ಆತಿಥ್ಯಗಳನ್ನು ಬಹುಕಾಲದಿಂದ ದುರುಪಯೋಗ ಗೊಳಿಸಿರುವುದರಿಂದಲೂ ಗ್ರಾಮಸ್ಥರ ಮನಸ್ಸುಗಳಲ್ಲಿ ಅಧಿಕಾರಿ ವರ್ಗ ದವರೆಂದರೆ ವಿಶ್ವಾಸವೇ ತೋರುವುದಿಲ್ಲ. ಅಧಿಕಾರಸ್ಥರಲ್ಲಿ ಹಿರಿಯ ರಾದವರೂ ಕಿರಿಯರಾದವರೂ ತದೇಕಪ್ರಕಾರವಾಗಿ ಗ್ರಾಮಸ್ಥರನ್ನು ಹಿಂಸೆಗೆ ಗುರಿಮಾಡಿರುವ ಕಾರಣದಿಂದ ಅಧಿಕಾರಸ್ಥ ವರ್ಗದಲ್ಲಿಯೇ ಗ್ರಾಮಸ್ಥರಿಗೆ ಬಲವಾದ ಅಪನಂಬಿಕೆಯುಂಟು. ಈ ಶಂಕಾ ಪ್ರಪಂಚದಲ್ಲಿ ಎಷ್ಟು ನಿಸ್ಪೃಹನಾದ ಅಧಿಕಾರಿಯಾದರೂ ಗ್ರಾಮಸ್ಥರ ವಿಶ್ವಾಸವನ್ನು ಸಂಪಾದಿಸಲಾರನು. ಹಿಂದೆ ಮಕ್ಕಳಂತೆ ಮುಗ್ಧ ಸ್ವಭಾವದವರೆಂದು ಹೆಸರಾಗಿದ್ದ ಗ್ರಾಮಸ್ಥರು ಈಗ ವಕ್ರತೆಗೆ ಹೆಸರಾಗಿದ್ದಾರೆ. ಯಾವ ಗ್ರಾಮವನ್ನು ಕಂಡರೂ ಕಕ್ಷಿಗಳೇ, ಕಿತ್ತಾಟಗಳೇ. ಕೋರ್ಟು ಕಚೇರಿ ಗಳಿಗೆ ತಿರುಗಾಡುತ್ತ ಕಲಹಗಳನ್ನು ಬೆಳೆಸಿಕೊಂಡು ನಿರಂತರ ವ್ಯಾಜ್ಯ ಗಳಲ್ಲಿಯೇ ದತ್ತಚೇತನರಾಗಿರುವ ಗ್ರಾಮಸ್ಥರಲ್ಲಿ ಒಗ್ಗಟ್ಟನ್ನುಂಟು ಮಾಡುವುದಾದರೂ ಹೇಗೆ ಎಂಬ ಪ್ರಶ್ನೆಯೇ ಎಲ್ಲೆಲ್ಲಿಯೂ ತೋರುವುದು. ತಮ್ಮ ಸ್ವಂತ ಮೇಲ್ಮೆಯ ದಾರಿಯನ್ನೇ ತಿಳಿಯಲಾರದ ಅಜ್ಞರಾಗಿದ್ದಾಗ್ಯೂ ದುರಾರಾಧ್ಯರೆನಿಸುವಷ್ಟು ಕುಟಿಲರಾಗಿದ್ದಾರೆ. ಘೋರವಾದ ಬಡತನದಲ್ಲಿ ನರಳುವುದಲ್ಲದೆ ಅಜ್ಞಾನದಲ್ಲಿ ತೆವಳುತ್ತ ಸುಲಭ ನಿವಾರ್ಯಗಳಾದ ವ್ಯಾಧಿ ಗಳಿಗೆ ಸಿಕ್ಕಿ ನರಳುತ್ತ ನೀತಿಯನ್ನೂ ಚೈತನ್ಯವನ್ನೂ ಕಳೆದುಕೊಂಡಿರು ವವರನ್ನು ಉದ್ಧರಿಸುವುದು ಹೇಗೆ? ದೇಹಶಕ್ತಿಯಿಲ್ಲದ ಜೀವಶ್ರವಗಳು; ಬುದ್ಧಿಚೈತನ್ಯವಿಲ್ಲದ ಪಶುಪ್ರಾಯರು; ನೀತಿಬಲವಿಲ್ಲದೆ ಉದ್ಯಮ ಹೀನ ರಾಗಿ ಸರ್ವ ವಿಧದಲ್ಲಿಯೂ ನಿರ್ಬಲರಾದವರು; ತಮ್ಮ ಉದ್ಧಾರವನ್ನು ತಾವು ನೆರವೇರಿಸಿಕೊಳ್ಳಲು ಅಶಕ್ತರಾಗಿರುವುದು ಮಾತ್ರವಲ್ಲದೆ ಸಹಾಯ ಮಾಡಲಿಷ್ಟಪಟ್ಟು ಸಮೀಪಕ್ಕೆ ಸಾರಿದವರನ್ನು ಕೂಡ ತಮ್ಮ ಶತ್ರು ಗಳೆಂದು ಭಾವಿಸತಕ್ಕವರು. ಇವರ ನಷ್ಟಚೈತನ್ಯವು ಪುನಃ ಹೇಗೆ ಪ್ರಾಪ್ತಿ ಯಾಗಬೇಕು?

ಈ ವಿಷಮ ಸ್ಥಿತಿಗೆ ನಿಜವಾದ ಕಾರಣಗಳೇನೆಂದು ವಿಚಾರಿಸಿದಲ್ಲಿ ಮೂರು ಸಂಗತಿಗಳು ಕಾಣುತ್ತವೆ: (1) ಭೂಭಾರವು ವಿಪರೀತವಾಗಿ

ಹೆಚ್ಚಲು ಕಾರಣಭೂತವಾದ ಉದ್ಯೋಗ ಕೈಗಾರಿಕೆಗಳ ವಿನಾಶ, (2) ಗ್ರಾಮಸ್ಥರೆಲ್ಲರಿಂದಲೂ ಒಟ್ಟಾಗಿ ಕಂದಾಯವನ್ನು ಸ್ವೀಕರಿಸದೆ ಪ್ರತಿ ಪಟ್ಟಾದಾರನಿಂದ ಪ್ರತ್ಯೇಕವಾಗಿಯೂ ಪ್ರತ್ಯಕ್ಷವಾಗಿಯೂ ನೆಲಗಂದಾಯ ವನ್ನು ವಸೂಲುಮಾಡುತ್ತ, ರಾವಣ ಕೋಟೆಯಂತೆ ನಾನಾ ಬಗೆಯ ಕುಟಿಲೋಪಾಯಗಳಿಗೂ ಕಾಲವಿಳಂಬಕ್ಕೂ ಎಡೆಗೊಡುವ ನ್ಯಾಯ ವಿಮರ್ಶೆಯನ್ನು ಮಾಡುತ್ತ, ರೈತವಾರಿ ಶಿಸ್ತೆಂಬುದನ್ನು ರೂಢಿಸಿಕೊಂಡು ಗ್ರಾಮಗಳ ಸಮುದಾಯ ಸಂಸ್ಥೆಗಳನ್ನು ಗೌರವಿಸದೆ ಪಟೇಲ ಶ್ಯಾನು ಭೋಗರನ್ನು ಸರ್ಕಾರೀ ನೌಕರರಂತೆ ಕಾಣುತ್ತ ವರ್ತಿಸುವ ಆಡಳಿತದ ನೀತಿ, ಮತ್ತು (3) ಹಿಂದೆ ಗ್ರಾಮಜೀವನಕ್ಕೆ ಪುಷ್ಟಿಯನ್ನೊದಗಿಸು ತ್ತಿದ್ದ ಸ್ಥಿತಿವಂತರ ಪದವಿ ಗೌರವಗಳ ವಿನಾಶ.

ಆಡಳಿತದವರಿಗೂ ಈ ದುಃಸ್ಥಿತಿಯು ವಿಶದವಾಗಿದೆಯಾದುದರಿಂದ ಗ್ರಾಮಗಳಲ್ಲಿ ಪಂಚಾಯತಿಗಳನ್ನು ಊರ್ಜಿತಗೊಳಿಸುವುದು ಮೇಲೆಂದು ತೋರಿತು; ಪಂಚಾಯತಿ ನಿಬಂಧನೆಯೆಂಬುದು ಇತ್ತೀಚೆಗೆ ಹುಟ್ಟಿದೆ. ಆದರೆ ಅದರಂತೆ ಹುಟ್ಟಿಕೊಳ್ಳುವ ಪಂಚಾಯತಿ ಸಭೆಗಳು ಊರ್ಜಿತವಾಗು ವುದು ಸುಲಭವಲ್ಲ; ವಿಶೇಷವಾದ ಜಾಗ್ರತಿಯೂ ಪಾಲನೆಯೂ ಅವಶ್ಯಕ. ಗ್ರಾಮಗಳ ಪುನರುಜ್ಜೀವನ ಸಿದ್ಧಿಗೆ ಪೌರರ ಪ್ರಯತ್ನವೇ ಸಾಧಕವಾಗ ತಕ್ಕುದು; ಅಧಿಕಾರಸ್ಥರ ಪ್ರಯತ್ನವು ನಿಷ್ಕಳಂಕವಾಗಿ ನಡೆದರೂ ಸಫಲವಾಗುವುದು ಸಂದೇಹ. ಪೌರರೆಲ್ಲರೂ ಆ ಕಾರಣದಿಂದ ತಮ್ಮ ನೆರೆಹೊರೆಯ ಗ್ರಾಮಗಳ ಸ್ಥಿತಿಗತಿಗಳಲ್ಲಿ ಆದರವನ್ನು ವಹಿಸಿ ಶ್ರದ್ಧಾಭಕ್ತಿ ಗಳಿಂದ ಕಾರ್ಯನಿರತರಾಗಬೇಕು. ಡಾ॥ ಮಾನ್, ಸ್ಲೇಟರ್, ಕ್ಯಾಲ್ವರ್ಟ್ ಮುಂತಾದ ಅರ್ಥಶಾಸ್ತ್ರವಿದರು ಗ್ರಾಮಪರೀಕ್ಷೆಗಳನ್ನು ನಡೆಸಿದ ರೀತಿ ಯನ್ನು ತಿಳಿದು, ತಾವೂ ಅಂತಹ ಪರೀಕ್ಷೆಗಳನ್ನು ನಡೆಸಿ, ಸ್ಥಿತಿಗತಿಗಳ ಪೂರ್ಣ ಪರಿಚಯವನ್ನು ಪಡೆಯಬೇಕು.

ಗ್ರಾಮಕ್ಕೆ ಹೊರಟು ಸಹಕಾರ ತತ್ವಗಳನ್ನು ಕುರಿತೋ ನೈರ್ಮಲ್ಯ ರಕ್ಷಣೆಯನ್ನು ಕುರಿತೋ ಉಪನ್ಯಾಸಮಾಡಿದಲ್ಲಿ ಯಾವ ಮೇಲೂ ಸಂಭವಿಸುವುದಿಲ್ಲ. ಗ್ರಾಮಸ್ಥರಲ್ಲಿ ಸುಪ್ತವಾಗಿರುವ ಚೈತನ್ಯವು ಪುನಃ ಪ್ರಾಪ್ತಿಸುವಂತೆ ನೆರವೇರಿಸತಕ್ಕುದು ಗ್ರಾಮಸೇವೆಯ ಮುಖ್ಯೋದ್ದೇಶ.

ತಾತ್ಕಾಲಿಕವಾಗಿ ಒಂದೆರಡು ಕಷ್ಟಗಳನ್ನು ನಿವಾರಿಸಿದಲ್ಲಿ ಉಜ್ಜೀವನ ಸಿದ್ಧಿಯಾಗುವುದಿಲ್ಲ. ತಮ್ಮ ಜೀವನದ ಸುಖದುಃಖಗಳನ್ನು ತಾವೇ ಅನುಭವಿಸುತ್ತ ತಮಗೊದಗಬಹುದಾದ ಆಪತ್ತುಗಳನ್ನು ತಾವೇ ಪರಿಹರಿಸಿ ಕೊಳ್ಳಬಲ್ಲ ದೃಢಚೇತನರಾಗಿ ಗ್ರಾಮಸ್ಥರು ಪರಿಣಮಿಸಬೇಕು. ಕಷ್ಟ ಕಾಲದಲ್ಲಿ ಆತ್ಮಾವಲಂಬಿಗಳಾಗುವ ಚೈತನ್ಯವು ಅವರಲ್ಲಿಯೇ ಭದ್ರಗೊಳ್ಳ ಬೇಕು. ಇದೇ ನಿಜವಾದ ಗುರಿ.

**ಗೋಸಂರಕ್ಷಣೆ**

ಗ್ರಾಮೋದ್ಧಾರಕ್ಕೆ ಅನಿವಾರ್ಯ ಸಂಬಂಧವುಳ್ಳುದು ಪಶುರಕ್ಷಣೆ. ಗೋವುಗಳ ಉದ್ಧಾರವು ಗ್ರಾಮೋದ್ಧಾರದ ಅಂಶ ಮಾತ್ರ. ಆರ್ಯರು ಗೋಸಂರಕ್ಷಣೆಗೆ ಮಹತ್ವ ವನ್ನಾರೋಪಿಸಿದುದರಲ್ಲಿ ಯಥಾರ್ಥವುಂಟು; ಗೋವು ಸಮಾಜದ ಆರ್ಥಿಕಸ್ಥಿತಿಗೆ ಸೂಚಕವಾದುದು. ಗೋವುಗಳು ಪುಷ್ಟವಾಗಿದ್ದರೆ ದೇಶವೂ ಪುಷ್ಟವಾಗಿರುತ್ತದೆ; ಗೋವು ಬಡವಾಗಿದ್ದರೆ ದೇಶವೂ ಕ್ಷಾಮದ ಬೀಡಾಗಿರುತ್ತದೆ. ಭಾರತೀಯರಿಗೆ ಗೋಸಂರಕ್ಷಣೆಯ ವಿಷಯದಲ್ಲಿರುವಷ್ಟು ಉದಾತ್ತವಾದ ಸಂಪ್ರದಾಯವು ಇಡೀ ಪೃಥ್ವಿಯಲ್ಲಿ ಮತ್ತಾವ ಜನರಿಗೂ ಇಲ್ಲ. ಆದಾಗ್ಯೂ ಗೋಮಾತೆಯು ಭಾರತೀಯರ ದೆಸೆಯಿಂದ ಅನುಭವಿಸುವಷ್ಟು ಹಿಂಸೆಯನ್ನು ಮತ್ತಾವ ಜನರಿಂದಲೂ ಪಡೆಯುವುದಿಲ್ಲ. ಭಾರತೀಯರಷ್ಟು ಕ್ರೂರಿಗಳು ಇನ್ನೆಲ್ಲಿಯೂ ಇಲ್ಲ.

ಜನತೆಗೂ ಗೋಧನಕ್ಕೂ ತಾರತಮ್ಯವನ್ನು ಕಟ್ಟಿ ನೋಡುವಲ್ಲಿ 100 ಜನರಿಗೆ ಉರುಗ್ವೆ ದೇಶದಲ್ಲಿ 500, ಆರ್ಜೆಂಟೀನದಲ್ಲಿ 353, ಕೇಪ್ ಕಾಲೊನಿಯಲ್ಲಿ 120, ನ್ಯೂಸೀಲೆಂಡಿನಲ್ಲಿ 150, ಆಸ್ಟ್ರಿಯದಲ್ಲಿ 259, ಕೆನಡದಲ್ಲಿ 80, ಅಮೆರಿಕದಲ್ಲಿ 79, ಡೆನ್ಮಾರ್ಕಿನಲ್ಲಿ 74 ದನಗಳಿದ್ದರೆ ಭಾರತ ವರ್ಷದಲ್ಲಿ 100 ಜನರಿಗೆ 59 ಮಾತ್ರ ದನಗಳಿವೆ. ಇದರಿಂದ ಈ ದೇಶದ ಜನರಿಗೆ ಸಾಕಾಗುವಷ್ಟು ಪಶುಸಂಖ್ಯೆಯೇ ಇಲ್ಲವೆಂದು ಅನೇಕರು ಘಂಟಾಘೋಷವಾಗಿ ಹೇಳುತ್ತಾರೆ. ಮತ್ತೊಂದು ಕಡೆ ಮುಕ್ತಕಂಠ ದಿಂದ ಇತರರನೇಕರು ಭಾರತವರ್ಷದ ಯೋಗ್ಯತೆಗೆ ಮೀರಿದ ಸಂಖ್ಯೆಯ ದನಗಳಿವೆಯೆಂದು ಹೇಳುತ್ತಾರೆ. ಇರುವ ಪಶು ಸಂಖ್ಯೆಯು ದೇಶಕ್ಕೆ ಅತ್ಯಧಿಕವೇ ಅಥವಾ ಅತ್ಯಲ್ಪವೇ? ಅಧಿಕವೂ ಹೌದು, ಅಲ್ಪವೂ ಹೌದು.

ಜನರು ನಿರ್ಗತಿಕರಾಗಿ ಅಪಾಹಾರ ಭಕ್ತರಾಗಿ ಜೀವಶ್ರವಗಳಾಗಿರು ವಂತೆಯೇ ಪಶುಗಳೂ ಕೂಡ ಅಪಾಹಾರ ಸೇವನೆಯನ್ನು ಮಾಡುತ್ತ, ಶಕ್ತಿಗೆ ಮೀರಿದ ಕೆಲಸವನ್ನು ಮಾಡುತ್ತ, ರೋಗಪೀಡಿತಗಳಾಗಿ ಆಕಾರ ಹೀನವಾಗಿ ನಿಷ್ಪ್ರಯೋಜಕಗಳಾಗಿ ಭೂಭಾರವಾಗಿವೆ. ವ್ಯವಸಾಯದ ಭಾರವು ವಿಪರೀತವಾಗಿ ಪರಿಣಮಿಸಿದ ಕಾಲದಲ್ಲಿಯೇ ಪಶುಗಳ ಕರ್ತವ್ಯಭಾರವೂ ಅತ್ಯಧಿಕವಾಯಿತು. ಆರಂಬಗೆಲಸದಲ್ಲಿ ಹಿಂದೆ ಎಳೆಂಟು ಜೊತೆ ಎತ್ತುಗಳು ಮಾಡುತ್ತಿದ್ದ ಕೆಲಸವನ್ನು ಈಗ ಒಂದೇ ಜೊತೆ ಎತ್ತುಗಳು ನೆರವೇರಿಸಬೇಕಾಗಿದೆ. ಗೋಮಾತೆಯ ಗತಿಯೋ ಎಂದರೆ ಹೆಚ್ಚು ಹೆಚ್ಚು ಹಾಲನ್ನು ಹಿಂಡಿಕೊಳ್ಳುವುದಕ್ಕಾಗಿ ಕವಾಡಿಗರು ಚಿತ್ರವಿಚಿತ್ರವಾದ ಹಿಂಸೆಗಳನ್ನು ಕಂಡುಹಿಡಿಯುತ್ತಿರುವ ಸಂಗತಿಯನ್ನು ಸ್ಮರಿಸಬೇಕಾಗು ವುದು. ದೊಡ್ಡ ಪಟ್ಟಣಗಳಲ್ಲಿ ಹಾಲು ವ್ಯಾಪಾರಮಾಡುವವರು ಗೋವು ಗಳಿಗೆ ಕೊಡುವ ಹಿಂಸೆಯನ್ನು ಸ್ಮರಿಸಲಿಕ್ಕೇ ಅಸಹ್ಯವಾಗಿರುತ್ತದೆ. ಹಾಲು ಮೊಸರು ಬೆಣ್ಣೆ ತುಪ್ಪಗಳ ಬೆಲೆಯು ಏರುತ್ತ ಹೋದಹಾಗೆಲ್ಲ ಶಿಶು ಮರಣಗಳು ಹೆಚ್ಚಿದವು, ಜನರ ಆರೋಗ್ಯ ನಷ್ಟವಾಯಿತು, ಪದಾರ್ಥ ಶುದ್ಧಿಯು ಕೆಟ್ಟು ರೋಗಗಳಿಗೆ ಸಮಾರಾಧನೆಯ ಔತಣವು ಹೊರಟಂತೆ ನೆರವೇರಿತು. ಹಸುಗಳಿಗೆ ಆರೋಗ್ಯಕರವಾದ ಆಹಾರವು ಬೇಕು, ವ್ಯಾಯಾಮವು ಬೇಕು, ನಿಷ್ಕಲ್ಮಷವಾದ ವಾಸಸ್ಥಲವು ಬೇಕು, ಆಗಾಗ್ಗೆ ಚಿಕಿತ್ಸೆಯೂ ಬೇಕು. ಗೋಪೂಜೆ ಮಾಡುವ ನಮ್ಮ ದೇಶದಲ್ಲಿ ದನಗಳಿಗೆ ಪ್ರಾಪ್ತಿಯಾಗಿರತಕ್ಕುದು ಅಪಾಹಾರ, ಹೊಲಗಳಲ್ಲಿ ವಿಪರೀತ ಕೆಲಸ, ಹಾಲಿಗಾಗಿ ಚಿತ್ರಹಿಂಸೆ; ಇವುಗಳು ತಪ್ಪಿದರೆ ರಫ್ತಿನ ವ್ಯಾಪಾರದಲ್ಲಿ ಲಾಭ ತರುವ ಚರ್ಮಕ್ಕಾಗಿ ಕಟುಕನ ಕೊಡಲಿಯ ಏಟು. ಅವುಗಳಿಗೆ ಸಾಕಾದಷ್ಟು ಮೇವೆಂಬುದಿಲ್ಲ; ಪೋಷಣೆ ಸಂರಕ್ಷಣೆಗಳಲ್ಲಿ ಎಚ್ಚರಿಕೆಯೂ ಇಲ್ಲ, ಪರಿಜ್ಞಾನವೂ ಇಲ್ಲ. ಇದರ ಪರಿಣಾಮುವೇನೆಂದರೆ ತನ್ನ ಮಾಂಸವನ್ನು ಭಕ್ಷಿಸತಕ್ಕ ಜನರು ತನ್ನಲ್ಲಿ ತೋರುವ ಆದರ ವಿಶ್ವಾಸಗಳನ್ನು ಮೆಚ್ಚಿ ಕೊಂಡು ಗೋಮಾತೆಯು ತನ್ನ ಭಕ್ತರೆಂದು ಸಾಧಿಸುವ ಭಾರತೀಯರನ್ನು ನೀರವವಾಗಿ ನಿಂದಿಸುವಂತೆ ಇರುವ ಸ್ಥಿತಿ. ದೇಶದಲ್ಲಿ ಗೋಮಾಂಸಕ್ಕಾಗಿ ಗೋವಧೆಗಳಾಗುವುವೆಂಬುದು ವ್ಯರ್ಥ ಪ್ರಲಾಪ; ಗೋವಧೆಯಾಗುವುದು ಅದರ ತೊಗಲಿಗಾಗಿ, ಅದರ ಮಾಂಸಕ್ಕಲ್ಲ.

ಗೋಮಾತೆಯ ಉದ್ಧಾರ ಕಾರ್ಯದಲ್ಲಿ ಪ್ರಬಲವಾಗಿ ತೋರಿಕೊಳ್ಳುವ ಎಡರುಗಳು ದಾರಿದ್ರ್ಯವೊಂದು ಕಡೆ, ಅಜ್ಞತೆಯಿನ್ನೊಂದು ಕಡೆ. ಕೃಷಿಪ್ರಧಾನವಾದ ಭರತವರ್ಷದಲ್ಲಿ ಗೋರಾಶಿಯು ಹಾಲಿಗೆ ಮಾತ್ರವಲ್ಲದೆ ಕೃಷಿಕಾರ್ಯಕ್ಕೂ ಅತ್ಯವಶ್ಯ. ಜನತೆಯಲ್ಲಿ ಅಜ್ಞತೆಯು ಮೂರ್ಖತೆಯ ರೂಪವನ್ನು ತಾಳಬಹುದಾದ ಪರಿಸ್ಥಿತಿಯಲ್ಲಿ ಸರ್ಕಾರದವರಿಂದ ಮಾತ್ರವಲ್ಲ, ಯಾರಿಂದಲೂ ಕಾರ್ಯಸಿದ್ಧಿಯಾಗುವುದಿಲ್ಲ. ಪೌರರೆಲ್ಲರೂ ಈ ವಿಷಯದಲ್ಲಿ ಪ್ರಜ್ಞಾವಂತರಾಗಿ ಮೌಢ್ಯವನ್ನು ತೊಲಗಿಸಬೇಕು. ಆದರ್ಶಪ್ರಾಯಗಳಾದ ಡೈರಿಗಳನ್ನೂ, ಹೋರಿಗಳ ಕೊಟ್ಟಿಗೆಗಳನ್ನೂ, ಹದಮಾಡುವ ಕಾರ್ಖಾನೆಗಳನ್ನೂ ಸ್ಥಾಪಿಸಿ ಶಾಸ್ತ್ರೀಯವಾದ ರೀತಿಯಲ್ಲಿ ನಡೆಸುವುದಲ್ಲದೆ ವೃದ್ಧಪಶುಗಳಿಗಾಗಿ ವಿಶ್ರಾಂತಿ ಮಂದಿರಗಳನ್ನೂ ಏರ್ಪಡಿಸುವುದರಲ್ಲಿ ಪ್ರತಿ ಭಾರತೀಯನೂ ಭಕ್ತಿಯಿಂದ ಶ್ರಮಿಸತಕ್ಕದ್ದಾಗಿದೆ.

**ಆರ್ಥಿಕ ಉದ್ಧಾರ**

ಆರ್ಥಿಕ ಸ್ಥಿತಿಯ ಮೇಲ್ಮೆಯನ್ನು ಸಾಧಿಸುವ ಮಹತ್ಕಾರ್ಯಭಾರದಲ್ಲಿ ಗ್ರಾಮಗಳ ಪುನರುಜ್ಜೀವನವೂ ಗೋಸಂರಕ್ಷಣೆಯೂ ಅಂಶಗಳು. ಪ್ರಧಾನವಾಗಿಯೂ ಮೂಲವಾಗಿಯೂ ತೋರತಕ್ಕುದು ದಾರಿದ್ರ್ಯದ ಪರಿಹಾರ. ದೇಶದ ಬಡತನವು ತಗ್ಗಿದಂತೆ ಇತರ ಸಮಸ್ಯೆಗಳೂ ಸುಲಭವಾಗುವುವು; ಬಡತನವು ತೊಲಗಿದಂತೆ ಜನತೆಯ ಚೈತನ್ಯವು ಊರ್ಜಿತಗೊಳ್ಳುವುದು. ಆದರೆ ದಾರಿದ್ರ್ಯಕ್ಕೆ ಕಾರಣಭೂತವಾದ ಅಂಶಗಳನ್ನು ಪರೀಕ್ಷಿಸಿದಲ್ಲಿ ನಿವಾರಣೋಪಾಯವು ರಾಜಕೀಯ ಕ್ಷೇತ್ರದಲ್ಲಿ ಸಾಧಿತವಾಗಬೇಕಾದ ಅಂಶವು ಸ್ಪಷ್ಟವಾಗುವುದು. ದೇಶಭಕ್ತರಲ್ಲಿ ಪ್ರಮುಖರಾದವರು ಆ ಕಾರಣದಿಂದಲೇ ರಾಜಕೀಯ ರಂಗದಲ್ಲಿ ಉದ್ಯಮಿಗಳಾಗಿ

**ರಾಜಕೀಯ ಉದ್ಧಾರ**

ಆಡಳಿತವನ್ನು ರಾಷ್ಟ್ರೀಯವನ್ನಾಗಿ ಪರಿವರ್ತಿಸಲು ಯತ್ನಿಸುತ್ತಿರುವರು. ರಾಜಕೀಯ ಸಮಸ್ಯೆಗಳಲ್ಲಿ ವಿಶೇಷವಾಗಿ ಲೀನರಾದ ಮನಸ್ಸುಳ್ಳವರಾಗಿದ್ದಾಗ್ಯೂ ಅವರು ಭಾರತೀಯ ಜನಜೀವನದಲ್ಲಿ ನೆಲೆಸಿರುವ ದೋಷಗಳನ್ನು ಪದೇ ಪದೇ ಉದ್ಘಾಟಿಸುತ್ತಲೇ ಇರುತ್ತಾರೆ. ಮೇಲ್ಮೆಯು ಸರ್ವಾಂಗಗಳಲ್ಲಿಯೂ ಶೋಭಿಸಿದರೆ ಪೂರ್ಣವೂ ಚೈತನ್ಯದಾಯಕವೂ ಆದುದೇ ವಿನಾ

ಯಾವುದೋ ಒಂದೆರಡಂಗಗಳಲ್ಲಿ ಮಾತ್ರ ಕಾಣಿಸಿಕೊಂಡರೆ ವಿಹಿತವಲ್ಲ. ಪ್ರಗತಿಯು ಸರ್ವತೋಮುಖವಾಗಿ ತೋರಿಕೊಳ್ಳತಕ್ಕದ್ದು. ಆದ್ದರಿಂದ ರಾಷ್ಟ್ರಭಕ್ತರೆನಿಸಿದವರು ತಮ್ಮ ಕರ್ತವ್ಯಕ್ರಮದಲ್ಲಿ ದಾರಿದ್ರ್ಯ ಪರಿಹಾರ, ಅಸ್ಪೃಶ್ಯತಾ ನಿವಾರಣೆ, ಪರಸ್ಪರ ಸೌಹಾರ್ದ, ಮದ್ಯಪಾನ ನಿಷೇಧ ಮುಂತಾದವುಗಳನ್ನು ಸೇರಿಸಿಕೊಂಡಿದ್ದಾರೆ.

ಸಂಸ್ಕೃತಿ ಸಮಸ್ಯೆ

ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಮಾತ್ರವಲ್ಲದೆ ಬೇರೊಂದು ಕ್ಷೇತ್ರದಲ್ಲಿಯೂ ಆಧಾರಭೂತವಾದ ಕರ್ತವ್ಯ ರಾಶಿಯುಂಟು. ಜೀವನದ ಪ್ರತಿ ರಂಗದಲ್ಲಿಯೂ ಭಾರತೀಯರಾದ ನಮಗೆ ಉತ್ಕೃಷ್ಟವಾದ ಸಂಪ್ರದಾಯವು ಪೂರ್ವಾರ್ಜಿತವಾಗಿರುವುದು ; ಆದರೆ ಪ್ರತಿ ರಂಗದಲ್ಲಿಯೂ ಪೂರ್ವ ಸಂಸ್ಕೃತಿ ಸಂಪ್ರದಾಯಗಳು ಶಿಥಿಲವಾಗುತ್ತಲಿವೆ. ಪ್ರಚಂಡ ವೇಗದಿಂದ ಮೂರು ಖಂಡಗಳಲ್ಲಿ ವ್ಯಾಪಿಸಿದ ಇಸ್ಲಾಮಿಾ ಸಂಸ್ಕೃತಿಗೆ ವಶವಾಗದೆ ಭದ್ರವಾಗಿ ನಿಲ್ಲುವ ಚೈತನ್ಯವನ್ನು ಹಿಂದೆ ತೋರಿದುದು ಭಾರತೀಯ ಸಂಸ್ಕೃತಿಯೊಂದೇ. ಅಂತಹ ಸಂಸ್ಕೃತಿಯೆದುರಿಗೆ ಔದ್ಯೋಗಿಕ ಕಲ್ಲೋಲವನ್ನೂ ಪ್ರಾತಿನಿಧ್ಯ ರಾಷ್ಟ್ರವ್ಯವಹಾರವನ್ನೂ ಹೊತ್ತುಕೊಂಡು ಬಂದ ಪಾಶ್ಚಾತ್ಯ ಸಂಸ್ಕೃತಿಯು ಸನ್ನದ್ಧವಾಗಿ ಆಕ್ರಮಣ ಪ್ರಯತ್ನವನ್ನು ತೋರುತ್ತಲಿದೆ. ಪ್ರಚಂಡವಾದ ಪಟುತ್ವ ದಿಂದೊಡಗೂಡಿದ ಪಾಶ್ಚಾತ್ಯ ಸಂಸ್ಕೃತಿಯ ಎದುರಿನಲ್ಲಿ ಇಂದು ಭಾರತೀಯ ಸಂಸ್ಕೃತಿಯು ತಲೆಬಾಗಿ ಮೂರ್ಖತೆಯನ್ನು ವಹಿಸಿದಂತಿದೆ. ಸಾಂಸ್ಕೃತಿಕ ರಂಗದ ಸಮಸ್ಯೆಯು ಭಾರತೀಯರಿಗೆ ವಿಷಮವಾದುದು, ದುರ್ಗ್ರಾಹ್ಯ ವಾದುದು. ಪಾಶ್ಚಾತ್ಯ ಸಂಸ್ಕೃತಿಯನ್ನು ಭಾರತೀಯರು ಅವಲಂಬಿಸು ವುದೇ? ಪುರಾತನ ಕಾಲದಿಂದ ನಡೆದುಬಂದಿರುವ ಪರಿಪಾಕವು ನಷ್ಟ ವಾಗುವುದು ಮೇಲೇ? ಈ ಪ್ರಶ್ನೆಗಳಿಗೆ ಸಮರ್ಪಕವಾಗಿ ಸಮಾಧಾನವನ್ನು ತೋರಲು ಪ್ರಬುದ್ಧರಾದವರ ತೇಜಸ್ಸೆಲ್ಲವೂ ನಿಯುಕ್ತವಾಗಬೇಕು. ಭಾರತೀಯರ ಪುರಾ ಸಾಧಿತ ಪರಿಪಾಕವು ಉಳಿಯಬೇಕಾದ ಪಕ್ಷದಲ್ಲಿ ಉಳಿಯುವ ಉಪಾಯವಾವುದು? ಅವಿಭಕ್ತ ಕುಟುಂಬದ ವ್ಯವಸ್ಥೆಯು ಹೇಗಾಗಬೇಕು? ವರ್ಣಭೇದ ಜಾತಿಭೇದಗಳಿಗೆ ಗತಿಯೇನು? ಭಾರತೀಯ

ಸಂಸ್ಕೃತಿಗೆ ಜನಸ್ವಾಮ್ಯ ತತ್ವವು ಯಾವ ರೀತಿಯಲ್ಲಿ ಹೊಂದಿಕೊಳ್ಳಬೇಕು? ಇಂತಹ ಗುರುತರವಾದ ವಿಷಯಗಳ ಪರ್ಯಾಲೋಚನೆಯಲ್ಲಿ ಭಾರತೀಯರೆಲ್ಲರೂ ಆಸಕ್ತರಾಗಬೇಕು.

**ತರುಣರ ಸುಯೋಗ**

ಹಿಂದೆ ಮಂದರಾದ್ರಿಯನ್ನು ಎತ್ತಿಕೊಂಡು ಬಂದ ದೇವತೆಗಳಿಗಿದ್ದಂತೆ ಇಂದಿನ ಭಾರತೀಯರಿಗೆ ಅಮೋಘವಾದ ಕರ್ತವ್ಯ ರಾಶಿಯೆದುರಾಗಿರುವುದು. ಕರ್ತವ್ಯವು ಅಸಾಧ್ಯವೆಂದುಕೊಳ್ಳುವುದು ಹೇಡಿಗಳ ಸಹಜ ಗುಣ. ಆ ಕರ್ತವ್ಯನಿರ್ವಾಹದಲ್ಲಿ ಅವಿಚಲವಾದ ದೇಶಭಕ್ತಿಯೂ ತ್ಯಾಗಾತುರತೆಯೂ ಅವಶ್ಯವಲ್ಲದೆ ಸವ್ಯವಾದ ಶಿಷ್ಟಿಯೂ ಅವಶ್ಯವಾದುದು. ಸಾಧಾರಣವಾಗಿ ಭಾರತೀಯರಲ್ಲಿ ಸಮುದಾಯ ವ್ಯವಸ್ಥೆಯಾಗಲಿ, ಸಮುದಾಯ ಚೈತನ್ಯವಾಗಲಿ ಇಲ್ಲದಿರುವುದೇ ಮುಖ್ಯದೋಷವೆಂದು ಕೇಳುತ್ತೇವೆ. ಸಮೂಹಬಂಧ ಅಥವಾ ವ್ಯೂಹಶಿಷ್ಟಿಯ ಸಾಧನೆಯು ಪೂರ್ವವಯಸ್ಸಿನಲ್ಲಿ ಸುಲಭಸಾಧ್ಯವಾದುದು. ಪ್ರಸಿದ್ಧವಾದ ವಾಟರ್ಲೂ ಕದನದಲ್ಲಿ ಇಂಗ್ಲಿಷರ ಜಯಕ್ಕೆ ಸಾಧಕವಾದ ವ್ಯೂಹಶಿಷ್ಟಿಯು ಇಂಗ್ಲಂಡಿನ ಶಿಕ್ಷಣ ಕ್ಷೇತ್ರಗಳಲ್ಲಿ ಪ್ರಾಪ್ತವಾದುದೆಂಬುದನ್ನು "ವಾಟರ್ಲೂ ಯುದ್ಧವನ್ನು ನಾವು ನಮ್ಮ ಶಾಲೆಗಳ ಕ್ರೀಡಾಕ್ಷೇತ್ರಗಳಲ್ಲಿಯೇ ಗೆದ್ದೆವು" ಎಂಬ ಸೂತ್ರದಿಂದ ಸೂಚಿಸುವುದುಂಟು. ವ್ಯೂಹಶಿಷ್ಟಿಯೇ ಬಲಗಳಲ್ಲಿ ಬಲ. ಆದ್ದರಿಂದ ಭಾರತೀಯ ತರುಣರು ಆಜ್ಞಾದಾನ ನಿಪುಣರಾಗಲು ಆಜ್ಞಾಪಾಲನ ದಕ್ಷರಾಗಬೇಕು; ಅಧಿಕಾರ ಗೌರವಗಳಿಗೆ ಆಸೆಪಡುವ ಮೊದಲು ಕರ್ತವ್ಯನಿಷ್ಠರಾಗಬೇಕು. ಯಾವ ಜನಾಂಗಕ್ಕೂ ಪ್ರಾಪ್ತಿಯಾಗದ ಕರ್ತವ್ಯರಾಶಿಯು ಅಮೋಘ ರೂಪದಲ್ಲಿ ಭಾರತೀಯ ತರುಣರಿಗೆ ಲಭಿಸಿದೆ. ರಸಾತಲಕ್ಕಿಳಿದ ಮೇರುಮಂದರಾದ್ರಿಗಳನ್ನು ಉದ್ಧರಿಸುವ ಮಹತ್ಕಾರ್ಯವೂ ಜೀವನ ಸಿದ್ಧಿಯೂ ಅವರ ಪಾಲಿಗೊದಗಿರುವ ಪ್ರಾಪ್ತಿ.

**ಆದರ್ಶ ಭಾರತ**

ಉದ್ಧೃತವಾದ ಭಾರತವರ್ಷದ ರೂಪವು ಹೇಗಿರತಕ್ಕುದೆಂದು ಒಂದಾನೊಂದು ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿಯವರು ಚಿತ್ರಿಸಿದ ಪರಿಯನ್ನು ಅವರೆಲ್ಲರೂ ಗ್ರಹಿಸಿ ನಿತ್ಯ ಸ್ಮರಿಸತಕ್ಕುದು:—

"ಎಲ್ಲ ಬಗೆಯ ದಾಸ್ಯದಿಂದಲೂ ಆಶ್ರಯಾನುಗ್ರಹಗಳಿಂದಲೂ ಭಾರತವನ್ನು ಬಿಡುಗಡೆ ಮಾಡುವಂತಹ, ಮತ್ತು ಅವಶ್ಯ ತೋರಿದಾಗ ಪಾಪವನ್ನೂ ಆಚರಿಸಲು ಸ್ವಾತಂತ್ರ್ಯದ ಅಧಿಕಾರವನ್ನು ಎರೆಯುವಂತಹ ರಾಷ್ಟ್ರಬಂಧದ ಪ್ರಾಪ್ತಿಗಾಗಿ ನಾನು ಯತ್ನಿಸುತ್ತೇನೆ. ಇದು ತಮ್ಮ ದೇಶವೆಂದೂ ಇದರ ವ್ಯವಸ್ಥೆಯಲ್ಲಿ ತಮ್ಮ ಧ್ವನಿಗೆ ಗೌರವವುಂಟೆಂದೂ ಕಡು ಬಡವರಾದವರು ಕೂಡ ಭಾವಿಸಲು ಯೋಗ್ಯವಾದ ಭಾರತಕ್ಕಾಗಿ, ಉತ್ತಮ ನೀಚವರ್ಗಗಳೆಂಬ ಭೇದವೇ ಇಲ್ಲದ ಭಾರತಕ್ಕಾಗಿ, ಎಲ್ಲ ಜಾತಿಗಳವರೂ ಪೂರ್ಣ ಸೌಹಾರ್ದದಿಂದ ಬದುಕಿ ಬಾಳಬಲ್ಲ ಭಾರತಕ್ಕಾಗಿ ನಾನು ಶ್ರಮಿಸುತ್ತೇನೆ. ಅಂತಹ ಭಾರತದಲ್ಲಿ ಅಸ್ಪೃಶ್ಯತೆಯ ಆಕ್ರೋಶಕ್ಕಾಗಲಿ ಮಾದಕಪದಾರ್ಥಗಳ ಸೇವಾರೂಪವಾದ ಅಭಿಶಾಪಕ್ಕಾಗಲಿ ಆಸ್ಪದ ವಿರುವುದಿಲ್ಲ. ಪುರುಷರಿಗಿರಬಹುದಾದ ಅಧಿಕಾರ ಗೌರವಗಳು ತತ್ಸಮಾಣವಾಗಿ ಸ್ತ್ರೀಯರಿಗೂ ಸಲ್ಲುವುವು. ಜಗತ್ತಿನ ಇತರ ಕ್ಷೇತ್ರಗಳವರನ್ನು ಆಕ್ರಮಿಸುವುದೂ ಇಲ್ಲ, ಇತರರಿಂದ ಆಕ್ರಾಂತರಾಗುವುದೂ ಇಲ್ಲವಾದುದರಿಂದ ನಾವು ಇತರರೆಲ್ಲರೊಡನೆ ಶಾಂತಿಯಿಂದ ವರ್ತಿಸುತ್ತ ಅತ್ಯಲ್ಪವೆನಿಸಬಹುದಾದ ಸೈನ್ಯವನ್ನು ಕಟ್ಟಿಕೊಂಡಿರುತ್ತೇವೆ. ಬಹುಸಂಖ್ಯಾಕರಾದ ಮುಗ್ಧಜೀವಿಗಳ ಯೋಗಕ್ಷೇಮಕ್ಕೆ ವಿರುದ್ಧವಲ್ಲದಿದ್ದ ಪಕ್ಷದಲ್ಲಿ ದೇಶೀಯ ವಿದೇಶೀಯವೆಂಬ ಭೇದಭಾವವಿಲ್ಲದಂತೆ ಇತರರ ಇಷ್ಟಾರ್ಥಗಳನ್ನು ಗೌರವಿಸುತ್ತೇವೆ. ದೇಶೀ ಪರದೇಶೀ ಎಂಬ ಭೇದಬುದ್ಧಿಯೇ ನನಗೆ ಅನಿಷ್ಟವಾದುದು. ಇದು ನನ್ನ ಕನಸಿನ ಭಾರತ."

ಈ ಕನಸನ್ನು ಮೂರ್ತಿಗೊಳಿಸುವುದು ಭಾರತೀಯರ ಕರ್ತವ್ಯ. ಭವ್ಯವಾಗಿ ತೋರಬಹುದಾದ ಆ ಮೂರ್ತಿಯು ಭಾರತೀಯ ಪೌರರ ಕರ್ತವ್ಯದಕ್ಷತೆಯಿಂದಲೇ ಸಿದ್ಧಿಸಬೇಕು.

## VI. ಅನುಬಂಧ

# 1. ಕೆಲವು ಮುಖ್ಯ ಲೆಕ್ಕಗಳು

| | | |
|---|---|---|
| ಪೃಥ್ವಿಯ ಒಟ್ಟು ವಿಸ್ತಾರ .. .. | 19,65,00,000 | ಚದರ ಮೈಲಿಗಳು |
| ,, ಭೂಭಾಗದ ವಿಸ್ತಾರ .. | 5,55,00,000 | ,, |
| ಒಟ್ಟು ಮಾನವರಾಶಿಯ ಸಂಖ್ಯೆ (1931) .. | 202,50,00,000 | |

| ಖಂಡಗಳ ವಿವರ | ವಿಸ್ತಾರ | ಜನಬಾಹುಳ್ಯ |
|---|---|---|
| ಏಷ್ಯಾ .. .. .. | 1,70,00,000 | 101,30,00,000 |
| ಆಫ್ರಿಕ .. .. .. | 1,15,00,000 | 47,50,00,000 |
| ಉತ್ತರ ಅಮೆರಿಕ .. .. | 80,00,000 | 21,00,00,000 |
| ದಕ್ಷಿಣ ಅಮೆರಿಕ .. .. | 6,80,00,000 | |
| ಯೂರೊಪ್ .. .. | 37,50,000 | 14,30,00,000 |
| ಓಷಿಯಾನಿಯ .. .. | 34,50,000 | 85,00,000 |
| ಧ್ರುವ ಪ್ರದೇಶಗಳು .. .. | 50,00,000 | .. |

## ಮಾನವರಾಶಿಯ ವಿಭಾಗಗಳು

| ವರ್ಣ ಭೇದ | | ಧರ್ಮ ಭೇದ | |
|---|---|---|---|
| ಕಕೇಷಿಯನ್ .. | 72,50,00,000 | ಈಸಾಯಿ .. | 68,20,00,000 |
| ಮಂಗೋಲಿಯನ್ .. | 68,00,00,000 | ಬೌದ್ಧ .. | 15,00,00,000 |
| ಸೆಮಿಟಿಕ್ .. | 10,00,00,000 | ಕಾಂಪೂಷಿ, ಟೋಯಿ | 35,00,00,000 |
| ನೀಗ್ರೊ, ಬಂಟೂ .. | 21,00,00,000 | ಹಿಂದೂ .. | 23,90,00,000 |
| ಮಲಯ .. | 10,45,00,000 | ಇಸ್ಲಾಮಿ .. | 20,90,00,000 |
| ತಾಮ್ರವರ್ಣ (ಅಮೆರಿಕ) | 3,00,00,000 | ಬಲಿಪೂಜಕ .. | 13,50,00,000 |

## ದೇಶಗಳ ಬಾಹುಳ್ಯ

| | | |
|---|---|---|
| 1. ಚೀನಾ .. .. .. .. | 42·0 | ಕೋಟಿ |
| 2. ಭಾರತವರ್ಷ .. .. .. | 35·3 | ,, |
| 3. ಸೋವಿಯೆಟ್ ರಷ್ಯಾ .. .. .. | 13·8 | ,, |
| 4. ಸಂಯುಕ್ತ ಸಂಸ್ಥಾನಗಳು (ಅಮೆರಿಕ) .. .. | 13·7 | ,, |
| 5. ಜಪಾನ್ .. .. .. .. | 8·4 | ,, |
| 6. ಜರ್ಮನಿ .. .. .. .. | 6·3 | ,, |
| 7. ಡಚ್ ಇಂಡೀಸ್ .. .. .. | 6·0 | ,, |
| 8. ಸಂಯುಕ್ತ ರಾಜ್ಯ .. .. .. | 4·4 | ,, |
| 9. ಬ್ರಸಿಲ್ .. .. .. .. | 4·0 | ,, |

| | | |
|---|---|---|
| 10. ಪೋಲಂಡ್ .. .. .. .. | 3·2 | ಕೋಟಿ |
| 11. ಸ್ಪೈನ್ .. .. .. .. | 2·2 | ,, |
| 12. ಕೊರಿಯ .. .. .. .. | 1·9 | ,, |

## ಸಾಮ್ರಾಜ್ಯಗಳು (1934ರಲ್ಲಿ ಸರಿಸುಮಾರು)

| | ಪ್ರಜಾಸಂಖ್ಯೆ | |
|---|---|---|
| | ಲಕ್ಷಗಳು | ಲಕ್ಷಗಳು |
| ಬ್ರಿಟಿಷ್ : | | |
| ಸಂಯುಕ್ತ ರಾಜ್ಯ .. .. .. .. | | 4,60 |
| ಸ್ವನಿರ್ವಾಹಪ್ರಾಪ್ತಿಯುಳ್ಳ ಡುಮಿನಿಯನ್ನುಗಳು : | | |
| ಐರಿಷ್ ಫ್ರೀ ಸ್ಟೇಟ್ .. .. | 30 | |
| ಕೆನಡ .. .. .. | 1,05 | |
| ನ್ಯೂಫೌಂಡ್ಲೆಂಡ್ .. .. | 3 | |
| ಆಸ್ಟ್ರೇಲಿಯ .. .. .. | 65 | |
| ನ್ಯೂಸೀಲಂಡ್ .. .. .. | 15 | |
| ಸೌತ್ ಆಫ್ರಿಕ .. .. .. | 83 | |
| | ——— | 3,01 |
| ಭಾರತ ಸಾಮ್ರಾಜ್ಯ : | | |
| ಬ್ರಿಟಿಷ್ ವಿಭಾಗ .. .. | 27,40 | |
| ದೇಶೀಯ ಸಂಸ್ಥಾನಗಳು .. .. | 8,20 | |
| | ——— | 35,60 |
| ಇತರ ಕ್ಷೇತ್ರಗಳು : | | |
| ಆಫ್ರಿಕ .. .. .. | 4,20 | |
| ಅಮೆರಿಕ .. .. .. | 40 | |
| ಏಷ್ಯ .. .. .. | 1,12 | |
| ಯೂರೋಪ್ .. .. .. | 3 | |
| ಓಷಿಯಾನಿಯ .. .. .. | 4 | |
| | ——— | 6,00 |
| ದತ್ತ ಭುಕ್ತಿಗಳು : | | |
| ಸಂಯುಕ್ತ ರಾಜ್ಯಕ್ಕೆ .. .. | 75 | |
| ಡುಮಿನಿಯನ್ನುಗಳಿಗೆ .. .. | 13 | |
| | ——— | 90 |
| ಒಟ್ಟು .. | | 50,10 |

| | ಸ್ವದೇಶ | ಕಾಲೊನಿ | ದತ್ತಭುಕ್ತಿ | ಒಟ್ಟು ಲಕ್ಷ |
|---|---|---|---|---|
| ಫ್ರಾನ್ಸ್ .. .. | 420 | 590 | 60 | 1,070 |
| ಹಾಲಂಡ್ .. .. | 80 | 620 | .. | 700 |
| ಜಪಾನ್ .. .. | 660 | 280+ಮಂಚೂರಿಯ | 250 | 1,190 |
| ಸಂಯುಕ್ತ ಸಂಸ್ಥಾನ .. | 1,250 | 150 | .. | 1,400 |
| ಬೆಲ್ಜಿಯಂ .. .. | 80 | 100 | 40 | 220 |
| ಪೋರ್ಚುಗಲ್ .. | 70 | 80 | .. | 150 |
| ಇಟಲಿ .. .. | 420 | 20 | .. | 440 |
| ಸ್ಪೈನ್ .. .. | 240 | 10 | .. | 250 |

## ಬ್ರಿಟಿಷ್ ಸಮುದಾಯಬಂಧ

| | | ವಿಸ್ತಾರ ಚ. ಮೈ. | ಜನಸಂಖ್ಯೆ |
|---|---|---|---|
| ಗ್ರೇಟ್ ಬ್ರಿಟನ್ ಮತ್ತು ಉತ್ತರ ಐರ್ಲಂಡ್ | .. | 94,633 | 4,42,00,000 |
| ಯೂರೋಪಿನಲ್ಲಿ .. .. | .. | 27,125 | 33,99,000 |
| ಏಷ್ಯ (ದೇಶೀಯ ಸಂಸ್ಥಾನಗಳನ್ನು ಬಿಟ್ಟು) | .. | 21,26,263 | 33,26,50,000 |
| ಆಫ್ರಿಕ .. .. .. | .. | 38,20,274 | 5,03,97,000 |
| ಅಮೆರಿಕ .. .. .. | .. | 40,08,214 | 1,11,42,000 |
| ಆಸ್ಟ್ರೇಲೇಷ್ಯ .. .. | .. | 32,78,917 | 77,95,000 |
| ಒಟ್ಟು | .. | 1,33,55,426 | 44,95,83,000 |
| ಬ್ರಿಟಿಷ್ ದ್ವೀಪಗಳ ಲೆಕ್ಕ : | | | |
| ಇಂಗ್ಲಂಡ್ .. .. | .. | 50,874 | 3,77,89,738 |
| ವೇಲ್ಸ್ .. .. | .. | 7,466 | 21,58,193 |
| ಸ್ಕಾಟ್ಲಂಡ್ .. .. | .. | 30,405 | 48,42,554 |
| ಮಾನ್ ದ್ವೀಪ .. .. | .. | 221 | 49,338 |
| ಚಾನೆಲ್ ದ್ವೀಪಗಳು .. | .. | 75 | 93,061 |
| ಒಟ್ಟು | .. | 89,041 | 4,49,32,884 |
| ಉತ್ತರ ಐರ್ಲಂಡ್ .. .. | .. | 5,592 | 12,56,561 |
| ಡುಮಿನಿಯನ್ನುಗಳ ಲೆಕ್ಕ : | | | |
| ಐರಿಷ್ ಫ್ರೀ ಸ್ಟೇಟ್ .. .. | .. | 27,000 | 29,72,000 |
| ಸೌತಾಫ್ರಿಕ ಯೂನಿಯನ್ .. | .. | 4,72,347 | 69,29,000 |
| ಕೆನಡಾ ಡುಮಿನಿಯನ್ .. | .. | 37,29,665 | 1,03,77,000 |
| ನ್ಯೂಫೌಂಡ್ಲಂಡ್ ಡುಮಿನಿಯನ್ | .. | 1,62,734 | 2,77,000 |
| ಆಸ್ಟ್ರೇಲಿಯನ್ ಕಾಮನ್ವೆಲ್ತ್ | .. | 29,74,581 | 54,36,000 |
| ನ್ಯೂಸೀಲಂಡ್ ಡುಮಿನಿಯನ್ | .. | 1,04,751 | 15,25,000 |
| ಭಾರತ ಸಾಮ್ರಾಜ್ಯ .. .. | .. | 18,08,679 | 35,28,37,778 |

# ಭಾರತವರ್ಷ

| | | | |
|---|---|---|---|
| ಒಟ್ಟು ವಿಸ್ತಾರ | .. .. .. | | 18,08,679 ಚದರ ಮೈಲಿಗಳು |
| ಜನಸಂಖ್ಯೆ | .. .. | 35,28,37,778 | 18,18,28,923 ಪುರುಷರು<br>17,10,08,855 ಸ್ತ್ರೀಯರು |
| ಬ್ರಿಟಿಷ್ ವಿಭಾಗ | .. 10,96,171 ಚ. ಮೈ. | ; ಜನಬಲ .. | 27,15,26,933 |
| ದೇಶೀಯ ವಿಭಾಗ | .. 7,12,508 | ,, ,, .. | 8,13,10,845 |
| ಪಟ್ಟಣಗಳು | .. 2,575 | ಗ್ರಾಮಗಳು .. | 6,96,831 |
| ಪಟ್ಟಣಿಗರು | .. 3,89,85,427 | ಗ್ರಾಮಸ್ಥರು .. | 31,38,52,351 |
| ,, | .. 11% | ,, .. | 89% |

ಲಕ್ಷ ಜನಸಂಖ್ಯೆಯುಳ್ಳ ನಗರಗಳು 38 ಮಾತ್ರ.

ಭಾರತೀಯರಲ್ಲಿ ಪಟ್ಟಣಿಗರು 11%, ಫ್ರಾನ್ಸಿನಲ್ಲಿ 49%, ಉತ್ತರ ಐರ್ಲಂಡಿನಲ್ಲಿ 50·8%, ಕನಡದಲ್ಲಿ 53·7%, ಸಂಯುಕ್ತ ಸಂಸ್ಥಾನಗಳಲ್ಲಿ 56·2%, ಇಂಗ್ಲಂಡ್ ಮತ್ತು ವೇಲ್ಸಿನಲ್ಲಿ 80%.

ಜನ ವಿಭಾಗ—

| ಸಾಮಾನ್ಯ | | (ಹಿಂದೂ ಎನಿಸಿದವರಲ್ಲಿ) | |
|---|---|---|---|
| ಹಿಂದೂ .. | 23,91,95,140 | ಬ್ರಾಹ್ಮಣರು .. | 1,52,37,452 |
| ಮುಸ್ಲಿಂ .. | 7,76,77,545 | ಬ್ರಾಹ್ಮಣೇತರರು .. | 17,11,90,624 |
| ಸಿಕ್ಖ .. | 43,35,771 | ಹರಿಜನರು .. | 5,02,50,347 |
| ಪಾರ್ಸೀ .. | 1,09,752 | ಜಾತಿ ಕಟ್ಟಿಲ್ಲದವರು .. | 18,83,464 |
| ಈಸಾಯಿ .. | 62,96,763 | ಅಜ್ಞಾತ ಜಾತಿಗಳವರು | 60,715 |
| ಬೌದ್ಧ .. | 1,27,86,806 | ಈಸಾಯಿ ವರ್ಗದಲ್ಲಿ | |
| ಜೈನ .. | 12,52,105 | ಐರೋಪ್ಯರೆನಿಸಿದವರು | 1,68,134 |
| ಯೆಹುದೀ .. | 24,141 | ಆಂಗ್ಲೊ ಇಂಡಿಯನ್ | 1,38,395 |
| ಕುಲಧರ್ಮವನ್ನೇ ಉಳ್ಳವರು .. | 82,80,347 | | |

ಭಾಷಾನುಸಾರ

| | | | |
|---|---|---|---|
| ಹಿಂದೀ (ಪಡುವಣ) | 6,36,27,043 | ಬಂಗಾಳಿ .. | 5,30,37,841 |
| ,, (ಮೂಡಣ) | 4,13,63,439 | ತೆಲುಗು .. | 2,63,74,000 |
| | ———— | ಮರಾಠಿ .. | 2,08,90,000 |
| | 10,49,90,482 | ತಮಿಳು .. | 2,01,77,593 |

| | | | | | |
|---|---|---|---|---|---|
| ಪಂಜಾಬಿ | .. | 1,57,25,193 | ಮಲೆಯಾಳ | .. | 91,01,440 |
| ರಾಜಸ್ಥಾನಿ | .. | 1,26.83,173 | ಪಹಾಡೀ (ಪಡುವಣ) | | 23,25,646 |
| ಕನ್ನಡ | .. | 1,11,96,103 | ಭಿಲ್ಲೀ | .. | 21,85,876 |
| ಗುಜರಾಥಿ | .. | 1,06,33,861 | ಅಸ್ಸಾಮಿ | .. | 19,97,314 |

| | | | |
|---|---|---|---|
| ಸಂಸ್ಕೃತಜನ್ಯವಾದ ದೇಶಭಾಷೆಗಳನ್ನಾಡುವವರು | .. | .. | 25,74,88,000 |
| ದ್ರಾವಿಡ ಭಾಷೆಗಳನ್ನಾಡುವವರು .. | .. | .. | 7,16,42,000 |
| ಇಂಗ್ಲಿಷ್ ಭಾಷೆಯನ್ನಾಡುವವರು .. | .. | .. | 3,19,000 |

## ಭಾರತೀಯ ಭಾಷೆಗಳ ಪರಸ್ಪರ ಪ್ರಮಾಣ

| | | | | | |
|---|---|---|---|---|---|
| ಹಿಂದೀ (ಪಡುವಲು) | 10,000ದಲ್ಲಿ | .. | .. | 2,041 | ಮಾತನಾಡುವವರು |
| ಬಂಗಾಳಿ | ,, | .. | .. | 1,525 | ,, |
| ಬಿಹಾರಿ | ,, | .. | .. | 797 | ,, |
| ತೆಲುಗು | ,, | .. | .. | 752 | ,, |
| ಮರಾಠಿ | ,, | .. | .. | 596 | ,, |
| ತಮಿಳು | ,, | .. | .. | 582 | ,, |
| ಪಂಜಾಬಿ | ,, | .. | .. | 452 | ,, |
| ರಾಜಸ್ಥಾನೀ | ,, | .. | .. | 397 | ,, |
| ಕನ್ನಡ | ,, | .. | .. | 320 | ,, |
| ಗುಜರಾಥಿ | ,, | .. | .. | 310 | ,, |
| ಉರಿಯ | ,, | .. | .. | 319 | ,, |
| ಬರ್ಮಿ | ,, | .. | .. | 253 | ,, |
| ಮಲೆಯಾಳ | ,, | .. | .. | 261 | ,, |
| ಲಂಡಾ (ಪಂಜಾಬಿನ ಪಡುವಣ) | | .. | .. | 244 | ,, |
| ಪೇರ್ವಾರಿ | ,, | .. | .. | 115 | ,, |
| ಸಿಂಧೀ | ,, | .. | .. | 114 | ,, |
| ಭೀಲೀ | ,, | .. | .. | 63 | ,, |
| ಅಸ್ಸಾಮಿ | ,, | .. | .. | 57 | ,, |
| ಪಹಾಡೀ | ,, | .. | .. | 66 | ,, |
| ಗೊಂಡೀ | ,, | .. | .. | 53 | ,, |
| ಪಷ್ಟು | ,, | .. | .. | 47 | ,, |
| ಹಿಂದೀ (ಮೂಡಲು) | ,, | .. | .. | 224 | ,, |
| ಕಾಶ್ಮೀರೀ | ,, | .. | .. | 41 | ,, |
| ಇತರ ಭಾಷೆಗಳು | ,, | .. | .. | 371 | ,, |

## ಅಕ್ಷರಸ್ಥರ ಲೆಕ್ಕ

| | |
|---|---|
| 5 ವರ್ಷಗಳಿಗೆ ಮೇಲ್ಪಟ್ಟ ಜನಸಂಖ್ಯೆ .. .. | 29,63,01,570 |
| ಅಕ್ಷರಸ್ಥರು .. .. .. | 2,81,38,856 |
| ಇಂಗ್ಲಿಷ್ ಅಕ್ಷರಸ್ಥರು .. .. .. | 36,51,350 |
| ನಿರಕ್ಷರಸ್ಥರು .. .. .. | 26,81,62,714 |

ಜನಸಂಖ್ಯೆಯ ಪ್ರತಿ 1,000ಕ್ಕೆ 917 ಮಂದಿ ಅಕ್ಷರ ಜ್ಞಾನ ಶೂನ್ಯರು.

| ದೇಶ | ಒಟ್ಟು ಸಂಖ್ಯೆ | ಅಕ್ಷರಸ್ಥರ ಸಂಖ್ಯೆ | ಶೇಕಡ |
|---|---|---|---|
| ಜಪಾನ್ .. .. | 5,97 ಲಕ್ಷ | 4,28 ಲಕ್ಷ | 71·7% |
| ಫ್ರಾನ್ಸ್ .. .. | 4,02 ,, | 3,22 ,, | 80·1% |
| ಜರ್ಮನಿ .. .. | 6,24 ,, | 5,02 ,, | 80·5% |
| ಕೆನಡ .. .. | 88 ,, | 63 ,, | 71·6% |
| ಸಂಯುಕ್ತ ಸಂಸ್ಥಾನಗಳು .. | 10,57 ,, | 7,90 ,, | 74·5% |
| ಸಂಯುಕ್ತ ರಾಜ್ಯ .. | 4,27 ,, | 3,25 ,, | 76·1% |
| ಭಾರತವರ್ಷ .. | 35,30 ,, | 2,27 ,, | 8·0% |

# ಬ್ರಿಟಿಷ್ ವಿಭಾಗ

| | ವಿಸ್ತಾರ | ಜನಸಂಖ್ಯೆ | ಜಿಲ್ಲೆಗಳು | ಹುಟ್ಟುವಳಿ (ಲಕ್ಷಗಳು) | ವೆಚ್ಚ |
|---|---|---|---|---|---|
| ಹಿರಿಯ ಪ್ರದೇಶಗಳು : | ಚ. ಮೈ.. | | | ರೂ. | ರೂ.. |
| ಅಸ್ಸಾಂ .. | 55,014 | 86,22,251 | 12 | 2,99 | 3,15 |
| ಬಂಗಾಳ .. | 77,521 | 5,01,14,002 | 28 | 10,77 | 11,03 |
| ಬಿಹಾರ, ಒರಿಸ್ಸ .. | 83,054 | 3,76,77,576 | 21 | 5,15 | 5,50 |
| ಬೊಂಬಾಯಿ .. | 1,23,679 | 2,19,30,601 | 28 | 14,35 | 15,08 |
| ಬರ್ಮಾ .. | 2,33,492 | 1,46,67,146 | 41 | 10,32 | 9,25 |
| ಮಧ್ಯ ಪ್ರದೇಶ, ಬಿರಾರ್ | 99,920 | 1,55,07,723 | 22 | 4,22 | 4,65 |
| ಮದರಾಸು .. | 1,42,277 | 4,67,40,107 | 26 | 16,42 | 16,93 |
| ವಾಯುವ್ಯ ಸ್ವರಹದ್ದು .. | 13,518 | 24,25,076 | 5 | 81 | 3,23 |
| ಪಂಜಾಬ್ .. | 99,200 | 2,35,80,852 | 29 | 10,98 | 12,11 |
| ಸಂಯುಕ್ತ ಪ್ರಾಂತ .. | 1,06,248 | 4,84,08,763 | 48 | 10,92 | 12,03 |
| ಕಿರಿಯ ಪ್ರದೇಶಗಳು : | | | | | |
| ಅಜ್ಮೀರ್ ಮೇವಾರ | 2,711 | 5,60,292 | .. | .. | .. |
| ಅಂದಮಾನ್ ನಿಕೊಬಾರ್ | 3,143 | 29,463 | .. | .. | .. |
| ಬಲೂಚಿಸ್ತಾನ್ .. | 54,228 | 4,63,508 | 6 | .. | .. |
| ಕೊಡಗು .. | 1,593 | 1,63,327 | .. | .. | .. |
| ದಿಲ್ಲಿ .. | 573 | 6,36,247 | .. | .. | .. |
| ಒಟ್ಟು .. | 10,96,171 | 27,15,26,933 | 266 | .. | .. |

## ದೇಶೀಯ ಸಂಸ್ಥಾನಗಳು

| | | | ವಿಸ್ತೀರ್ಣ | ಜನಸಂಖ್ಯೆ |
|---|---|---|---|---|
| ಆಸ್ಸಾಂ ಸಂಸ್ಥಾನಗಳು | .. | .. | 12,320 | 6,25,606 |
| ಬಲೂಚಿಸ್ತಾನ್ ,, | .. | .. | 80,410 | 4,05,109 |
| ಬರೋಡೆ | .. | .. | 8,164 | 24,43,007 |
| ಬಂಗಾಳ ಸಂಸ್ಥಾನಗಳು | .. | .. | 5,434 | 9,73,336 |
| ಬಿಹಾರ ಮತ್ತು ಒರಿಸ್ಸ ಸಂಸ್ಥಾನಗಳು | | .. | 28,648 | 46,52,007 |
| ಬೊಂಬಾಯಿ ಸಂಸ್ಥಾನಗಳು | .. | .. | 27,994 | 44,68,396 |
| ಮಧ್ಯ ಇಂಡಿಯ ಏಜನ್ಸಿ | .. | .. | 51,597 | 66,32,790 |
| ಗ್ವಾಲಿಯರ್ | .. | .. | 26,367 | 35,23,070 |
| ಮಧ್ಯ ಪ್ರಾಂತದ ಸಂಸ್ಥಾನಗಳು | .. | .. | 31,175 | 24,83,214 |
| ಹೈದರಾಬಾದ್ | .. | .. | 82,698 | 1,44,36,148 |
| ಕಾಶ್ಮೀರ ಮತ್ತು ಜಮ್ಮು | .. | .. | 84,516 | 36,46,243 |
| ಮದರಾಸು ಏಜನ್ಸಿ | .. | .. | 10,698 | 67,54,484 |
| ಕೊಚ್ಚಿ | .. | .. | 1,480 | 12,05,016 |
| ತಿರುವಾಂಕೋಡು | .. | .. | 7,625 | 50,95,973 |
| ಇತರ ಮದರಾಸು ಸಂಸ್ಥಾನಗಳು | .. | .. | 1,593 | 4,53,495 |
| ಮೈಸೂರು | .. | .. | 29,326 | 65,57,302 |
| ವಾಯುವ್ಯ ಸರಹದ್ದಿನ ಸಂಬಂಧದ ಸಂಸ್ಥಾನಗಳು | | .. | 22,838 | 22,59,288 |
| ಪಂಜಾಬ್ ಸಂಸ್ಥಾನಗಳು | .. | .. | 5,820 | 4,37,787 |
| ಪಂಜಾಬ್ ಸಂಸ್ಥಾನಗಳ ಏಜನ್ಸಿ | .. | .. | 31,241 | 44,72,218 |
| ರಾಜಪುತ್ರಸ್ಥಾನದ ಸಂಸ್ಥಾನಗಳು | .. | .. | 1,29,059 | 1,12,25,712 |
| ಸಿಕ್ಕಿಂ | .. | .. | 2,818 | 1,09,808 |
| ಸಂಯುಕ್ತ ಪ್ರಾಂತದ ಸಂಸ್ಥಾನಗಳು | .. | .. | 5,943 | 12,06,070 |
| ಪಶ್ಚಿಮ ಭಾರತದ ಸಂಸ್ಥಾನಗಳ ಏಜನ್ಸಿ | | .. | 35,442 | 39,99,250 |
| | | ಒಟ್ಟು .. | 7,12,508 | 8,13,10,845 |

## ಕೆಲವು ಸಂಸ್ಥಾನಗಳು

| | ವಿಸ್ತೀರ್ಣ | ಜನಸಂಖ್ಯೆ | ಹುಟ್ಟುವಳಿ (ಲಕ್ಷಗಳು) ರೂ. | ಫಿರಂಗಿ ಗೌರವ ತೋಪುಗಳು |
|---|---|---|---|---|
| ಹೈದರಾಬಾದ್ .. .. | 82,698 | 1,44,36,148 | 7,58 | 21 |
| ಕಾಶ್ಮೀರ ಮತ್ತು ಜಮ್ಮು .. | 84,516 | 36,46,245 | 2,51 | 21 |
| ಮೈಸೂರು .. .. | 29,326 | 65,57,302 | 3,30 | 21 |
| ಗ್ವಾಲಿಯರ್ .. .. | 26,367 | 35,23,070 | 2,07 | 21 |
| ತಿರುವಾಂಕೋಡು .. | 7,625 | 50,95,973 | 2,27 | 19 |
| ಇಂದೂರು .. .. | 9,670 | 13,18,237 | 1,36 | 19 |
| ಭೋಪಾಲ .. .. | 6,902 | 7,29,955 | 62 | 19 |
| ರೀವಾ .. .. | 13,000 | 15,87,445 | 60 | 17 |
| ಬರೋಡ .. .. | 8,164 | 24,43,007 | 2,59 | 21 |
| ಕಲತ್ .. .. | 73,278 | 3,28,281 | 17 | 21 |
| ಕೊಲ್ಲಾಪುರ .. .. | 3,217 | 9,57,137 | 1,27 | 19 |
| ಕೊಚ್ಚಿ .. .. | 1,480 | 12,05,016 | 84 | 17 |
| ಭಾವಲಪುರ .. .. | 16,434 | 9,84,612 | 49 | 17 |
| ಪಟಿಯಾಲ .. .. | 5,942 | 16,25,520 | 1,35 | 17 |
| ಜೋಧಪುರ .. .. | 35,016 | 21,25,982 | 1,36 | 17 |
| ಬಿಕಾನೇರ್ .. .. | 23,317 | 9,36,218 | 1,21 | 17 |
| ಜಯಪುರ .. .. | 15,579 | 26,31,775 | 1,30 | 17 |
| ಉದಯಪುರ .. .. | 12,694 | 15,66,910 | 66 | 19 |
| ಕಚ್ಛ .. .. | 7,616 | 5,13,829 | 31 | 19 |

ವಿಸ್ತೀರ್ಣದಲ್ಲಿ ಕಾಶ್ಮೀರ ಮತ್ತು ಜಮ್ಮು ಎಂಬುದು ಮೊದಲನೆಯದು ; ಜನಸಂಖ್ಯೆ, ರಾಷ್ಟ್ರಾದಾಯಗಳಲ್ಲಿ ಹೈದರಾಬಾದ್ ಮೊದಲನೆಯದು, ಮೈಸೂರು ಎರಡನೆಯದು.

## ಸುಲಭ ನಿವಾರ್ಯ ಮರಣ—ಭಾರತೀಯರಲ್ಲಿ

1921–30ರಲ್ಲಿ ಬ್ರಿಟಿಷ್ ವಿಭಾಗದಲ್ಲಿ ಒಟ್ಟು 4,17,08,480 ಜನರು ಈ ವ್ಯಾಧಿಗಳಿಂದ ಪ್ರಾಣ ತೊರೆದರು :—

| | |
|---|---|
| ಸಿಡುಬಿನಿಂದ .. .. .. | 7,33,317 |
| ಪ್ಲೇಗಿನಿಂದ .. .. .. | 12,92,328 |
| ಕಾಲರಾದಿಂದ .. .. .. | 24,75,237 |
| ಜ್ವರಗಳಿಂದ .. .. .. | 3,72,07,598 |

## ದೇಶಾಂತರ ನಿವಾಸಿಗಳಾಗಿರುವ ಭಾರತೀಯರು

| | | |
|---|---|---|
| **ಬ್ರಿಟಿಷ್ ಸಾಮ್ರಾಜ್ಯದಲ್ಲಿ :** | | |
| ಸಿಂಹಳದ್ವೀಪ .. .. .. | 7,78,170 | |
| ಮಲಯ ಪರ್ಯಾಯದ್ವೀಪ .. .. | 6,24,009 | |
| ಮಾರಿಷಸ್ .. .. .. | 2,68,870 | |
| ದಕ್ಷಿಣ ಆಫ್ರಿಕ .. .. | 1,65,500 | |
| ಟ್ರಿನಿಡಾಡ್ .. .. .. | 1,38,667 | |
| ಬ್ರಿಟಿಷ್ ಗ್ವಿಯಾನ .. .. | 1,30,540 | |
| ಫೀಜೀ .. .. .. | 75,117 | |
| ಕೆನ್ಯಾ .. .. .. | 26,759 | |
| ಟಾಂಗನ್ಯೈಕ .. .. .. | 23,422 | |
| ಜಮೈಕ .. .. .. | 17,599 | |
| ಜಾಂಜಿಬಾರ್ .. .. .. | 15,246 | |
| ಯುಗಾಂಡ .. .. .. | 11,613 | |
| ಇಂಗ್ಲಂಡ್, ವೇಲ್ಸ್ .. .. | 7,128 | |
| ಬ್ರಿಟಿಷ್ ದ್ವೀಪಗಳು .. .. | 2,115 | |
| ಹಾಂಕಾಂಗ್ .. .. .. | 4,745 | |
| ಇತರೆಡೆಗಳಲ್ಲಿ .. .. .. | 10,500 | 23,00,000 |
| **ಅನ್ಯದೇಶಗಳಲ್ಲಿ :** | | |
| ಡಚ್ ಈಸ್ಟಿಂಡೀಸ್ .. .. | 25,000 | |
| ,, ಗ್ವಿಯಾನ .. .. .. | 35,000 | |
| ಮಡಗಾಸ್ಕರ್ .. .. .. | 7,500 | |
| ಪೋರ್ಚುಗೀಸ್ ಈಸ್ಟಾಫ್ರಿಕ .. .. | 5,000 | |
| ಸಂಯುಕ್ತ ಸಂಸ್ಥಾನಗಳು .. .. | 5,000 | |
| ಪಾರ್ಸೀಸ್ತಾನ .. .. .. | 3,900 | |
| ಇರಾಕ್ .. .. .. | 2,362 | |
| ಆಫ್ಘಾನಸ್ತಾನ, ಯೂರೋಪ್, ಇತ್ಯಾದಿ .. | 2,068 | 1,04,000 |
| | ಒಟ್ಟು .. | 24,04,000 |

## ಆಯುಷ್ಯ ನಿರೀಕ್ಷೆಯ ಸರಾಸರಿ: ಹುಟ್ಟಿನಲ್ಲಿ, 5 ವರ್ಷ, 10 ವರ್ಷ ವಯಸ್ಸುಗಳಲ್ಲಿ

| ದೇಶಗಳು | ಗಂಡಸರು | | | ಹೆಂಗಸರು | | |
|---|---|---|---|---|---|---|
| | 0 | 5 | 10 | 0 | 5 | 10 |
| ಆಸ್ಟ್ರೇಲಿಯ .. | 55·20 | 57·91 | 53·53 | 58·84 | 60.80 | 56·39 |
| ಡೆನ್ಮಾರ್ಕ್ .. | 54·9 | 59·4 | 55·1 | 57·9 | 61.1 | 56·7 |
| ಇಂಗ್ಲೆಂಡ್ .. | 48·53 | 55·90 | 51.81 | 52·38 | 58·53 | 54·53 |
| ಫ್ರಾನ್ಸ್ .. | 45·74 | 53·57 | 49·75 | 49·13 | 55·75 | 52·03 |
| ಜರ್ಮನಿ .. | 44·82 | 55·15 | 51·16 | 48·33 | 57·27 | 53·35 |
| ಹಾಲೆಂಡ್ .. | 51·0 | 58·3 | 54·3 | 53·4 | 59·4 | 55·4 |
| ಇಟಲಿ .. | 44·24 | 55·32 | 51·44 | 44·83 | 55·20 | 51·53 |
| ಜಪಾನ್ .. | 43·97 | 51·90 | 48·23 | 44·85 | 51·97 | 48·34 |
| ನಾರ್ವೆ .. | 54·84 | 56·92 | 52·92 | 57·72 | 59·06 | 55·09 |
| ಸ್ವೀಡನ್ .. | 54·53 | 57·90 | 54·03 | 56·98 | 59·40 | 55·58 |
| ಸ್ವಿಟ್ಸರ್ಲೆಂಡ್ .. | 49·25 | 54·52 | 50·34 | 52·15 | 56·15 | 51·98 |
| ಸಂಯುಕ್ತಸಂಸ್ಥಾನಗಳು | 49·32 | 54·82 | 50·86 | 52·54 | 56·89 | 48·51 |
| ಭಾರತಭೂಮಿ .. | 22·59 | 35·01 | 33·36 | 23·51 | 35·40 | 33·74 |

## 0–5 ವಯಸ್ಸಿನಲ್ಲಿ ಶಿಶು ಮರಣಗಳ ಲೆಕ್ಕ—1,000ಕ್ಕೆ

| | | | |
|---|---|---|---|
| ನಾರ್ವೆ .. .. | 81·45 | ಹಾಲೆಂಡ್ .. .. | 140·46 |
| ಸ್ವೀಡನ್ .. .. | 92·55 | ಇಂಗ್ಲೆಂಡ್ .. .. | 144·34 |
| ಆಸ್ಟ್ರೇಲಿಯ .. | 95·10 | ಜಪಾನ್ .. .. | 156·86 |
| ಡೆನ್ಮಾರ್ಕ್ .. | 120·67 | ಫ್ರಾನ್ಸ್ .. .. | 163.26 |
| ಸಂಯುಕ್ತ ಸಂಸ್ಥಾನಗಳು .. | 127·38 | ಇಟಲಿ .. .. | 167·71 |
| ಸ್ವಿಟ್ಸರ್ಲೆಂಡ್ .. | 138·40 | ಭಾ ತವರ್ಷ .. | 289·98 |

### ಭಾರತೀಯ ನಗರಗಳಲ್ಲಿ

| | | | |
|---|---|---|---|
| ಬೊಂಬಾಯಿ .. .. | 298 | ಲಕ್ನೌ .. .. | 329 |
| ಕಲಕತ್ತ .. .. | 268 | ನಾಗಪುರ .. .. | 270 |
| ಮದರಾಸು .. .. | 246 | ದಿಲ್ಲಿ .. .. | 199 |
| ರಂಗೂನ್ .. .. | 278 | | |

# ಭರತವರ್ಷದಲ್ಲಿ ಜೀವಿಕ ಪರಿಸ್ಥಿತಿ

ಒಟ್ಟು ಜನಸ್ತೋಮದಲ್ಲಿ ಕಷ್ಟಮಾಡತಕ್ಕವರು—15,39,16,050 ; ಉಳಿದವರು ಆಶ್ರಿತರು.

| ಜೀವಿಕ ವಿಭಾಗ | | | | ಒಟ್ಟಿನಲ್ಲಿ |
|---|---|---|---|---|
| A. ಸಾಮಗ್ರಿ ಸಾಧಕ ವೃತ್ತಿಗಳು | .. | .. | 10,36,40,439 | .. |
| 1. ಸಸ್ಯಪ್ರಾಣಿವರ್ಗ ಸಂಬಂಧ | .. | 10,32,94,439 | .. | 67·0% |
| 2. ಗಣಿಗಳ ಸಂಬಂಧ | .. | 3,46,000 | .. | ·1% |
| B. ಸರಕು ಸಾಧನೆಯ ವೃತ್ತಿಗಳು | .. | .. | 2,56,06,956 | .. |
| 1. ಉದ್ಯೋಗ | .. | 1,53,51,953 | .. | 9·7% |
| 2. ವಾಹನ | .. | 23,41,406 | .. | 1·5% |
| 3. ವ್ಯಾಪಾರ | .. | 79,13,597 | .. | 5·4% |
| C. ಆಡಳಿತ ಮತ್ತು ಕಳಾ ಸಂಬಂಧ | .. | .. | 41,46,899 | .. |
| 1. ಸೈನ್ಯ | .. | 8,41,474 | .. | ·5% |
| 2. ಸರ್ಕಾರೀ ಹುದ್ದೆ | .. | 9,95,284 | .. | ·8% |
| 3. ಕಳಾ ಸಂಬಂಧ ವೃತ್ತಿಗಳು | .. | 23,10,141 | .. | 1·7% |
| D. ಇತರ .. | .. | .. | 2,05,18,640 | 13·3% |
| 1. ವರಮಾನದ ಆಧಾರ | .. | 2,15,874 | .. | .. |
| 2. ಮನೆಗೆಲಸ | .. | 1,08,98,277 | .. | .. |
| 3. ವಿವರ ಪೂರ್ತಿಯಿಲ್ಲದ್ದು | .. | 77,78,642 | .. | .. |
| 4. ಸಾಫಲ್ಯವಿಲ್ಲದುದು | .. | 16,25,847 | .. | .. |

ಜೀವಿಕ ವಿಭಾಗ, ಇತರ ದೇಶಗಳಲ್ಲಿ ; ನೂರಕ್ಕ ಲೆಕ್ಕ

| | ಕೃಷಿ, ಮಿಾನಿನ ಬೇಟೆ | ಉದ್ಯೋಗ, ವ್ಯಾಪಾರ, ವಾಹನ | ಕಲಾವೃತ್ತಿ, ಆಡಳಿತ | ಸೈನ್ಯ | ಮನೆಗೆಲಸ | ಇತರ |
|---|---|---|---|---|---|---|
| ಇಂಗ್ಲಂಡ್, ವೇಲ್ಸ್ .. | 7 | 68 | 10 | 1 | 12 | 2 |
| ಬೆಲ್ಜಿಯಂ .. | 19 | 65 | 7 | 2 | 5 | 2 |
| ಡೆನ್ಮಾರ್ಕ್ .. | 35 | 44 | 6 | 1 | 13 | 1 |
| ಫ್ರಾನ್ಸ್ .. | 38 | 50 | 6 | 2 | 4 | .. |
| ಜರ್ಮನಿ .. | 31 | 58 | 6 | ½ | 4½ | .. |
| ಜೆಕೊಸ್ಲೊವೇಕಿಯ .. | 40 | 47 | 5 | 2 | 4 | 2 |
| ಇಟಲಿ .. | 56 | 35 | 4½ | 2 | 2½ | .. |
| ರಷ್ಯಾ .. | 87 | 9 | 2 | 2 | .. | 2 |
| ಸಂಯುಕ್ತ ಸಂಸ್ಥಾನಗಳು | 22 | 51 | 8 | ½ | 10 | 8 |

ಅಥವಾ ಸ್ಥೂಲವಾಗಿ

| | ಕೃಷಿ ಸಂಬಂಧ | ಉದ್ಯೋಗ ಸಂಬಂಧ |
|---|---|---|
| ಸಂಯುಕ್ತ ರಾಜ್ಯ .. .. | 10·0% | 39·7% |
| ಸಂಯುಕ್ತ ಸಂಸ್ಥಾನಗಳು .. | 22·0% | 29 3% |
| ಜರ್ಮನಿ .. .. .. | 30·5% | 38·1% |
| ಫ್ರಾನ್ಸ್ .. .. .. | 38·3% | 31·2% |
| ಕೆನಡ .. .. .. | 35·0% | 26·9% |
| ಭಾರತವರ್ಷ .. .. | 73·0% | 11·2% |

ಇದರ ಪರಿಣಾಮವಾಗಿ ಸರಾಸರಿ ವಾರ್ಷಿಕ ವರಮಾನದಲ್ಲಿ ಪರಸ್ಪರ ಪ್ರಮಾಣಗಳು ಈ ರೀತಿ :—

| | ಕೃಷಿಯಿಂದ ರೂ. | ಉದ್ಯೋಗದಿಂದ ರೂ. | ಒಟ್ಟು ರೂ. |
|---|---|---|---|
| ಸಂಯುಕ್ತ ಸಂಸ್ಥಾನಗಳು .. | 286 | 1,300 | 1,586 |
| ಕೆನಡ .. .. | 464 | 1,047 | 1,511 |
| ಸಂಯುಕ್ತ ರಾಜ್ಯ .. | 80 | 808 | 888 |
| ಸ್ವೀಡನ್ .. .. | 129 | 384 | 513 |
| ಜಪಾನ್ .. .. | 85 | 120 | 205 |
| ಭಾರತವರ್ಷ .. .. | 67 | 13 | 80 |

## ವಾರ್ಷಿಕ ವರಮಾನದ ಸರಾಸರಿ (ಭಾರತವರ್ಷದಲ್ಲಿ)

(ಈ ಲೆಕ್ಕದಲ್ಲಿ ಕಾಲಗತಿಯನ್ನಾಗಲಿ, ಏರಿಳಿತಗಳನ್ನಾಗಲಿ ಸೂಚಿಸತಕ್ಕ ಲಕ್ಷಣವಿಲ್ಲ; ಬೇರೆ ಬೇರೆ ವೇಳೆಗಳಲ್ಲಿ ಬೇರೆ ಬೇರೆಯವರು ನಡೆಸಿದ ಅಂದಾಜು ಲೆಕ್ಕ ಮಾತ್ರ.)

| | | ರೂ. ಆ. ಪೈ. |
|---|---|---|
| 1867—68 | ದಾದಾಭಾಯಿ ನೌರೋಜಿ | 20—0—0 |
| 1880 | ಫಾಮಿನ್ ಕಮಿಷನ್ | 27—0—0 |
| 1882 | ಸರ್ ಡೇವಿಡ್ ಬಾರ್ಬರ್ | 27—0—0 |
| 1898 | ವಿಲಿಯಂ ಡಿಗ್ಬಿ | 18—1—5 |
| 1900 | ,, | 17—0—8 |
| 1901 | ಲಾರ್ಡ್ ಕರ್ಸನ್ | 30—0—0 |
| 1903 | ಗಿಫೆನ್ | 30—0—0 |
| 1911 | ಷಿರಾಸ್ | 50—0—0 |
| | ಬಿ. ಎನ್. ಶರ್ಮಾ | 86—0—0 |
| | ಸರ್ ಎಂ. ವಿಶ್ವೇಶ್ವರಯ್ಯ | 36—0—0 |
| | ಬಾಲಕೃಷ್ಣ | 21—0—0 |
| 1913—14 | ವಾಡಿಯಾ ಮತ್ತು ಜೋಷಿ | 44—0—0 |
| 1921 | ಕೆ. ಟಿ. ಷಾ | 46—0—0 |
| 1922 | ಸಿ. ಎನ್. ವಕೀಲ | 74—0—0 |
| ,, | ಪಿ. ಜಿ. ಘೋಷ | 52—0—0 |
| 1923 | ವಾಡಿಯ | 44—0—0 |
| 1935 | ಸರ್ ಎಂ. ವಿಶ್ವೇಶ್ವರಯ್ಯ | 55—0—0 |

## ರಾಷ್ಟ್ರ ಸಂಪತ್ತು ಮತ್ತು ವಾರ್ಷಿಕ ವರಮಾನಗಳು (ಸರಾಸರಿ)

| | ಬಂಡವಾಳ | ವಾರ್ಷಿಕ ವರಮಾನ |
|---|---|---|
| | ರೂ. | ರೂ. |
| ಸಂಯುಕ್ತ ರಾಜ್ಯ | 6,371 | 1,092 |
| ಸಂಯುಕ್ತ ಸಂಸ್ಥಾನಗಳು | 9,365 | 2,053 |
| ಕೆನಡ | 8,023 | 1,268 |
| ಫ್ರಾನ್ಸ್ | 4,581 | 636 |
| ಜಪಾನ್ | 2,308 | 271 |
| ಭಾರತ (ಬ್ರಿಟಿಷ್ ವಿಭಾಗ) | 441 | 82 |

## ಹೊರ ವ್ಯಾಪಾರ

(ವ್ಯಾಪಾರದ ಗತಿಯನ್ನು ಚನ್ನಾಗಿ ತಿಳಿಯಲು ಅನೇಕ ವರ್ಷಗಳ ಲೆಕ್ಕಗಳನ್ನು ಪರಿಶೀಲಿಸಬೇಕು. ಇಲ್ಲಿ ಆಮದು ರಫ್ತು ವ್ಯಾಪಾರಗಳ ಸರಕುಗಳೇನು, ಪ್ರಮಾಣ ವೆಷ್ಟು ಎಂಬುದನ್ನು ಸ್ಥೂಲವಾಗಿ ಕಾಣಬಹುದು.)

ಆಮದು ವ್ಯಾಪಾರ

| | 1930–31 | 1931–32 |
|---|---|---|
| | ರೂ. | ರೂ. |
| 1. ಆಹಾರ, ಪಾನೀಯ, ಹೊಗೆಸೊಪ್ಪಿನ ವಸ್ತುಗಳು .. .. | 29,06,49,903 | 18,24,39,849 |
| 2. ಸಾಧಕ ಸಾಮಗ್ರಿ .. .. | 22,75,16,817 | 20,85,02,477 |
| 3. ಸಿದ್ಧ ಸರಕಿನ ಸಂಬಂಧ .. .. | 1,09,22,43,737 | 83,89,31,656 |
| 4. ಇತರ .. .. .. | 3,75,26,406 | 3,38,40,133 |
| ಒಟ್ಟು .. | 1,64,79,36,863 | 1,26,37,14,115 |

ರಫ್ತು ವ್ಯಾಪಾರ

| | 1930–31 | 1931–32 |
|---|---|---|
| | ರೂ. | ರೂ. |
| 1. ಆಹಾರ ಪಾನೀಯ, ಹೊಗೆಸೊಪ್ಪಿನ ವಸ್ತುಗಳು .. .. | 59,67,39,211 | 44,34,16,016 |
| 2. ಸಾಧಕ ಸಾಮಗ್ರಿ .. .. | 1,01,24,58,116 | 66,97,58,978 |
| 3. ಸಿದ್ಧ ಸರಕಿನ ಸಂಬಂಧ .. | 57,26,94,360 | 42,62,25,850 |
| 4. ಇತರ .. .. | 2,30,34,381 | 1,94,85,250 |
| ಒಟ್ಟು .. | 2,20,49,26,338 | 1,55,88,86,094 |

1931–32 ನೆ ವರ್ಷದ ವ್ಯಾಪಾರದಲ್ಲಿ ಆಮದು ರಫ್ತುಗಳಲ್ಲಿ ಮುಖ್ಯ ಪದಾರ್ಥಗಳ ಪ್ರಮಾಣವನ್ನು ಕಾಣಬಹುದು :—

| ಆಮದು | ರೂ. | ರಫ್ತು | ರೂ. |
|---|---|---|---|
| ಹತ್ತಿ ನೂಲು, ಬಟ್ಟೆ .. | 19,15,41,096 | ಸೆಣಬು (ಸಾಮಗ್ರಿ) .. | 11,18,80,623 |
| ಸಕ್ಕರೆ .. | 6,16,53,256 | ಸೆಣಬು (ಸರಕು) .. | 21,92,42,529 |
| ಲೋಹಗಳು, ಅದರುಗಳು | 9,77,65,075 | ಹತ್ತಿ .. | 23,44,72,269 |
| ಯಂತ್ರ ಸಾಮಗ್ರಿ .. | 10,92,33,597 | ,, ನೂಲು, ಬಟ್ಟೆ .. | 4,81,83,121 |
| ರೇಷ್ಮೆ ಸರಕು .. | 2,73,56,111 | ಅಕ್ಕಿ .. | 18,14,32,519 |
| ತೈಲಗಳು .. | 9,72,26,298 | ಗೋಧಿ, ಗೋಧಿಹಿಟ್ಟು .. | 73,09,637 |
| ರಾಸಾಯನಿಕ ಸಾಮಗ್ರಿ | 2,56,97,248 | ಇತರ ಧಾನ್ಯ .. | 1,49,75,824 |
| ಕಬ್ಬಿಣ, ಉಕ್ಕು ಸಾಮಾನು | 2,60,91,413 | ಟೀ .. .. | 19,43,73,875 |

| ಆಮದು | ರೂ. | ರಫ್ತು | ರೂ. |
|---|---|---|---|
| ಮದ್ಯಗಳು .. | 2,26,86,247 | ತೊಗಲು, ಚರ್ಮ ಮತ್ತು | |
| ಬೆಂಕಿಪೆಟ್ಟಿಗೆ .. | 1,05,235 | ಸರಕು .. | 9,00,91,117 |
| ಕಾಗದ, ರಟ್ಟು, ಇತ್ಯಾದಿ | 2,50,24,106 | ಎಣ್ಣೆಬೀಜಗಳು .. | 14,58,83,085 |
| ಉಪ್ಪು .. | 71,98,869 | ಅರಗು .. | 1,83,94,172 |
| ಉಣ್ಣೆಯ ಸರಕು .. | 1,30,96,316 | ಉಣ್ಣೆ .. | 2,77,24,610 |
| ವಾಸನಾದ್ರವ್ಯಗಳು .. | 2,08,22,441 | ,, ಸರಕು .. | 59,48,855 |
| ಆಹಾರವಸ್ತುಗಳು .. | 3,41,26,266 | ಅಫೀಂ .. | 86,93,125 |
| ಶಸ್ತ್ರಸಾಧಕ ಸಾಮಗ್ರಿ | 3,69,19,581 | ಎಣ್ಣೆಗಳು .. | 57,22,833 |
| ಹೊಗೆಸೊಪ್ಪು .. | 94,34,454 | ರಬ್ಬರ್ .. | 44,57,717 |
| ಗಾಜು .. | 1,21,97,209 | ನೀಲಿ .. | 2,00,562 |
| ಬಣ್ಣವಿಡುವ, ಹದಮಾಡುವ | | ಇತರ ವರ್ಣಗಳು, ಹದಗಳು | 84,93,010 |
| ಸಾಮಗ್ರಿ .. | 2,67,64,789 | ಮೈಣ .. | 2,31,74,220 |
| ಔಷಧಿಗಳು .. | 1,91,11,043 | ವಾಸನಾದ್ರವ್ಯಗಳು .. | 87,24,986 |
| ಮರ, ತೊಲೆಗಳು .. | 60,69,403 | ಪೆಟ್ಟುಪ್ಪು .. | 10,57,916 |
| ವಸ್ತ್ರಭೂಷಣಾದಿಗಳು .. | 81,76,121 | ಕಾಫಿ .. | 94,50,102 |
| ಸಾಬೂನು .. | 88,72,154 | ನಾರು .. | 26,89,572 |
| ಕಟ್ಟಡದ ಸಾಮಾನು .. | 83,78,092 | ಮ್ಯಾಂಗನೀಸ್ ಅದರು | 56,51,943 |
| ಹಣ್ಣು, ತರಕಾರಿ .. | 1,34,47,173 | ಇತರ ಲೋಹಗಳು, | |
| ಬಣ್ಣಗಳು, ಸಾಮಗ್ರಿ .. | 87,53,101 | ಅದರುಗಳು .. | 4,90,58,191 |
| ಟೀ ಡಬ್ಬಗಳು .. | 50,31,538 | ಹಿಂಡಿ .. | 2,00,67,741 |
| ಅಲಂಕಾರವಸ್ತ್ರ .. | 54,28,541 | ಆಹಾರವಸ್ತುಗಳು .. | 39,54,727 |
| ಯಂತ್ರಗಳ ಪಟ್ಟಿಗಳು | 50,11,313 | ಹಣ್ಣು, ತರಕಾರಿ .. | 90,31,646 |
| ಯಂತ್ರವಾಹನಗಳು .. | 3,63,21,027 | ಹೊಗೆಸೊಪ್ಪು .. | 85,42,469 |
| ಲೇಖನ ಸಾಮಗ್ರಿ .. | 68,02,500 | ರೇಷ್ಮೆ .. | 2,95,877 |
| ಸಜೀವ ಪ್ರಾಣಿಗಳು .. | 42,06,157 | ರೇಷ್ಮೆ ವಸ್ತ್ರ .. | 38,542 |
| ಪುಸ್ತಕಗಳು, ಮುದ್ರಿತ ಸರಕು | 53,38,433 | ಹಗ್ಗದ ಸಾಮಾನು .. | 75,33,814 |
| ಪಿಂಗಾಣಿ ಸಾಮಾನು .. | 38,36,055 | ಮರ .. | 78,46,689 |
| ಬೂಟ್ಸು .. | 64,92,641 | ಗೊಬ್ಬರಗಳು .. | 38,38,693 |
| ಕೊಡೆಗಳು .. | 30,16,478 | ಕಲ್ಲಿದ್ದಲು, ಕೋಕ್ | 54,90,951 |
| ಧಾನ್ಯ .. | 1,17,60,525 | ಸಕ್ಕರೆ .. | 1,91,941 |
| ಕಲ್ಲಿದ್ದಲು, ಕೋಕ್ | 14,27,888 | ಭೂಸಾ, ದಾಣಾ, ವಗೈರೆ | 75,14,260 |

## 2. ಪ್ರಶ್ನೆಗಳು

(ಇವು ಸಾಮಾನ್ಯ ವಿಚಾರ ಪ್ರಜ್ಞೆಗೆ ಸಹಾಯಕವಾಗಿರತಕ್ಕವು ಮಾತ್ರ)

1. ಭರತವರ್ಷವನ್ನು ಭೂಖಂಡವೆಂದು ಕರೆಯುವುದೇಕೆ? ಅದೇ ಒಂದು ಜಗತ್ತೆಂದು ಹೇಳಬಹುದೆ?

2. 'ಪುಣ್ಯಭೂಮಿ, ಕರ್ಮಭೂಮಿ' ಎಂಬ ಪ್ರಯೋಗಗಳ ಅರ್ಥವೇನು? 'ಇಂಡಿಯ' ಎಂಬ ಹೆಸರು ಹುಟ್ಟಿದ್ದು ಹೇಗೆ, ಬಳಕೆಯಾದದ್ದು ಹೇಗೆ?

3. ಮಾನವ ಸಮುದಾಯದಲ್ಲಿ ಮುಖ್ಯ ರಾಶಿಗಳು ಯಾವುವು? ನಮ್ಮದು ಯಾವ ರಾಶಿ?

4. ಪಾರ್ಸೀ, ಗ್ರೀಕ್, ಲಾಟಿನ್ ಭಾಷೆಗಳ ಶಬ್ದಗಳಲ್ಲಿ ಸಂಸ್ಕೃತದ ಶಬ್ದಗಳು ಸೇರಿಕೊಂಡಿವೆಯೆಂಬುದಕ್ಕೆ ದೃಷ್ಟಾಂತಗಳನ್ನು ಹೇಳಿ. ಇಂಗ್ಲೀಷ್ ಭಾಷೆಯಲ್ಲಿ ಸಂಸ್ಕೃತಜನ್ಯವಾಗಿರುವ ಆರು ನಾಮಪದಗಳನ್ನೂ ಆರು ಕ್ರಿಯಾಪದಗಳನ್ನೂ ಸೂಚಿಸಿ.

5. ಶಾಂತಿಯನ್ನರಸಿಕೊಂಡು ಬಂದು ಭಾರತಭೂಮಿಯಲ್ಲಿ ನೆಲೆಮಾಡಿದ ಜನರ ವೃತ್ತಾಂತವನ್ನು ಹೇಳಿ.

6. ದೇವಾಲಯಗಳು, ಮಸೀದಿಗಳು, ಚರ್ಚುಗಳಲ್ಲಿ ಪರಸ್ಪರವಾಗಿ ಕಾಣುವ ಭೇದಗಳೇನು? ಪ್ರಾಟೆಸ್ಟೆಂಟ್ ಚರ್ಚೆಂಬುದು ರೋಮನ್ ಕೆಥೊಲಿಕ್ ಚರ್ಚಿನಿಂದ ಹೇಗೆ ಭಿನ್ನವೆಂಬುದನ್ನು ವರ್ಣಿಸಬಲ್ಲಿರಾ?

7. ಪುರಾತನ ಕಾಲದಲ್ಲಿ ಆಸಮುದ್ರಕ್ಷಿತೀಶರಾಗಿ ಸಾರ್ವಭೌಮರೆನಿಸಿದ್ದವರಲ್ಲಿ ಆರು ಮಂದಿಯ ಹೆಸರುಗಳನ್ನು ಹೇಳಿ.

8. ತೀರ್ಥಯಾತ್ರೆಗಳಲ್ಲಿ ಅಡಗಿರುವ ಉದ್ದೇಶವೇನು? ಅವುಗಳಿಂದಾಗುವ ಪ್ರಯೋಜನಗಳೇನು?

9. ನೀವು ನೋಡಿರುವ ಜಾತ್ರೆಯನ್ನೋ ಉರುಸನ್ನೋ ವರ್ಣಿಸಿ; ಅದನ್ನು ಪಾರ್ಕ್ ಫೇರ್, ಕ್ರಿಸ್ಮಸ್ ಫಾತ್ (fete) ಮುಂತಾದ ಆಧುನಿಕ ವಿನೋದೋತ್ಸವಗಳೊಡನೆ ಹೋಲಿಸಿ.

10. ಸರ್ಕಸ್ಸಿಗೂ ದೊಂಬರಾಟಕ್ಕೂ ಇರುವ ವ್ಯತ್ಯಾಸವೇನು?

11. ಹಿಂದೂ ಜನರಲ್ಲಿ ಗೃಹಾಲಂಕಾರ ಪದ್ಧತಿಗಳು ಯಾವುವು?

12. ಗೋಪೂಜೆಯು ಭಾರತೀಯರಲ್ಲಿ ಹುಟ್ಟಿದ ಬಗೆ ಹೇಗೆ? ಅದರಿಂದ ತೋರಿದ ಪರಿಣಾಮಗಳು ಯಾವುವು?

13. ಮೊಹರಂ ಹಬ್ಬದ ದಿನವು ಪ್ರತಿ ವರ್ಷವೂ ಮುಂದು ಮುಂದಾಗಿಯೇ ಪ್ರಾಪ್ತಿಯಾಗಲು ಕಾರಣವೇನು?

14. ಹಿಂದೂ ಜನರ ರೀತಿಯಲ್ಲಿ ಋತುಗಳೆಷ್ಟು? ಅವುಗಳ ಲೆಕ್ಕವನ್ನು ವಿವರಿಸಿ. ಕವಿಗಳು ಮಾಡಿರುವ ಋತುವರ್ಣನೆಗಳಲ್ಲಿ ನಿಮಗೆ ತಿಳಿದಿರುವುದು ಯಾವುದು?

15. ಭೋಜನ ವೇಳೆಯಲ್ಲಿ ಐರೋಪ್ಯರು ಅಲಂಕಾರಗಳನ್ನು ಹೇಗೆ ನಡೆಸುವರು? ಭಾರತೀಯರು ಯಾವ ಅಲಂಕಾರ ಪದ್ಧತಿಗಳನ್ನು ಪಡೆದಿದ್ದಾರೆ?

16. ಗೋಮೂತ್ರ, ತುಲಸಿ, ಅಗಸೆ, ಮೊಸರು, ಬೇವಿನ ಕಡ್ಡಿಗಳನ್ನು ಹಿಂದೂ ಜನರು ಹೇಗೆ ಉಪಯೋಗಿಸುತ್ತಾರೆ? ಆ ಪದ್ಧತಿಗಳಲ್ಲಿ ಪ್ರಯೋಜನವೇನು?

17. ಗುಲಾಬಿ ಹೂವನ್ನು ರಾಷ್ಟ್ರೀಯವೆಂದು ಇಂಗ್ಲಿಷ್ ಜನರು ಭಾವಿಸುತ್ತಾರೆ. ಹಾಗೆಯೇ ಭಾರತೀಯರು ಭಾವಿಸುವುದಾದರೆ ಯಾವ ಹೂವನ್ನು, ಯಾವ ಪಕ್ಷಿಯನ್ನು, ಯಾವ ಮೃಗವನ್ನು, ಯಾವ ಮರವನ್ನು ಭಾರತೀಯವೆಂದು ಸೂಚಿಸ ಬೇಕು?

18. ಹಿಮವಂತನಿಂದ ಭಾರತೀಯರ ಬದುಕಿನಲ್ಲಿ ಮಾತ್ರವಲ್ಲದೆ ಭಾರತೀಯ ಧರ್ಮದಲ್ಲಿ, ಕಲಾಭ್ಯಾಸಗಳಲ್ಲಿ ಪರಿಣಾಮಗಳು ತೋರಿಕೊಂಡಿವೆಯೇ? ಯಾವುವೆಂದು ಹೇಳ ಬಲ್ಲಿರಾ?

19. ಹಿಮವತ್ಪರ್ವತಪ್ರದೇಶದಲ್ಲಿರುವ ಯಾತ್ರಾಸ್ಥಲಗಳು ಯಾವುವು? ಆ ಸ್ಥಲಗಳಲ್ಲಿ ತೋರುವ ಸೌಂದರ್ಯವೆಂತಹುದೆಂದು ಊಹಿಸಿ. ಅಲ್ಲಿಯ ಸೌಂದರ್ಯವನ್ನು ಹೆಚ್ಚಾಗಿ ಬಣ್ಣಿಸಿರುವ ಭಾರತೀಯ ಕವಿ ಯಾರು?

20. ಅಮೆರಿಕದಲ್ಲಿ ಕಾಲ್ಚೆರಳುಗಳ ಕಸರತ್ತೆಂಬುದುಂಟು. ಭಾರತವರ್ಷದಲ್ಲಿ ಆ ಬಗೆಯ ಕಸರತ್ತೇಕಾಗಬಾರದು?

21. ಭಾರತೀಯ ವೃಕ್ಷವಿಶೇಷಗಳಲ್ಲಿ ನೀವು ನೋಡದಿರುವುದನ್ನು ಪಟ್ಟಿ ಮಾಡಿ. ಶಾಲ್ಮಲಿ, ಅಶೋಕ, ಅಶ್ವತ್ಥ, ದೇವದಾರು ವೃಕ್ಷಗಳನ್ನು ಗುರುತಿಸಬಲ್ಲಿರಾ?

22. ಧ್ರುವ, ಅಗಸ್ತ್ಯ, ಸಪ್ತರ್ಷಿ, ರೋಹಿಣಿ ನಕ್ಷತ್ರಗಳನ್ನು ಆಕಾಶದಲ್ಲಿ ತೋರಿಸಬಲ್ಲಿರಾ? ಅವುಗಳಿಗೆ ಇಂಗ್ಲಿಷ್ ರೀತಿಯ ಹೆಸರುಗಳು ಯಾವುವು?

23. ಭಾರತೀಯ ನಗರಗಳಲ್ಲಿ ಅತಿ ಪ್ರಾಚೀನವೆನ್ನಿಸತಕ್ಕವು ಯಾವುವು? ಅವುಗಳಲ್ಲಿ ಯಾತ್ರಾಸ್ಥಲಗಳಾಗಿರತಕ್ಕವು ಯಾವುವು?

24. ಪ್ರಾಕೃತಿಕ ಲಕ್ಷಣಗಳನ್ನು ವಿಚಾರಿಸಿದಾಗ ಭಾರತೀಯರು ಸದಾ ದೇಶದಲ್ಲಿಯೇ ಇರತಕ್ಕವರೆಂದೂ ಹೊರಗಿನ ಸಂಚಾರ ವ್ಯಾಪಾರಗಳನ್ನು ಬೆಳೆಸತಕ್ಕವರಲ್ಲವೆಂದೂ ಭೂವಿವರಣೆಯ ಆದಿಯಲ್ಲಿ ಹೇಳಬಹುದಾಗಿದೆ. ಇಂತಹ ಅಂಶಗಳು ಮಿಥ್ಯ ವೆಂದು ಇತಿಹಾಸದಲ್ಲಿ ತೀರ್ಮಾನವಾಗುವುದು ಹೇಗೆ?

25. ಭಾರತವರ್ಷದಲ್ಲಿ ಮೂರು ತಿಂಗಳ ಕಾಲ ಸಂಚಾರಮಾಡಿ ಮುಖ್ಯ ಸ್ಥಲಗಳೆಲ್ಲವನ್ನೂ ನೋಡಲು ಕ್ರಮವನ್ನೂ ಕಾಲವನ್ನೂ ಸೂಚಿಸುವ ಅಂದಾಜನ್ನು ಬರೆಯಿರಿ. ನೋಡಲೇ ಬೇಕೆನ್ನತಕ್ಕ ಸ್ಥಲಗಳ ಪಟ್ಟಿಯನ್ನು ಸಿದ್ಧಪಡಿಸಿ.

26. 'ಉರ್ದು' ಎಂಬುದೇನು? ಅದನ್ನು ಭಾರತೀಯವೆಂದು ಕರೆಯುವುದು ಹೇಗೆ?

27. ಸಭ್ಯ ಭಾರತೀಯನೆಂದಾಗ ಯಾವ ಗುಣಗಳು ಮುಖ್ಯವಾಗಿರತಕ್ಕುದೆಂದು ನಿಮ್ಮ ಭಾವನೆ? ಆ ಗುಣಗಳನ್ನು ವ್ಯಕ್ತಪಡಿಸಲು ದೃಷ್ಟಾಂತಗಳಿಗಾಗಿ ಕಥೆಗಳನ್ನು ಹೇಳಬಲ್ಲಿರಾ?

28. ಸಮುದಾಯವಾಗಿ ಬಯಲುಗಳಲ್ಲಿ ಆಡಬೇಕಾದ ಭಾರತೀಯ ಆಟಗಳು ಯಾವುವು?

29. ಮೊಹರಂ ಕಾಲದಲ್ಲಿ ಹುಲಿವೇಷಗಳ ಪದ್ಧತಿಯು ಬೆಳೆದಿರುವುದಕ್ಕೆ ಕಾರಣವನ್ನು ಸೂಚಿಸಿ.

30. ಸಾಲಕೊಡುವಂತೆ ಕೊಟ್ಟರೂ ಸಾಲವೆನ್ನಿಸದ ವಸ್ತುಗಳು ಯಾವುವು? ಈ ಪದ್ಧತಿಯಲ್ಲಿ ಭಾರತೀಯ ವೈಶಿಷ್ಟ್ಯವೇನು ತೋರುತ್ತದೆ?

31. ಹಿಂದೂ ಜನರ ಪದ್ಧತಿಗಳಂತೆ ಮಾರಲಾಗದ ಅಥವಾ ಕೊಳ್ಳಲಾಗದ ಪದಾರ್ಥಗಳು ಯಾವುವು? ಆ ಆಚಾರದಲ್ಲಿ ತೋರುವ ತತ್ವವೇನು?

32. ಹಿಂದಿನ ಕಾಲದಲ್ಲಿ ಹೊಟೇಲುಗಳೂ ಕಾಫೀ ಕ್ಲಬ್ಬುಗಳೂ ಭಾರತದೇಶದಲ್ಲಿ ಇಲ್ಲದೆ ಹೋದುದಕ್ಕೆ ಕಾರಣ ಹೇಳಬಲ್ಲಿರಾ?

33. ಸುಗ್ಗಿ ಕಾಲವನ್ನು ಯಾವ ಹಳ್ಳಿಯಲ್ಲಾದರೂ ಕಳೆದಿರುವಿರಾ? ಧಾನ್ಯ ರಾಶಿಯನ್ನು ಆಗ ವಿಭಾಗಮಾಡುವುದು ಹೇಗೆ? ಕಾಪಾಡುವುದು ಹೇಗೆ?

34. ಗ್ರಾಮ ಜೀವನದಲ್ಲಿ ದೇವಾಲಯಗಳ ಸ್ಥಾನವೆಂತಹುದು? ವಿವರಿಸಿ.

35. ಬಾರಾಬಲೂತಿ, ಬಾರಾಭಾಯಿ, ಬಾರಾಬಂತಿ ಎಂಬವುಗಳೇನು? ಅವುಗಳಿಗಿರುವ ಭೇದಗಳನ್ನು ಸ್ಪಷ್ಟಪಡಿಸಿ.

36. ಬ್ರಾಹ್ಮಣಸಾದವನನ್ನು ಗಲ್ಲಿಗೆ ಅಥವಾ ಶೂಲಕ್ಕೇರಿಸಬಾರದೆಂಬ ವಿಧಿಯು ಹಿಂದಿನ ಕಾಲದ ಆಚರಣೆಯಲ್ಲಿತ್ತು. ಇದರಲ್ಲಿ ಅಡಗಿದ್ದ ತತ್ವವೇನು?

37. ಎಷ್ಟು ಕೀಳು ಕಸಬಾದರೂ ಜಾತಿಗೌರವವುಂಟೆಂಬುದಕ್ಕೆ ದೃಷ್ಟಾಂತಗಳನ್ನು ವಿವರಿಸಿ ಆ ಗೌರವದ ಉದ್ದೇಶವೇನು?

38. ಜಾತಿಗಳು ಪರಸ್ಪರಾವಲಂಬಿಗಳೆಂಬುದು ಹೇಗೆ? ಉದಾಹರಣೆಗಳನ್ನು ಹೇಳಿ.

39. ಗರಡಿ ಅಥವಾ ತಾಲೀಂಖಾನೆಗಳಲ್ಲಿ ಉತ್ತಮಗೊಳಿಸತಕ್ಕ ಅಂಶಗಳೂ ಲಕ್ಷಣಗಳೂ ಯಾವುವು? ಕೆಮ್ಮಣ್ಣಿಗೇಕೆ ಅವುಗಳಲ್ಲಿ ಅಷ್ಟು ಪ್ರಾಶಸ್ತ್ಯ?

40. ಭಾರತೀಯ ಜನರು ಏನು ಮಾಡಿದರೂ ದೈವಭಕ್ತಿಯಿಂದ ಕೂಡಿ ನೆರವೇರಿಸುವರೆಂಬುದಕ್ಕೆ ದೃಷ್ಟಾಂತಗಳನ್ನು ವಿವರಿಸಿ.

41. ಎಮ್ಮೆಗಳಿಂದ ಹಸುಗಳು ಹಾಳಾದವೆಂದರೆ ಅರ್ಥವೇನು? ವಿವರಿಸಿ.

42. ಭಾರತೀಯರು ನಿತ್ಯಸ್ನಾನವನ್ನೇಕೆ ಮಾಡಬೇಕು? ನಿತ್ಯವೂ ಬಟ್ಟೆಗಳನ್ನೇಕೆ ಒಗೆಯಬೇಕು? ಐರೋಪ್ಯ ನಿವಾಸಿಗಳಿಗಿಂತ ಉಪ್ಪನ್ನು ಏಕೆ ಹೆಚ್ಚಾಗಿ ಸೇವಿಸಬೇಕು? ಸಕಾರಣವಾಗಿ ವಿವರಿಸಿ.

43. 'ಯೂನಿಯನ್ ಜಾಕ್' ಎಂಬುದೇನು? ಅದಕ್ಕೆ ಆ ಹೆಸರೇಕೆ ಬಂತು?

44. ಫ್ರಾನ್ಸ್, ಅಮೆರಿಕ, ತುರ್ಕಿ ರಾಷ್ಟ್ರಗಳ ಧ್ವಜಲಾಂಛನಗಳು ಯಾವುವು? ಭಾರತ ರಾಷ್ಟ್ರದ ರಾಷ್ಟ್ರೀಯ ಧ್ವಜವೆಂಬುದು ಯಾವುದು? ಆ ಚಿಹ್ನೆಗಳಿಗೆ ಅರ್ಥವಿದೆಯೇ?

45. ಭಾರತೀಯರಲ್ಲಿ ದಾಕ್ಷಿಣ್ಯ ಗುಣವು ಅತಿಯಾಗಿ ಬೆಳೆದಿರುವುದಕ್ಕೆ ದೃಷ್ಟಾಂತಗಳನ್ನು ಹೇಳಬಲ್ಲಿರಾ? ಫರಂಗಿಯವನು ಅದೇ ಸಮಯದಲ್ಲಿ ಹೇಗೆ ವರ್ತಿಸತಕ್ಕವನು?

46. ಆರ್ಥಿಕ ನೀತಿಯಲ್ಲಿ 'ಸ್ವದೇಶೀ' ಎಂಬ ತತ್ವಕ್ಕೆ ಅರ್ಥವೇನು? ಸ್ಪಷ್ಟಗೊಳಿಸಿ. ಇದಕ್ಕೂ 'ಆರ್ಥಿಕ ರಾಷ್ಟ್ರೀಯತೆ' (Economic Nationalism) ಎಂಬುದಕ್ಕೂ ಏನು ಭೇದ?

47. ಚರಖಾ ವ್ರತದ ಆಚರಣೆಗೆ ಇತರರು ಒಡ್ಡುವ ಆಕ್ಷೇಪಗಳು ಯಾವುವು? ಅಂತಹ ಆಕ್ಷೇಪ ಸಮಾಧಾನಗಳ ವಿಮರ್ಶೆಮಾಡಬಲ್ಲಿರಾ?

48. ಆಯುಧ ನಿಷೇಧದ ವಿಧಿ (Arms Act) ಯನ್ನು ತೆಗೆದುಹಾಕುವುದು ಉಚಿತವೆಂದು ನಿಮಗೆ ತೋರುವುದೇ? ಸಕಾರಣವಾಗಿ ಹೇಳಿ.

49. ಹಡಗುಗಳಲ್ಲಿ ಸಾಮಾನು ಸಾಗಿಸುವ ಉದ್ಯೋಗದಲ್ಲಿ ಭಾರತೀಯರೆಷ್ಟು ಮಾತ್ರ ಪ್ರವೇಶಿಸಿದ್ದಾರೆ? ಭಾರತೀಯವೆನಿಸುವ ಕಂಪೆನಿಯುಂಟೇ? ಹಡಗುಗಳ ಓಡಾಟದಿಂದ ವಾರ್ಷಿಕವಾಗಿ ಸಂಪಾದನೆಯೆಷ್ಟಿರಬಹುದು?

50. ಇಂಗ್ಲೀಷಿನಲ್ಲಿ "ರಾಜನು ಸತ್ತರೂ ಸಾಯುವುದಿಲ್ಲ," "ರಾಜನು ನಡೆಸಿದ್ದು ದುಷ್ಟವಲ್ಲ" ಎಂಬ ನಾಣ್ಣುಡಿಗಳುಂಟು. ಅವುಗಳ ಅರ್ಥವೇನಿರಬಹುದು? ನಮ್ಮಲ್ಲಿ ಹೇಳಬಹುದಾದ "ಯಥಾ ರಾಜಾ ತಥಾ ಪ್ರಜಾಃ," "ಯಥಾ ಪೌರಾ ಸ್ತಥಾ ರಾಷ್ಟ್ರಂ" ಎಂಬ ಮಾತುಗಳಿಗೆ ಏನು ಅರ್ಥ?

51. ಲಿಮಿಟೆಡ್ ಎಂದರೇನು? ಲಿಮಿಟೆಡ್ ಕಂಪೆನಿ ಎಂದಾಗಲೂ, ಲಿಮಿಟೆಡ್ ಮಾನಾರ್ಕಿ ಎಂದಾಗಲೂ ಏನು ಅರ್ಥಭೇದ ತೋರುತ್ತದೆ?

52. ಐರೋಪ್ಯ ದೇಶಗಳಲ್ಲಿ ನಿರಂಕುಶ ಪ್ರಭುತ್ವವು ನೆಲೆಯಾಗಿರುವ ರಾಷ್ಟ್ರಗಳು ಯಾವುವು? ಏಷ್ಯಾಖಂಡದ ದೇಶಗಳಲ್ಲಿ ಸಾಂಕುಶ ಪ್ರಭುತ್ವವು ತೋರಿಕೊಂಡಿರುವ ರಾಷ್ಟ್ರಗಳು ಯಾವುವು?

53. ತಾತ್ಕಾಲಿಕ ಮರಣಗಳೆಂದರೇನು? ಯಾವ ಸಂದರ್ಭಗಳಲ್ಲಿ ಅವು ನಡೆಯತಕ್ಕವು?

54. ಮರಣಾರ್ಥಿಗಳು ಛಂದಸ್ಸಂಪಾದನೆಗಾಗಿ ಅನುಸರಿಸಬಹುದಾದ ಕೃತ್ರಿಮೋಪಾಯಗಳು ಯಾವುವು?

55. ಛಂದಾಧಿಕಾರವಿದ್ದರೂ ಛಂದೋಗ್ರಹಣ ವೇಳೆಯಲ್ಲಿ ತಟಸ್ಥರಾಗಿರುವುದು ಯೋಗ್ಯವಾದುದೇ? ಬೇರೆ ಬೇರೆ ಸಂದರ್ಭಗಳನ್ನೂಹಿಸಿ ವಿಚಾರಮಾಡಿ.

56. ಭಾರತೀಯ ಶಾಸಕ ಸಭೆಗಳಲ್ಲಿ ಸದಸ್ಯರಾದವರಿಗೆ ಸಂಬಳಗಳನ್ನು ಕೊಡಿಸುವುದರಲ್ಲಿ ಆಕ್ಷೇಪ ಸಮಾಧಾನಗಳೇನು?

57. 'ಸಿವಿಲ್ ಸರ್ವಿಸ್' ಅಥವಾ ಅಧಿಕಾರಿ ವರ್ಗದವರು ಸ್ಥಿರವಾಗಿ ವ್ಯೂಹಬದ್ಧ ವರ್ಗವಾಗಿರುವ ಅಂಶದಲ್ಲಿ ಅನುಕೂಲ ಪ್ರತಿಕೂಲಗಳೇನು?

58. ಬಹು ಪಕ್ಷದವರ ಅಭಿಮತದಂತೆಯೇ ಕರ್ತವ್ಯ ನಿಷ್ಕರ್ಷೆಯಾಗುವುದರಲ್ಲಿ ಅಲ್ಪ ಪಕ್ಷದವರಿಗೆ ಅನ್ಯಾಯವಾಗುವ ಸಂಭವವಿದೆಯೇ? ಅಲ್ಪ ಪಕ್ಷದವರು ವಿಘ್ನಮೂರ್ತಿಗಳಾಗಿ ಪರಿಣಮಿಸುವ ಸಂದರ್ಭಗಳು ಹೇಗೊದಗುತ್ತವೆ? ಇಲ್ಲಿ ನ್ಯಾಯಾನ್ಯಾಯ ವಿಚಾರ ಹೇಗೆ?

59. ಅಂಚೆ, ರೈಲು, ತಂತಿ ಮುಂತಾದ ಉದ್ಯೋಗಗಳು ರಾಷ್ಟ್ರಗ್ರಸ್ತವಾಗಿ ನಡೆಯುವುದರಲ್ಲಿ ಮೇಲು ಕೀಳುಗಳೇನು? ಖಾಸಗಿ ಪೌರ ಸಂಘಗಳಿಂದ ನಡೆಯುವುದಾದರೆ ಗುಣ ದೋಷಗಳು ಏನು?

60. ನೀರು, ಹಾಲು, ತುಪ್ಪಗಳ ವ್ಯಾಪಾರವನ್ನು ನಗರ ನಿರ್ವಾಹ ಸಭೆಯವರೇ ಸಭಾಗ್ರಸ್ತ ಅಥವಾ ನಗರಮಾನ್ಯ ರೀತಿಯಲ್ಲಿ ನಡೆಸುವ ವಿಚಾರದಲ್ಲಿ ಪೂರ್ವಾಪರ ಪಕ್ಷಗಳ ವಾದವು ಹೇಗೆ? ನಿಮ್ಮ ಸ್ವಂತ ಅಭಿಪ್ರಾಯವೇನು?

61. ನಮ್ಮ ರಾಷ್ಟ್ರೀಯ ಋಣವೆಷ್ಟು? ಋಣ ವೃದ್ಧಿಯಾದುದು ಹೇಗೆ?

62. ಸೆರೆಮನೆಗಳಲ್ಲಿ ಕೈಗಾರಿಕೆಗಳನ್ನು ನಡೆಸುವ ವಿಚಾರದಲ್ಲಿ ಆಕ್ಷೇಪ ಸಮಾಧಾನಗಳೇನು?

63. ಸ್ವದೇಶ ರಕ್ಷಣೆಗಾಗಿ ಶಸ್ತ್ರಧಾರಿಯಾಗಿ ಹೊರಟು ಪ್ರಾಣವನ್ನರ್ಪಿಸಲು ಸಿದ್ಧನಾಗುವ ಅಂಶವು ಅಧಿಕಾರವೆನಿಸುವುದು ಯಾವಾಗ? ಕರ್ತವ್ಯವೆನಿಸುವುದು ಯಾವಾಗ? ಚಮೂ ಶಿಕ್ಷಣವು ಪೌರರಿಗೆ ಬಲವಂತವಾಗಿ ವಿಧಿತವಾಗಿರುವ ರಾಷ್ಟ್ರಗಳ ಹೆಸರು ಹೇಳಿ.

64. ಮರಣದಂಡನೆಯನ್ನು ನಿಷೇಧಮಾಡುವ ಸಂದರ್ಭದಲ್ಲಿ ಕಠಿನತಮವಾದ ದಂಡನೆಗಾಗಿ ಏನನ್ನು ಸೂಚಿಸಬಹುದು?

65. ನ್ಯಾಯಾಧಿಕಾರಿಗಳಿಗೆ ಹೆಚ್ಚಾದ ವೇತನಗಳನ್ನು ಕೊಡಿಸುವುದರಲ್ಲಿ ಏನು ನ್ಯಾಯವಿದೆ?

66. ಸ್ವಾತಂತ್ರ್ಯ ವಿಕಾಸಕ್ಕೆ ನೀತಿಯೇ ಅಡಿಗಲ್ಲೆಂದರೆ ಅರ್ಥವೇನು? ಶಿಕ್ಷಣವಿಲ್ಲದ ಸ್ವಾತಂತ್ರ್ಯವಿರತಕ್ಕುದೇ? ಸ್ವಾತಂತ್ರ್ಯದ ಗುರಿಯೇನು?

67. ಸ್ವರಾಷ್ಟ್ರ ನಿರ್ವಾಹದಲ್ಲಿ ತೋರಬಹುದಾದ ಆತಂಕಗಳೂ ಆಪತ್ತುಗಳೂ ಯಾವುವು?

68. ಸಾಮಾಜಿಕ ಸಂಸ್ಕಾರದಲ್ಲಿ ನಿರತರಾಗಿ ಕೆಲಸಮಾಡುತ್ತಿರುವವರನ್ನು ನೋಡಿರುವಿರಾ? ಅವರ ಕೆಲಸದ ಪರಿಯನ್ನು ವರ್ಣಿಸಬಲ್ಲಿರಾ?

69. ನೇಪಾಲ ದೇಶಕ್ಕೂ ಇತರ ಸಂಸ್ಥಾನಗಳಿಗೂ ಪದವಿ ಗೌರವಗಳಲ್ಲಿ ಇರುವ ವ್ಯತ್ಯಾಸ ವೇನು?

70. ನೆರೆಮನೆಯವರು ಹೊಲಸನ್ನು ನಿಮ್ಮ ಮನೆಯ ಮುಂದೆ ಎಸೆಯುತ್ತಿದ್ದಾಗ ನೀವು ಮಾಡತಕ್ಕ ಕರ್ತವ್ಯವೇನು?

71. ಸರಕಾರದ ವರದಿಗಳನ್ನೋ, ಇತರ ಗ್ರಂಥಗಳನ್ನೋ ಹುಡುಕಿ ಈ ಅಂಶಗಳೆಷ್ಟೆಂದು ಹೇಳಿ :—

(1) ಕಳೆದ ವರ್ಷ ತೆರಿಗೆಗಳಿಂದ ಆದ ಉತ್ಪತ್ತಿ.
(2) ರಕ್ಷಣಾರ್ಥವಾಗಿಯೂ ಬಡ್ಡಿಗಾಗಿಯೂ ನಡೆದ ವೆಚ್ಚ.
(3) 'ಹೋಂ ಛಾರ್ಜು' ಅಥವಾ ಇಂಗ್ಲಿಷ್ ಛಾರ್ಜು ಎಂಬ ಅಂಶ.
(4) ಜನಶಿಕ್ಷಣಾರ್ಥವಾಗಿ ನಡೆದ ವೆಚ್ಚ.

72. ಪ್ರತಿಫಲರೂಪವಾಗಿ ಹಣವನ್ನು ಕೊಡಲಾಗದ ಜನಸೇವಾ ಸಂದರ್ಭಗಳು ಯಾವುವು?

73. ಗಣರಾಷ್ಟ್ರದಲ್ಲಿ ರಾಷ್ಟ್ರಭಕ್ತಿಯೆಂಬುದು ವ್ಯಕ್ತವಾಗುವುದು ಹೇಗೆ?

74. ಗಣರಾಷ್ಟ್ರದಲ್ಲಿ ರಾಷ್ಟ್ರ ಸೇವಕರಿಗೆ ಸನ್ಮಾನಗಳು ಹೇಗೆ ನಡೆಯಬೇಕು?

75. ವರ್ಣಭೇದ, ವರ್ಣವೈಷಮ್ಯವೆಂಬುದೇನು? ಅದಕ್ಕೆ ಪರಿಹಾರವೇನು?

76. ಭಾರತವರ್ಷವಲ್ಲದೆ ಮತ್ತೆಲ್ಲಿ ಭಾರತೀಯರು ನೆಲೆಸಿದ್ದಾರೆ? ಭಾರತೀಯರು ನೆಲೆಸ ಬಹುದಾದ ಹೊರಗಿನ ಕ್ಷೇತ್ರಗಳು ಯಾವುವು?

77. "ಸ್ವರಾಜ್ಯ" ಎಂಬುದರ ಅರ್ಥವೇನು? ಭಾರತೀಯ ಗ್ರಾಮಸ್ಥರಿಗೆ ಅದರಲ್ಲಿ ಏನು ನಿರೀಕ್ಷೆಯಿರಬಹುದು?

78. ಜಂಟಿ ಪಾರ್ಲಿಮೆಂಟ್ ಸಮಿತಿಯ ಅಥವಾ ನೂತನವಾಗಿ ತೋರಲಿರುವ ಪಾರ್ಲಿಮೆಂಟ್ ಶಾಸನದ ಪ್ರಕಾರ ಭಾರತೀಯ ರಾಷ್ಟ್ರಸ್ವರೂಪದಲ್ಲಿ ನಡೆಯತಕ್ಕ ವ್ಯತ್ಯಾಸ ಗಳೇನು?

79. ವಾಟರ್ಲೂ ಕದನದ ಜಯಸಿದ್ಧಿಗೆ ಈಟನ್, ರಗ್ಬಿ ಮುಂತಾದ ಶಾಲೆಗಳ ಕ್ರೀಡಾ ಕ್ಷೇತ್ರಗಳಲ್ಲಿ ಅಸ್ತಿಭಾರವು ನಿರ್ಮಿತವಾಯಿತೆಂದು ಇಂಗ್ಲಿಷರು ಹೇಳಕೊಳ್ಳು ವುದರಲ್ಲಿ ಅರ್ಥವೇನು?

80. ಯುದ್ಧವೇ ಇಲ್ಲದ ಕಾಲದಲ್ಲಿ ಅತಿ ಧೈರ್ಯ ಸಾಹಸಗಳು ತೋರಬಹುದೆಂಬುದಕ್ಕೆ ದೃಷ್ಟಾಂತಗಳನ್ನು ಹೇಳಿ.

81. ಭಾರತೀಯರ ರೀತಿ ನೀತಿಗಳಲ್ಲಿ, ನೆಮ್ಮದಿ ವಿಲಾಸಗಳಲ್ಲಿ ಎರಡು ಬಗೆಯ ಅಭಿರುಚಿಗಳು ಪರಸ್ಪರ ವಿರುದ್ಧವಾಗಿ ಹೆಣಗಾಡುತ್ತಲಿವೆಯೆನ್ನುವುದರ ಅರ್ಥವನ್ನು ವಿವರಿಸಿ.

82. ನಿಮ್ಮ ಅನುಭವದಲ್ಲಿ ಕಡುಬಡವನಾರು? ಆತನ ನಿತ್ಯಜೀವನದ ಪರಿಯನ್ನು ವರ್ಣಿಸಿ.

83. ಕನ್ನಡ ನಾಡಿನ ದಿನ ಪತ್ರಿಕೆಗಳ ಮತ್ತು ವಾರ ಪತ್ರಿಕೆಗಳ ಪಟ್ಟಿಯನ್ನು ಸಿದ್ಧಗೊಳಿಸಿ. ಅವು ಸ್ವಾತಂತ್ರ್ಯವನ್ನೆಷ್ಟು ಮಾತ್ರ ಅನುಭವಿಸುತ್ತವೆ?

84. ಸೂಪರ್ ಟ್ಯಾಕ್ಸ್ ಅಥವಾ ಹೆಚ್ಚಿನ ವರಮಾನದ ತೆರಿಗೆಯೆಂಬುದೇನು? ಅದರಲ್ಲಿ ನ್ಯಾಯವೇನು?

85. ಭರತವರ್ಷದಲ್ಲಿ ಹೈಸ್ಕೂಲು ಶಿಕ್ಷಣವನ್ನು ಪಡೆಯುವ ಪ್ರತಿಯೊಬ್ಬ ಬಾಲಕನಿಗೂ ಹತ್ತು ಹತ್ತು ಜನ ಬಡವರು ನಿತ್ಯವೂ ಸಾರಾಯಂಗಡಿಗೆ ಹೋಗಿ ಮದ್ಯಪಾನ ಮಾಡುತ್ತಿರಬೇಕೆಂಬುದರಲ್ಲಿ ತಥ್ಯಾಂಶವೆಷ್ಟು?

86. ಲಂಗ್‌ಸ್ಪೇಸ್, ಮ್ಯಾನ್ಹೋಲ್ ಎಂಬ ಹೆಸರುಗಳೇನು? ಅವು ಏತಕ್ಕೆ?

87. ನಿಮ್ಮ ಊರಿನ ಚರಂಡಿಯ ನೀರೆಲ್ಲ ಎಲ್ಲಿಗೆ ಹೋಗುತ್ತದೆ? ಚರಂಡಿಯ ಕಶ್ಮಲವನ್ನು ಏನು ಮಾಡಬೇಕು? ಅದರಿಂದ ಪ್ರಯೋಜನವಿದೆಯೇ? ಕೊಚ್ಚೆ ನೀರೆಲ್ಲವೂ ಸಮುದ್ರವನ್ನು ಸೇರಿಬಿಡಲೆಂದು ಚರಂಡಿಗಳ ನೀರನ್ನು ಸಮೀಪದ ನದಿಗೆ ಬಿಡುವುದು ಒಳ್ಳೆಯದೇ?

88. ಮನೆಯನ್ನು ಕಟ್ಟುವಾಗ ಆರೋಗ್ಯ ದೃಷ್ಟಿಯಿಂದ ಯಾವ ಲಕ್ಷಣಗಳಲ್ಲಿ ಎಚ್ಚರವಹಿಸಬೇಕು? ಹೊಗೆ ಹೊರಟುಹೋಗಲು ಯಾವ ಏರ್ಪಾಟನ್ನು ನಡೆಸಬೇಕು? ಮನೆಯ ಸುತ್ತಮುತ್ತ ಯಾವ ಗಿಡಮರಗಳನ್ನು ಬೆಳೆಸಬೇಕು?

89. ಯಾವುದಾದರೂ ನ್ಯಾಯಸ್ಥಾನವನ್ನು ನೀವು ನೋಡಿರುವಿರಾ? ನ್ಯಾಯಪೀಠಕ್ಕೆ ನಡೆಯತಕ್ಕ ಮರ್ಯಾದೆಗಳು ಯಾವುವು?

90. 'ಮ್ಯೂಸಿಯಂ' ಅಥವಾ ಚಿತ್ರವಸ್ತುಶಾಲೆಯನ್ನು ಸರ್ಕಾರದ ಹಣದಿಂದ ನಡೆಸುವುದರಲ್ಲಿ ನ್ಯಾಯವೇನು?

91. ನಾಗರಹಾವುಗಳನ್ನು ಕೊಂದು ತೋರಿದವರಿಗೆ ಬಹುಮಾನಗಳನ್ನು ಕೊಡುವ ಪದ್ಧತಿಯು ಹಾಸ್ಯಾಸ್ಪದವೆಂದು ಕೆಲವರ ಅಭಿಪ್ರಾಯ. ನಿಮಗೆ ಹೇಗೆ ತೋರುವುದು?

92. ನಿಮ್ಮ ನೆರೆಹೊರೆಯಲ್ಲಿ ನಡೆಯುತ್ತಿರುವ ಅಥವಾ ನಡೆಯಬಹುದಾದ ಕೈಗಾರಿಕೆ ಯಾವುದು? ದೂರಸ್ಥಳದ ವ್ಯಾಪಾರದ ಮೇಲೆ ಆ ಕೈಗಾರಿಕೆಯ ಭಾರವೆಷ್ಟಿರುವುದು? ಆ ಕೈಗಾರಿಕೆಯ ಅಭಿವೃದ್ಧಿಗೆ ಸರ್ಕಾರದವರು ಮಾಡುವ ಸಹಾಯ ವೇನು?

93. ಭಾರತೀಯರಲ್ಲಿ ಭಿಕ್ಷುಕತನಕ್ಕೂ ಭಂಡತನಕ್ಕೂ ಭೇದವಿಲ್ಲವೆನ್ನುವುದು ತಥ್ಯವೇ? ವಿಚಾರಮಾಡಿ.

94. ಭಾರತೀಯ ರಾಷ್ಟ್ರದಲ್ಲಿ ಪ್ರದೇಶಗಳ ಮೇರೆಗಳನ್ನು ಹೇಗೆ ವ್ಯತ್ಯಸ್ತಗೊಳಿಸಬೇಕು? ಅದರಲ್ಲಿ ನೀವು ಅನುಸರಿಸಬೇಕೆನ್ನುವ ನ್ಯಾಯವೇನು?

95. ನಿಮ್ಮ ಸಂಸ್ಥಾನಕ್ಕೋ ಪ್ರದೇಶಕ್ಕೋ ವಿಸ್ತೀರ್ಣದಲ್ಲಿ ಸರಿದೂಗುವ ಪರ ರಾಷ್ಟ್ರ ಯಾವುದು? ಆಯ ವ್ಯಯಗಳಲ್ಲಿ ಎರಡನ್ನೂ ಹೋಲಿಸಿ ಕಾಣುವ ವ್ಯತ್ಯಾಸಗಳಿಗೆ ಕಾರಣಗಳನ್ನು ತಿಳಿಸಿ.

96. ಸಾರ್ವಜನಿಕ ಸ್ಥಳವೆಂದರೆ ಅರ್ಥವೇನು? ಮಹಾಜನರ ಸಭೆಯೆಂದು ಹೇಳತಕ್ಕದ್ದು ಯಾವಾಗ?

97. ಭಾರತೀಯ ದೇಶಭಕ್ತಿಗೂ ಇತರ ದೇಶೀಯರ ದೇಶಭಕ್ತಿಗೂ ವ್ಯತ್ಯಾಸವುಂಟೇ? ಒಟ್ಟು ಮಾನವರಾಶಿಯ ಮೇಲ್ಮೆಗಾಗಿ ದಾನಮಾಡಿರುವವರ ಹೆಸರು ವೃತ್ತಾಂತಗಳು ಯಾವುವಾದರೂ ನಿಮಗೆ ತಿಳಿದಿದೆಯೇ?

98. ನಿರುದ್ಯೋಗ ಸಮಸ್ಯೆಯೆಂದರೇನು? ಭಾರತೀಯ ನಿರುದ್ಯೋಗ ಸಮಸ್ಯೆಗೂ ಇಂಗ್ಲಂಡಿನಲ್ಲಿರುವ ನಿರುದ್ಯೋಗ ಸಮಸ್ಯೆಗೂ ಭೇದಗಳುಂಟೇ? ವಿಚಾರಮಾಡಿ.

99. ವಿರಾಮಕ್ಕೂ ವಿಶ್ರಾಂತಿಗೂ ಏನು ಭೇದ? ವಿರಾಮ ಕಾಲವನ್ನು ಹೇಗೆ ಕಳೆಯ ತಕ್ಕದ್ದು?

100. ಅಂತರ ರಾಷ್ಟ್ರೀಯತೆಯೆಂದರೇನು?

## 3. ಪರಿಭಾಷಾ ಶಬ್ದಗಳು

[ಕನ್ನಡದ ರೂಢಿಯೇ ಬೇರೆ, ಇಂಗ್ಲೀಷು ರೂಢಿಯೇ ಬೇರೆಯಾದುದರಿಂದ ಈ ಕೋಶಸಂಗ್ರಹದಲ್ಲಿ ತೊಡಕುಂಟು. ಕೆಲವು ಇಂಗ್ಲೀಷು ಶಬ್ದಪ್ರಯೋಗಗಳಿಗೆ ಕನ್ನಡ ವಿರುವುದಿಲ್ಲ; ಹಾಗೆಯೇ ಕೆಲವು ಕನ್ನಡ ಪ್ರಯೋಗಗಳಿಗೆ ಇಂಗ್ಲೀಷು ಇರುವುದಿಲ್ಲ. ಎರಡರಲ್ಲಿಯೂ ಒಂದೇ ಪ್ರಯೋಗಕ್ಕೆ ಸಾಮಾನ್ಯ ವಿಶಿಷ್ಟಾರ್ಥಗಳು ಇರುತ್ತವೆ. ಕನ್ನಡ ದಲ್ಲಿ 'ವಿಧಿ, ಉಪಾಯ, ಸಮಾಧಾನ' ಮುಂತಾದ ಶಬ್ದಗಳಂತೆ ಇಂಗ್ಲೀಷಿನಲ್ಲಿ 'State, Right, Social' ಮುಂತಾದ ಶಬ್ದಗಳಿರುತ್ತವೆ. ಇಲ್ಲಿ ಕೊಟ್ಟಿರುವ ಶಬ್ದಗಳು ತಾತ್ಕಾಲಿಕ ಪ್ರಯೋಜನಕ್ಕೆ ಮಾತ್ರ. ಈ ವಿಷಯದಲ್ಲಿ ಇಂಗ್ಲೀಷು ರೂಢಿಯೇ ಹೆಚ್ಚಾಗಿರುವುದ ರಿಂದ ಇಂಗ್ಲೀಷು ಶಬ್ದಗಳಿಗೆ ಸರಿಹೋಲುವ ಕನ್ನಡಶಬ್ದಗಳನ್ನು ಇಲ್ಲಿ ಕೊಟ್ಟಿದೆ. ಇಲ್ಲಿ ತೋರಿಕೊಳ್ಳದಿರುವ ಕನ್ನಡ ಪ್ರಯೋಗಗಳು ಪುಸ್ತಕದಲ್ಲಿ ಇದ್ದರೂ ಇರಬಹುದು.]

### A

Absence—ಅಭಾವ.

Absolute Sovereignty—ಅಕುಂಠಿತ ಸ್ವಾಮ್ಯ, ಸರ್ವಸ್ವಾಮ್ಯ.

Absolute Monarchy—ನಿರಂಕುಶ ರಾಜತ್ವ.

Absorbed—ಲೀನ.

Abundance—ಸಮೃದ್ಧಿ, ಯಥೇಷ್ಟತಾ.

Accounts—ಬೊಕ್ಕಸದ ಲೆಕ್ಕ.

Accused—ಆಪಾದಿತ.

Accusation—ಆರೋಪಣೆ, ಆಪಾದನೆ.

Administration—ಆಡಳಿತ, ಆಳಿಕೆ.

Admiral—ನೌಕಾಧಿಪತಿ.

Agent—ನಿಯೋಗಿ.

Air Force—ವಿಮಾನ ಬಲ, ಆಕಾಶ ಸೈನ್ಯ.

Air Park—ವಿಮಾನ ಗುಲ್ಮ.

Ambassador—ರಾಯಭಾರಿ, ದೂತ.

Amendment—ತಿದ್ದುಪಡಿ.

Analysis—ವಿಷಯ ವಿಭಾಗ, ಅಂಶಚ್ಛೇದ.

Answer—ಸಮಾಧಾನ, ಉತ್ತರ.

Applicant—ಅರ್ಥಿ, ಉಮೇದುವಾರ.

Application—ಪ್ರಯತ್ನ.

Aristocrat—ಶ್ರೇಷ್ಠ ಜಾತ.

Aristocracy—ಶ್ರೇಷ್ಠ ಜಾತ ಪ್ರಭುತ್ವ.

Art—ಕಲೆ.

Assent—ಸಮ್ಮತಿ.

Association—ಸಂಘ.

Attribute—ಲಕ್ಷಣ.

Autocracy—ಸ್ವಚ್ಛಂದ ಪ್ರಭುತ್ವ.

Autonomy—ಸ್ವಕಾರ್ಯನಿರ್ವಾಹ.

Average—ಸರಾಸರಿ.

Awakening—ಜಾಗೃತಿ.

## B

Belief—ವಿಶ್ವಾಸ, ನಂಬಿಕೆ.

Bills—ಮಸೂದೆಗಳು.

British Commonwealth—ಬ್ರಿಟಿಷ್ ಸಮುದಾಯಬಂಧ.

Bureaucracy—ನೌಕರಶಾಹಿ.

Bye-Election—ತಾತ್ಕಾಲಿಕ ವರಣ, ತತ್ಸ್ಥಲ ವರಣ.

## C

Camp—ಶಿಬಿರ, ಬಿಡಾರ.

Candidate—ವರಣಾರ್ಥಿ, ವರಣೇಚ್ಛು.

Cantonment—ಪಡೆವೀಡು.

Capital—ಬಂಡವಾಳ, ಮೂಲಧನ.

Cause—ಹೇತು, ಕಾರಣ, ಮೂಲ.

Censor—ಪರೀಕ್ಷಕಾಧಿಕಾರಿ.

Census—ಖಾನೆಷುಮಾರಿ, ಜನಗಣಿತಿ.

Centralized—ಕೇಂದ್ರೀಭೂತ, ಸಂಕೃಷ್ಟ.

Change—ಪರಿವರ್ತನೆ, ಬದಲು.

Chief Justice—ನ್ಯಾಯಾಧ್ಯಕ್ಷ.

Chief Secretary—ಶ್ರೇಷ್ಠ ಕಾರ್ಯದರ್ಶಿ.

Circulation—ಚಲಾವಣೆ.

Civil List—ಅರಮನೆ ವೆಚ್ಚ.

Civilization—ಸಭ್ಯತೆ (ನಾಗರಿಕತೆ).

Civil Rights—ನ್ಯಾಯಾಧಿಕಾರಗಳು.

Civil War—ಅಂತಃಕಲಹ, ಯಾದವೀ ಕಲಹ, ಸ್ವಯೂಥ ಕಲಹ.

Civic Discipline—ಪೌರಶಿಷ್ಟಿ.

Civic Rights and Duties—ಪೌರಾಧಿಕಾರ ಕರ್ತವ್ಯಗಳು.

City—ನಗರ.

Citizenship—ಪೌರತಾ, ಪೌರ ಪದವಿ.

Class—ವರ್ಗ.

Clemency—ಕನಿಕರ.

Clerk—ಕರಣಿಕ.

Clubs—ವಿಹಾರ ಮಂದಿರಗಳು.

Code of Laws—ವಿಧಿಕೋಶ, ವಿಧಿ ಸಂಗ್ರಹ.

Colleague—ಸಹೋದ್ಯೋಗಿ.

Colour Conflict—ವರ್ಣ ಸಂಘರ್ಷಣೆ, ವರ್ಣ ವೈಷಮ್ಯ.

Colour Problem—ವರ್ಣ ಸಮಸ್ಯೆ.

Colony—ನೆಲಸು.

Comfort—ನೆಮ್ಮದಿ.

Commander-in-Chief—ಸಮಸ್ತ ಸೈನ್ಯಾಧಿಪತಿ.

Competition—ಸ್ಪರ್ಧೆ, ಪ್ರತಿಸ್ಪರ್ಧೆ, ಪೈಪೋಟಿ, ಪೋಟಾಪೋಟಿ.

Composition—ರಚನೆ, ಸಂಯೋಜನೆ.

Compulsion—ಬಲವದ್ಬಂಧ, ಬಲವಂತ.

Compulsory Duties—ಅನಿವಾರ್ಯ ಕರ್ತವ್ಯಗಳು.

Compulsory Military Training—ಬಲವಂತ ಚಮೂ ಶಿಕ್ಷಣ.

Conclusion—ಇತ್ಯರ್ಥ, ನಿರ್ದೇಶ.

Conference—ಸಮ್ಮೇಳನ.

Confidence—ವಿಶ್ವಾಸ, ನಂಬಿಕೆ.

Confederation—ಸಮುದಾಯಬಂಧ.

Confusion—ಭ್ರಾಂತಿ, ವೈಕಲ್ಯ.

Conservancy Lanes—ಹಿತ್ತಿಲ ಸಂದುಗಳು.

Constitution—ಬಂಧ, ಅಂಗಾಂಗ ಸಂಯೋಜನ, ಸ್ವರೂಪ.

Constituency—ವರಣಕ್ಷೇತ್ರ.

Constitutional—ಕ್ರಮಬದ್ಧ, ವಿಧಿಬದ್ಧ.

Conscience—ಅಂತರಾತ್ಮ, ಅಂತಃಕರಣ.

Consciousness—ಪ್ರಜ್ಞೆ.

Convention—ಸಂಪ್ರದಾಯ.

Co-operation—ಸಹಕಾರ.

Cost of Living—ಜೀವನದ ಕಷ್ಟ.

Crime—ಅಪರಾಧ, ಸಾಹಸ.

Criminal—ಅಪರಾಧಿ.

Crusades—ಶಿಲುಬೆ ಯುದ್ಧಗಳು.

Culture—ಸಂಸ್ಕೃತಿ, ವಿದಗ್ಧತಾ.

Cultural Unity—ಸಾಂಸ್ಕೃತಿಕ ಐಕ್ಯತೆ.

Cultural Conflict—ಸಾಂಸ್ಕೃತಿಕ ಘರ್ಷಣೆ.

## D

Dais—ವೇದಿಕೆ.

Dark Ages—ಅಂಧಕಾರ ಯುಗ.

Debt—ಋಣ, ಸಾಲ.

Decentralized—ವಿಕೃಷ್ಟ, ಪೃಥಕ್ಕೃತ.

Defence of the Realm Act—ಆಪದ್ರಕ್ಷಣೆಯ ವಿಧಿ.

Delay—ವಿಳಂಬ.

Deliberation—ಸಮಾಲೋಚನೆ, ಮಂತ್ರಾಲೋಚನೆ.

Demand—ಆದರ.

Democracy—ಜನಸ್ವಾಮ್ಯ.

Department—ಶಾಖೆ.

Deputies—ನಿಯೋಗಿಗಳು.

Dependency—ಆಶ್ರಿತ ಕ್ಷೇತ್ರ, ಅಧೀನ ಭುಕ್ತಿ.

Deterrent—ನಿವಾರಕ.

Despotism—ಸ್ವೇಚ್ಛಾ ಪ್ರವರ್ತನೆ.

Development Departments—ರಾಷ್ಟ್ರವರ್ಧಕ ಶಾಖೆ, ಅಭಿವೃದ್ಧಿಕಾರಕ ಶಾಖೆ.

Diarchy—ದ್ವಿಮುಖ ಸರ್ಕಾರ.

Dictatorship—ಏಕನಾಯಕತ್ವ.

Direct—ಪ್ರತ್ಯಕ್ಷ.

Discipline—ಶಿಸ್ತು.

Discretionary Duties—ಐಚ್ಛಿಕ ಕರ್ತವ್ಯಗಳು.

Dissolution—ಮುಕ್ತಾಯ.

Distribution—ವಿಭಜನೆ.

District Boards—ಜಿಲ್ಲಾ ಸಭೆಗಳು.

Division—ವಿಭಾಗ, ವಿಭಜನೆ.

Divorce—ವಿಚ್ಛೇದ, ವಿಚ್ಛಿತ್ತಿ.

Dockyards—ನೌಕಾಶ್ರಯ, ನೌಕಾ ನಿರ್ಮಾಣ ಕ್ಷೇತ್ರ.

Documentary Form—ಪತ್ರರೂಪ, ಪತ್ರಸ್ಥ.

Doubtful—ಸಂದಿಗ್ಧ, ಶಂಕಾವಿಷ್ಟ.

Duration (of Council)—ಜೀವಿತ ಕಾಲ.

## E

Economic View-point—ಆರ್ಥಿಕ ದೃಷ್ಟಿ.

Economic Self-Sufficiency—ಆರ್ಥಿಕ ಪೂರ್ಣತಾ.

Economic Plenty—ಸಮೃದ್ಧಿ, ಸರ್ವಾರ್ಥ ಸಮೃದ್ಧಿ.

Effect—ಪರಿಣಾಮ, ಫಲಿತ.

Efficiency—ಸಾಮರ್ಥ್ಯ, ದಕ್ಷತೆ.

Effort—ಉದ್ಯಮ, ಪ್ರಯತ್ನ.

Election—ವರಣ.

,, Methods—ವರಣ ವಿಧಾನಗಳು.

Electorate—ವರಣದಾತರು, ವರಣ ಕರ್ತರು.

Electoral Divisions—ವರಣ ವಿಭಾಗ, ವರಣ ಕ್ಷೇತ್ರ.

Elementary Rights—ಆಧಾರಭೂತ ಅಥವಾ ಮೂಲಾಧಿಕಾರಗಳು.

Elementary Duties—ಮೂಲ ಕರ್ತವ್ಯಗಳು.

Engineer—ಯಂತ್ರನಿರ್ವಾಹಕ.

Enjoyment—ಅನುಭೋಗ.

Environment—ಪರಿಸ್ಥಿತಿ.

Equality—ಸಮತ್ವ, ಸಾಮ್ಯ.

Equilibrium—ಸಮತೂಕಸ್ಥಿತಿ.

Establish—ಸ್ಥಾಪಿಸು, ಪ್ರತಿಷ್ಠಿಸು.

Exception—ಅಪವಾದ.

Executive—ಕಾರ್ಯಾಂಗ.

Expectation—ನಿರೀಕ್ಷಣೆ.

Expression—ವಾಕ್.

## F

Fact—ವಸ್ತುಸ್ಥಿತಿ, ವಾಸ್ತವ, ಸಂಗತಿ.

Factory—ಕಾರ್ಖಾನೆ.

Family—ಕುಟುಂಬ, ಮನೆ.

Fanaticism—ನಿಷ್ಠಾ ವೈಪರೀತ್ಯ.

Feature—ಲಕ್ಷಣ.

Federation—ವ್ಯೂಹನ, ವ್ಯೂಢ.

Finance—ಆಯ ವ್ಯಯ.

Fine Arts—ಲಲಿತ ಕಲೆಗಳು.

Fixed by Law—ವಿಧಿನಿಶ್ಚಿತ.

Form—ರೂಪ.

Fragmentation—ಛಿದ್ರೀಕರಣ.

Fragmented Holdings—ಶತಚ್ಛಿದ್ರ ವೃತ್ತಿಗಳು.

Franchise—ವರಣಾಧಿಕಾರ.

Free—ಉಚಿತ, ಸ್ವತಂತ್ರ.

Free Competition—ನಿರಾತಂಕ ಸ್ಪರ್ಧೆ.

Functional Division—ಕರ್ತವ್ಯ ವಿಭಾಗ, ವಿಷಯ ವಿಭಾಗ.

Fundamental—ಮೂಲ, ಆಧಾರಭೂತ.

## G

Goal—ಲಕ್ಷ್ಯ, ಗುರಿ.

Government—ಆಡಳಿತ, ಸರ್ಕಾರ.

Governor—ಭೋಗಪತಿ.

Governor-General—ಭೂಶಾಧಿಪತಿ.

,, ,, in Council—ಸಭಾಯುಕ್ತ ಭೂಶಾಧಿಪತಿ.

## H

Hamlet—ಕುಗ್ರಾಮ.

Harbour—ಬಂದರು, ರೇವು, ನೌಕಾಶ್ರಯ.

Harmony—ಸಂಯೋಗ, ಸಂಕುಲ ಸಂಯೋಗ.

Hobby—ಹವ್ಯಾಸ.

Holding—ವೃತ್ತಿ.

Homogeneous—ಏಕರೂಪ, ಏಕರೀತಿ.

Honorary Magistrates—ಗೌರವ ದಂಡಾಧಿಕಾರಿಗಳು.

Honour—ಸನ್ಮಾನ, ಗೌರವ.

## I

Ideal—ಆದರ್ಶ.

Illegitimacy—ವೈಜಾತ್ಯ.

Illusion—ಮೋಹ, ಭ್ರಾಂತಿ.

Incidence of Taxation—ತೆರಿಗೆಗಳ ಭಾರಮಾನ.

Income-tax—ವರಮಾನದ ತೆರಿಗೆ.

Indirect—ಪರೋಕ್ಷ, ಅಪ್ರತ್ಯಕ್ಷ.

Individualism—ವ್ಯಕ್ತಿ ಪ್ರಾಧಾನ್ಯ, ವ್ಯಕ್ತಿವಾದ.

Indifference—ಔದಾಸೀನ್ಯ, ಅಸಡ್ಡೆ.

Indebted—ಋಣಗ್ರಸ್ತ.

Industrial Arts—ಕುಶಲ ಕಲೆಗಳು.

Industrial Chaos—ಔದ್ಯೋಗಿಕ ಕಲ್ಲೋಲ.

Industrial Revolution—ಔದ್ಯೋಗಿಕ ಪರಿವರ್ತನೆ.

Inevitable—ಅನಿವಾರ್ಯ.

Initiative—ಆರಂಭಾಧಿಕಾರ, ಪ್ರವೇಶಾಧಿಕಾರ.

Influence—ಪ್ರಭಾವ, ಮಹಿಮೆ.

Insanitary—ಶಶ್ಮಲ ದೂಷಿತ, ರೋಗಾಕರ್ಷಕ.

Institution—ಸಂಸ್ಥೆ.

Insurance—ವಿಮೆ.

Insufficient Nutrition—ಅಲ್ಪಾಹಾರ.

Interest—ಆಸಕ್ತಿ, ಬಡ್ಡಿ.

Interpellatory—ಪ್ರಶ್ನೋತ್ತರ.

International—ಅಂತರ ರಾಷ್ಟ್ರೀಯ.

Irrigation—ನೀರಾವರಿ.

Irrelevant—ಅಸಂಬದ್ಧ, ಅಪ್ರಸ್ತುತ.

## J

Joint Committee—ಜಂಟಿ ಸಮಿತಿ.

,, Family—ಅವಿಭಕ್ತ ಕುಟುಂಬ.

,, Secretary—ಜಂಟಿ ಕಾರ್ಯದರ್ಶಿ.

Judiciary—ನ್ಯಾಯಾಂಗ.

Judgment—ವಿವೇಚನಾಶಕ್ತಿ, ನ್ಯಾಯ ನಿಷ್ಕರ್ಷೆ.

Jurisdiction—ಅಧಿಕಾರಕ್ಷೇತ್ರ.

## L

Labour Problems—ಕಾಯಕ ವರ್ಗ ಸಮಸ್ಯೆಗಳು.

Labour Unions—ಕಾಯಕ ವರ್ಗ ಸಂಘ, ಕೂಲಿಗಾರ ಕೂಟ, ಜೀತಗಾರ ಗುಂಪು.

Leisure—ವಿರಾಮ.

Legislature—ಶಾಸಕಾಂಗ.

Legislation—ಶಾಸನ ರಚನೆ.

Legislative Assembly—ಶಾಸಕ ಸಭೆ.

Life Period—ಆಯುಷ್ಯ, ಜೀವಿತ ಕಾಲ.

Livelihood—ಉಪಜೀವನ, ವೃತ್ತಿ, ಜೀವಿಕ.

Local—ಸ್ಥಳೀಯ.

Lockout—ಕವಾಟಬಂಧನ.

Loyalty—ಭಕ್ತಿ.

## M

Magistracy—ದಂಡಧಾರಿ ವರ್ಗ, ದಂಡಾಧಿಕಾರಿ ವರ್ಗ.

Major—ಹಿರಿಯ.

Majority—ಬಹುಪಕ್ಷ, ಬಹುಸಂಖ್ಯಾ ಬಲ.

Malnutrition—ಅಪಾಹಾರ.

Mandated Territory—ದತ್ತಭುಕ್ತಿ.

Manual Work—ಕಾಯಕ.

Manufactured Products—ಸಿದ್ಧಸರಕು.

Materials—ಸಾಮಗ್ರಿ.

Means of Communication—ಸಮಾಚಾರ ವಾಹಕ ಸಾಮಗ್ರಿ.

Means of Transport—ವಾಹಕ ಸಾಮಗ್ರಿ.

Melody—ಮಾಧುರ್ಯ, ಮೃದು ಮಧುರ.

Membership—ಸದಸ್ಯತ್ವ.

Mercy—ಕನಿಕರ.

Migration—ವಲಸೆಹೋಗು, ಕ್ಷೇತ್ರಾಂತರ ಗಮನ.

Military Training—ಚಮೂ ಶಿಕ್ಷಣ.

,, Discipline—ಯೋಧಶಿಸ್ತು.

Mill—ಗಿರಣಿ.

Minimum—ಕನಿಷ್ಠಾಂಶ.

Minor—ಕಿರಿಯ.

Minority—ಅಲ್ಪಸಂಖ್ಯಾಕ, ಅಲ್ಪಪಕ್ಷ.

Monarchy—ರಾಜತ್ವ.

Monopoly—ಸರ್ವಗ್ರಾಸ, ಸರ್ವಾಧಿಕಾರ ಕ್ಷೇತ್ರ.

Movement—ಸಂಚಾರ, ಆಂದೋಲನ.

Municipality—ನಗರನಿರ್ವಾಹ ಸಭೆ.

Museum—ಚಿತ್ರವಸ್ತು ಸಂಗ್ರಹಾಲಯ.

Mutual—ಅನ್ಯೋನ್ಯ, ಪರಸ್ಪರ.

## N

Narrow Outlook—ಸಂಕುಚಿತ ದೃಷ್ಟಿ.

Nationalism—ರಾಷ್ಟ್ರಭಕ್ತಿ.

Nation-Building Departments—ರಾಷ್ಟ್ರವರ್ಧಕ ಶಾಖೆಗಳು.

Natural Rights—ಸಹಜಸಿದ್ಧ ಅಥವಾ ಜನ್ಮಸಿದ್ಧ ಅಧಿಕಾರಗಳು.

Navy—ನೌಕಾಬಲ, ಜಲಬಲ.

Negotiation—ಸಂಧಾನ.

Neutrality—ಅನಾಸಕ್ತಿ, ತಾಟಸ್ಥ್ಯ.

Nominated—ನಿಯುಕ್ತ, ನಿಯಮಿತ.

Non-Co-operation—ಅಸಹಕಾರ.

## O

Objection—ಆಕ್ಷೇಪ.

Obstacle—ಎಡರು, ತಡೆ, ವಿಘ್ನ, ಆತಂಕ.

Obstructive Tactics—ಮುಷ್ಕರ ಸಂಧಾನ.

Occupation—ಜೀವಿಕ, ಕಾಯಕ, ಜೀವನೋದ್ಯೋಗ, ಜೀವನೋಪಾಯ.

Office—ಕಾರ್ಯಾಲಯ.

Officer—ಅಧಿಕಾರಿ.

Old Age Pensions—ವೃದ್ಧಾಪ್ಯ ವೇತನ, ವೃದ್ಧಾಶನ, ಮುಪ್ಪಿನ ವೇತನ.

Oligarchy—ಅಲ್ಪಜನಾಧಿಪತ್ಯ.

Opinion—ಅಭಿಪ್ರಾಯ, ಅಭಿಮತ, ಛಂದಃ.

Opposition—ವಿರೋಧ, ಪ್ರತಿಪಕ್ಷ.

Oppressive—ಅತಿ ಭಾರ.

Optional—ಐಚ್ಛಿಕ.

Order—ಕ್ರಮ, ಆಜ್ಞೆ.

Ordinance—ನಿಬಂಧನೆ.

Organization—ವ್ಯವಸ್ಥೆ.

Owner—ಮಾಲೀಕ, ಯಜಮಾನ.

Over Government—ಅತ್ಯಧಿಕಾರ ನಿರ್ವಾಹ.

## P

Pacific—ಶಾಂತ, ಶಾಂತಿಪ್ರಧಾನ.

Party—ಪಕ್ಷ, ಕಕ್ಷಿ.

Patriotism—ದೇಶಭಕ್ತಿ.

Peace—ಶಾಂತಿ.

Pension—ವಿಶ್ರಾಂತಿ ವೇತನ.

People—ಜನ, ಪ್ರಕೃತಿ.

Permanent—ಸ್ಥಿರ, ಭದ್ರ, ನಿತ್ಯ.

Person—ವ್ಯಕ್ತಿ.

Pitfall—ವಿಪತ್ತು, ಆತಂಕ.

Platform—ವೇದಿಕೆ.

Police—ಚೋರಗ್ರಾಹಕ, ಕಂಟಕಗ್ರಾಹಿ.

Policy—ನೀತಿ, ವ್ಯವಹಾರ.

Politics—ರಾಷ್ಟ್ರಶಾಸ್ತ್ರ, ರಾಷ್ಟ್ರನೀತಿ.

Polity—ನಯ, ನೀತಿ.

Portfolio—ಪತ್ರಪೇಟಿಕಾ.

Presence—ಸಮುಖ.

President—ಅಧ್ಯಕ್ಷ, ಸರ್ವಾಧ್ಯಕ್ಷ, ರಾಜಾಧ್ಯಕ್ಷ.

Press—ವೃತ್ತಪತ್ರಿಕಾ ಸಮೂಹ.

Pretext—ನೆಪ, ನಿಮಿತ್ತ, ವ್ಯಾಜ.

Prevention—ನಿವಾರಣೆ.

Previous—ಪೂರ್ವ.

Private Citizen—ಖಾಸಗಿ ಪೌರ.

Problem—ಸಮಸ್ಯೆ.

Procedure ವಿಧಾನ, ಕ್ರಮ.

Profession—ಜೀವಿಕೆ, ಉದ್ಯೋಗ, ಕಲಾವೃತ್ತಿ.

Progress—ಪ್ರಗತಿ, ಮೇಲ್ಮೆ.

Prohibition—ಮದ್ಯಪಾನ ನಿರೋಧ.

Property—ಸ್ವತ್ತು, ಮಮತ್ವ.

Proprietor—ಯಜಮಾನ, ಮಾಲೀಕ, ಸ್ವಾಮಿ.

Protection—ರಕ್ಷಣೆ.

Province—ಪ್ರದೇಶ.

Public Debt—ರಾಷ್ಟ್ರೀಯ ಸಾಲ, ರಾಷ್ಟ್ರ ಋಣ.

Public Property—ರಾಷ್ಟ್ರ ಸ್ವತ್ತು, ಸಾರ್ವಜನಿಕ ಸ್ವತ್ತು.

Public Opinion—ಜನಾಭಿಪ್ರಾಯ, ಜನಪದಾಭಿಪ್ರಾಯ.

Punishment—ದಂಡನೆ, ಶಿಕ್ಷೆ.

## R

Raw Material—ಸಾಧಕ ಸಾಮಗ್ರಿ.

Realm—ರಾಷ್ಟ್ರ.

Realization—ಸಿದ್ಧಿ, ಪ್ರಾಪ್ತಿ.

Records—ಪತ್ರಕೋಶ, ಕಡತ.

Reform—ಸಂಸ್ಕಾರ, ಶುದ್ಧಿ, ಸುಧಾರಣೆ.

Reformative—ಸಂಸ್ಕಾರಕ.

Referendum—ಜನ ವಿಶ್ವಾಸ ಪರೀಕ್ಷೆ.

Regional Division—ಕ್ಷೇತ್ರ ವಿಭಾಗ.

Regulation—ನಿಬಂಧನೆ.

Relative—ಸಾಪೇಕ್ಷಕ.

Repetition—ಪುನರುಕ್ತಿ.

Republic—ಗಣರಾಷ್ಟ್ರ, ರಾಜರಹಿತ ರಾಷ್ಟ್ರ.

Representation—ಪ್ರಾತಿನಿಧ್ಯ, ತೋರಿಕೆ.

Research—ಪರಿಶೋಧನೆ.

Resistance—ನಿರೋಧ.

Responsibility—ಹೊಣೆಗಾರಿಕೆ, ಉತ್ತರವಾದಿತ್ವ, ಜವಾಬ್ದಾರಿತನ.

Resolution—ನಿಶ್ಚಯ, ಸಂಕಲ್ಪ, ನಿರ್ಧಾರ, ನಿಷ್ಕರ್ಷೆ.

Rest—ವಿಶ್ರಾಂತಿ.

Restraints—ಮಿತಿ, ಎಲ್ಲೆ.

Retaliation—ಪ್ರತಿಕ್ರಿಯೆ.

Revenue—ಹುಟ್ಟುವಳಿ, ರಾಷ್ಟ್ರದಾಯ.

Revolution—ಪರಿವರ್ತನೆ, ಕ್ರಾಂತಿ, ಪ್ರಳಯ.

Rights—ಅಧಿಕಾರಗಳು.

Royal Assent—ರಾಜಸಮ್ಮತಿ.

,, Presence—ರಾಜಸಮ್ಮುಖ.

Rule—ಆಳಿಕೆ, ನಿಯಮ.

## S

Sanitation—ನೈರ್ಮಲ್ಯ ಸ್ಥಿತಿ.

Science—ಶಾಸ್ತ್ರ.

Section—ವಿಧಿಸೂತ್ರ, ವಿಭಾಗ.

Security—ಕ್ಷೇಮ.

Secretary—ಕಾರ್ಯದರ್ಶಿ.

Secretariat—ರಾಯಸ ಪರಿವಾರ, ರಾಯಸ ಕಾರ್ಯಾಲಯ.

Sedition—ರಾಷ್ಟ್ರದ್ರೋಹ ಪ್ರೇರಣ.

Self-Reliance—ಆತ್ಮಾವಲಂಬನೆ.

Self-Sufficiency—ಸ್ವಸಂಪೂರ್ಣ.

Ship Money—ಹಡಗಿನ ಹಣ.

Slavery—ದಾಸ್ಯ, ಗುಲಾಮತನ.

Slums—ನಗರ ನರಕ.

Social—ಸಾಮಾಜಿಕ.

Socialism—ಸರ್ವಸಾಮ್ಯ ವಾದ.

Solution—ಪೂರಣ, ಪರಿಹಾರ, ಸಮಾಧಾನ.

Sovereignty—ಸ್ವಾಮ್ಯ.

Speaker—ಸಭಾಪತಿ.

Speech from the Throne—ರಾಜ ಭಾಷಣ.

Special—ವಿಶಿಷ್ಟ.

State—ರಾಷ್ಟ್ರ.

State Monopoly—ರಾಷ್ಟ್ರಗ್ರಸ್ತ, ರಾಷ್ಟ್ರಮಾನ್ಯ.

State Secret—ರಾಷ್ಟ್ರ ರಹಸ್ಯ.

Statesman—ರಾಷ್ಟ್ರಕರ್ತ.

Status—ಪದವಿ.

Statute—ಕಾನೂನು.

Strike—ಮುಷ್ಕರ.

Subjects—ವಿಷಯಗಳು, ಪ್ರಜೆಗಳು.

Supreme—ಸರ್ವ ಶ್ರೇಷ್ಠ.

Surgery—ಶಸ್ತ್ರ ಚಿಕಿತ್ಸಾ.

Symbol—ಸಂಕೇತ.

## T

Tactics—ಸಂಧಾನ.

Tax—ತೆರಿಗೆ.

Tenderness—ಕೋಮಲತೆ, ಮಾರ್ದವ, ಸೂಕ್ಷ್ಮ.

Theory—ವಾದ.

Tolerance—ಸಹನ, ಸಹಿಷ್ಣುತೆ.

Transformation—ಪರಿವರ್ತನೆ, ರೂಪಾಂತರಕರಣ.

Transport Trade—ವಹನ ವ್ಯಾಪಾರ, ವಾಹಕ ವ್ಯಾಪಾರ, ವಾಹಕೋದ್ಯೋಗ.

Treason—ದ್ರೋಹ.

Treasure—ನಿಕ್ಷೇಪ.

Treasury—ಕೋಶ, ಬೊಕ್ಕಸ.

Tyranny—ನಿಷ್ಠುರ ಶಾಸನ, ಕಠೋರ ಶಾಸನ.

## U

Ultimatum—ವೀರ ನಿರೂಪ.

Unanimous—ಏಕಕಂಠ, ಏಕಮತ.

Unavoidable—ಅನಿವಾರ್ಯ.

Unconstitutional—ಕ್ರಮ ವಿರುದ್ಧ.

Underground Drains—ಸುರಂಗದ ಚರಂಡಿ, ಗುಪ್ತಗಾಮಿ ಚರಂಡಿ.

Underworld—ನಗರ ನರಕ.

Unemployment Insurance—ನಿರುದ್ಯೋಗ ವಿಮೆ.

Unification—ಐಕ್ಯತಾ ಸಾಧನೆ, ಐಕ್ಯತಾ ಸಿದ್ಧಿ.

Uniformity—ಏಕರೀತಿ, ಏಕರೂಪ.

Union—ಐಕಮತ್ಯ.

Unitary—ಏಕೀಭೂತ.

Unity—ಐಕ್ಯತೆ.

Universality—ಸರ್ವಗ್ರಾಹ್ಯ.

Unnatural—ಕೃತಕ, ಕೃತ್ರಿಮ, ಅಸಹಜ.

Unreal—ಮಿಥ್ಯ.

Unrest—ಅಶಾಂತಿ, ಅತೃಪ್ತಿ.

Utility—ಪ್ರಯೋಜನ.

## V

Vain—ವ್ಯರ್ಥ.

Variety—ವೈವಿಧ್ಯ, ಭಿನ್ನತಾ, ನಾನಾರೀತಿ.

Veto—ನಿಷೇಧಾಧಿಕಾರ.

Vitality—ಚೈತನ್ಯ.

Vote—ಛಂದ.

## W

War and Peace—ಸಂಧಿವಿಗ್ರಹ.

Whip—ಸಂಖ್ಯಾಪೂರಕ, ಗಣಪೂರಕ.

Whites—ಬಿಳಿಯರು.

## Z

Zeal—ನಿಷ್ಠೆ.

Zollverein—ಶುಲ್ಕವ್ಯೂಹ, ಶುಲ್ಕಬಂಧ.

# 4. ಅಕಾರಾದಿ ಸೂಚಿ

[ಪುಸ್ತಕದಲ್ಲಿ ಅಲ್ಲಲ್ಲಿ ತೋರುವ ಹೆಸರುಗಳನ್ನು ಇಲ್ಲಿ ಕ್ರಮವಾಗಿ ಕೊಟ್ಟಿದೆ]

## ತಿದ್ದುಪಡಿಯ ಟಿಪ್ಪಣಿ

'ಛಂದ' ಎಂಬ ಶಬ್ದವು ಪುಲ್ಲಿಂಗ; ಆದ್ದರಿಂದ ಛಂದೋದಾನ, ಛಂದೋಬಲ, ಛಂದೋಗ್ರಹಣ, ಇತ್ಯಾದಿ ರೂಪಗಳೇ ಸಾಧು. 146, 243, 301 ಪುಟಗಳಲ್ಲಿ ತೋರಿಕೊಂಡಿರುವ ಅಸಾಧು ರೂಪಗಳನ್ನು ತಿದ್ದಿಕೊಳ್ಳಬೇಕು.

ಸಿಂದಬಸ್ತು, ಸೆಸಿಯ, ಮುಂತಾದ ಶಬ್ದಗಳಲ್ಲಿ z ಎಂಬುದಕ್ಕೆ ಸಕಾರವೇ ಪ್ರಯೋಗವಾಗಿದೆ; ಅದನ್ನೂ ಸರಿಪಡಿಸಿಕೊಳ್ಳಬೇಕು.

, 1237—34.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿಸಲ್ಪಟ್ಟಿತು.